# ನಿಶಿತನ ಆತ್ಮಕಥನ

ಕೇಶವ ಶರ್ಮ.ಕೆ

ರಚನ ಪ್ರಕಾಶನ
ನಂ. 2346/1, 10ನೇ ಕ್ರಾಸ್, ಬಸವೇಶ್ವರ ರಸ್ತೆ
ಕೆ.ಆರ್. ಮೊಹಲ್ಲಾ, ಮೈಸೂರು-570004

# Nisithana Athmakathana

A Novel Written by
**Dr. Keshavasharma K.**
Rtd. Professor
1st Cross, Shanthinagara
Near Chowdamma Temple
B.R. Project, Badravathi
Mob: 9448730611
email: dr.keshavasharma.k@gmail.com

Published by
**Rachana Prakashana**
No. 2346/1, 10th Cross, Basaveshwara Road
K.R. Mohalla, Mysore-570004
Mob : 7019605446

First Impression : 2021

Copies : 1000
Page : vi + 382 + 4 = 392
Price : Rs. 400/-
Paper used : Maplitho
D.T.P. : Anukshana Creations
Mob : 8660867073
Cover Page Design : Kiran S V
Printed at : Kamal Impressions, Mysore

# ಲೇಖಕರ ಮಾತು

ಕಾದಂಬರಿಯನ್ನು ಕುರಿತು ನಾವು ಹೆಚ್ಚು ಮಾತಾಡಲು ಪ್ರಾರಂಭ ಮಾಡಿದ್ದು ಈಚೆಗೆ. ನಮ್ಮ ಅನೇಕ ವಿಮರ್ಶಕರು ಇದರ ಬಗ್ಗೆ ಹೆಚ್ಚು ಮಾತಾಡಬೇಕಾದ ಅಗತ್ಯವಿಲ್ಲ ಎಂದು ಭಾವಿಸಿದ ಹಾಗೆ ಕಾಣುತ್ತದೆ. ಬಹಳ ಜನ ವಿಮರ್ಶಕರು ಹಿಂದಿನ ಕಾವ್ಯ ಮತ್ತು ನವ್ಯ ಕಾವ್ಯದ ಕುರಿತು ಮಾತಾಡಿರುವುದು ಎಲ್ಲರ ಗಮನದಲ್ಲಿ ಇದೆ. ಕಾದಂಬರಿಯನ್ನು ಒಂದು ಪ್ರಕಾರವಾಗಿ ಮತ್ತು ಅದನ್ನು ಒಂದು ಸಾಹಿತ್ಯ ಎಂದು ಹೇಳಲು ಹಿಂದೆ ಮುಂದೆ ನೋಡುತ್ತಿದ್ದರು. ಇದರಿಂದ ಆಗ ಅನೇಕರು ಕಾವ್ಯವನ್ನು ಅತ್ಯಂತ ಮಹತ್ವದ ಸಂಕಥನವೆಂದು ಹೇಳುತ್ತಿದ್ದರು. ಒಮ್ಮೊಮ್ಮೆ ಮಾತ್ರವೇ ಕಾದಂಬರಿಯ ಬಗ್ಗೆ ಚರ್ಚೆಯನ್ನು ಮಾಡುತ್ತಿದ್ದರು. ಅನೇಕ ನವೋದಯ ಕಾಲದ ಲೇಖಕರ ಗಮನವು ಕಾದಂಬರಿಯ ಕಡೆಗೆ ಹೋಗಿತ್ತು. ಇಲ್ಲಿ ಇನ್ನೊಂದು ವಿಚಾರವನ್ನು ಹೆಚ್ಚು ಖಚಿತ ಮಾಡಬೇಕು: ಕಾದಂಬರಿ ಎನ್ನುವುದನ್ನು ನಾವೆಲ್ ಎಂದು ಇಂಗ್ಲೀಷ್‌ನಲ್ಲಿ ಹೇಳುತ್ತಾರೆ. ವಾಸ್ತವವಾಗಿ ಹದಿನೆಂಟನೆಯ ಶತಮಾನದಲ್ಲಿ ಯುರೋಪ್ ಇದನ್ನು ಗಂಭೀರವಾಗಿ ಪರಿಗಣಿಸಿದರು. ಕತೆಯನ್ನು ಹೇಳುವುದು ಮತ್ತು ಅದರ ನಿರೂಪಣೆಯನ್ನು ಮಾಡುವುದು ಭಿನ್ನವಾದ ಒಂದು ಕ್ರಮ ಎಂದು ತಿಳಿದರು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕಾದಂಬರಿಯನ್ನು ಒಂದು ಪ್ರಕಾರವಾಗಿ ಗುರುತಿಸಿದರು, ಆಗ ಬಂದ ಅತ್ಯಂತ ಮಹತ್ವದ ಪ್ರಶ್ನೆಯಲ್ಲಿ ಹೇಳಬೇಕು. ಒಂದು ಕಲಾಕೃತಿಯಾಗಿ ಕಾದಂಬರಿಯನ್ನು ನಾವು ಹೇಗೆ ನೋಡಬಹುದು ಎನ್ನುವುದು ಮುಖ್ಯವಾದ ಪ್ರಶ್ನೆ. ಅದರ ಜೊತೆಗೆ ಕತೆ ಮತ್ತು ಕಾದಂಬರಿಗೆ ಹಾಗೂ ಮಹಾಕಾವ್ಯಕ್ಕೆ ಇರುವ ಸಂಬಂಧ ಹಾಗೂ ಅದರ ಅಂತರವನ್ನು ನೋಡಬೇಕು. ರೋಮನ್ನರು ಕಾದಂಬರಿ ಮತ್ತು ಅದರ ಶೈಲಿಯ ಪ್ರಶ್ನೆಯನ್ನು ಚರ್ಚೆಮಾಡಿದ್ದು ನಿಜ. ಅದು ಬೇರೆ ಪ್ರಶ್ನೆ. ಈವತ್ತು ಕಾದಂಬರಿಯು ಅತ್ಯಂತ ಹೆಚ್ಚು ಪ್ರಿಯವಾದ ಪ್ರಕಾರ. ಅದನ್ನು ಅನೇಕರು ಓದುತ್ತಾರೆ. ಪ್ರಕಾರವಾಗಿ ಅದನ್ನು ಅನೇಕ ಓದುಗರು ಸ್ವೀಕಾರ ಮಾಡಿದ್ದಾರೆ. ನನಗೆ ಬರಹ ಎನ್ನುವುದು ಒಂದು ದಾರಿ. ಬರಹದ ಕೆಲಸವನ್ನು ಮಾಡುತ್ತಿರುವುದು ನನ್ನ ಸುಖಕ್ಕೂ ಹೌದು. ಬರಹ ಎನ್ನುವುದು

ಒಂದು ಅವಕಾಶ. ನಮ್ಮ ಊರಿನಲ್ಲಿ ಒಬ್ಬ ಮುತ್ತ ಎನ್ನುವವನು ಇದ್ದ. ಅವನು ಕೊರಗರ ಜಾತಿಗೆ ಸೇರಿದವನು. ಅವನಿಗೆ ತುಂಬಾ ಕತೆಗಳು ಗೊತ್ತಿದ್ದವು. ಆದರೆ ಅವನಿಗೆ ಅದನ್ನು ಬರೆಯಲು ಬೇಕಾದ ಅಕ್ಷರಗಳು ಇರಲಿಲ್ಲ. ನನಗೆ ಗೊತ್ತಿದೆ. ಅಷ್ಟೇ ವ್ಯತ್ಯಾಸ. ಅವನೂ ಇಲ್ಲಿ ಒಂದು ಪಾತ್ರವಾಗಿ ಬಂದಿದ್ದಾನೆ. ನಿಶಿತ ಇಲ್ಲಿ ಕಲ್ಪಿತ ವ್ಯಕ್ತಿ. ಅದನ್ನು ಈ ಕಾದಂಬರಿಯಲ್ಲಿ ಮನುಷ್ಯ ವಿವಿಧ ಮುಖಗಳನ್ನು ಪರಿಚಯ ಮಾಡಿದ್ದೇನೆ. ನಿಮ್ಮ ಅಭಿಪ್ರಾಯಕ್ಕೆ ನಾನು ಕಾಯುತ್ತೇನೆ. ನನಗೆ ಆಪ್ತರಾದ ಡಾ. ಭಂಡಾರಿ, ಮಾನ್ಯ ಕುಲಪತಿಗಳು, ನನ್ನಾಪ್ತ ಸ್ನೇಹಿತರು. ಪ್ರಕಟಣೆಗೆ ಮುಂದೆ ಬಂದ ಓಂಕಾರಪ್ಪನವರು, ಅವರ ಕುಟುಂಬದವರು, ಕರಡು ತಿದ್ದಿದ ಅಭಿಲಾಷ, ಪಾಂಡು, ಸುನಿಲ್, ಬೆರಳಚ್ಚು ಮಾಡಿದ ಮೇರಿ ಮತ್ತು ಓದುವ ನಿಮಗೆ ವಂದನೆಗಳು.

**ಕೇಶವ ಶರ್ಮ.ಕೆ**

ಮುಳಿಹುಲ್ಲು ಹಾಕಿದ ಒಕ್ಕಲು ಮನೆಯಲ್ಲಿ ಬಿಡಾರ ಹೂಡಿದ ವೇಳೆ ನಿಶಿತನಿಗೆ ಹನ್ನೆರಡುವರ್ಷ. ಆ ಮನೆಯಲ್ಲಿ ಅಡುಗೆ ಮನೆ ಮಾತ್ರ ಕೋಣೆ. ಉಳಿದುದೆಲ್ಲಾ ಬಟ್ಟಬಯಲು. ಮೂಲೆಯಲ್ಲಿ ನಾಲ್ಕು ಕಂಬ ಬಿಟ್ಟರೆ ಇಡಿಯ ಮನೆಯ ಮಾಡಿಗೆ ಆಧಾರವಿಲ್ಲ. ಕಂಬವು ಕೂಡಾ ಗಟ್ಟಿ-ಜಾತಿ ಮರದ್ದಲ್ಲ. ತಾಳೆಯ ಮರದ ಅಡ್ಡತೊಲೆಗಳು. ನೆಲಕ್ಕೆ ಸೆಗಣಿ ಸಾರಿಸಲಾಗಿದೆ. ಮುಳಿಹುಲ್ಲಿನ ಮಾಡು ಯಾವ ಮಳೆಗಾಲದಲ್ಲಿ ಹೇಗಾಗುತ್ತದೋ ಬಲ್ಲವರಿಲ್ಲ. ಜೋರುಮಳೆ ಬಂದರೆ ಕೇರೆಯೋ ಕಪ್ಪೆಯೋ ಬಂದರೆ ಎನ್ನುವ ಭಯ ಬೇರೆ. ಜೋರು ಸಿಡಿಲು ಬಂದು ತೋಟದಲ್ಲಿರುವ ಹುಣಿಸೆಯ ಮೇಲೆ ಹೊಡೆದು ಇಡೀ ಮರವೇ ಸುಟ್ಟು ಕರಕಲಾದ ಮೇಲೆ ಮುಳಿಹುಲ್ಲು ಮತ್ತು ಅಡಿಕೆ ಸೋಗೆಯನ್ನು ಮನೆಯ ಮಾಡಿಗೆ ಹಾಕಿದವರು ಹೆದರಿ ನಡುಗುವುದು ಸಾಮಾನ್ಯ ದೃಶ್ಯವಾಗಿದೆ. ಮನೆಯಲ್ಲಿರುವ ಕತ್ತಿಯನ್ನೋ, ಕಬ್ಬಿಣದ ಹಾರೆಯನ್ನೋ, ಕಬ್ಬಿಣದ ಚೂರನ್ನೋ ಅಂಗಳಕ್ಕೆ ಬಿಸಾಡಿ "ದೇವರೇ ಕಾಪಾಡಪ್ಪ" ಎಂದು ಮಳೆರಾಯನಿಗೆ ಕೈಮುಗಿಯುವುದು ಮಳೆಗಾಲದ ನಿತ್ಯದೃಶ್ಯ. ತೋಡಿನಲ್ಲಿ ಒಮ್ಮೆ ಮುಳುಗಿ, ಮತ್ತೊಮ್ಮೆ ಎದ್ದು ಈಜಾಟವಾಡುವ ತೆಂಗಿನ ಕಾಯಿಯನ್ನು ಹಿಡಿಯಲು, ತಲೆಗೊಂದು ಗೊರಬು ಹಾಕಿಕೊಂಡು, ಬಿದಿರಿನ ಕೊಕ್ಕೆಗೆ ಒಂದು ಬುಟ್ಟಿಯನ್ನು ಕಟ್ಟಿ ತೋಡಿನ ಬದಿಯಲ್ಲಿ ಕೂರುವ ವೀರಾಧಿವೀರರು ಇರುವುದು ಕೂಡಾ ಅಷ್ಟೇ ಸತ್ಯ! ಉಷ್ಣವಾಗದಿರಲಿ ಎಂದು ತಲೆಗೆ ತುಂಬಾ ತೆಂಗಿನೆಣ್ಣೆ ಹಾಕಿಕೊಂಡು ನಿಶಿತ ಮಲಗಿದರೆ ಮಧ್ಯರಾತ್ರಿ ಇರುವೆಗಳು ಬಂದು ತಲೆಯನ್ನು ಮುತ್ತಿಗೆ ಹಾಕಿ ಕಚ್ಚುವುವು.

ತಲೆಗೆ ಎಣ್ಣೆಹಾಕಿಕೊಳ್ಳುವುದು ಬೇಡ; ಈ ಇರುವೆಯು ಮುತ್ತಿಕ್ಕುವುದು ಬೇಡವೆಂದು ಅವನಿಗೆ ಅನಿಸಿದರೂ ಅಮ್ಮ ರಾತ್ರಿ ಅವನ ನೆತ್ತಿಯಮೇಲೆ ಎಣ್ಣೆ ಸುರಿಯದೆ ಬಿಡುವವಳಲ್ಲ. ಇರುವೆಗಳು ಬಂದು ಕಚ್ಚದಿರಲಿ ಎಂದು ಚಾಪೆಯ ಸುತ್ತ ಇದ್ದಿಲಿನ ಗೆರೆಯನ್ನು ಎಳೆಯುವಳು. ಆದರೆ ಇದ್ದಿಲಿನ ಕಪ್ಪು ಗೆರೆಯನ್ನು ಕಂಡ ಇರುವೆಗಳು ಹೆದರುವ ಪ್ರಶ್ನೆಯಿಲ್ಲ. ಕೊನೆಗೆ ಇರುವೆ ಬಾರದಂತೆ ಉರಿಯುವ ಕೆಂಡದ ಬೇಲಿ ಹಾಕಿ ನಿಶಿತನನ್ನು, ಉಳಿದವರನ್ನು ಮಲಗಲು ಹೇಳಿದ್ದಾಯಿತು.

ಕೆಂಡವಾದರೂ ಎಷ್ಟು ಸಮಯಾಂತ ಉಳಿದೀತು? ಕೆಂಡವು ಉರಿ ಕಳೆದುಕೊಂಡು ಕಪ್ಪಗಾದ ಮೇಲೆ ಮತ್ತೆ ಇರುವೆಯ ಕಾಟ. ಕೊನೆಗೆ ಒಂದು ಉಪಾಯ ಕಂಡುಹಿಡಿಯಲಾಯಿತು: ಚಾಪೆಯ ಸುತ್ತ ಡಿ.ಡಿ.ಟಿ.ಯ ರಂಗೋಲಿ ಎಳೆಯುವುದು. ಆಗ ಇರುವೆಗಳು ತಲೆಯನ್ನು ಸುತ್ತುವುದು ಕಡಿಮೆಯಾಯಿತು. ಆದರೆ ರಾತ್ರಿಯ ವೇಳೆ ಇಲಿ ಕಾಲಬುಡದಲ್ಲಿ ಓಡಾಡುವುದು, ತಲೆಯ ಮೇಲೆ ಓಡಾಡುವುದು ಕಡಿಮೆಯಾಗಲಿಲ್ಲ. ಆ ಇಲಿ ಮತ್ತು ಇರುವೆಗಳು ಈವತ್ತಿಗೂ ನಿಶಿತನ ತಲೆ ಮತ್ತು ಕಾಲುಗಳಲ್ಲಿ ಓಡಾಡುತ್ತಿವೆ. ಯಾವ ಹೆದರಿಕೆಯೂ ಇಲ್ಲದೆ! ನಿಶಿತ ಇಲ್ಲಿಯವರೆಗೆ ಕಾಪಾಡಿಕೊಂಡು ಬಂದ ಅನೇಕ ಸಂಗತಿಗಳು ಕಾಲಬುಡದಲ್ಲಿ ಹೊರಳಾಡುತ್ತವೆ. ಕಾಲು-ಕೈ ಮೀಸೆಗಳನ್ನು ಕಳೆದುಕೊಂಡ ಜಿರಳೆಯಂತೆ!

ಧಕ್ಕನೆ ಬಂದು ಎದೆಯ ಮೇಲೆ ಕುಳಿತುಕೊಂಡ ಅನೇಕ ಸಂಗತಿಗಳಲ್ಲಿ ಯಾವುದು ತನ್ನ ಸ್ವಂತದ್ದು; ಯಾವುದು ತನಗಿಂತ ಬೇರೆಯಾದುದು, ತನಗೆ ಅಪರಿಚಿತವೆನ್ನಿಸಬಹುದಾದ್ದು ಯಾವುದು ಎಂದು ತಿಳಿಯಲಾಗದಷ್ಟು ಅವನು ದಿಙ್ಮೂಢನಾಗುತ್ತಾನೆ. ಬೆಳಕು ಕಳೆದುಕೊಂಡ ಕಣ್ಣು, ಸಪೂರವಾದ ಅವನ ಕೈಕಾಲುಗಳು ಮತ್ತು ಅಸ್ತವ್ಯಸ್ತವಾದ ಅವನ ತಲೆಗೂದಲು ಮನೆಯ ಸೋಗೆಯನ್ನು ನೆನಪಿಸುತ್ತಿವೆ. ಬೇರೆ ಯಾವುದನ್ನೂ ಅಲ್ಲ!

ನಿಶಿತ ಈಗ ಒಬ್ಬಂಟಿ. ಅವನಾಯಿತು, ಅವನ ಪುಟ್ಟ ರೂಮಾಯಿತು. ಅಲ್ಲಲ್ಲಿ ಬಿಸಾಕಿದ ಪುಸ್ತಕದ ರಾಶಿಗಳು, ಅವನ ದಿವಾನ್ ಕಾಟಿನ ಮೇಲೆ ಮುದ್ದೆಯಾದ ಬಟ್ಟೆಗಳು, ಇಷ್ಟೆ ಅವನ ಜಗತ್ತು. ಜಗತ್ತಿನೊಂದಿಗಿನ ಸಂಬಂಧವೂ ಅಷ್ಟಕಷ್ಟೆ. ಬರೆದರೆ ಬರೆದ. ಬಿಟ್ಟರೆ ಬಿಟ್ಟ. ಕುಣಿದರೆ ಕುಣಿದ. ಅವನಿಗೆ ಯಾವುದರ ಬಗ್ಗೆಯೂ ಅಂಥ ಚಿಂತೆಯಿಲ್ಲ. ತಾನು ಈ ತನಕ ಹಿಡಿದಿದ್ದರಲ್ಲಿ ನೋವು, ಗೆಲುವು, ಅಪಮಾನ, ಉಳಿದವರ ಅನುಭವಗಳು ಕಲಸುಮೇಲೋಗರ ವಾಗಿದೆಯೆಂದು ಅವನಿಗೆ ಸ್ವತಃ ದೃಢವಾಗಿತ್ತು.

ತಾನು ಕಳೆದದ್ದು ಎಷ್ಟು? ಕೂಡಿ ಇಟ್ಟದ್ದು ಎಷ್ಟು? ಲೆಕ್ಕಾಚಾರ ಮಾಡಿದರೆ ಅದರ ಮೊತ್ತವೆಷ್ಟಾಗಬಹುದು ಎಂದು ಯೋಚಿಸಿದ. ಲೆಕ್ಕವೆಂಬುದು ಅವನ ತಲೆಗೆ ಹೋಗದ ವಿಚಾರವಾದ್ದರಿಂದ ಅದನ್ನೂ ಬಿಟ್ಟುಬಿಟ್ಟ.

ಅವನ ಹದಿಮೂರನೆಯ ವರ್ಷವದು: ಯಾಕೋ ವಿಪರೀತ ಕಾಯಿಲೆ. ಏನು ಎಂತದ್ದು ಅಂತ ಯಾರಿಗೂ ಮೇಲು ಮೇಲಿಂದ ಗೊತ್ತಾಗದಿರುವಂಥ ಕಾಯಿಲೆ. ಒಂದೇ ಸಮನೆ ಕೈ-ಕಾಲು ಸಿಡಿತ, ಮೈಸಿಡಿತ, ಮಲಗಿದರೆ ಇಡೀ ಮೈ ಹಾರಿಹೋಗುವಷ್ಟು ನಡುಕ. ಒಮ್ಮೆ ಬಂದರೆ ಎರಡು ದಿನ ಈ ನರಳಾಟ.

ಮತ್ತೆ ಮೂರನೆಯ ದಿನಕ್ಕೆ ಸರಿಯಾಗುತ್ತಿತ್ತು. ಮತ್ತೆ ಹದಿನೈದು – ಇಪ್ಪತ್ತು ದಿವಸ ಕಾಣಿಸಿಕೊಳ್ಳುತ್ತಿರಲಿಲ್ಲ. ಮತ್ತೆ ನಿಶಿತ ತಿರುಗಣಿ ಮಡುವಿಗೆ. ಎರಡು ವರ್ಷ ಈ ಕಾಯಿಲೆಯಿಂದ ನಿಶಿತ ನರಳಿದ್ದ. ನರಳಿದ್ದೆಂದರೆ ಹಾಗೆ ಹೀಗೆ ಅಲ್ಲ. ನೋವು ಸಾಮಾನ್ಯವಾಗಿರಲಿಲ್ಲ. ನೋವು ತಿನ್ನುವವರೆಲ್ಲರೂ ಈ ನೋವು ಸಾಕಪ್ಪಾ – ಜ್ವರ ಬಂದರೆ ಸಹಿಸಬಹುದು ನೆಗಡಿ ಬೇಡಪ್ಪಾ ಎನ್ನುತ್ತಾರೆ. ನೆಗಡಿ ಬಂದರೂ ಅಷ್ಟೇ – ಜ್ವರ ಬಂದರೆ ಅಡ್ಡಿಯಿಲ್ಲ ಅಂತನ್ನಿಸುತ್ತದೆ. "ಇವರು ಮೆಚ್ಚುವ ಕಾಲ ಇಲ್ಲಿಲ್ಲ ಜೋಕೆ" – ಎಷ್ಟು ಸತ್ಯ? ನಿಶಿತನಿಗೂ ಹೀಗೆಯೇ ಅನಿಸುತ್ತಿತ್ತು. ಈ ಸಮಯದಲ್ಲಿಯೇ ನಿಶಿತನನ್ನು ನಿಶಿತನ ತಂದೆ ಸಾಂತು ಬೈದ್ಯೆತಿಯ ಹತ್ತಿರ ಕರೆದುಕೊಂಡು ಹೋದದ್ದು. ಸಾಂತು ಬೈದ್ಯೆತಿಗೆ ಆಗ ಹೆಚ್ಚು ಕಡಿಮೆ ಅರವತ್ತು ವರ್ಷ. ಬೈದ್ಯೆತಿಯೆಂದರೆ ಅವಳು ವೈದ್ಯ ಮಾಡುವುದರಿಂದ ಬಂದ ಹೆಸರು. ಮಾಯ ಮಾಟ ತೆಗೆಸುವುದರಲ್ಲಿ ಪ್ರವೀಣೆಯೆಂದು ಎಲ್ಲರೂ ಹೇಳುತ್ತಿದ್ದರು. ತಲತಲಾಂತರದಿಂದ ಬಂದ ವೈದ್ಯಪದ್ಧತಿಯ ಬಳುವಳಿಯ ಗುಟ್ಟನ್ನು ಯಾರಿಗೂ ಬಿಟ್ಟುಕೊಟ್ಟವಳಲ್ಲ. ಸಾಂತು ಬೈದ್ಯೆತಿಯ ತಂದೆ ಸೀನ ಬೈದ್ಯರೂ ಒಂದು ಕಾಲಕ್ಕೆ ದೊಡ್ಡ ವೈದ್ಯರು.

ಅವರಿಗೆ ಗೊತ್ತಿಲ್ಲದ ಹಸಿರು ಔಷಧಿ ಇಲ್ಲವಂತೆ. ಇಡಿಯ ಮನೆತನವು ಔಷಧಿ ಕೊಡುವ ಕುಟುಂಬದ್ದು. ಮನೆಯ ಮುಂದಿನ ನಾಗಬನದಲ್ಲಿ ಬಹಳ ಹಿಂದಿನವರು ಆರಾಧನೆಯನ್ನು ಮಾಡಿಕೊಂಡು ಬಂದರೆಂದು ನಾಗ ಬ್ರಹ್ಮರೇ ಸ್ವತಃ ಅವರ ಹಿಂದಿನ ತಲೆಮಾರಿನವರಿಗೆ ಕನಸಿನಲ್ಲಿ ಬಂದು ಔಷಧಿಯ ಉಪಚಾರ ಮಾಡುವ ವಿಷಯ ಹೇಳಿದರೆಂದು ಸಾಂತು ಬೈದ್ಯೆತಿಯು ಹೇಳಿಕೊಳ್ಳುವುದಿದೆ. ಸಾಂತುಬೈದ್ಯೆತಿಯ ತಂದೆ ಸೀನ ವೈದ್ಯರು ವಿಷ ಕಕ್ಕಿಸುವುದರಲ್ಲಿ, ಹೆಂಗಸರ ಕಾಯಿಲೆ ಇಳಿಸುವುದರಲ್ಲಿ ಪ್ರವೀಣರು. ಹೆಂಗಸರಿಂದ ಅಂಟಿಕೊಳ್ಳುವ ಜಾಡ್ಯಕ್ಕೆ ಅವರು ಕೊಡುವ ಔಷಧಿಯು ತುಂಬಾ ಪರಿಣಾಮಕಾರಿಯಾದ್ದು. ಸೀನ ವೈದ್ಯರು ಈ ಔಷಧಿಯನ್ನು ಕೊಡುವುದರಲ್ಲಿ ತುಂಬಾ ಹೆಸರು ಮಾಡಿದ್ದು ಪರಂಗಿ ದೊರೆಯೊಬ್ಬನಿಂದ.

ಪರಂಗಿದೊರೆ ಮಂಗಳೂರಿಗೆ ಬಂದು ಉಳಿದುಕೊಂಡಿದ್ದ ಸಂದರ್ಭವದು. ಜಾರ್ಜ್ ಎಂದರೆ ಒಬ್ಬ ಸಾಮಾನ್ಯ ಪರಂಗಿ ದೊರೆ. "ಕೆಂಪು ಮೂತಿಯವರು" ಎಂದರೆ ಜನಕ್ಕೆ ಅಷ್ಟಕಷ್ಟೆ. ಈ ಪರಂಗಿಯವರು ಯಾವುದೋ ಅರ್ಥವಾಗದ ಭಾಷೆ ಮಾತಾಡ್ತಾರೆ ಅಂತ ಅವರ ತಿಳುವಳಿಕೆ. ಅಂಥ ಜಾರ್ಜ್‌ಗೆ ಎರಡು–ಮೂರು ಹುಚ್ಚುಗಳು ಬೇರೆ ಇದ್ದವು. ಬೇಟೆ, ಕುಡಿತ, ಹೆಂಗಸರು. ಅವನ ಪ್ರಕಾರ, ಗೇರು ಹಣ್ಣಿನಿಂದ ತಯಾರಿಸಿದ ಸಾರಾಯಿ ಒಳ್ಳೆಯದು. ಬೆಂಕಿಕಡ್ಡಿ

ಗೀಚಿದರೆ ಅದು ಉರಿಯಬೇಕು. ಅದು ಅವನ ಮೊದಲಿನ ಆದ್ಯತೆ. ತಾಳೆಮರದಿಂದ ಇಳಿಸಿದ ಬೆಳಗಿನ ಸೇಂದಿ ಖುಷಿ ಕೊಡುತ್ತದೆಯೆಂದು ಹೇಳುತ್ತಿರುತ್ತಾನೆ. ಸುಟ್ಟ ಮೀನು, ಗೇರು ಹಣ್ಣಿನ ಸಾರಾಯಿ ಎರಡೂ ತುಂಬಾ ಉತ್ತಮವಾದುದು. ಒಂಚೂರು ಕುಡಿಯಬೇಕು, ಮೀನು ತಿನ್ನಬೇಕು. ಮತ್ತೆ ಕುಡಿಯಬೇಕು. ರಾತ್ರಿಯೂಟಕ್ಕೆ ಕಾಡುಕೋಳಿ, ಮೊಲ, ಹಂದಿ – ಇವುಗಳ ಮಾಂಸಬೇಕು. ಕಾಡುಕೋಳಿಯ ಬೇಟೆಯೆಂದರೆ ಅವನಿಗೆ ಇಷ್ಟ. ಭಾರತಕ್ಕೆ ಅವನ ಜೊತೆ ಬಂದ ಅವನ ಹೆಂಡತಿ ಇಲ್ಲಿಯ ಪರಿಸ್ಥಿತಿಯನ್ನು ಕಂಡು ವಾಪಸ್ಸು ಇಂಗ್ಲೆಂಡಿಗೆ ಹೋದಳಂತೆ. ಹೆಂಡತಿಯು ವಾಪಸು ಹೋದುದು ಅವನ ಪ್ರಕಾರ ತುಂಬ ಒಳ್ಳೆಯ ಕೆಲಸ. ಅದರಿಂದ ಅವನಿಗೆ ಬೇಕಾದುದನ್ನು ಬೇಕಾದ ಹೊತ್ತಿಗೆ ಪಡೆಯುವ ಸುವರ್ಣ ಅವಕಾಶ ದೊರೆಯಿತು. ಇಂಡಿಯನ್ನರು ಸದಾ ಅನಾಗರಿಕರು ಎಂದು ಬಯ್ಯುತ್ತಿದ್ದ ಅಷ್ಟೇ. ಆದರೆ ಭಾರತೀಯ ಹೆಂಗಸರನ್ನು ಕಂಡರೆ ಖುಷಿಪಡುತ್ತಿದ್ದ. ಭಾರತೀಯ ಹೆಂಗಸರು ಹಾಸಿಗೆಯಲ್ಲಿ ಕೊಡುವ ಸುಖ ಬೇರೆ ಎಲ್ಲಿ ಸಿಕ್ಕೀತು ಎಂದು ಹೇಳುತ್ತಿದ್ದ.

ಆಗ ಮಂಗಳೂರಿನ ಬಂದರು ರೋಡಿನ ಕೊನೆಯ ತುದಿಯಲ್ಲಿ ಮನೆಕಟ್ಟಿಕೊಂಡು ಇದ್ದವಳು ಚಂದ್ರಮ್ಮ. ಘಟ್ಟದ ಮೇಲಿಂದ ಅಕ್ಕಿವ್ಯಾಪಾರಿ ಪೈಗಳೊಂದಿಗೆ ಒಂದುದಿನ ಮೂಟೆ ಕಟ್ಟಿಕೊಂಡು ಬಂದು ಇಳಿದ ಚಂದ್ರಮ್ಮ ಮತ್ತೆ ಘಟ್ಟದ ಕಡೆಗೆ ಮುಖಮಾಡಿ ಮಲಗಿಕೊಳ್ಳಲಿಲ್ಲ. ಅದರ ಅಗತ್ಯವೂ ಅವಳಿಗೆ ಬೀಳಲಿಲ್ಲ. ಆಗ ಅನಂತ ಪೈಗಳೆಂದರೆ ದೊಡ್ಡ ಕುಳ. ಕುತ್ತಿಗೆಗೆ ಚಿನ್ನದಸರ. ಅದಕ್ಕೆ ಚಿನ್ನದಲ್ಲಿ ಕಟ್ಟಿಸಿದ ಹುಲಿಯುಗುರಿನ ಪದಕ. ಕೈಗೆ ದಪ್ಪ ಕಡಗ. ದೊಡ್ಡ ಮುಂಡಾಸು. ಚರ್ಮದ ಮೆಟ್ಟಿನ ಜೋಡು. ದೈತ್ಯ ಆಳು. ಪೈಗಳನ್ನು ನೋಡಿದರೆ ಅವರ ಹೆಂಡತಿ ಅವರ ಅರ್ಧಕ್ಕಿಲ್ಲ. ಹುಲಿಯೆದುರಿನ ಬೆಕ್ಕಿನಂತೆ. ಪೈಗಳ ದೈತ್ಯದೇಹದಲ್ಲಿ ಎದ್ದು ಕಾಣುವುದು ಅವರ ಹುರಿಕಟ್ಟಿದ ಮೀಸೆ. ಮೀಸೆ ಪೈಗಳೆಂದರೆ ಎಲ್ಲರಿಗೂ ಪರಿಚಿತ. ಮಾತು ಸ್ವಲ್ಪ ಒರಟು. ಆದರೆ ಅವರ ಹೆಂಡತಿ ಥೇಟು ಲಕ್ಷ್ಮಿದೇವಿ. ಒಂದು ಸಾರಿಯೂ ಸಿಡ ಸಿಡ ಅಂದದ್ದಿಲ್ಲ. ಕಣ್ಣೀರನ್ನು ಮೂಗಿನ ಸಿಂಬಳವನ್ನು ಸೇರಿಸಿ ಸೆರಗಿನಲ್ಲಿ ಒರೆಸಿಕೊಂಡದ್ದಿಲ್ಲ. ಗಂಡನ ಯಾವ ವ್ಯವಹಾರಕ್ಕೂ ಕೈ ಹಾಕಿದವಳೂ ಅಲ್ಲ. ಮನೆಯೂಟ ಬೇಡವಾದರೆ ಏನು ಮಾಡ್ಳಿಕ್ಕೆ ಬರುತ್ತದೆ? ಅಂಥ ಪೈಗಳು ತಂದಿರಿಸಿಕೊಂಡ ಚಂದ್ರಮ್ಮ ಪೈಗಳಿಗೆ ದಿನಾ ಸುಖ ಕೊಟ್ಟಳು. ಪೈಗಳು ಗಂಟು ಬಿಚ್ಚುವ ಜಾತಿಯಲ್ಲ ಎಂದು ಗೊತ್ತಾದಾಗ ಮಾತ್ರ ಪೈಗಳ ಹುಲಿಮೀಸೆಯ ಎಳೆಗಳಿಗೆ ಕೈಯಿಟ್ಟಳು. ಮೀಸೆಗೆ ಕೈಯಿಟ್ಟರೆ ಮುಗಿಯಿತು – ಹುಲಿಯು ಅಲುಗಾಡುವಂತಿಲ್ಲವೆಂದು ಅವಳಿಗೂ ಗೊತ್ತು. ಪೈಗಳು ಕಟ್ಟಿಕೊಂಡ ಹೆಂಡತಿಯ ಎದುರು ಚಂದ್ರಮ್ಮ ಏನೂ ಅಲ್ಲ. ಪೈಗಳ ಹೆಂಡತಿಯ ಮೈಬಣ್ಣ

ಕೇದಿಗೆ. ಗಂಡ ಏರಿಗೆಳೆದರೆ ಏರಿಗೆ – ನೀರಿಗೆಳೆದರೆ ನೀರಿಗೆ ಅನ್ನುವಂಥ ಸ್ವಭಾವ. ಬಾ ಎಂದರೆ ಬರುತ್ತಾರೆ. ಹೋಗು ಎಂದರೆ ಹೋಗುತ್ತಾರೆ. ಚಂದ್ರಮ್ಮನ ಧಾಟಿಯು ಅದಲ್ಲ. ಪೈಗಳ ಸರಿಸಮಾನವಾದ ತೂಕ ಅವಳದು. ನೀರಿನಲ್ಲಿ ಅದ್ದಿ ತೆಗೆದ ಕೆಂಡದ ರೂಪ. ವಿಚಿತ್ರವೆಂದರೆ ಪೈಗಳು ಒಂದು ಎಂದರೆ ಅವಳು ಎರಡು ಎನ್ನುತ್ತಾಳೆ. ಪೈಗಳು ಗಂಟು ಬಿಚ್ಚುವುದಿಲ್ಲ ಎಂದು ಗೊತ್ತಾದೊಡನೆ ಅವಳು ಮಾಡಿದ ಮೊದಲ ಕೆಲಸವೆಂದರೆ – ಅವರು ಬಂದಾಗ 'ಪೈಗಳೇ– ಇನ್ನು ಮೂರು, ನಾಕು ದಿನ ನನ್ನನ್ನು ಮುಟ್ಟುವಂತಿಲ್ಲ' ಒಂದು ವಾರ ಬಿಟ್ಟು ಪುನಃ ಪೈಗಳು ಬಂದಾಗ "ಪೈಗಳೇ ಈವತ್ತು ಉಶಾರಿಲ್ಲ" ಎಂದಳು. ಮತ್ತೆರಡು ದಿನ ಬಿಟ್ಟು ಹೋದಾಗ ಪೈಗಳನ್ನು ಎದುರು ಕೂರಿಸಿಕೊಂಡು – "ಹಸಿವೆಯೆಂದರೆ ಏನೂಂತ, ಗೊತ್ತಾಯ್ತಾ? ನೀವು ದುಗ್ಗಾಣಿ ಬಿಚ್ಚದಿದ್ದರೆ ನಿಮ್ಮನ್ನು ನಂಬಿಕೊಂಡು ಬಂದ ನಾನು ಏನು ಇಲ್ಲಿ ಕುಳಿತು ತಾಳ ಕುಟ್ಟುವುದಾ? ನಾನು ಊರಿಗೆ ಹೋಗ್ತೇನೆ" ಅಂತ ಬಾಯಿ ಮಾಡಿದಳು. ಅವಳ ಗಂಟಲ ಸ್ವರ ರಾತ್ರಿ ಜಗುಲಿಯಲ್ಲಿ ಉರಿಯುತ್ತಿದ್ದ ಲಾಟೀನನ್ನು ದಾಟಿ ಬಂದರಿನ ರಸ್ತೆಯನ್ನೂ ದಾಟಿತು. ಪೈಗಳ ಮುಖದಲ್ಲಿ ಬೆವರು ನೀರು ಹರಿಯಿತು ಎಂದರೆ ಅಷ್ಟಿಷ್ಟಲ್ಲ. "ಹೋಗ್ಲಿ ಬಿಡು. ಅದಕ್ಕೆ ನಾನು ನಾಳೆಯೇ ವ್ಯವಸ್ಥೆ ಮಾಡುತ್ತೇನೆ" ಎಂದರು ಪೈಗಳು. ಮರುದಿನವೇ ಪೈಗಳು ಒಂದು ಮನೆಯನ್ನು ಕ್ರಯಕ್ಕೆ ಕೊಂಡುಕೊಂಡು ಅವಳ ಹೆಸರಿಗೆ ಮಾಡಿ 'ನಾನು ಬರುವಾಗ ಬಾಗಿಲು ತೆರದಿರಬೇಕು' ಎಂದರು. ಅವರು ಹೇಳಿದ್ದೇನೋ ನಿಜ – ಅವರು ಬರುವಾಗ ಚಂದ್ರಮ್ಮ ಬಾಗಿಲು ತೆರೆಯುತ್ತಿದ್ದಳು. ಆದರೆ ಅವರು ಘಟ್ಟಕ್ಕೆ ಹೋಗುವ ಹೊತ್ತಿನಲ್ಲಿ ಅವಳ ಮನೆಯ ಬಾಗಿಲು ಬೇರೆಯವರಿಗೂ ತೆರೆಯಲು ಪ್ರಾರಂಭವಾಯಿತು. ಪೈಗಳಿಗೆ ಇದರ ವಾಸನೆ ಹಿಡಿದ ತಕ್ಷಣ "ಕಜ್ಜಿ ನಾಯಿಯ ಸಹವಾಸ ಬೇಡಪ್ಪಾ" ಅಂತ ದೂರ ಉಳಿದರು. ಪೈಗಳು ಬರುವುದು ಬಿಟ್ಟ ಮೇಲೆ ಚಂದ್ರಮ್ಮನಿಗೆ ಮತ್ತಷ್ಟು ಅನುಕೂಲವೇ ಆಯಿತು. ಎಲ್ಲವನ್ನೂ ಬಿಟ್ಟವಳಂತೆ ಚಂದ್ರಮ್ಮ, "ನಮ್ಮ ಘಟ್ಟದ ಮೇಲಿನವರನ್ನು ಸುಧಾರಿಸುವುದು ಸುಲಭ ಅಲ್ಲ. ಪೈಗಳಿಗೆ ಸಣ್ಣವುಗಳ ಮೇಲೆ ಹಾರಿ ಗೊತ್ತೇ ಹೊರತು ದೊಡ್ಡದರ ಮೇಲಲ್ಲ" ಎಂದು ನಗಾಡಿದಳು. ಅದು ಪೈಗಳ ಕಿವಿಗಳಿಗೆ ಬಿದ್ದರೂ ಅದನ್ನು ಅವರು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ಹಟಕ್ಕಾದರೂ ಸರಿ ಘಟ್ಟದ ಮೇಲಿಂದ ಮತ್ತೊಂದನ್ನು ಹೊಡೆದುಕೊಂಡು ಬರ್ತೇನೆ. ಅವಳು ನನ್ನನ್ನು ಏನೂಂತ ತಿಳಿದುಕೊಂಡಿದ್ದಾಳೆ?' ಎಂದವರು

ಡಿಸೆಂಬರ್ ತಿಂಗಳಿಗೆ ಘಟ್ಟದ ಮೇಲೆ ಹೋದವರು ಅಲ್ಲಿಂದಲೇ ಒಬ್ಬಳನ್ನು ಕಟ್ಟಿಕೊಂಡು ಬಂದದ್ದೂ ಆಯಿತು. "ಈ ಸರ್ತಿ ನಾನು ತಂದದ್ದು ಹೆಚ್ಚು ಹಾಲು

ಕೊಡುತ್ತದೆ. ಈ ಪೈ ಯನ್ನು ಅವಳು ಏನೂಂತ ತಿಳಿದುಕೊಂಡಿದ್ದಾಳೆ" ಎಂದು ಮೂರು ನಾಕು ಸಾರಿ ಮೀಸೆ ಮೇಲೆ ಕೈಹಾಕಿದರು. ಚಂದ್ರಮ್ಮನೂ ಸುಮ್ಮನುಳಿಯಲಿಲ್ಲ. ಶಿವಮೊಗ್ಗಕ್ಕೆ ಹೋಗಿ 'ಸಹಾಯಕ್ಕೆ ಇರಲಿ' ಎಂದು ಇಬ್ಬರು ಹುಡುಗಿಯರನ್ನು ಕರೆದುಕೊಂಡು ಬಂದಳು ಶಶಿಕಲಾ ಮತ್ತು ಕಲಾವತಿ. ಕಲಾವತಿ ರೂಪವಂತೆ. ದುಡಿದು ಗೊತ್ತಿರುವವಳು. ದೇಹವನ್ನು ಎಲ್ಲಿ ದಂಡಿಸಿಕೊಂಡರೆ ಎಲ್ಲಿ ಮಣಿಸಿಕೊಂಡರೆ ಸರಿಹೋಗುತ್ತದೆ? ಯಾವ ಹೊತ್ತಿಗೆ ನಗಬೇಕು? ಯಾವ ಹೊತ್ತಿಗೆ ನಟಿಸಬೇಕು. ಯಾವ ಗಂಡಸು ಹುಲಿ. ಯಾವ ಗಂಡಸು ಇಲಿ ಎನ್ನುವುದು ಅವಳಿಗೆ ಗೊತ್ತು. 'ನಮ್ಮ ಕಲಾವತಿ ಗಂಡಸರನ್ನು ತಟ್ಟಿಹಾರಿಸುವುದಕ್ಕೆ ಸಮರ್ಥಳು. ಅದರಲ್ಲಿ ಯಾವ ಮುಲಾಜೂ ಇಲ್ಲ' ಎಂದು ಸ್ವತಃ ಚಂದ್ರಮ್ಮನೇ ಹೇಳಿದ ಗುಟ್ಟಿನ ವಿಷಯ ಬಂದರು ದಾಟಿ ಪಣಂಬೂರು: ಮೂಲ್ಕಿಸೀಮೆಯವರೆಗೆ ಹೋಯಿತು. ಚಂದ್ರಮ್ಮನ ಮನೆಗೆ ಬರುವವರ ಸಂಖ್ಯೆಯೂ ಹೆಚ್ಚಾಯಿತು. ಅದೇ ಸಮಯದಲ್ಲಿ 'ಜಾರ್ಜ್ ದೊರೆಯು' ಪಣಂಬೂರಿನಲ್ಲಿ ಕ್ಯಾಂಪ್ ಹಾಕಿದ್ದ. ಅಲ್ಲಿಂದಲೇ ಚಂದ್ರಮ್ಮನಿಗೆ ಹೇಳಿಕಳಿಸಿದ 'ಒಂದು ಹಕ್ಕಿಯನ್ನು ಕಳಿಸಿಕೊಡು, ವಾರದಮಟ್ಟಿಗೆ. ಫ್ರೆಶ್ ಅಂದರೆ ಫ್ರೆಶ್ಶಾಗಿರಬೇಕು'. ಮರು ಓಲೆಯನ್ನು ಚಂದ್ರಮ್ಮನೂ ಕಳಿಸಿದಳು: 'ಗಿಳಿಮರಿಯಂಥ ಹುಡುಗಿಯನ್ನು ಕಳಿಸಿದ್ದೇನೆ. ಪ್ರಾಯಕ್ಕೆ ಬಂದಿದ್ದಾಳೆ ಅಷ್ಟೆ. ಬೆಣ್ಣೆಮುದ್ದೆ. ತುಂಬಾ ಬಿಸಿಯಾದರೆ ಕರಗಿ ಹೋದೀತು. ಪಳಗಿಲ್ಲ. ಹೊಸ ಅನುಭವ ಬೇರೆ. ಖಾವಂದರು ಸಹಕರಿಸಬೇಕು. ಪುಡಿ ಪುಡಿಯಾಗದ ಹಾಗೆ ನೋಡಿಕೊಳ್ಳಿ. ಆಮೇಲೆ ಅವಳೇ ಸರಿಯಾಗುತ್ತಾಳೆ. ಈ ತನಕ ಗಂಡಸರನ್ನು ತಲೆಯೆತ್ತಿ ನೋಡಿದವಳಲ್ಲ. ದಾರಿಗೆ ತರುವುದು ಖಾವಂದರಿಗೆ ಬಿಟ್ಟಿದ್ದು. ಸನ್ನಿಧಾನ ಏನು ದಾನ ಮಾಡುತ್ತದೋ ಅದನ್ನು ತಲೆಯಿಂದ ಹೊತ್ತು ತರುತ್ತೇನೆ. ಸನ್ನಿಧಾನದ ಕೃಪೆಯಷ್ಟೇ ನಮಗೆ ಬೇಕು. ನಮ್ಮಂಥ ಬಡಪಾಯಿಗಳ ಮೇಲೆ ತಮ್ಮ ಕೃಪಾ ದೃಷ್ಟಿ ಬಿದ್ದುದಕ್ಕೆ ದೇವರಿಗೆ ತೆಂಗಿನಕಾಯಿ ಒಡೆಯುತ್ತೇವೆ. ಪಂಚಲಿಂಗೇಶ್ವರನಿಗೆ ಎಳನೀರಿನ ಅಭಿಷೇಕ ಮಾಡಿಸುತ್ತೇವೆ' ಎಂದು ಬರೆದಳು. ಅವಳ ಓಲೆಯನ್ನು, ಅದರ ಧ್ವನಿತಾರ್ಥವನ್ನು ಓದಿಸಿ ಕೇಳಿಸಿಕೊಂಡ ಜಾರ್ಜ್ ದೊರೆ ಮುಗಳ್ನಕ್ಕು, ಪಳಗಿರುವ ಹೆಣ್ಣಿನ ಪಳಗಿರುವ ವಾಕ್ಯಗಳು ಎಂದುಕೊಂಡ. ಕಲಾವತಿಯನ್ನು ನೋಡಿದ ಕಾಲಿನಿಂದ ತಲೆಯವರೆಗೆ. ತಲೆಯಿಂದ ದೃಷ್ಟಿಯನ್ನು ಕೆಳಹರಿಸಿ ಒಂದೇ ಕಡೆಗೆ ಕೇಂದ್ರಿಕರಿಸಿದ. ಆಳುವುದಕ್ಕೆ ಸರಿಯಾದ ಹೆಣ್ಣು ಎಂದು ಭಾವಿಸಿಕೊಂಡ. ಅದೇದಿನ ರಾತ್ರಿ ಕಲಾವತಿಯೇ ಪರಂಗಿಯ ಒಬ್ಬ ಮಿಲಿಟರಿ ಅಧಿಕಾರಿಯನ್ನು ಎಷ್ಟು ಆಳಿದಳೆಂದರೆ – ಒಂದು ವಾರಕ್ಕೆಂದು ಕರೆಸಿಕೊಂಡವನು ಹದಿನೈದು ದಿನ ತನ್ನ ಬಳಿಯಲ್ಲಿ ಇರಿಸಿಕೊಂಡ. ಭಾರತೀಯ ಹೆಂಗಸರು ಇದನ್ನು ಎಲ್ಲಿ ಕಲಿತುಕೊಂಡರು ಎಂದು ಆಶ್ಚರ್ಯಪಟ್ಟ. ಹದಿನೈದು ದಿನಗಳಲ್ಲಿ ಬೇಕಾದಷ್ಟು

ಇನಾಮನ್ನು ಕೊಟ್ಟು ಕುದುರೆಗಾಡಿಯಲ್ಲಿ ಕಳಿಸಿಕೊಟ್ಟ. ಅವನಿಗೆ ಅರಿವಿಲ್ಲದಂತೆ ಕಲಾವತಿಯೂ ಕೂಡಾ ಒಂದು ಬಳುವಳಿಯನ್ನು ಕೊಟ್ಟುಹೋದಳು. ತಡೆಯಲಾಗದಷ್ಟು ನವೆ; ಕೀವು; ಉರಿ!

ಆ ಸಮಯದಲ್ಲಿಯೇ ಸಾಂತು ಬೈದ್ಯತಿಯ ತಂದೆ ಸೀನ ಬೈದ್ಯರಿಗೆ ಮಂಗಳೂರಿನಿಂದ ಕರೆಬಂತು "ಜಾರ್ಜ್ ಎಂಬ ಪರಂಗಿಯವನಿಗೆ ಜಡ್ಡಾಗಿದೆ. ಏನೂಂತ ಗೊತ್ತಿಲ್ಲ. ಬರಬೇಕಂತೆ" ಸೀನ ಬೈದ್ಯರನ್ನು ಕರೆತರಲು ಕುದುರೆಗಾಡಿಯೂ ಬಂದಿತ್ತು. ಸೀನ ಬೈದ್ಯರು ಹೋಗಿ ಮದ್ದು ಕೊಟ್ಟು ಬಂದರು. ಬರುವಾಗ ಒಂದು ಮೆಡಲು ವಿಕ್ಟೋರಿಯಾ ರಾಣಿಯ ಮೊಹರು ಇರುವ ನಾಣ್ಯವನ್ನು ತೆಗೆದುಕೊಂಡರು. ಇರಲಿಯೆಂದು ಜಗುಲಿಯ ಮೇಲೆ ನೇತು ಹಾಕಿದರು. ಆಗಾಗ ಸೀನ ಬೈದ್ಯರು, 'ಎಲ್ಲಾ ನಾಗಬ್ರಹ್ಮನ ಕೃಪೆ. ಮುಟ್ಟಿದ್ದು ವಾಸಿಯಾಯಿತು. ಇಲ್ಲದಿದ್ದರೆ ಆ ಪರಂಗಿಯವನ ಹತ್ತಿರ ಹೋಗುವಾಗ ವಾಸನೆ ತಡೆಯುವುದಕ್ಕೆ ಆಗುತ್ತಿತ್ತಾ? ಎಲ್ಲಾ ಕೊಳೆತು ಹೋಗುವ ಸ್ಥಿತಿಯಲ್ಲಿತ್ತು. ಅಟ್ಟೆಕಾಲು ಹಾಕಿಕೊಂಡು ನಡೆಯುವ ಸ್ಥಿತಿಯಲ್ಲಿದ್ದ. ಯಾರು, ಏನು, ಎಂತದ್ದು ಅಂತ ಗೊತ್ತಿಲ್ಲದೆ ಮೇಯುವುದಕ್ಕೆ ಹೋದರೆ ಮತ್ತೆ ಏನಾಗುತ್ತದೆ ಕತೆ? ನಾನಾದ್ದರಿಂದ ಉಳಿಸಿದೆ. ಎಷ್ಟಾದ್ರೂ ಸೂಳೆಯರೆಂದರೆ ಸೂಳೆಯರೆ. ಅವಕ್ಕೆ ಮಡಿ ಮೈಲಿಗೆಯುಂಟಾ?' ಎಂದು ಹೇಳುತ್ತಿದ್ದುಂಟು.

ಸೀನ ಬೈದ್ಯರು ತೀರಿಹೋದ ಮೇಲೆ ಕಸುಬನ್ನು ಮುಂದುವರಿಸಿಕೊಂಡು ಬಂದುದು ಸಾಂತುಬೈದ್ಯತಿ. ಸಾಂತು ಬೈದ್ಯತಿಯ ಕೈಗುಣ ಒಳ್ಳೆಯದು ಎಂದು ಎಲ್ಲರೂ ಹೇಳುತ್ತಿದ್ದರು. ನಿಶಿತನನ್ನು ಅವನ ಅಪ್ಪ ಕರೆದುಕೊಂಡು ಸಾಂತು ಬೈದ್ಯತಿಯ ಹತ್ತಿರ ಕರೆದುಕೊಂಡು ಹೋದುದು ಹನ್ನೆರಡು ಗಂಟೆಯ ಹೊತ್ತಿಗೆ. ಶುಕ್ರವಾರ. ಸಾಂತು ಬೈದ್ಯತಿಯು ಯಾರಿಗೋ ಮಂತ್ರಿಸಿ ತಾಯಿತ ಕಟ್ಟುತ್ತಿದ್ದಳು. ಮಣಮಣ ಮಂತ್ರ ಹೇಳುತ್ತಾ, ಕೈಯಲ್ಲಿ ಹಿಡಿದಿದ್ದ ಕಪ್ಪುದಾರಕ್ಕೆ ಪುಸ್ ಅಂತ ಗಾಳಿಯೂದುತ್ತಿದ್ದಳು. ಅವಳ ತಲೆಗೂದಲು ಬಿಚ್ಚಿಕೊಂಡಿತ್ತು. ಹಳದಿಬಣ್ಣದ ಸೀರೆಯನ್ನು, ಅದಕ್ಕೆ ಒಂಚೂರೂ ಒಪ್ಪದ ಕಡುಕೆಂಪುಬಣ್ಣದ ಜರಿಯಂಚಿನ ರವಿಕೆಯನ್ನು ಹಾಕಿಕೊಂಡಿದ್ದಳು. ಅಡ್ಡಸಾಲಿನ ಕುಂಕುಮ ಎದ್ದು ಕಾಣಿಸುತ್ತಿತ್ತು. ಬೈದ್ಯತಿಯು ಶುಕ್ರವಾರದ ದಿನದ ಪೂಜೆ ಮಾಡಿ – ನಾಗಬ್ರಹ್ಮನ ಎದುರು ಚಾವಡಿಯಲ್ಲಿ ಕುಳಿತುಕೊಂಡರೆ ಸಾಕ್ಷಾತ್ ದುರ್ಗಾ ದೇವಿಯೇ ಎಂದು ಜನ ನಂಬುತ್ತಿದ್ದರು. ಶುಕ್ರವಾರ ಒಂದುದಿನ ಬೆಳಿಗ್ಗೆ ಅವಳ ಮೈಮೇಲೆ ಅಮ್ಮ ಬರ್ತಾಳೆ ಅಂತ ಜನ ನಂಬುತ್ತಿದ್ದರು ಕೂಡಾ. ಅದಕ್ಕೆ ತಕ್ಕಂತೆ ಸ್ವಲ್ಪ ಹೊತ್ತು ಸಾಂತು ಬೈದ್ಯತಿಯು 'ಹ್ಹೂಂ' 'ಹ್ಹೂಂ' ಎಂದು ಹ್ಹೂಂಕರಿಸಿ ನಾಗಬನಕ್ಕೆ ಮೂರು ಸುತ್ತು

ಬಂದರೆ ಅವಳ ಮೈಮೇಲಿರುವ ಸೆರಗು ಎಲ್ಲಿರುತ್ತದೋ ಹೇಳಲು ಬರುವುದಿಲ್ಲ. ತಲಾ ತಲಾಂತರದಿಂದ ಬಂದ ಅವಳ ಹಳೆಯ, ದೊಡ್ಡ ಮನೆಯ ಚಾವಡಿಯಲ್ಲಿ ಒಂದು ತೊಟ್ಟಿಲು. ತೊಟ್ಟಿಲೆಂದರೆ ಏನೂ ಅಲ್ಲ. ಒಂದು ಸಾಗುವಾನಿಯ ದಪ್ಪದ ಚಿತ್ತಾರ ಬಿಡಿಸಿದ ಹಲಗೆ ಮತ್ತು ಅದಕ್ಕೆ ತಾಮ್ರದ ಕೊಂಡಿ. ಮೇಲಿಂದ ಇಳಿಬಿಟ್ಟ ಕಬ್ಬಿಣದ ದಪ್ಪನೆಯ ಸಂಕೋಲೆ. ಮಂಚದ ಕೆಳಗೆ ಎರಡು ಹುತ್ತಗಳು. ಬೈದ್ಯತಿಯು ಗಜಗಾತ್ರದ ಹೆಂಗಸಾಗಿರುವುದರಿಂದ ಅವಳು ಕುಳಿತ ಕೂಡಲೇ ಮಂಚದ ಸರಪಳಿಯು ತನ್ನ ಹಳೆಯ ನೋವಿನ ನೆನಪುಗಳನ್ನು ಮತ್ತೆ ಮತ್ತೆ ಮನಸ್ಸಿಗೆ ತಂದುಕೊಂಡು ಅಳುವ ಹೆಂಗಸಿನಂತೆ ಕುಂಯೋ ಎಂಬ ರಾಗವನ್ನು ಹೊರಡಿಸುತ್ತಿತ್ತು. ಸಾಂತು ಬೈದ್ಯತಿಯು ಮೊದಲು ಹೇಳುತ್ತಿದ್ದುದು 'ಸುಬ್ರಹ್ಮಣ್ಯನಿಗೆ ನಮಸ್ಕರಿಸಿ' ಅಂತ. ಕೆಲವರು ಹುತ್ತಕ್ಕೆ ಕಾಣಿಕೆ ಹಾಕುತ್ತಿದ್ದರು. ಮತ್ತೆ ಕೆಲವರು ಹಾರ, ಅಡಿಕೆಯ ಸಿಂಗಾರ ಇಡುತ್ತಿದ್ದರು. ಸಾಂತು ಬೈದ್ಯತಿಯು ಮಂಚದ ಮೇಲೆ ಚಕ್ಕಳಮಕ್ಕಳ ಹಾಕಿ ಕೂತುಕೊಂಡು ಗಂಭೀರವಾಗಿಯೆ ಇರುತ್ತಿದ್ದಳು. ನಗುವೆನ್ನುವುದು ಅಂತಹ ಸಂದರ್ಭದಲ್ಲಿ ಅವಳ ಹತ್ತಿರ ಸುಳಿಯುತ್ತಿರಲಿಲ್ಲ. ನಗು.. ಸದರ ಮಾಡುತ್ತದೆ ಎಂಬ ನಂಬಿಕೆಯು ಅವಳದು. ಅವಳು ಕುಡಿತ ಬಿಡಿಸುತ್ತಿದ್ದಳು. ಮೈಮೇಲೆ ಬಂದ ದೆವ್ವ ಬಿಡಿಸುತ್ತಿದ್ದಳು. ಹೆಂಗಸರ ಕಾಯಿಲೆಗೆ ಔಷಧಿ ಕೊಡುತ್ತಿದ್ದಳು. ಅರಸಿನ ಮುಂಡಿಗೆ, ಸರ್ಪಸುತ್ತು, ಮಕ್ಕಳಾಗದವರಿಗೆ ಅವಳ ಮದ್ದು ಅದು ತಾಗಿಯೆ ತಾಗುತ್ತದೆ ಎಂದು ಜನರು ಹೇಳುತ್ತಿದ್ದರು. ಬಾಲಗ್ರಹ ಪೀಡೆಗೆ ಅವಳು ಕಾಗೆಯನ್ನು ಕೊಂದು ಎಣ್ಣೆ ಮಾಡುತ್ತಾಳೆ. ಮೂಳೆಮುರಿತಕ್ಕೆ ಮೊಟ್ಟೆ ಕೊಡುತ್ತಾಳೆಂದು ಮಠದ ಪಕ್ಕಾ ಅನುಯಾಯಿಗಳಾದ ಬ್ರಾಹ್ಮಣರು "ಆ ಶೂದ್ರ ಹೆಂಗಸತ್ರ ಏನು ಔಷಧಿ ಮಾಡಿಸಿಕೊಳ್ಳುವುದು" ಎಂದು ಹೇಳುತ್ತಿದ್ದರು. "ಈ ಬ್ರಾಹ್ಮಣರ ಅದು ಕೊಳೆತು ಹೋಗುವಾಗ ಮೆಲ್ಲನೆ ಹೊದ್ದುಕೊಂಡು ಬರ್ತಾರೆ" ಎಂದು ಪುನಃ ಬೈದ್ಯತಿಯು ದೊಡ್ಡದಾಗಿ ಹೇಳತೊಡಗಿದಳು. ಇದು ಬ್ರಾಹ್ಮಣ ಹೆಂಗಸರ ಕಿವಿಗೆ ಬಿದ್ದು ಅವರು ಕೊಸ ಕೊಸ ಕಿರುಗುಟ್ಟಿ ಬ್ರಾಹ್ಮಣರ ಬಾಯನ್ನು ಮುಚ್ಚಿಸಿದರು. ಬ್ರಾಹ್ಮಣ ಹೆಂಗಸರೂ ಅವರ ಮುಟ್ಟಿನ ಕಾಯಿಲೆ, ಹೊಟ್ಟೆನೋವು, ಮಕ್ಕಳಾಗದ್ದಕ್ಕೆ ಅವಳಿಂದ ಮದ್ದು ತೆಗೆದುಕೊಳ್ಳಲು ತೊಡಗಿದರು. ಕೊನೆಗೆ ಇದು ಎಲ್ಲರಿಗೂ ಸಹಜವಾಯಿತು.

* * * * *

ಆ ದಿನ ಸಾಂತು ಬೈದ್ಯತಿಯ ಮನೆಗೆ ನಿಶಿತನನ್ನು ಅವನ ಅಪ್ಪ ಕರೆದುಕೊಂಡು ಬಂದಾಗ ತುಂಬಾ ಜನರಿದ್ದರು. ಸಾಂತು ಬೈದ್ಯತಿಯು ಕುಡುಕನೊಬ್ಬನಿಗೆ ಬೈದು, 'ಏನು ಸಂಸಾರ ಹಾಳು ಮಾಡುತ್ತೀಯಾ? ಇಂದಿನಿಂದ

ಸಾರಾಯಿ ಮುಟ್ಟಬಾರದು. ಸುಬ್ರಹ್ಮಣ್ಯನ ಮೇಲೆ ಆಣೆಯಿಟ್ಟು ಹೇಳು' ಎಂದು. ಅವನು ಕೈಮುಗಿದು ಸಾಂತು ಬೈದ್ಯತಿಯ ಕಾಲಿಗೆ ಬಿದ್ದು 'ಇನ್ನು ಮೇಲೆ ಕುಡಿಯುವುದಿಲ್ಲ' ಎಂದು ವಿನಯದಿಂದ ಕೈಮುಗಿದು ನಿಂತುಕೊಂಡ. ಅವಳು ಅವನಿಗೆ ಎಣ್ಣೆ; ಕುಡಿಯಲು ಔಷಧಿಯನ್ನು ಕೊಟ್ಟು ಹೇಳಿದಳು. 'ಈ ಔಷಧಿಯನ್ನು ಕುಡಿದ ಮೇಲೆ ಸಾರಾಯಿ ಕುಡಿಯಬಾರದು. ಕುಡಿದರೆ ಸತ್ತು ಹೋಗ್ತಿಯಾ. ನಾಕು ದಿನ ಗಸಗಸೆ ಹಾಕಿದ ಹಾಲು ಕುಡಿದು ಮನೆಯಲ್ಲಿಯೇ ಇರಬೇಕು. ದಿನಕ್ಕೆ ಮೂರು ಸರ್ತಿ ಎಣ್ಣೆ ಹಚ್ಚಿ ಅರ್ಧಗಂಟೆ ಬಿಟ್ಟು, ಹುಣಿಸೆ ಸೊಪ್ಪು ಹಾಕಿದ ಬಿಸಿನೀರಲ್ಲಿ ಸ್ನಾನ ಮಾಡಬೇಕು. ನಾಕು ದಿವಸ ರಾತ್ರಿ ಒಬ್ಬನೇ ಹೊರಗೆ ಓಡಾಡಬೇಡ. ಹ್ಞೂಂ – ಈ ಮಂಚ ಮುಟ್ಟಿ ಹೋಗು. ಸುಬ್ರಹ್ಮಣ್ಯ ಒಳ್ಳೆಯದು ಮಾಡ್ತಾನೆ.' ಅವನು ತಲೆಕೆಳಗೆ ಮಾಡಿಕೊಂಡು ಹೋದ.

ಅವನು ಹೋದ ನಂತರ ಒಬ್ಬಳೇ ಹೆಂಗಸು ಹೆಚ್ಚು ಕಡಿಮೆ ಐವತ್ತರ ಪ್ರಾಯದವಳು ಮತ್ತು ಅವಳೊಂದಿಗೆ ಇಪ್ಪತ್ತರ ಪ್ರಾಯದ ಮತ್ತೊಬ್ಬಳು ಬಂದು ಸಾಂತು ಬೈದ್ಯತಿಯ ಎದುರು ನಿಂತರು. ಯುವತಿಯ ಜಡೆಯು ಬಿಚ್ಚಿಕೊಂಡಿತ್ತು. ಲಂಗಕ್ಕೆ ಕಚ್ಚಿಕೊಂಡಿದ್ದ ಸೀರೆಯ ಅಂಚು ಜಾರಿತ್ತು. ಕಣ್ಣುಗಳು ಕಳಾಹೀನವಾಗಿ, ಮಸಿ ಹಿಡಿದ ಗಾಜಿನಂತಿದ್ದವು. ಅವಳನ್ನು ನೋಡಿದರೆ ಯಾರಿಗಾದರೂ ಅನಿಸುವಂತಿತ್ತು; ಅವಳ ಬುದ್ಧಿಯು ಪೂರ್ತಿ ಸರಿಯಿಲ್ಲಾಂತ. ಅವಳ ಜೊತೆಗಿದ್ದವಳು ಅವಳ ತಾಯಿ ದುಗ್ಗಿ. ಯುವತಿಯ ಹೆಸರು ರುಕ್ಕಿ. ರುಕ್ಕಿಯು ಮದುವೆಯಾಗಿ ಒಂದೆರೆಡು ತಿಂಗಳಲ್ಲಿಯೇ ವಾಪಾಸು ಮನೆಗೆ ಬಂದವಳು – ಮಂಕಾಗಿ ಕುಳಿತುಬಿಟ್ಟಳು. 'ಅವಳ ಗಂಡ ಎರಡು – ಮೂರು ಸಾರಿ ಬಂದು ಕರೆದು ಹೋದ. ಅವಳ ಗಂಡನದು ಏನೂ ತಪ್ಪಿಲ್ಲ.

ಎಲ್ಲಾ ನಮ್ಮ ರುಕ್ಕಿಯದೇ. ಯಾರು ಮಾಟ ಮಾಡಿದರೋ ಏನು ಕತೆಯೋ? ಒಂದೂ ಗೊತ್ತಿಲ್ಲ. ಇಲ್ಲದಿದ್ದರೆ ಒಂದೆರೆಡು ತಿಂಗಳಲ್ಲಿ ಸಂಸಾರ ಮಾಡಿ, ಹೀಗಾಗುವುದುಂಟೇ?' ಎಂದು ವಿಧವೆ ದುಗ್ಗಿಯು ಗುಡಿಸಲಿನ ಹೊರಗೆ ಹಾಕಿಕೊಂಡ ಮಡಲಿನ ಚಾಪೆಯಲ್ಲಿ ಮುಸ್ಸಂಜೆ ಕೆಲವು ದಿನ ಅತ್ತಳು. ಅವಳು ಅತ್ತರೆ ಕೇಳುವವರು ಯಾರು? ಯಾರಿಗೆ ಪುರುಸೊತ್ತಿದೆ? ಯಾರಿಗಾದರೂ ಹೇಳುವುದಕ್ಕೆ ಹೋದರೆ "ಹೋಗಮ್ಮ, ನಮಗೆ ಕುಂಡೆ ತುರಿಸುವುದಕ್ಕೆ ಪುರುಸೊತ್ತಿಲ್ಲ. ಇನ್ನು ಬೇರೆಯವರ ಕುಂಡೆ ಎಲ್ಲಿಂದ ತುರಿಸಲಿ" ಅಂದಾರೆಂಬ ಸಂಕೋಚ ಬೇರೆ. ದುಗ್ಗಿಯ ಗಂಡ ಸತ್ತು ಕೆಲವು ವರ್ಷಗಳಾದವು. ಘಟ್ಟಕ್ಕೆ ಹೋದವನು ಮಲೇರಿಯಾದಿಂದ ಹೋದ. ಬರುವಾಗೆಲ್ಲಾ ಏಲಕ್ಕಿ ಮಲೆಯಿಂದ ಏಲಕ್ಕಿಯ ಮಾಲೆಗಳನ್ನು ತಂದು ಅವರಿವರಿಗೆ ಕೊಟ್ಟು ಘಟ್ಟದ ಆನೆ; ಹಂದಿ;

ಕಾಳಿಂಗಸರ್ಪಗಳ ರೋಚಕ ಕತೆಯನ್ನು ಹೇಳುತ್ತಿದ್ದನು. 'ಅವನು ಗೊಟಕ್ಕೆಂದ ಮೇಲೆ ಕತೆಗಳನ್ನು; ಮಾಲೆಗಳನ್ನು ತರುವವರು ಇರಲಿಲ್ಲ'. ಮೂಲತಃ ಮಹಾ ಸುಳ್ಳುಬುರುಕನೂ, ಪುಕ್ಕಲನೂ ಆದ ದುಗ್ಗಿಯ ಗಂಡನ ನಾಲಿಗೆ ಮಾತ್ರ ಬೇಕು ಬೇಕಾದ ಹಾಗೆ ಹೊರಳುತ್ತಿತ್ತು. ಕೊಟ್ಟಿಗೆ ಹಾರದಲ್ಲಿ ಅಡಿಕೆ ಮರದಷ್ಟು ಎತ್ತರದ ಕಪ್ಪು ಕಾಳಿಂಗ ಸರ್ಪವೊಂದು ಬಾಲದ ತುದಿಯಲ್ಲಿ ನಿಂತಿದ್ದನ್ನು ತಾನು ಕಣ್ಣಾರೆ ನೋಡಿದ್ದೇನೆ ಅನ್ನುತ್ತಿದ್ದ. ಮನುಷ್ಯರನ್ನು ನುಂಗುವ ಬಳ್ಳಿಗಳು: ಚಿನ್ನದ ಕೊಪ್ಪರಿಗೆಯನ್ನು ಕಾಯುವ ಶಂಖವಾಳ ಸರ್ಪ ಇವನ್ನೆಲ್ಲಾ ನೋಡಿದ್ದೇನೆ ಎಂದು ಹೇಳುತ್ತಿದ್ದ. ಶಂಖವಾಳ ಸರ್ಪ ಎಂದರೇನು ಎಂದು ಕೇಳಿದರೆ, 'ಅದು ಏಳು ಹೆಡೆಯ ಸರ್ಪ. ನಾನೇ ನೋಡಿದ್ದೆ ಅದನ್ನು. ಅದರಲ್ಲಿ ಹನ್ನೆರಡು ಹೆಡೆಯ ಸರ್ಪವು ಇದೆಯಂತೆ' ಎಂದು ಸುಳ್ಳು ಬಿಡುತ್ತಿದ್ದ. ಊರಿನವರಿಗೆ ಘಟ್ಟದ ಸಾವಾಸವೇ ಬೇಡಪ್ಪಾ ಅಂತ ಅನಿಸುತ್ತಿತ್ತು. ಅಂಥವನು ತೀರಿಹೋದಾಗ ದುಗ್ಗಿಗೆ ಇಪ್ಪತ್ತಾರೋ, ಇಪ್ಪತ್ತೇಳೋ ವರ್ಷ. 'ಕೂಡಾವಳಿ ಮದುವೆಯನ್ನು ಮಾಡಿಕೊಳ್ಳುತ್ತೇವೆ' ಎಂದು ಬಂದ ಗಂಡಸರನ್ನು ರುಕ್ಕಿಯ ಕಾರಣಕ್ಕೆ ತಿರಸ್ಕರಿಸಿಬಿಟ್ಟಳು. ಮುದ್ದಿನ ಗಿಣಿಯಂತೆ ಸಾಕಿದ ರುಕ್ಕಿಯು ಕೂಡಾ ಅಮ್ಮನ ಕೈಗೆ ಬಂದಾಗ, 'ನನಗೆ ಧಾರೆಯೆರೆದು ಕೊಡಿ. ಮದುವೆ ಖರ್ಚು ನನ್ನದು;' ಎನ್ನುತ್ತಾ ಗುರುವಪ್ಪ ಬಂದ. ಗುರುವಪ್ಪನದು ಕಲ್ಲುಮೈ. ಮುರಕಲ್ಲು ಕೆತ್ತುವುದರಲ್ಲಿ ಎತ್ತಿದಕೈ. ಒಂದು ದಿನಕ್ಕೆ ಐವತ್ತು-ನೂರು ಮುರಕಲ್ಲು ಕೆತ್ತಿ ಸರಿಮಾಡುತ್ತಾನೆ. ಬೇರೆ ಅಭ್ಯಾಸವಿಲ್ಲ. ಕೊಂಚ ಕುಳ್ಳ. ಬಿಸಿಲಿಗೆ ಬೆನ್ನೊಡ್ಡಿ ಕೆಲಸ ಮಾಡಿ ಬೆನ್ನಿನ ಭಾಗ ಮಾತ್ರ ಕಪ್ಪಾಗಿದೆ. ಮಾತೂ ಕಡಿಮೆ. ಮಗಳನ್ನು ಚೆನ್ನಾಗಿ ಸಾಕಿಯಾನು ಎಂದು ಧೈರ್ಯದಿಂದ ಅವನಿಗೆ ಮದುವೆ ಮಾಡಿಕೊಟ್ಟರೆ, ರುಕ್ಕಿಯು ಎರಡು ತಿಂಗಳಲ್ಲಿ ಬಂದವಳು ಮತ್ತೆ ಗಂಡನ ಮನೆಗೆ ಹೋಗುವುದಿಲ್ಲವೆಂದು ಕುಳಿತುಬಿಟ್ಟಳು. ಏನು ಕೇಳಿದರೂ ಉತ್ತರವಿಲ್ಲ. ಅಳು ಬಿಟ್ಟರೆ ಮೌನ. ತಪ್ಪಿದರೆ ಗುಡಿಸಲಿನ ಹೊರಗಿನ ಕಟ್ಟೆಯಲ್ಲಿ ಮುದುಡಿ ಮಲಗುವುದು. ಸ್ನಾನ ಮಾಡಿದರೆ ಮಾಡುವುದು, ಇಲ್ಲವೆಂದರೆ ಇಲ್ಲ. ಗುಂಡು ಗುಂಡಗೆ ಇದ್ದ ರುಕ್ಕಿಯು ಇದ್ದಕ್ಕಿದ್ದಂತೆಯೇ ಹಿಡಿಸೂಡಿಯ ಕಡ್ಡಿಯಂತಾದಳು. ದುಗ್ಗಿಯು ನಿವಾಳಿಸಿ ತೆಗೆದಾಯಿತು, ಪರಿಣಾಮವಾಗಲಿಲ್ಲ. ಮೂರು ದಾರಿ ಸೇರುವಲ್ಲಿ ಕುಂಕುಮ ಬೆರೆಸಿದ ನೀರು ಚೆಲ್ಲಿ ಕೋಳಿಯ ತಲೆಯನ್ನು ಕಡಿದಳು. ಪ್ರಯೋಜನವಾಗಲಿಲ್ಲ. ಇಂಥ ಸಂದರ್ಭದಲ್ಲಿಯೇ ಅವಳು ತನ್ನ ಮಗಳನ್ನು ಕರೆದುಕೊಂಡು ಸಾಂತು ಬೈದ್ಯತಿಯ ಹತ್ತಿರ ಬಂದಳು.

ಸಾಂತು ಬೈದ್ಯತಿಗೆ ರುಕ್ಕಿಯನ್ನು ನೋಡಿದ ತಕ್ಷಣ ವಿವರಗಳು ತಿಳಿಯಿತು. ಆದರೂ ರುಕ್ಕಿಯ ಬಾಯಿಯಿಂದಲೇ ಕೇಳಬೇಕೆಂದುಕೊಂಡು, 'ನಿನಗೇನಾಗಿದೆ?'

ಎಂದಳು. ಅದಕ್ಕೆ ರುಕ್ಕಿಯು ಸುಮ್ಮನಿದ್ದಳು. ದುಗ್ಗಿಯು, ಅಳುತ್ತಾ, 'ಇವಳು ಯಾವಾಗ ನೋಡಿದರೂ ಹೀಗೆಯೇ ಇರುತ್ತಾಳೆ. ಒಂದು ಮಾತಿಲ್ಲ, ಕತೆಯಿಲ್ಲ' ಎನ್ನುತ್ತ ಸಾಂತು ಬೈದ್ಯತಿಯ ಕಾಲಬುಡದಲ್ಲಿ ಕುಳಿತಳು. ಅಳುತ್ತಾ ಕುಳಿತುಕೊಂಡ ಅವಳ ಮುಖವನ್ನು ನೋಡಿ ಸಾಂತು ಬೈದ್ಯತಿಗೆ ಸಿಟ್ಟು ಬಂತು. 'ಹ್ಹೂಂ. ಕಣ್ಣೀರು ಹಾಕುವುದಕ್ಕೆ ಏನಿದೆ? ಕಣ್ಣು ಅಂದ್ರೆ ಏನು ಸಮುದ್ರವಾ? ಅದೇನು ಬತ್ತುದಿಲ್ಲವಾ? ಗಂಡಸರೂ ಹೇಳುವುದಕ್ಕೂ ನೀವು ಹೆಂಗಸರು ಮಾಡುವುದಕ್ಕೂ ಸರಿಯಾಗಿದೆ. ಬರೀ ಅಳುತ್ತಾ ಕೂತರೆ ತಿಂದ ಅನ್ನ ಕರಗುವುದಿಲ್ಲ ಗೊತ್ತಾಯ್ತು? ಬಗ್ಗಿ ಕೆಲಸ ಮಾಡಬೇಕು. ಕಷ್ಟ ಬಂದಾಗ ಕುಂಬಳಕಾಯಿ ಕೊಳೆತಂತೆ ಮಾಡಿಕೊಳ್ಳುವುದು. ಸುಖ ಬಂದಾಗ ದೇವರ ಮಣೆಯ ಮೇಲೆ ಕುಣಿಯುವುದು ಸರಿಯಲ್ಲ. ಎಲ್ಲದಕ್ಕೂ ಮಿತಿಯಿರಬೇಕು. ಈಗ ನೀನು ಸುಮ್ಮನಿರು. ಉಳಿದುದನ್ನು ಆಮೇಲೆ ನೋಡಿಕೊಂಡರಾಯಿತು. ಇವಳಿಗೆ ಏನಾಗಿದೆಯೆಂದು ನಾನು ಹೇಳುತ್ತೇನೆ" ಎಂದ ಸಾಂತು ಬೈದ್ಯತಿ 'ಬಾಲೆ – ಇಲ್ಲಿ ಬಾರಮ್ಮಾ' ಎಂದಳು. ರುಕ್ಕಿಯು ಯಾಂತ್ರಿಕವಾಗಿಯೂ, ಯಾವುದೋ ಸಂಮೋಹನಕ್ಕೆ ಒಳಗಾದವಳಂತೆಯೂ ಸಾಂತು ಬೈದ್ಯತಿಯ ಹತ್ತಿರ ಬಂದಳು. ಸಾಂತು ಬೈದ್ಯತಿಯು ರುಕ್ಕಿಯ ನೆತ್ತಿಯ ಮೇಲೆ ಕೈಯಿಟ್ಟು ನಾಗಬ್ರಹ್ಮರ ಕಡೆಗೆ ನೋಡಿದಳು. ಅವಳ ಕಣ್ಣುಗಳಲ್ಲಿ ಎರಡು ಸೂರ್ಯರು ಏಕಕಾಲಕ್ಕೆ ಉರಿಯುತ್ತಿರುವಂತೆ ನಿಶಿತನಿಗೆ ಅನಿಸಿ ಭಯವಾಯಿತು. ಅವನು ಅಪ್ಪನ ಪಂಚೆಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಅವನ ಅಪ್ಪನ ಬಲಗೈಯ ಬೆರಳುಗಳು ಮೃದುವಾಗಿ ಮಗನ ತಲೆಗೂದಲಲ್ಲಿ ಓಡಾಡಿದವು.

ಬೈದ್ಯತಿಯು 'ಇವಳಿಗೆ ನಾಗ ದೋಷವಿದೆ. ನಾಗ ನಡೆಯನ್ನು ದಾಟಿದ್ದಾಳೆ. ನಾಗಬನಕ್ಕೆ ಸುತ್ತು ಬರಬೇಕು. ನಾಗನ ಬೆಳ್ಳಿ ಹೆಡೆಯನ್ನು ಸುಬ್ರಹ್ಮಣ್ಯಕ್ಕೆ ಹರಿಕೆ ಒಪ್ಪಿಸಬೇಕು. ಷಷ್ಠಿಯ ದಿನ ನಾಗನಿಗೆ ಹಾಲೆರೆಯಬೇಕು. ನಾಗ ದೇವತೆಯ ದೋಷ ಗಂಡ ಹೆಂಡತಿಯ ಚಾಪೆಯ ಮೇಲೆ ಬಿದ್ದೇ ಬೀಳುತ್ತದೆ. ನಾಗ ಸಿಟ್ಟು ಬಂದರೆ ಹೆಡೆ ಮೇಲೆ ಹೇಗೆ ಎತ್ತಿರುತ್ತದೋ ಅದೇ ರೀತಿಯಲ್ಲಿ ನಾಗ ದೃಷ್ಟಿಯ ದೋಷವು ಮೊದಲು ಬೀಳುವುದು ತಲೆಯ ಮೇಲೆ' ಎಂದಳು. ದುಗ್ಗಿಯು ಕೈಮುಗಿದಳು. 'ಹೋಗಿ' ಎಂದ ಬೈದ್ಯತಿಯು ನಿಶಿತನ ತಂದೆಯ ಕಡೆಗೆ ನೋಡಿದಳು.

ನಿಶಿತನ ತಂದೆಯು ಮಗನ ಸಮಸ್ಯೆಯನ್ನು ಹೇಳಿದಾಗ ಕೇಳಿಸಿಕೊಂಡ ಬೈದ್ಯತಿಯು ನಿಶಿತನನ್ನು ಹತ್ತಿರ ಕರೆದಳು. ನಿಶಿತನ ಮುಖವು ಭಯದಿಂದ ಆವೃತವಾಯಿತು. ಬಿಳುಚಿಕೊಂಡ ಅವನ ಮುಖವು ಅದನ್ನು ಸೂಚಿಸಿತು. ಅವನ ಅಪ್ಪನಿಗೂ ಅದು ಅರ್ಥವಾಗಿ, 'ಹೋಗು ಮಗನೆ, ಏನೂ ಆಗುವುದಿಲ್ಲ' ಎಂದರು. ಬೈದ್ಯತಿ ಪಕ್ಕದಲ್ಲಿದ್ದ ನೀರಿನ ಲೋಟದಿಂದ ಒಂದು ಬೊಗಸೆ ನೀರನ್ನು ನಿಶಿತನ

ಮುಖಕ್ಕೆ ಹನಿಸಿ ತನ್ನ ಅಂಗೈಯನ್ನು ತೋರಿಸಿ'. "ಇದರಲ್ಲಿ ನಾಗನು ಕಾಣಿಸುತ್ತದೋ ನೋಡು" ಎಂದಳು. ನಿಶಿತ ನೋಡಿದ. ಅವನಿಗೆ ಏನೂ ಕಾಣಿಸಲಿಲ್ಲ. ಮತ್ತೆ ಅವನ ಮುಖಕ್ಕೆ ನೀರು ಹನಿಸಿ, "ಈಗ ಸುಬ್ರಹ್ಮಣ್ಯನು ಕಾಣಿಸುತ್ತದೋ ನೋಡು" ಎಂದಳು. "ಸುಬ್ರಹ್ಮಣ್ಯನೂ ಕಾಣಿಸುವುದಿಲ್ಲ" ಎಂದು ನಿಶಿತ ಹೇಳಿದ. ಸಾಂತು ಬೈದ್ಯತಿಯ ಮುಖವು ಕೆಂಪಾದಂತೆ ಕಾಣಿಸತೊಡಗಿತು. ಸೋಲನ್ನು ಸೋಲೆಂದು ಬಿಟ್ಟುಕೊಳ್ಳದವರ ಸ್ವಭಾವವೆಂದರೆ, ಸೋಲನ್ನು ಗೆಲುವೆಂದು ಸೂಚಿಸುವುದು. ಬೈದ್ಯತಿಯು ಮಾಡಿರುವುದು ಅದನ್ನೇ. ತಕ್ಷಣವೇ ನಿಶಿತನ ಕಡೆಯಿಂದ ಅವನ ತಂದೆಯ ಕಡೆಗೆ ಮುಖಮಾಡಿದ ಸಾಂತು ಬೈದ್ಯತಿಯು "ನೀವಿಲ್ಲಿ ಬನ್ನಿ" ಎಂದು ಅವರ ಮುಖಕ್ಕೆ ನೀರ ಹನಿಯನ್ನು ಚಿಮುಕಿಸಿ ಅಂಗೈಯನ್ನು ತೋರಿಸಿ, "ಸುಬ್ರಹ್ಮಣ್ಯನನ್ನು ನೋಡುತ್ತಿದ್ದೀರಾ"? ಎಂದು ಕೇಳಿದಳು. ಅಂಗೈಯಲ್ಲಿ ಅವಳ ಅಡ್ಡಾದಿಡ್ಡಿಯಾದ ರೇಖೆಗಳಿದ್ದವು. ಆದರೂ ನಿಶಿತನ ತಂದೆ ಅಂಗೈಯಲ್ಲಿರುವ ರೇಖೆಗಳನ್ನು ನೋಡಿ, "ಕೈಯಲ್ಲಿ ನಾಗರ ಹಾವು ಓಡಾಡಿದಂತೆ ಕಾಣಿಸುತ್ತದೆ" ಎಂದರು. ವಾಸ್ತವವಾಗಿ ಅದು ನಿಜವಾಗಿರಲಿಲ್ಲ. ಸಾಂತು ಬೈದ್ಯತಿಯನ್ನು ತೃಪ್ತಿಪಡಿಸುವ ಸಾಧನವಾಗಿತ್ತು.

'ನೋಡಿ ನಾಗದೇವತೆಯ ಕೃಪೆಯು ಎಷ್ಟು ದೊಡ್ಡದು? ನಿಮಗೆ ಸುಬ್ರಹ್ಮಣ್ಯ ಒಲಿದಿದ್ದಾನೆ" ಎಂದಳು ಹೆಮ್ಮೆಯಿಂದ ಸಾಂತು ಬೈದ್ಯತಿ. ಅವಳು ಹೇಳುತ್ತಿರುವುದನ್ನು ಕೇಳುತ್ತಿರುವುದನ್ನು ಕೇಳಿಸಿಕೊಂಡ ನಿಶಿತನ ಮುಖ ಪೂರಿಯಂತೆ ಉಬ್ಬಿತು. ಅದು ಅವನ ತಂದೆಗೂ ಆನಂದದಾಯಕವಾಗಿತ್ತು. ಯಾಕೆಂದರೆ ಮಗನು ಪುಣ್ಯವಂತನೆಂದರೆ ಯಾರಿಗೆ ತಾನೆ ಸಂತೋಷವಾಗುವುದಿಲ್ಲ? ನಿಮ್ಮ ಮಗನಿಗೆ ರಾಜಕಳೆಯಿದೆ. ಈ ಕಂಟಕವು ಹೆಚ್ಚು ದಿನದ್ದಲ್ಲ. ಇದಕ್ಕೆ ಬೇಕಾದ ಔಷಧಿ, ಪಥ್ಯ ಕೊಡುತ್ತೇನೆ. ದಿನಾ ಬೆಳಿಗ್ಗೆ ಹಸಿಹೊಟ್ಟೆಯಲ್ಲಿ ದನದ ಹಾಲಿನಲ್ಲಿ ನಾನು ಕೊಡುವ ಪುಡಿಯನ್ನು ಕದಡಿ ಕುಡಿಯಬೇಕು. ಅವನಿಗೆ ಮಂತ್ರಿಸಿ ಹುಲಿಯುಗುರು ಕೊಡುತ್ತೇನೆ. ಅದನ್ನು ಬೆಳ್ಳಿಯಲ್ಲಿ ಕಟ್ಟಿಸಿ ಅವನ ಪಟ್ಟೆ ನೂಲಿನಲ್ಲಿಯೋ, ಕುತ್ತಿಗೆಯಲ್ಲಿಯೋ ಕಟ್ಟಿ. ಅದು ಅವನ ಜೊತೆ ಜೀವನ ಪರ್ಯಂತವಿರಲಿ. ಯಾರೂ ಅವನ ತಂಟೆಗೆ ಬರುವುದಿಲ್ಲ. ಹುಲಿಯ ಶಕ್ತಿ ಬರುತ್ತದೆ. ಎದುರಾಳಿಯ ಅರ್ಧಶಕ್ತಿಯನ್ನು ಬಳಸಿಕೊಳ್ಳುವ ಚೈತನ್ಯ ಇರುತ್ತದೆ." ಎಂದು ಒಂದು ಹುಲಿಯುಗುರು ತೆಗೆದುಕೊಟ್ಟು ಔಷಧಿ ಪುಡಿಯನ್ನು ಕೊಟ್ಟಳು. ನಿಶಿತನ ತಂದೆ ಮತ್ತು ನಿಶಿತ ಇಬ್ಬರೂ ನಾಗಬ್ರಹ್ಮರಿಗೆ ಕೈಮುಗಿದರು. ನಿಶಿತನ ತಂದೆಯಲ್ಲಿ ಅತೀವವಾದ ಆತ್ಮ ವಿಶ್ವಾಸ ತುಂಬಿತ್ತು. ಅದು ಅವರ ಹೆಜ್ಜೆಗಳಲ್ಲಿ ಕಾಣಿಸತೊಡಗಿತ್ತು. ಅವನಲ್ಲಿ ಕೊನೆಯವರೆಗೆ ಉಳಿದದ್ದು ಬೆಳ್ಳಿಯಲ್ಲಿ ಕಟ್ಟಿಸಿದ ಹುಲಿಯುಗುರು ಮಾತ್ರ.

ನಿಶಿತ ಇದನ್ನೆಲ್ಲಾ ಕೆಲವು ಸಂದರ್ಭದಲ್ಲಿ ಆತ್ಮಕತೆಯಂತೆ. ಮತ್ತೆ ಕೆಲವು ಸಂದರ್ಭದಲ್ಲಿ ಊರಕತೆಯಂತೆ ತನ್ನ ದಿನಚರಿಯ ಪುಸ್ತಕದಲ್ಲಿ ದಾಖಲಿಸಿದ್ದಾನೆ. ಕೆಲವು ಪುಟಗಳು ಅದರಲ್ಲಿಯೂ ಕೊನೆಯ ಪುಟಗಳು; ಅರ್ಥದಲ್ಲಿ ಮುಕ್ತಾಯಗೊಂಡಂತೆ ಅನಿಸುತ್ತದೆ. ಅದಕ್ಕೆ ಬೇರೆ ಕಾರಣವೂ ಇದೆ.

ಅವನ ದಿನಚರಿ ಕೃತಿಯಲ್ಲಿ ಅನೇಕವು ಮಿಶ್ರವಾಗಿದೆ. ಕೆಲವೆಡೆ ಪದ್ಯಗಳು ಇವೆ. ಅವನ ಕೆಂಪು ಡೈರಿಯಲ್ಲಿ ಮೊದಲಿಗೆ ಒಂದು ವರ್ತುಲದಲ್ಲಿದ್ದುದು:

**ಒಂದು ಅಕ್ಷರವನ್ನು ಹೇಳಿಕೊಟ್ಟಿದ್ದರೂ ಅವನನ್ನು ಗುರುವೆಂದು ಭಾವಿಸಬೇಕು. ಅಪತ್ಕಾಲದಲ್ಲಿ ತನ್ನನ್ನು ಉಳಿಸಿದವನೂ ಗುರುವೇ ಯುದ್ಧಕಾಲದಲ್ಲಿ ರಕ್ಷಿಸಿದವನು ಪರಮಗುರುವೆಂದು ತಿಳಿಯಬೇಕು. ಅವರಿಂದಾದ ಉಪಕಾರವು ಅತ್ಯಲ್ಪವೆಂದು ಉಪೇಕ್ಷಿಸಿ, ನಾನೇ ಹೆಚ್ಚೆಂದು ಗರ್ವ ಪಡತಕ್ಕವನು ಮುಂದೆ ನೀಚ ಜನ್ಮದಲ್ಲಿ ಹುಟ್ಟಬೇಕಾಗುತ್ತದೆ. (ಪದ್ಯ.6)**

**"ನನ್ನ ಕರ್ತವ್ಯ ಯಾವುದು? ಯಾವುದರಿಂದ ನನಗೆ ಶ್ರೇಯಸ್ಸು?" ಎಂಬುದನ್ನು ವಿಚಾರ ಮಾಡ ಕಾರ್ಯದಲ್ಲಿ ತೊಡಗಬೇಕು. ಹಾಗಲ್ಲದೆ ವ್ಯರ್ಥವಾದ ಹವ್ಯಾಸದಲ್ಲಿ ತೊಡಗುವುದು ದೊಡ್ಡತನವಲ್ಲ; ನೀತಿಯಲ್ಲ. ನಮ್ಮ 'ಆತ್ಮವಸ್ತು'ವಿನ ಉನ್ನತಿಯನ್ನು ಸಾಧಿಸುತ್ತ, ಉಳಿದ ಸಮಯವನ್ನು ಪರೋಪಕಾರಕ್ಕಾಗಿ ವಿನಿಯೋಗಿಸಬೇಕು. ಅದಲ್ಲದೆ ತನ್ನ ಆತ್ಮವನ್ನೇ ಮರೆತು ನಡೆಯುವುದು ಸರಿಯಲ್ಲ. (ಪದ್ಯ.7)**

**ಅಧರ್ಮದಿಂದ ಹಣವನ್ನು ಸಂಪಾದಿಸಿದಾಗ, ಕರ್ತನಿಗೆ ಮಾತ್ರವೇ ಪಾಪವು ಗಂಟು ಬೀಳುತ್ತದೆ. ಆ ಹಣವನ್ನು ಅನುಭವಿಸುವ ಇತರರು ಪಾಪವನ್ನು ಹಂಚಿಕೊಳ್ಳುವುದಿಲ್ಲ. ಪಾಪವು ಸರ್ಪವಿದ್ದಂತೆ. ಸರ್ಪವು ಯಾರನ್ನು ಕಚ್ಚುವುದೋ ಅವರಿಗೆ ಮಾತ್ರ ವಿಷದ ಭಾಧೆ, ಅವರ ಬಂಧುಗಳಿಗೆ ವಿಷವು ಅಂಟುವುದಿಲ್ಲ! ದುರ್ಮಾರ್ಗಕ್ಕಿಳಿದು ಕೋಪಾಟೋಪದಿಂದ ಉತ್ತಮರ ಧನವನ್ನು ದೋಚಬಾರದು. (ಪದ್ಯ.10) (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ. 5)**

*ನಿಶಿತ ತನ್ನ ದಿನಚರಿಯ ಪುಸ್ತಕದಲ್ಲಿ ಮಹಾಭಾರತ ಮತ್ತು ಕೌಟಿಲ್ಯರನ್ನು ಬರೆದು ಇಟ್ಟುಕೊಂಡಿದ್ದ. ಅದನ್ನು ಯಾಕೆ ಬರೆದ ಎನ್ನುವುದು ಇದರಲ್ಲಿ ತಿಳಿಯುವುದಿಲ್ಲ. ಬಹುಶಃ ಅವನ ಆಲೋಚನೆಗಳನ್ನು ಇದು ಹೇಳುತ್ತವೆ. ನಿಶಿತ ಅತ್ಯಂತ ದ್ವಂದ್ವಕ್ಕೆ ಗುರಿಯಾದವನಂತೆ ಕಾಣಿಸುತ್ತದೆ.*

**1992**
**ಜನವರಿ**
**1**

"ನನ್ನ ಬಾಲ್ಯದಲ್ಲಿ ನನ್ನ ಜೊತೆಗಿನ ಹುಡುಗರಲ್ಲಿ ಕೆಲವರು ಶ್ರೀಮಂತರಿದ್ದರು. ಕಲಿಯುವುದರಲ್ಲಿ ಬುದ್ಧಿವಂತರಿದ್ದರು. ನನ್ನ ಅಕ್ಕ ಕೂಡಾ ಕಲಿಯುವುದರಲ್ಲಿ ಜಾಣೆಯಿದ್ದಳು. ಲೆಕ್ಕದ ಪಾಠ ನನ್ನ ತಲೆಗೆ ಹತ್ತುತ್ತಿರಲಿಲ್ಲ. ಕಾಲಿನಬುಡದಲ್ಲಿ ನುಸುಳಿಕೊಂಡು ಹೋಗುತ್ತಿತ್ತು. ಕಲಿಯಲು ಬುದ್ಧಿವಂತರಾದವರಿಗೆ ಮತ್ತು ಶ್ರೀಮಂತರಿಗೆ ಸಮಾಜ ಮನ್ನಣೆ ಕೊಡುತ್ತದೆಯೆಂದೂ; ಡ್ರೆಸ್ಸಿಗೂ ತುಂಬಾ ಮಹತ್ವ ಇದೆಯೆಂದು ತಿಳಿಯಿತು. ಆ ಕೀಳರಿಮೆಯನ್ನು; ಅತೀವವಾದ ಸಂಕೋಚವನ್ನು ಮೆಟ್ಟಿ ನಿಲ್ಲಲು ನನಗೆ ಬರಹಗಳು ಬೇಕಾದವು. ಬದಲು ಕತೆ ಪುಸ್ತಕಗಳು ಬೇಕಾದವು. ನಾನು ಬರೆಯಲೇಬೇಕಾಯಿತು" ನಾನು ಮುಂದೆ ಏನನ್ನೂ ನಿಶ್ಚಯಿಸದೆ ಹೊರಟಿದ್ದೇನೆ. ನಾನು ಬರೆಯುವ ಕ್ರಿಯೆಯು ಅರ್ಥಪೂರ್ಣವೆಂದು ನಂಬಲಾರೆ. ಈಗ ದಿಕ್ಕು ದೆಸೆ ಕಾಣದಾಗಿದ್ದೇನೆ.

(ಕೆಂಪು ಡೈರಿಯ ಮೊದಲ ಪುಟ)

ಅತಿಬಲನ ಹಗೆಗೊಳುವನಿಹಪರ
ಗತಿ ವಿಚಾರವ ಮರೆವ ಲೋಕ
ಸ್ಥಿತಿಯನುಲ್ಲಂಘಿಸುವ ಮರ್ಮಜ್ಞರ ವಿರೋಧಿಸುವ
ವಿತತ ಭಾಷಿತನಪ್ಪ ತನ್ನಿಂ
ಗಿತವನವರಾಯತವನರಿಯದ
ಕ್ಷಿತಿಪನವ ಮೂಢಾತ್ಮನೈ ಭೂಪಾಲ ಕೇಳೆಂದ(48)

ತನಗಿಂತಲೂ ಬಲಶಾಲಿಯಾದವನೊಡನೆ ಹಗೆತನವನ್ನು ಬೆಳೆಸುವುದು, ಇಹಪರಗಳನ್ನು ವಿಚಾರಿಸದಿರುವುದು ಲೋಕಮರ್ಯಾದೆಯನ್ನು ಮೀರಿನಡೆಯುವುದು, ಬಿಲ್ಲವರನ್ನು ವಿರೋಧಿಸುವುದು, ಬಹಳ ಮಾತಾಡುವುದು, ತನ್ನ ಧ್ಯೇಯವೇನೆಂಬುದನ್ನೇ ನಿಶ್ಚಯಿಸದಿರುವುದು. ಪರರ ಅಭಿಪ್ರಾಯವನ್ನು ಅರಿತುಕೊಳ್ಳದಿರುವುದು ಇವು ರಾಜನ ಮೂಢತವನ್ನು ತೋರಿಸುತ್ತವೆ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.21)

ಇದು ಸಮಾಹಿತವಿದು ಶುಭೋದಯ
ವಿದು ಸಕಲಪುರುಷಾರ್ಥ ಸಾಧನ
ವಿದು ಸುಜನ ಸನ್ಮಾನವಿದು ಸಂಸಾರಸೌಖ್ಯ ಫಲ
ಇದು ಸುಬಲವಿದಬಲವಿದಾಮ್ನಾ
ಯದ ಸುನಿಶ್ಚಯ ನೀತಿ ಕಾರ್ಯದ
ಹದನನರಿದಾಚರಿಸಬಲ್ಲವನವನೆ ಪಂಡಿತನು(72)

ಯಾವುದು ನ್ಯಾಯವಾದದ್ದು, ಯಾವುದರಿಂದ ಶುಭವಾಗುತ್ತದೆ, ಯಾವುದು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಸಾಧನವಾಗಿದೆ, ಯಾವುದನ್ನು ಸಜ್ಜನರು ಮೆಚ್ಚುತ್ತಾರೆ, ಯಾವುದರಿಂದ ಸಂಸಾರದಲ್ಲಿ ಸೌಖ್ಯ ಉಂಟಾಗುವುದು, ಯಾವುದು ಪ್ರಬಲವಾದದ್ದು, ಯಾವುದು ದುರ್ಬಲ, ಯಾವುದು ಶಾಸ್ತ್ರಸಂಮತವಾದದ್ದು-ಎಂದು ವಿಮರ್ಶಿಸಿ ಕಾರ್ಯನೀತಿಯನ್ನು ನಿಶ್ಚಯಿಸತಕ್ಕವನೇ ಪಂಡಿತನೆನಿಸುತ್ತಾನೆ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.31)

ಶತ್ರುಕಾಲ ಸುದೇಶ ವರ್ಗ ಸು
ಮಿತ್ರರುದಯೋಪಾಯಕರಣ ಸು
ಪಾತ್ರವೆಂಬಿವು ಮೂರು ತೆರನಾಗಿಪ್ಪವಿದರೊಳಗೆ
ಕ್ಷತ್ರಧರ್ಮ ವಿವೇಕವೆಂಬಿವ
ನ್ತೋತ್ರಗೊಳಿಪನೆ ರಾಯನವಗೆ ಧ
ಎತ್ರಿ ಯೊಳಗೆಣೆ ಯಾವನೈ ಭೂಪಾಲ ಕೇಳೆಂದ(73)

ಶತ್ರು, ಮಿತ್ರ, ದೇಶ, ಕಾಲ, ಏಳಿಗೆ ಉಪಾಯ, ಪಾತ್ರ-ಇವುಗಳಲ್ಲಿ ಉತ್ತಮ ಮಧ್ಯಮ ಕನಿಷ್ಠ ಎಂದು ಮೂರು ಬಗೆಗಳು ಇದ್ದೇ ಇರುತ್ತವೆ. ಇವುಗಳನ್ನು ವಿವೇಕದಿಂದ ವಿಚಾರಿಸಿ ತಕ್ಕಂತೆ ನಡೆಯತಕ್ಕವನೇ ಶ್ರೇಷ್ಠನು. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.31)

ನನಗೆ ಬಾಲ್ಯದಲ್ಲಿ ನನ್ನ ಬೆನ್ನ ಮೇಲೆ ಒಂದು ಬಾವು ಎದ್ದಿತ್ತಂತೆ ಏನೂ ಮಾಡಿದರೂ ಪರಿಹಾರವಾಗಿರಲ್ಲಿವಂತೆ. ಕೊನೆಗೆ ದೇವಸ್ಥಾನಕ್ಕೆ ಒಂದು ಚಿಕ್ಕ ಹರಿಕೆಯನ್ನು ಹೊತ್ತ ಮೇಲೆ ನನಗೆ ವಾಸಿಯಾಯಿತಂತೆ. ಅನಂತರ ಕಾಲು ಸೆಳೆತ ಶುರುವಾಯಿತು. ಹುಲಿಯುಗುರು ಕಟ್ಟಿಕೊಂಡೆ.

ನಾನು ಹುಟ್ಟಿದ್ದು ಯಾರೂ ಇಷ್ಟಪಡದಿರುವ ನಕ್ಷತ್ರ, ಹುಟ್ಟಿದ ಹೊತ್ತು. ಶನಿದೋಷ ಮತ್ತು ದಾರಿದ್ರ್ಯವೆಂದು ಜೋಯಿಸರ ಪಂಚಾಂಗ ಅಪ್ಪನಿಗೆ ಹೇಳಿತು. ಮತ್ತೆ ಗೆರಸೆಯಲ್ಲಿ ಮಲಗಿಸಿ ವಾಪಾಸು ಕೊಟ್ಟವನು ಬಟ್ಯ. ನನಗೆ ಹತ್ತು

ವರ್ಷವಾಗುವ ವೇಳೆಗಾಗಲೇ ಅವನು ಹಣ್ಣು ಹಣ್ಣು ಮುದುಕ. ನಮ್ಮಲ್ಲಿ ಕೊರಗರು ಗುಡ್ಡಗಳಲ್ಲಿ ಒಂದು ಬಿಡಾರ ಹಾಕಿಕೊಂಡು ವಾಸಿಸುತ್ತಾರೆ. ಅವರಿಗೆ ತುಂಬಾ ಭಯ ಹಾಗೂ ಸಂಕೋಚ, ಮೇಲು ಜಾತಿಯವರು ಬಂದರೆ ಅವರ ಮೈಮೇಲೆ ನೆರಳು ಬೀಳಬಾರದೆಂದು ದೂರ ಸರಿದು ನಿಲ್ಲುತ್ತಿದ್ದರು. ಕಾಡಿನಿಂದ ಬಿದಿರು ತಂದು ಬುಟ್ಟಿ ಹೆಣೆಯುವುದು ಅವರ ಉದ್ಯೋಗ. ರಾತ್ರಿಯ ಹೊತ್ತಿಗೆ ಡೋಲು ಬಾರಿಸುತ್ತಾ ಕುಣಿಯುತ್ತಾರೆ. ಎಷ್ಟೋ ಸಾರಿ ಅವರು ಕುಣಿಯುವುದನ್ನು ನೋಡಲು ನಾನೂ – ಅಕ್ಕ ಹೋಗಿ ದೂರ ನಿಂತು ನೋಡುತ್ತಿದ್ದೆವು. ಮುದಿಯನಾದ ಬಟ್ಯ ಎರಡು ದಿನಕ್ಕೊಮ್ಮೆ ನಮ್ಮ ಮನೆಯ ಅಂಗಳಕ್ಕೆ ಬರುತ್ತಿದ್ದ. ಅಮ್ಮ ಅವನಿಗೆ ಅಡಿಕೆಯ ಹಾಳೆಯಲ್ಲಿ ಗಂಜಿ ಹಾಕಿಕೊಡುತ್ತಿದ್ದರು. ಅವನು ಗಂಜಿ ಕುಡಿದು, ಎಲೆ ಅಡಿಕೆ ಹಾಕಿಕೊಂಡು ಬೇರೆ ಬೇರೆ ಕತೆಗಳನ್ನು ಹೇಳುತ್ತಿದ್ದ. ಅವನು ಘಟ್ಟಕ್ಕೆ ಹೋದ ಕತೆ. ಏಲಕ್ಕಿ ಕೊಯ್ದ ಕತೆ. ನಮ್ಮ ಮನೆಯ ತೋಟದ ಹತ್ತಿರವಿರುವ ಗುಂಡಿಗೆ ಹುಲಿ ಬಂದು ಬಿದ್ದದ್ದು, ಮೇಲಿಂದ ಅದಕ್ಕೆ ಗುಂಡು ಹಾರಿಸಿದ್ದು, ಗುಂಡು ಬಿದ್ದಾಗ ಅದು ಗುಂಡಿಯಿಂದ ಮೇಲೆ ಹಾರಿ ಅಲ್ಲೆ ನಿಂತಿದ್ದವನ ಕುಂಡೆಗೆ ಪರಚಿದ್ದು. ಹೀಗೆ ಅಸಂಖ್ಯ ಕತೆಗಳು. ಹುಲಿಬಿದ್ದ ಗುಂಡಿಯನ್ನು ನೋಡುವಾಗೆಲ್ಲಾ ಆ ಹುಲಿಯು ಗುಂಡಿನಿಂದಾಗಿ ಮೇಲೆ ಹಾರಿದ ಅದರ ರೋಚಕ ಕತೆಯು ನೆನಪಾಗುತ್ತಿತ್ತು. ಅವನು ಕೆಲವೇ ವರ್ಷಗಳಲ್ಲಿ ತೀರಿಹೋದ. ಅವನ ಸತ್ತ ವಿಷಯವನ್ನು ತಿಳಿದಾಗ ಬೇಜಾರಾಗಿತ್ತು. ಅವನು ಇನ್ನು ಎರಡೂ ದಿನಕ್ಕೊಮ್ಮೆ ಬರುವುದಿಲ್ಲ ಮತ್ತು ಅವನು ಕತೆಯನ್ನು ಹೇಳುವುದಿಲ್ಲ ಅಂತ ಬೇಸರವಾಗಿತ್ತು. ಹಸಿಗೇರು ಬೀಜವನ್ನು ಕೊಯ್ದು ಅದನ್ನೇ ಸಾಗುವಾನಿ ಎಲೆಯಲ್ಲಿ ಕಟ್ಟಿ ತಂದು ಕೊಡುತ್ತಿದ್ದ. ಹಸಿಗೇರು ಬೀಜವನ್ನು ತಿನ್ನುವುದೆಂದರೆ ನನಗೆ ತುಂಬಾ ಇಷ್ಟ. ಅವನು ತಂದುಕೊಟ್ಟ ಮೇಲೆ ಅದನ್ನೆತ್ತಿಕೊಂಡು ಮನೆಯ ಹಿತ್ತಿಲಿಗೆ ಇಡುತ್ತಿದ್ದೆ. ಅಕ್ಕ–ತಮ್ಮ ತಂಗಿಯರಿಗೆ ತುಂಬಾ ಯಾಮಾರಿಸುತ್ತಿದ್ದೆ. ಅಕ್ಕ ತಮ್ಮ ಒಂದು ಪಾರ್ಟಿ. ನಾನೂ ತಂಗಿ ಒಂದು ಪಾರ್ಟಿ. ತಂಗಿ ಅವಳ ಪಾಲಿನ ಗೇರು ಬೀಜವನ್ನು ನನಗೆ ಕೊಡುತ್ತಿದ್ದಳು.

ನನಗೆ ನೆನಪಿಲ್ಲ: ಆದರೆ ಅಜ್ಜಿ ಹೇಳುತ್ತಿದ್ದಳು–ನಾನು ಸಣ್ಣವನಾಗಿದ್ದಾಗ ತುಂಬಾ ತುಂಟನಾಗಿದ್ದೆನಂತೆ. ನನ್ನ ತಾಯಿಯ ತೌರು ಮನೆಯಲ್ಲಿ ಅಂದರೆ ಅಜ್ಜನ ಮನೆಯಲ್ಲಿ ಒಂದು ದಿವಸ ತಿಥಿಯಂತೆ. ಮಧ್ಯಾಹ್ನ ಊಟಕ್ಕೆ ಪಾಯಸ ಮಾಡಿದ್ದರಂತೆ. ಅದು ಒಲೆಯ ಮೇಲಿತ್ತು. ನಾನು ಯಾರೂ ಇಲ್ಲದ ವೇಳೆ ನೋಡಿಕೊಂಡು ಮೆಲ್ಲಗೆ ಬಂದು ಪಾಯಸಕ್ಕೆ ಉಚ್ಚೆ ಮಾಡಲು ನಿಂತಿದ್ದೆನಂತೆ. ಇನ್ನೇನು ಪಾಯಸಕ್ಕೆ ಉಚ್ಚೆ ಮಾಡಬೇಕು ಅಷ್ಟು ಹೊತ್ತಿಗೆ ಅಜ್ಜಿ ನೋಡಿ ನನ್ನ

ಉಚ್ಚೆಯನ್ನು ಅಂಗೈಯಲ್ಲಿ ಹಿಡಿದುಕೊಂಡು ಚೆಲ್ಲಿದರಂತೆ. ಅಜ್ಜಿ ಮನೆಯಲ್ಲಿ ನಾನು ಒಲೆಗೆ ಉಚ್ಚೆ ಹೊಯ್ದುದಕ್ಕೆ ಲೆಕ್ಕವೇ ಇಲ್ಲವಂತೆ. ಇದನ್ನು ನಾನು ದೊಡ್ಡವನಾದ ಮೇಲೆಯೂ ಅಜ್ಜಿ ಹೇಳಿ ನಗುತ್ತಿದ್ದರು. ಮತ್ತು ನಾನು ಸಂಕೋಚಗೊಳ್ಳುವಂತೆ ಮಾಡುತ್ತಿದ್ದರು. ನಿಧಾನವಾಗಿ ನನ್ನ ತುಂಟತನ ಕಡಿಮೆಯಾಗಿತ್ತು. ಸಿಟ್ಟು, ಹಟ ಹೆಚ್ಚಾಗಿತ್ತು.

ನನ್ನ ತಾಯಿಯ ತಂದೆ (ಅಜ್ಜ) ಮತ್ತು ನನ್ನ ಮಾವ ಇಬ್ಬರಿಗೂ ಯಕ್ಷಗಾನ ತಾಳಮದ್ದಲೆಯೆಂದರೆ ತುಂಬಾ ಇಷ್ಟ. ನನ್ನ ಮಾವನಿಗೆ ನನ್ನನ್ನು ಕಂಡರೆ ಮಾತ್ರ ವಿಪರೀತ ಆಸೆ. ಅವರು ಆಗಾಗ ಹೇಳುತ್ತಿದ್ದರು: 'ಇವನು ಬುದ್ದಿವಂತನಾಗ್ತಾನೆ.' ಬುದ್ಧಿಯೇ ಆತ್ಮಘಾತಕವಾದುದು. ನನ್ನ ಯಕ್ಷಗಾನದ ಆಸಕ್ತಿ-ನನ್ನ ಮಾವ ಮತ್ತು ನನ್ನ ಅಜ್ಜರಿಂದ ಬಂದ ಬಳುವಳಿ. ತಾಳಮದ್ದಲೆಯಲ್ಲಿ ಅರ್ಥ ಹೇಳುವುದು; ಖುಷಿ ಬಂದಾಗ ವೇಷ ಮಾಡುವುದು ನನ್ನ ಜೊತೆಗೆ ಬಂತು. ತಾಳಮದ್ದಲೆ: ವೇಷಗಳು ನನಗೆ ಕಷ್ಟಸುಖ ತಂದುಕೊಟ್ಟಿದೆ. ಜೀವನದ ಬೇರೆ ಬೇರೆ ಮುಖಗಳನ್ನು ಪರಿಚಯಿಸಿದೆ. ನನ್ನ ಅಜ್ಜನ ಹತ್ತಿರ ಕುಮಾರವ್ಯಾಸನ ಭಾರತ ಕಥಾಮಂಜರಿಯಿತ್ತು. ಮಳೆಗಾಲದಲ್ಲಿ ಅಜ್ಜ ಅದನ್ನು ಓದಿ ದಿನಾ ಕತೆಯನ್ನು ಹೇಳುತ್ತಿದ್ದರು. ಈ ಪ್ರಭಾವ ನನ್ನ ಮೇಲೆ ತೀವ್ರವಾಗಿದೆ: 'ಮಯನಿರ್ಮಿತ ಸೌಧದಲ್ಲಿ ಕೌರವ ಬಿದ್ದ ಕತೆ ನೆನಪಿನಲ್ಲಿ ಇದೆ – ಬಿದ್ದ ಕೌರವ; ಒಂಟಿಯಾದ ಕೌರವ; ನೀರಲ್ಲಿ ಮುಳುಗಿದ ಕೌರವ-ಎಲ್ಲವೂ ನಾನೇ.' "ಇದೇ ಸರೋವರವೊಂದು ಇಲ್ಲಿಗೆ ಸಮೀಪದಲಿ ಹುದುಗಿದರುವನ್ನೈ ಹಗೆಗಳು ಅರಿಯದಂದದಲಿ"

ನನ್ನ ತಾಯಿಯ ತಂದೆ ಕೆಲ ವಿಷಯದಲ್ಲಿ ಮಹಾನ್ ಕಾರುಬಾರಿ. ನನ್ನ ಅಜ್ಜಿಗೆ ಎಂಟು ವರ್ಷವಾಗುವ ಮೊದಲೇ ಅಜ್ಜನೊಂದಿಗೆ ಮದುವೆಯಾಯಿತು; ಮೈನೆರೆಯುವ ತನಕ ಅಜ್ಜ ಕಾಯಬೇಕಾಯಿತು. ಅಜ್ಜ ಅಜ್ಜಿಗೆ ದಿನಾ ಹೂ ಕೊಯ್ದುಕೊಂಡು ಹೋಗಿ ಕೊಡುತ್ತಿದ್ದರಂತೆ. ಆದರೆ ಅಜ್ಜನಿಗೆ ಅಜ್ಜಿ ಯಾವಾಗಲೂ ಬೈಯುತ್ತಲೇ ಇದ್ದರು. ಅಜ್ಜನೂ ಅಷ್ಟೇ ಅಜ್ಜಿಯನ್ನು 'ಶನಿ': 'ದರಿದ್ರ' ಅಂತ ಬೈತಾ ಇರುತ್ತಿದ್ದರು. ನಾನು ಕಾಲೇಜು ಮೆಟ್ಟಲು ಹತ್ತಿದ ಮೇಲೆ ಒಂದಿನ ಸಂಜೆ ಅಜ್ಜ ಅವರ ದಿಗ್ವಿಜಯವನ್ನು ಕುರಿತು ಹೇಳಿದರು: "ನಿಮಗೆ ಗೊತ್ತಾಗುವುದಿಲ್ಲ. ನೀವಿನ್ನೂ ಸಣ್ಣವರು. ನಿನ್ನ ಅಜ್ಜಿ ಏನು ಮಾಡಿದ್ದಳು ಗೊತ್ತಾ? ನಾನು ರಾತ್ರಿ ಅವಳ ಹತ್ರ ಹೋದ್ರೆ ಸಾಕು ಕವುಚಿ ಅಳುತ್ತಿದ್ದಳು. ಏನೂ ಮಾಡಿದ್ರು ತಿರುಗಿ ಮಲಗುತ್ತಿರಲಿಲ್ಲ. ನನಗೆ ಸಾಕು-ಸಾಕಾಗಿ ಹೋಗುತ್ತಿತ್ತು. ಕೊನೆಗೆ ಒಬ್ಬಳನ್ನು ಇಟ್ಟುಕೊಂಡೆ. ಅವಳಿಗೂ ಅವಳ ಗಂಡನತ್ರ ಸಾಕಾಗಿ ಹೋಗಿತ್ತು. ನಾನೂ ಅವಳು ಸೇರಿಕೊಂಡು ಅವಳ ಗಂಡನನ್ನು ಓಡಿಸಿದೆವು. ಅವಳಿಗೆ ಹೇಳಿದ್ದೆ:

ನನ್ನನ್ನು ಬಿಟ್ಟು ಹೋಗಬಾರದು ಅಂತ. ಅವಳೂ ಹಾಗೆ ನಡೆದಿದ್ದಾಳೆ. ರಾತ್ರಿ ಅವಳ ಮನೆಗೆ ಹೋದ್ರೆ ಎಲೆ ಅಡಿಕೆ ಕೊಟ್ಟು ಮಾತಾಡುತ್ತಾ ನನ್ನ ಕಾಲ ಮೇಲೆ ಕೂತುಕೊಳ್ಳುತ್ತಿದ್ದಳು. ಅವಳದ್ದು ದೊಡ್ಡ ಮನಸ್ಸು. ಮುಟ್ಟಿದರೆ ಖುಷಿಯಾಗ್ತಿತ್ತು. ನೋಡು ಸಂತೋಷ ಕೊಟ್ಟು ಪಡೆದುಕೊಳ್ಳುತ್ತಾಳೆ;

(ನಾನು ಕೇಳಿದ್ದೆ: 'ಅಲ್ಲಾ ಬೇರೆ ಯಾರಾದ್ರೂ?')

ಅಜ್ಜ ಅಂದಿದ್ದರು: 'ಅಯ್ಯೋ ನಾನು ಮಾಡದ ಕೆಲಸವಿಲ್ಲ. ಒಂದಿವಸ ಯಾರೋ ಒಬ್ಬಳು ನನ್ನನ್ನು ಹಿಡಿದುಕೊಂಡಳು. ಆದರೆ ಅವಳ ಮೈಯಿಂದ ಆಡಿನ ವಾಸನೆಯು ಬಂತು. ಆ ವಾಸನೆ ತಡೆಯೋದಿಕ್ಕೆ ಆಗಲಿಲ್ಲ. ಅದಕ್ಕೆ ಅವಳನ್ನು ಅಲ್ಲಿಯೇ ಬಿಟ್ಟು ಓಡಿದೆ. ಏನಿದ್ದರೂ ನನಗೆ ಸುಖಕೊಟ್ಟವಳು ಅಂದರೆ ಇಟ್ಟುಕೊಂಡವಳು. ಅದಕ್ಕೆ ಅವಳಿಗೆ ಮನೆ ಕಟ್ಟಿಸಿಕೊಟ್ಟೆ. ಜಮೀನು ಮಾಡಿಸಿದೆ. ಅವಳೂ ನನ್ನನ್ನು ಬಿಟ್ಟು ಬೇರೆ ನೋಡ್ತಿರಲಿಲ್ಲ. ಅವಳ ಮಕ್ಕಳಿಗೆ ಓದಿಸಿದೆ. ಎಲ್ಲರಿಗೂ ಒಳ್ಳೆಯ ಕೆಲಸ ತೆಗಸಿಕೊಟ್ಟೆ'

ಅಷ್ಟಿದ್ದರೂ ಅಜ್ಜನದು ಭಾರೀ ಕೆಲಸ. ಹರಿಯುವ ಕೋಡಿ ನೀರಿಗೆ ಅವರು ಸಣ್ಣದೊಂದು ಅಣೆಕಟ್ಟು ಕಟ್ಟಿಸಿ ನೀರು ಶೇಖರಣೆ ಮಾಡುತ್ತಿದ್ದರು. ಮಳೆಗಾಲದಲ್ಲಿ ಹರಿಯುವ ನೀರಿಗೆ ಮಣ್ಣು ಕರಗಿಸಿ ಗುಡ್ಡವನ್ನು ಸಮತಟ್ಟು ಮಾಡಿ ಅಡಿಕೆ ತೋಟ ಮಾಡಿದ್ದರು. ಅವರ ಸಾಹಸಕ್ಕೆ ಆಗಿನ ಡಿ.ಸಿ; ಎ.ಸಿ. ಎಲ್ಲಾ ಹೊಗಳಿದ್ದರು. ಬಂದು ನೋಡಿ ಹೋಗುತ್ತಿದ್ದರು. ಮಳೆಗಾಲ ಮುಗಿಯುವ ಹೊತ್ತಿಗೆ ಅಣೆಕಟ್ಟಿಗೆ ಹಲಗೆ ಹಾಕಿ ಮಣ್ಣಿನ ತಡೆಗೋಡೆ ಮಾಡುತ್ತಿದ್ದರು. ಇದರಿಂದ ತೋಡಿನಲ್ಲಿ ನೀರು ತುಂಬಿಕೊಂಡು ಅಕ್ಕಪಕ್ಕದ ತೋಟಗಳಿಗೆ ನೀರು ಹಾಯಿಸುವ ಕೆಲಸ ಬರುತ್ತಿರಲಿಲ್ಲ. ದಿನಾ ರಾತ್ರಿ ಊಟವಾದ ಮೇಲೆ ಒಂದು ತುಂಡು ಬೈರಾಸನ್ನು ಹೆಗಲಿಗೆ ಹಾಕಿಕೊಂಡು ಒಂದು ತಳವಾರ್ ಕೈಯಲ್ಲಿ ಹಿಡಿದುಕೊಂಡು ಅವರಿಟ್ಟುಕೊಂಡ ಹೆಣ್ಣಿನ ಮನೆಗೆ ಹೋಗಿ ಮಧ್ಯೆ ರಾತ್ರಿ ಬರುತ್ತಿದ್ದರು. ಅವರು ಎಷ್ಟು ಹೊತ್ತಿಗೆ ಬರುತ್ತಿದ್ದರೋ ಏನು ಕತೆಯೋ? ಅವರಿಟ್ಟುಕೊಂಡಿದ್ದ ಹೆಂಗಸು ಇನ್ನು ತಾಳ ಮದ್ದಲೆಗೆ ಹೋಗಬಾರದು ಅಂತ ಹೇಳಿದ್ದಕ್ಕೆ ಅಜ್ಜ ಅರ್ಥ ಹೇಳುವುದು ನಿಲ್ಲಿಸಿದರಂತೆ.

ಕೃಷಿಯಲ್ಲಿ ಅಜ್ಜನದು ಎತ್ತಿದ ಕೈ. ಅವರು ಕೆಲಸ ಶುರು ಮಾಡಿದರೆ ಕೆಲಸದವರು ಕಂಗಾಲಾಗಬೇಕು. ಶರ್ಟು ಹಾಕುತ್ತಿದ್ದುದೇ ಕಡಿಮೆ. ಹತ್ತಿರದ ಪೇಟೆಗೆ ಹೋಗುವಾಗ ಪಂಚೆ ಮತ್ತು ಹೆಗಲಿಗೆ ಬೈರಾಸು ಮಾತ್ರ. ಅದರಲ್ಲಿಯೇ ಸಾಮಾನು ಕಟ್ಟಿ ತರುತ್ತಿದ್ದರು. ಸದಾ ಎಲೆಯಡಿಕೆ ಬೇಕು. ಬೆಳಗ್ಗೆ ಐದು ಗಂಟೆಗೆ

ಎದ್ದು ಕೆಲಸ ಮಾಡಲು ತೊಡಗಿದರೆ ಏಳೂವರೆಯ ತನಕ ಕೆಲಸ. ಅನಂತರ ಸೂರ್ಯ ನಮಸ್ಕಾರ, ಯೋಗಾಸನ. ಎಂಟು ಗಂಟೆಗೆ ಹೊಳೆಯಲ್ಲಿ ಸ್ನಾನ. ಸೀತೆಯು ಸೀರೆ ಒಗೆದಿದ್ದು ಈ ಹೊಳೆಯಲ್ಲಿ ಅಂತೆ. ಅಜ್ಜನ ಮನೆಯ ಹತ್ತಿರವೇ ತೋಡು ಬಂದು ಅದಕ್ಕೆ ಸೇರುತ್ತದೆ. ಅಜ್ಜ ಹೊಳೆಯಲ್ಲಿ ಸ್ನಾನ ಮಾಡಿ ಬಂದರೆ ಮತ್ತೆ ಪೂಜೆ. ಪೂಜೆಯಾದ ಮೇಲೆ ತಿಂಡಿ. ತಿಂಡಿಯೆಂದರೆ – ಬೇಯಿಸಿದ ಹುರುಳಿ. ಅಕ್ಕಿಯಿಂದ ಮಾಡಿದ ತಿಂಡಿಯೆಂದರೆ ಅಜ್ಜನಿಗೆ ಅಷ್ಟಕಷ್ಟೆ. ಅದು ಬೇಗ ಜೀರ್ಣವಾಗುತ್ತದೆ. ಮಧ್ಯಾಹ್ನ ಚಾದೊಟ್ಟಿಗೆ ತೆಂಗಿನ ಕಾಯಿ ತುರಿದು ಅವಲಕ್ಕಿ ಬೆಲ್ಲ ತಿನ್ನುವರು.

ಅಜ್ಜ ತೆಂಗಿನ ತುರಿಯುವಾಗ ನಾವು–ಅಂದರೆ ಮಕ್ಕಳೆಲ್ಲಾ ಹಾಜರು. ಅಜ್ಜ ಅದನ್ನೇ ಹಂಚುತ್ತಿದ್ದರು. ಒಂದು ದಿನ ಅಜ್ಜ ಹೊರಗೆ ಹೊರಟಿದ್ದರು. ನಾನಿನ್ನೂ ಸಣ್ಣವನು. ಅಜ್ಜ ಹೊರಟ ತಕ್ಷಣ, 'ಅಜ್ಜ ಎಲ್ಲಿಗೆ?' ಎಂದು ಕೇಳಿದೆ. ಅಜ್ಜ ವಾಪಾಸು ಬಂದು ಕುಳಿತುಕೊಂಡು ನನ್ನನ್ನೂ ಬೈದದ್ದೇ ಬೈದದ್ದು. ಆಗ ಅಜ್ಜಿ ನನ್ನ ಪಕ್ಷ ವಹಿಸಿ "ಆ ಮಗುವಿಗೇನು ತಿಳಿಯುತ್ತದೆ. ಏನೋ ಕೇಳಿದ–ಅದಕ್ಕೆ ನೀವ್ಯಾಕೆ ಇಷ್ಟೊಂದು ಗಲಾಟೆ ಮಾಡ್ತೀರಾ? ಹೊರಗೆ ಹೋಗಿ ನೀವು ಇನ್ನು ಆ ಮುಂಡೆಗೆ ಏನು ತರ್ತಿರೋ ಏನೋ? ನನಗೆ ಒಂದು ಸೀರೆ ಕೇಳಿದ್ರೆ ತಂದು ಕೊಡುವುದಿಲ್ಲ. ಆ ಕಿನ್ನರಿಗಳತ್ರ ಕೊಟ್ಟು ಕಳಿಸ್ತೀರಾ. ಇಲ್ಲಾಂದ್ರೆ ಪಾತುಮ್ಮನತ್ರ ಸೀರೆ ಕೊಟ್ಟು ಕಳುಸುತ್ತೀರಿ"? ಅದಕ್ಕೆ ಅಜ್ಜ, "ಮೊನ್ನೆ ಅವಳೇ ಹೇಳಿದಳು. – "ನಿಮ್ಮ ಹೆಂಡತಿ ನೀವಿಲ್ಲದಾಗ ತೆಂಗಿನ ಕಾಯಿ ಮಾರ್ತಾರೆ ಅಂತ. ಅವಳಿಗೆ ಹೇಳಿದ್ದೇನೆ – ಬಿದ್ದ ತೆಂಗಿನಕಾಯಿ ತೆಗೊಂಡು ಹೋಗಿ ರಾಶಿಹಾಕು ಅಂತ. ನಿನ್ಗಿಂತ ಆ ಸೂಳೆಯೇ ಲಾಯಕ್ಕು. ಮತ್ತೆ ನಿನ್ನ ಮುಟ್ಟುವುದಕ್ಕೆ ಬಂದ್ರೆ ಸಾಕು; ಅಯ್ಯೋ ಅಂತ ಅಳ್ತಿಯಾ. ನಿನ್ನನ್ನು ಕಟ್ಟಿಕೊಂಡು ನಾನು ಹಾಳಾದೆ. ಹೆಚ್ಚು ಮಾತಾಡಿದ್ರೆ ಕೊಚ್ಚಿ ಹೊಳೆಗೆ ಹಾಕ್ತೇನೆ." ಅಜ್ಜ ಬೈದರೆ ಅಜ್ಜಿ ಅಳುತ್ತಾ ಹಿತ್ತಿಲಿನ ಬಾಗಿಲ ಹತ್ರ ಹೋದರು. ನಾನು ಹೆದರಿಕೊಂಡು ಅಜ್ಜಿಯ ಹತ್ರ ಹೋದೆ. ಅನಂತರ ಅಜ್ಜ ಎಷ್ಟು ಹೊತ್ತಿಗೆ ಹೋದರು ಅಂತ ಗೊತ್ತಾಗಲಿಲ್ಲ. ಅಜ್ಜನ ರುದ್ರ ಭಯಂಕರ ಸಿಟ್ಟಿನ ಕಾರಣದಿಂಧ ಯಾರೂ ಅಜ್ಜನ ಹತ್ರ ಸುಳೀತಿರಲಿಲ್ಲ. ಆದರೆ ಅಜ್ಜ–ಅಜ್ಜಿ ಇಬ್ರೂ ಒಬ್ಬರಿಗೊಬ್ಬರೂ ಸಲುಗೆಯಿಂದ, ಪ್ರೀತಿಯಿಂದ ಮಾತಾಡಿದ್ದು ನಾನು ನೋಡೆ ಇಲ್ಲ. ಅಜ್ಜನ ಆ ದೊಡ್ಡ ಮನೆಯಲ್ಲಿ ಅಜ್ಜ–ಅಜ್ಜಿ ಮಾತ್ರ ಇದ್ದರು.

ಅಜ್ಜ ತಿಂಗಳಿಗೊಂದು ಸರ್ತಿ ಸತ್ಯನಾರಾಯಣ ಪೂಜೆ ಮಾಡಿಸುತ್ತಿದ್ದರು. ನೈವೇದ್ಯಕ್ಕೆ ಪ್ರಸಾದ ತರಲು ಅಜ್ಜಿಗೆ ಹೇಳುವಾಗಲೂ, 'ಏಯ್ ಮುಂಡೆ ಪ್ರಸಾದ

ತೆಗೆದುಕೊಂಡು ಬಾ,' ಅಂತ ಹೇಳ್ತಿದ್ದರು. ಅಜ್ಜಿಯೂ ಪುರೋಹಿತರ ಹತ್ತಿರ ನ್ಯಾಯ ಪಂಚಾಯಿತಿ ಒಪ್ಪಿಸುತ್ತಿದ್ದರು. ಆದ್ರೆ ಪುರೋಹಿತರಿಗೂ ಅಜ್ಜನ ಭಯ. ಅದಕ್ಕೆ ಅವರೂ ಸುಮ್ಮನಿರುತ್ತಿದ್ದರು. ನಾನು ಅಜ್ಜನೊಂದಿಗೆ ಸಲುಗೆಯಲ್ಲಿ ಮಾತಾಡುವಂತೆ ಇರಲಿಲ್ಲ. ಡಿಗ್ರಿಗೆ ಬಂದ ಮೇಲೆಯೇ ನನಗೆ ಸಾಧ್ಯವಾಯಿತು. ಹೇಳ ಹೊರಟರೆ ನೆನಪಿನ ಪುಟಗಳಲ್ಲಿ ಅನೇಕಾನೇಕ ಸಂಗತಿಗಳಿವೆ. ಅವನ್ನು ಕೆದಕಬೇಕು. ಕೆಲವು ನೆನಪುಗಳು ಮಾತ್ರ ದೊಡ್ಡವು. ಅವು ಸದಾ ಹೆಗಲ ಮೇಲೆ ಕುಳಿತುಕೊಂಡು ಬೀಳದಿರುವಂತೆ ಕಪಿಮುಷ್ಠಿಯಲ್ಲಿ ಹಿಡಿದುಕೊಂಡಿರುತ್ತವೆ. ಜಾರುವುದಿಲ್ಲ. ಕೆಳಗೆ ಬೀಳುವುದಿಲ್ಲ.

ಮತ್ತೆ ಆ ಕೆಂಪು ಡೈರಿಯ ಹದಿಮೂರನೆಯ ಪುಟದಲ್ಲಿ ಹೀಗಿತ್ತು:

"ನಾವು ಮುಳಿಹುಲ್ಲಿನಲ್ಲಿ ಒಕ್ಕಲಾದ ವರ್ಷ – ನಾನು ನಾಲ್ಕನೆಯ ಕ್ಲಾಸು ಮುಗಿಸಿ ಐದನೆಯ ಕ್ಲಾಸಿಗೆ ಬಂದೆದ್ದೆ. ಇಂಗ್ಲೀಷ್ ಅಕ್ಷರಗಳನ್ನು ಕಲಿಯುವ ಮತ್ತು ಪೆನ್ನಿನಲ್ಲಿ ಬರೆಯುವ ಹಂಬಲವಾದ ವರ್ಷ. ಐದನೆಯ ಕ್ಲಾಸಿನವರೆಗೆ ನಾವು ಯಾರೂ ಬರೆಯುವುದಕ್ಕೆ ಪೆನ್ನು ಉಪಯೋಗಿಸುತ್ತಿರಲಿಲ್ಲ. ಐದನೆಯ ಕ್ಲಾಸಿನವರೆಗೆ ಪೆನ್ಸಿಲು, ಐದನೆಯ ಕ್ಲಾಸಿನಿಂದ ಪೆನ್ನಿನಲ್ಲಿ ಬರೆಯಲು ನಮಗೆ ಬಡ್ತಿ. ಆ ವರ್ಷ ನಡೆದ ಘಟನೆಯಿದು. ಒಂದು ದಿನ ನನ್ನ ದೊಡ್ಡಪ್ಪನ ಮಗ ಅಣ್ಣ (ಅವನ ಹೆಸರು ಬೇರೆಯಿದೆ). ಬಂದು ನನ್ನ ಅಪ್ಪನ ಹತ್ರ, "ಚಿಕ್ಕಪ್ಪ ಮನೆಗೆ ಬರಬೇಕಂತೆ, ಮಿತ್ತನಡ್ಕದಿಂದ ಜೋಯಿಸರು ಬರೆದಿದ್ದಾರೆ. ಪಂಚಾಂಗ ಇಡ್ತಾರಂತೆ" ಎಂದು ಹೇಳಿದ. ಮಿತ್ತನಡ್ಕದ ಹತ್ತಿರದಿಂದ ಬಂದ ಜೋಯಿಸರು ಆಗ ತುಂಬಾ ಪ್ರಸಿದ್ಧಿ ಹೊಂದಿದ್ದರು. ಸಣ್ಣ ವಯಸ್ಸಿನಲ್ಲಿಯೇ ಕೇರಳಕ್ಕೆ ಹೋಗಿ ಮಂತ್ರವಾದ ಕಲಿತು ಬಂದಿದ್ದರು. ಮಾಟ ಗೀಟ ತೆಗೆಸುವುದರಲ್ಲಿ ಬಹಳ ಹುಷಾರು. ಹೇಳಿದ್ದು ಕೇಳದಿರುವ ಭೂತಗಳಿದ್ದರೆ ಅವನ್ನು ಬಂಧಿಸುತ್ತಾರೆ ಅಂತ ಬಹಳ ಸುದ್ದಿಯಾಗಿತ್ತು. ಜೋಯಿಸರೆಂದರೆ ಎಲ್ಲರೂ ಬೆವರಿಕೊಳ್ಳುತ್ತಿದ್ದರು. ಪಂಚಾಂಗ ಇಡುವುದೆಂದರೆ ಏನೂಂತ ಗೊತ್ತಿಲ್ಲದ ನಾನು ಬಾಲದೊಟ್ಟಿಗೆ ಬೀಲ ಎನ್ನುವ ಹಾಗೆ ಅಪ್ಪನೊಂದಿಗೆ ಹೋದೆ. ಜೋಯಿಸರು ದೊಡ್ಡಪ್ಪನ ಮನೆಯ ಜಗುಲಿಯ ಮೇಲೆ ಬಂದು ಮಣೆಯ ಮೇಲೆ ಕವಡೆ ಹರಡಿಕೊಂಡು ಕುಳಿತಿದ್ದರು. ಒಂದು ಕಡೆ ದೊಡ್ಡಪ್ಪ ಕುಳಿತಿದ್ದರು. ಒಂದಿಬ್ಬರು ನೆರೆಹೊರೆಯವರೂ ಕುಳಿತಿದ್ದರು. ಅಪ್ಪ ಹೋದ ತಕ್ಷಣ ದೊಡ್ಡಪ್ಪ 'ಬಾ' ಅಂತ ಕರೆದರು. ಅಪ್ಪ ದೊಡ್ಡಪ್ಪನತ್ರ ಕುಳಿತರು. ಅವರ ಹತ್ತಿರವೇ ನಾನೂ ಕುಳಿತುಕೊಂಡೆ. ಜೋಯಿಸರನ್ನು ನೋಡಿದೆ: ಅವರದು ಕಪ್ಪುಮೈ. ಹಣೆಯಲ್ಲಿ ದಪ್ಪನಾಗಿರುವ ವಿಭೂತಿ. ಹುಬ್ಬಿನ ಮಧ್ಯೆ ಕುಂಕುಮದ ಬೊಟ್ಟು. ಹೆಗಲಿಗೆ ಒಂದು ಕೆಂಪು ಶಾಲು. ಜುಟ್ಟು ಕಟ್ಟಿಕೊಂಡಿದ್ದರು. ಕೈಯಲ್ಲಿ

ಬೇರೆ ಬೇರೆ ತರಹದ ಉಂಗುರಗಳು. ಕೈಗೆ ಕಡಗವಿತ್ತು. ಮತ್ತು ಕಾಲಿಗೂ ಒಂದು ಬೆಳ್ಳಿಯ ಕಡಗ ಹಾಕಿಕೊಂಡಿದ್ದರು. ಕೊರಳಲ್ಲಿ ರುದ್ರಾಕ್ಷಿಯ ಸರ. ಗೊಗ್ಗರುಸ್ವರ ಬೇರೆ. ಮುಂದಲೆಯನ್ನು ಕೆರೆದುಕೊಂಡಿದ್ದರು. ಇಷ್ಟು ಸಪೂರದ ಈ ಜೋಯಿಸರು ಭೂತಗಳನ್ನು ಹೇಗೆ ಕಟ್ಟಿಹಾಕುತ್ತಾರಪ್ಪಾ ಎಂದು ಅನಿಸಿತು. ಅವರು ಮಧ್ಯರಾತ್ರಿ ಬೇಕಾದರೂ ಓಡಾಡುತ್ತಾರೆಂಬ ಅವರ ಕ್ರಮಗಳನ್ನು ವಿವರಿಸಿದ್ದ. ಅಣ್ಣನ ಮಾತಿನ ದೆಸೆಯಿಂದಾಗಿ ಅನುಮಾನ ಸರಿಯಲ್ಲವೆಂದು ಸುಮ್ಮನುಳಿದೆ. ಜೋಯಿಸರು ದೊಡ್ಡಪ್ಪನ ಮುಖನೋಡಿ, "ಶುರುಮಾಡೋಣವೆ?" ಅಂತ ಕೇಳಿದರು, ದೊಡ್ಡಪ್ಪ ಸರಿಯೆಂದರು. ಜೋಯಿಸರು ಕವಡೆ ಮಗುಚಿ "ನಿಮ್ಮ ತರವಾಡಿನ ಮನೆಯು ಈಗ ಇಲ್ಲ. ತರವಾಡಿನ ಮನೆಯ ಹತ್ರ ಒಕ್ಕಲು ಮನೆಯಿತ್ತು. ತರವಾಡಿನಿಂದ ಬಂದ ಮನೆಯನ್ನು ಬದಲಾಯಿಸುವಾಗ ಶಾಂತಿಯಾಗಲಿಲ್ಲ. ಹೀಗಾಗಿ ನೀವ್ಯಾರು ಉದ್ಧಾರವಾಗಿಲ್ಲ" ಎಂದರು, ಅಪ್ಪ ದೊಡ್ಡಪ್ಪ ಒಬ್ಬರಿಗೊಬ್ಬರು ಮುಖ ನೋಡಿ ಹೌದೆನ್ನುವಂತೆ ತಲೆಯಲ್ಲಾಡಿಸಿದರು. ಒಳಕೋಣೆಯಲ್ಲಿದ್ದ ದೊಡ್ಡಮ್ಮ ಅದಕ್ಕೆ "ಏನೋಪ್ಪ" ಎಂದರು, ದೊಡ್ಡಪ್ಪ ಸಣ್ಣ ಆಳು. ನಡೆಯುವಾಗ ಸ್ವಲ್ಪ ಬೆನ್ನುಬಗ್ಗಿಸಿ ನಡೆಯುತ್ತಿದ್ದರು. ದೊಡ್ಡಮ್ಮ ಮಾತ್ರ ತುಂಬಾ ದಪ್ಪ ಇದ್ದರು. ದೊಡ್ಡಮ್ಮನ ಅರ್ಧದಷ್ಟು ದೊಡ್ಡಪ್ಪನ ದೇಹ. ದೊಡ್ಡಮ್ಮನದು ಹರುಕುಬಾಯಿ. ತುಂಬಾ ಮಾತಾಡುವ ಸ್ವಭಾವ. ದೊಡ್ಡಪ್ಪನದು ಕಡಿಮೆ ಮಾತು. ಕೃಶ ಶರೀರ ಆದರೂ ದೊಡ್ಡಪ್ಪನ ಮಾತಿಗೆ ದೊಡ್ಡಮ್ಮ ಹೆದುರುತ್ತಿದ್ದರು. ಇದು ನನಗೆ ಅಚ್ಚರಿಯ ವಿಷಯ! ಗಂಡು ಸಣಕಲ ಕಡ್ಡಿಯಾಗಿದ್ದರೂ ದಪ್ಪ ಹೆಂಗಸರನ್ನು ನಿಯಂತ್ರಿಸುವ ಯಾವ ಶಕ್ತಿ ಅವರಲ್ಲಿದೆ?

ಜೋಯಿಸರು ಮತ್ತೊಮ್ಮೆ ಕವಡೆ ಮಗುಚಿದರು ಲೆಕ್ಕ ಮಾಡಿದರು. "ನಿಮ್ಮ ಹಿಂದಿನ ತಲೆಮಾರಿನಲ್ಲಿ ಯಾರೋ ಒಬ್ಬರು ಅಪಮೃತ್ಯುವಿಗೆ ಬಲಿಯಾಗಿದ್ದಾರೆ. ಅವರಿಗೆ ವಂಶವಿಲ್ಲ." ದೊಡ್ಡಪ್ಪ ಆಶ್ಚರ್ಯದಿಂದ, 'ಯಾರೂ ಇಲ್ಲ' ಅಂದರು. ಜೋಯಿಸರು ಖಡಾ ಖಂಡಿತವಾಗಿ, "ನಾನು ಹೇಳಿದ್ದು ಸತ್ಯ. ನಿಮ್ಮ ಮನೆತನದಲ್ಲಿ ಯಾರೋ ಒಬ್ರು ಅಪಮೃತ್ಯು ಕಂಡಿದ್ದಾರೆ. ಅವರಿಗೆ ಸರಿಯಾದ ಸದ್ಗತಿ ಸಿಗಲಿಲ್ಲ. ಅವರೀಗ ಪ್ರೇತವಾಗಿ ಅಲೆಯುತ್ತಿದ್ದಾರೆ. ಬ್ರಹ್ಮರಾಕ್ಷಸನಾಗಿ ಓಡಾಡುತ್ತಿದ್ದಾರೆ. ಈ ಬ್ರಹ್ಮರಾಕ್ಷಸನ ಒಟ್ಟಿಗೆ ಗುಳಿಗನೂ ಇದ್ದಾನೆ. ಅವರಿಬ್ಬರ ಆಟದಿಂದ ನೀವು ಯಾರೂ ನೆಮ್ಮದಿಯಿಂದ ಇಲ್ಲ" ಅಂದರು. ದೊಡ್ಡಪ್ಪ ಗಲ್ಲಕ್ಕೆ ಕೈಕೊಟ್ಟು ಸುಮ್ಮನೆ ಕುಳಿತರು. ನನ್ನ ಅಪ್ಪ ಸ್ವಲ್ಪ ಯೋಚಿಸಿ, 'ಹಾಗೆ ಹೇಳುತ್ತಾರಪ್ಪ, ನನ್ನ ಸೋದರತ್ತೆ ಹೇಳಿದ ನೆನಪು" ಎಂದರು. "ಅದೇ ನಾನು ಹೇಳಿದೆ, ನಾನು ಹೇಳಿದ್ದು ಸುಳ್ಳಾದ್ರೆ ಈವತ್ತೇ ಪಂಚಾಂಗ ಹೇಳುವುದು ನಿಲ್ಲಿಸುತ್ತೇನೆ" ಎಂದು

ಜೋಯಿಸರು ಹೇಳಿ ಒಂಚೂರು ನಶ್ಯ ಸೇದಿದರು. ನನ್ನ ತಂದೆ ಮತ್ತು ದೊಡ್ಡಪ್ಪ ಇಬ್ಬರೂ ಅವರ ನಶ್ಯದ ಬುರುಡೆಗೆ ಕೈ ಹಾಕಿದರು. ತಂದೆ ನಶ್ಯ ಸೇದಿದ ಮೇಲೆ ಮೂಗೊರಸಿಕೊಂಡು ದೊಡ್ಡಪ್ಪನತ್ರ "ಅಣ್ಣ ಅದು ನಮ್ಮ ಅಜ್ಜನ ಕಾಲದಲ್ಲಿ ಆದದ್ದು. ಅವರು ಮೂರು ಜನ ಅಣ್ಣ ತಮ್ಮಂದಿರು: ಕೇಚಣ್ಣ: ತಿಮ್ಮಯ್ಯ: ಸುಬ್ಬಣ್ಣ. ಕೇಚಣ್ಣ ಹಿರಿಯವರು. ಸುಬ್ಬಣ್ಣ ಕೊನೆಯವರು ತಿಮ್ಮಯ್ಯ ಮಧ್ಯದವರು. ತಿಮ್ಮಯ್ಯಜ್ಜನಿಗೆ ಮಕ್ಕಳಾಗಿರಲಿಲ್ಲವಂತೆ. ನಿಮ್ಮ ತೋಟ ಮತ್ತು ನಮ್ಮ ತೋಟದ ಮಧ್ಯ ಇರುವ ಖಾಲಿ ಜಾಗೆ ಅವರದಂತೆ. ಈಗಲೂ ಮನೆ ಕಟ್ಟಿದ ಸ್ಥಳ ಹಾಗೆಯೇ ಇದೆ. ಆಗ ಹುಲಿಗಳ ಕಾಟ ಬಹಳ ಅಂತೆ, ಅದಕ್ಕೇಂತ ಒಂದು ಬಂದೂಕು ಇಟ್ಟುಕೊಂಡಿದ್ದರು. ಅದೇ ಜಾಗದಲ್ಲಿರುವ ನಡುವಿನ ತೆಂಗಿನ ಮರದ ಕೆಳಗೆ ಒಂದು ದಿವಸ ಅವರೇ ಸರಿಯಾಗಿ ಗಲ್ಲದ ಕೆಳಗೆ ಬಂದೂಕನ್ನು ಗುರಿ ಮಾಡಿ ಒತ್ತಿದರಂತೆ. ತಲೆ ಹಾರಿ ಹೋಯಿತು. ಆಗ ಬ್ರಿಟೀಷರ ಕಾಲ ಬೇರೆ. ಇನ್ನೇನು ಕಾಯ್ದೆ ಕಾನೂನು ಅಂತ ತೊಂದರೆಯಾದೀತು ಅಂತ ಕೇಚಣ್ಣ ಮತ್ತು ಸುಬ್ಬಣ್ಣ ಉಳಿದದ್ದು ನಾವು ನೋಡ್ತೇವೆ ಅಂದರಂತೆ. ಅದಕ್ಕೆ ಯಾರಿಗೂ ಗೊತ್ತಾಗದಂತೆ ಸುಟ್ಟು ಬಿಟ್ಟರಂತೆ. ಯಾವ ಕರ್ಮವೂ ಸರಿಯಾಗಿ ಆಗಿರಲಿಲ್ಲ ಅಂತ ಹೇಳ್ತಿದ್ದರು. ತಿಮ್ಮಯಜ್ಜ ಸತ್ತ ಒಂದೆರಡು ತಿಂಗಳಲ್ಲಿ ಅಜ್ಜಿಯೂ ಸತ್ತರಂತೆ. ಮಕ್ಕಳಾಗಲಿಲ್ಲಾಂತ ಸತ್ತರೋ–ಏನು ಕಾರಣವೋ ಗೊತ್ತಾಗಲಿಲ್ಲ. ಅವರು ಸಾಯುವಾಗ ಮಾತ್ರ ಅವರಿಗಾದ್ದು ನಲುವತ್ತೆರಡು ವರ್ಷ ಮಾತ್ರ. ಅದೇ ಅವರ ಜಾಗವನ್ನೇ ಕೇಚಣ್ಣ ಮತ್ತು ಸುಬ್ಬಣ್ಣ ಹಂಚಿಕೊಂಡರಂತೆ. ಸುಬ್ಬಣ್ಣನಿಗೆ ಆ ಜಾಗ ಕೊಟ್ಟರು. ಅದರಲ್ಲಿ ಸುಬ್ಬಣ್ಣ ಒಕ್ಕಲಾದರು. ಅವರ ತರವಾಡಿನಿಂದ ಬಂದ ಮನೆಯನ್ನು ಕೇಚಣ್ಣ ಇಟ್ಟುಕೊಂಡರಂತೆ" ಎಂದು ನನ್ನ ಅಪ್ಪ ಹೇಳಿದರು. 'ಅದು ನನಗೆ ಸರಿಯಾಗಿ ನೆನಪಿದೆ. ತರವಾಡಿನಿಂದ ಬಂದ ಕೆಲಸವೆಲ್ಲಾ ನಾವು ಮಾಡಿಕೊಂಡು ಬರುವುದು ನಿಜ' ಎಂದು ತಂದೆ ಹೇಳಿ ಜೋಯಿಸರ ಮುಖ ನೋಡಿದರು ಆಗ ದೊಡ್ಡಪ್ಪ ಹೇಳಿದರು: "ಇದಕ್ಕೆ ಏನಾದರೂ ದಾಖಲೆ ಸಿಗುತ್ತದೋ ಅಂತ ನೋಡಬೇಕು. ತಿಮ್ಮಯಜ್ಜನ ಕತೆಯೇನು?" ಜೋಯಿಸರು, "ಅದೆಲ್ಲ ಕಟ್ಟಿಕೊಂಡು ನೀವು ಏನು ಮಾಡ್ತೀರೀ? ಪರಿಹಾರ ಮಾಡಿಸಿ" ಅಂತ ಹೇಳಿದರು. ಅವರು ಪರಿಹಾರ ಏನು ಹೇಳಿದರು ಅಂತ ನೆನಪಿಲ್ಲ, ಆದರೆ ಅವರು ಹೇಳಿದ ಪ್ರಕಾರ ಗುಳಿಗ ಕೋಲ ಆಗಬೇಕು. ಬ್ರಹ್ಮರಾಕ್ಷಸನನ್ನು ಕಟ್ಟಿ ಹಾಕಬೇಕು. ಮನೆಯ ಅಟ್ಟದ ಮೇಲಿರುವ ಹಂಡೆಯಲ್ಲಿರುವ ಕಾಗದ ಪತ್ರವೆಲ್ಲಾ ಹುಡುಕಬೇಕು. ಎಲ್ಲಿಯಾದರೂ ತಿಮ್ಮಯಜ್ಜನ ದಾಖಲೆ ಸಿಗುತ್ತದೆಯೋ ಏನೋ? ಕೊನೆಯ ಪಕ್ಷ ಹಕ್ಕು ಪತ್ರವಾದರೂ ಸಿಗಬಹುದು ಎಂದು ತಂದೆ ಹೇಳಿದರು.

ಆ ದಿವಸ ಮಧ್ಯಾಹ್ನ ಊಟವಾದ ಮೇಲೆ ಮನೆಯ ಅಟ್ಟವನ್ನು ಹತ್ತಿ ಹಂಡೆಯಲ್ಲಿರುವ ಕಾಗದ ಪತ್ರಗಳ ಕಟ್ಟನ್ನು ತಂದು ಅಪ್ಪನ ಎದುರಿಟ್ಟೆ. ಅಮ್ಮ ಗೊಣಗುತ್ತಿದ್ದರು: "ಈ ಕಾಗದ ಪತ್ರವನ್ನು ಇಲ್ಲಿ ಗುಡ್ಡೆ ಹಾಕಿದರೆ ಯಾರು ತೆಗೆಯುತ್ತಾರೆ? ನಿಮಗೆ ಮಾಡುವುದಕ್ಕೆ ಕೆಲಸವಿಲ್ಲ." ಅಪ್ಪ ಕನ್ನಡಕ ಇಟ್ಟುಕೊಂಡು ಅದನ್ನೆಲ್ಲಾ ಮಗುಚಿದ್ದರು. ನನಗೆ ಏನು ಅಂತ ತಿಳಿಯದಿದ್ದರೂ ಅಕಾಲಿಕವಾಗಿ ತನ್ನ ಗಲ್ಲಕ್ಕೆ ತಾನೇ ಗುಂಡಿಟ್ಟು ಸತ್ತುಹೋದ ತಿಮ್ಮಯ್ಯಜ್ಜನ ಬಗ್ಗೆ ಮಾತ್ರ ಕುತೂಹಲವಿತ್ತು. ಅವರು ಹೇಗಿದ್ದರೋ ಏನೊ? ಅವರಿಗೆ ಗುಂಡಿಟ್ಟುಕೊಂಡಾಗ ಎಷ್ಟು ನೋವಾಯಿತೋ ಏನೋ? ಅಂತ. ಅದನ್ನೇ ಅಪ್ಪನಿಗೆ ಕೇಳಿದೆ: "ಅಪ್ಪಾ, ತಿಮ್ಮಯ್ಯಜ್ಜ ಯಾಕೆ ಸತ್ತರು?"

"ಅದುವೇ ಗೊತ್ತಾಗ್ತಾ ಇಲ್ಲ. ನಮ್ಮ ಸೀಮೆಯ ಅರಸರಿಂದಾಗಿ ನಾವು ಉಳಿಯುವಂತಾಯಿತು. ಈ ನಮ್ಮ ಜಾಗವೆಲ್ಲಾ ಅರಸರು ಉಂಬಳಿಕೊಟ್ಟ ಜಾಗವೇ. ಅವರೇ ನಮ್ಮನ್ನು ಕರೆಸಿಕೊಂಡರಂತೆ. ವಿಟ್ಲದ ಅರಸರಿಗೂ ಹುಲಿಬೇಟೆ ಅಂದರೆ ತುಂಬಾ ಆಸೆಯಂತೆ. ಹಿಂದಿನ ಕಾಲದ ಅರಸರು. ಈಗಲೂ ವರ್ಷಕ್ಕೊಮ್ಮೆಯಾದರೂ ಅರಮನೆಗೆ ಹೋಗಿ ಅವರಿಗೆ ಕಪ್ಪದ ರೂಪದಲ್ಲಿ ಅಕ್ಕಿಕೊಟ್ಟು ಬರಬೇಕು. ಅವರೇ ಕೊಟ್ಟ ಬಂದೂಕು ಇದು. ತಿಮ್ಮಯ್ಯಜ್ಜ ಸತ್ತಮೇಲೆ ನನ್ನ ಅಜ್ಜನಿಂದ ತಂದೆಗೆ ಬಂದಿತು. ತಂದೆಯಿಂದ ನನಗೆ ಬಂತು. ಇನ್ನು ನನ್ನಿಂದ ನಿನಗೆ" ಎಂದ ಅಪ್ಪ ಕನ್ನಡಕ ಒರಸಿಕೊಂಡರು. ಅದು ನಾಟಾ ಕೋವಿ. ಅದರಲ್ಲಿ ಅಂಥ ವಿಶೇಷವೇನೂ ನನಗೆ ಕಂಡಿರಲಿಲ್ಲವಾದರೂ ಕೋವಿಯನ್ನು ನೋಡುವಾಗ ತಿಮ್ಮಯ್ಯಜ್ಜನ ತಲೆ ಹಾರಿಹೋದ ದೃಶ್ಯವೇ ಕಂಡುಬರುತ್ತಿತ್ತು. ಅಪ್ಪ ಹುಡುಕುತ್ತಲೇ ಇದ್ದರು–ಆಗ ನಾನು ಒಂದು ಕಾಗದ ಅದರ ಮೊಹರಿನ ಚಿತ್ರವನ್ನೇ ನೋಡುತ್ತಾ ಕುಳಿತೆ. ಅದರ ಮೊಹರಿನಲ್ಲಿ ಇಂಗ್ಲೆಂಡಿನ ರಾಣಿಯ ಚಿತ್ರವೋ ರಾಜನ ಚಿತ್ರವೋ ಕಂಡಂತೆ ನೆನಪು. ಅದನ್ನೇ ಅಪ್ಪನಿಗೂ ತೋರಿಸಿದೆ. ಅತ್ತಿಯ ಕಾಯನ್ನು ಜಜ್ಜಿ ಅದರ ರಸ ತೆಗೆದು ಶಾಯಿಯಂತೆ ಬಳಸಲಾಗುತ್ತಿತ್ತು. ಅಕ್ಷರಗಳು ತುಂಬಾ ಮೋಡಿಯಾಗಿದ್ದವು. 'ಬೇ'ಯನ್ನು 'ಖೆ' ರೀತಿಯಲ್ಲಿ ಬರೆದಿದ್ದರು. ಅಪ್ಪ ಅವನ್ನೇ ಓದಿ ಇದರಲ್ಲಿ ತಿಮ್ಮಯ್ಯಜ್ಜನ ಹೆಸರು ಇರುವುದು ನಿಜ. ಕೇಚಣ್ಣ ತಿಮ್ಮಯ್ಯ ಮತ್ತು ಸುಬ್ಬಣ್ಣರಿಗೆ ಆದ ಪಾಲಿನ ವಿವರವಿದೆ. ಹಳೆಯ ಮನೆ ಕೇಚಣ್ಣನಿಗೆ ಅಂತಲೂ ಇದೆ. ನಾವು ಇರುವ ಮನೆಯ ಹಿಂದೆ ಒಂದು ಮನೆಯಿತ್ತು. ಅದು ಕೇಚಣ್ಣನದು. ಅವರ ಮಗ ನಾಚಣ್ಣ. ನಾಚಣ್ಣನ ಮಗ ಕೇಚಣ್ಣ. ಕೇಚಣ್ಣ ಅಂದರೆ ಯಾರು ಅಂತ ಗೊತ್ತಾಯ್ತು. ನನ್ನ ತಂದೆಯ ತಂದೆ ಕೇಚಣ್ಣ! ಕೇಚಣ್ಣನೆಂದರೆ ನನ್ನ ಅಜ್ಜ. ಅಜ್ಜನ ಹೆಸರು – ನನ್ನ ಮೂಲ ನಾಮಧೇಯ . ಶಾಲೆಯ ಮೇಷ್ಟ್ರು ನಿಶಿತ ಅಂತ ಬರೆದರು.

ತಂದೆಯ ತಂದೆಯೇ ಹಳೆಯ ಸಣ್ಣಮನೆ ಬೇಡವೆಂದು ಒಂದು ಮನೆ ಕಟ್ಟಿಸಿದ್ದರಂತೆ, ಮನೆ ಕಟ್ಟಿಸಿ ಅವರು ಹೆಚ್ಚು ವರ್ಷವಿರಲಿಲ್ಲ. ಅಜ್ಜ ಮದುವೆಯಾದ್ದು ಲಕ್ಷ್ಮಿಯನ್ನು. ನನ್ನ ತಂದೆಯ ಸೋಗೆ ತಂದೆಯೂ ಎತ್ತರವಂತೆ. ಅಜ್ಜಿ 'ಲಕ್ಷ್ಮಿಯೆಂದರೆ ಲಕ್ಷ್ಮಿಯೇ ಸೈ' ಎಂದು ಅಪ್ಪ ಪದೇ ಪದೇ ಹೇಳುತ್ತಿದ್ದರು. ಈ ಅಜ್ಜ-ಅಜ್ಜಿಯರನ್ನು ನೋಡುವ ಭಾಗ್ಯ ನಮ್ಮದಾಗಲಿಲ್ಲ. ಇವರಿಗೆ ಮೂರು ಜನ ಗಂಡು ಮಕ್ಕಳು. ಇಬ್ಬರು ಹೆಣ್ಣು ಮಕ್ಕಳು. ಗಂಡು ಮಕ್ಕಳಲ್ಲಿ ನನ್ನ ಅಪ್ಪ ಹಿರಿಯವರು. ನಾವು ಹಳೆಯಪತ್ರ ಹುಡುಕುತ್ತಿದ್ದಾಗ ಅಪ್ಪ ಹೇಳಿದ ಕತೆಯಿದು:

"ನನ್ನ ಅಪ್ಪನದು ದೊಡ್ಡ ಜೀವ. ಅವರು ನಡೆಯುವಾಗ ಸಪ್ಪಳ ಬರುತ್ತಿತ್ತು. ಆದರೆ ತುಂಬಾ ಸಜ್ಜನ. ಯಾರೊಂದಿಗೂ ಜಗಳಮಾಡಿ ಗೊತ್ತಿಲ್ಲ. ಕೆಲಸದ ಆಳುಗಳೆಂದರೆ ತುಂಬಾ ಪ್ರೀತಿ. ಎಲ್ಲಿಯಾದರೂ ಹೋಗುವಾಗ ಅವರು ಹಾಕುತ್ತಿದ್ದ ಚರ್ಮದ ಮೆಟ್ಟಿನ ಜೋಡು ಜಿರಿ ಜಿರಿ ಎಂದು ಸದ್ದು ಮಾಡುತ್ತಿತ್ತು. ಜೋಡಿನ ಕೆಳಗೆ ಕಬ್ಬಿಣದ ಲಾಳ ಹೊರಡಿಸುತ್ತಿದ್ದರು.

ಹೀಗಾಗಿ ಅದು ಬೇಗ ಸವೆಯುತ್ತಿರಲಿಲ್ಲ. ಮತ್ತು ಜೋರಾಗಿ ಸದ್ದು ಹೊರಡಿಸುತ್ತಿತ್ತು. ರಾತ್ರಿ ಪೇಟೆಯಿಂದ ಬರುವಾಗ ಒಬ್ಬರೇ ಜೋರಾಗಿ ಮಾತಾಡಿಕೊಂಡು ಬರುತ್ತಿದ್ದರು. ಆಗ ಮನೆಯ ಹಿಂದೆ ದೊಡ್ಡ ಕಾಡು. ಹುಲಿ-ಹಂದಿಗಳ ಕಾಟ. ಅದಕ್ಕೆ ಅವರು ಅವರಷ್ಟಕ್ಕೆ ಬರುತ್ತಿದ್ದರಂತೆ, ಎಲ್ಲಿಯೇ ಹೋದರೂ ಅವರ ಜೊತೆಗೊಂದು ಚಾಕು. ರಾತ್ರಿಯಾದರೆ ಸೂಟೆ. ಆ ಸಮಯದಲ್ಲಿ ಕಳಂಜಿ ಮಲೆಕಾಡಿನತ್ರ ಯಾರೂ ಒಬ್ಬೊಬ್ಬರೇ ಹೋಗುತ್ತಿರಲ್ಲಿಲ್ಲವಂತೆ. ಒಂದು ದಿವಸ ರಾತ್ರಿ ಬರುವಾಗ ನೆತ್ತರು ಮುಜಲಿ (ಹಾವು) ಕಚ್ಚಿತು. ನನ್ನ ತಂದೆಗೆ ಮನೆಗೆ ಬಂದಿರುವುದಷ್ಟೇ ಗೊತ್ತು - ಬಾಯಲ್ಲಿ ನೊರೆ ಕಾರಿ ಸತ್ತರು. ಅವರು ಸತ್ತದ್ದು ತಿಳಿಯದಷ್ಟು ವಯಸ್ಸು ನನ್ನದು. ಹದಿಮೂರು ತುಂಬಿತ್ತು. ನಿನ್ನ ಕೊನೆಯ ಚಿಕ್ಕಪ್ಪನಿಗೆ ಆಗ ಮೂರು ವರ್ಷ. ನಿನ್ನಜ್ಜಿಯೂ ಅಷ್ಟೇ! ಒಂದೆರಡು ತಿಂಗಳಲ್ಲಿ ಅರಿಶಿನ ಮುಂಡಿಗೆಯಾಗಿ ತೀರಿಹೋದರು. ಮೊದಲೇ ನಿನ್ನಜ್ಜಿಯದು ಬಂಗಾರ ಬಣ್ಣ. ಅರಶಿನ ಮುಂಡಿಯಾಗಿ ಇಡೀ ಮೈ ಅರಶಿನ ತುಂಡಿನಂತೆ ಆಗಿತ್ತು - ಮುಟ್ಟಿದರೆ ಅರಶಿನ ಮೆತ್ತಿಕೊಳ್ಳುತ್ತದೆಯೋ ಎನ್ನುವಷ್ಟು ! ಅಜ್ಜ - ಅಜ್ಜಿಯರು ತೀರಿಹೋದಾಗ ನಮ್ಮನ್ನು ನೋಡಿಕೊಳ್ಳುವುದಕ್ಕೆಂದು ನನ್ನ ಅತ್ತೆ-ಮಾವ ಒಂದೆರಡು ವರ್ಷ ಇದ್ದರು, ಅನಂತರ ಹೊರಟುಹೋದರು. ನಿನ್ನ ಕೊನೆಯ ಚಿಕ್ಕಪ್ಪನನ್ನು ಬೆಳೆಸಿದ್ದು ನಾನೆ. ಅವನಿಗೆ ಸ್ನಾನ ಮಾಡಿಸುವುದರಿಂದ ಎಲ್ಲವೂ ನನ್ನದೇ. ನಿನ್ನ ಗೌರತ್ತೆ ಅವರ ನಂತರ ಚಿಕ್ಕಪ್ಪ, ಅನಂತ್ರ ನಿನ್ನ ಸಾವಿತ್ರಿಯತ್ತೆ ಕೊನೆಗೆ ಚಿಕ್ಕಪ್ಪ, ಸಾವಿತ್ರಿಯತ್ತೆ ಶಾಲೆಗೆ ಹೋಗುತ್ತಿದ್ದರು. ನಾನು ನಿನ್ನ ಕೊನೆಯ ಚಿಕ್ಕಪ್ಪನನ್ನು

ನೋಡಿಕೊಂಡು ಇರುತ್ತಿದ್ದೆ. ಮಧ್ಯಾಹ್ನ ಅವರು ಶಾಲೆಯಿಂದ ಬರುವ ಹೊತ್ತಿಗೆ ಅಡುಗೆ ಮಾಡಿಡುತ್ತಿದ್ದೆ." ಆದಿನ ಅಪ್ಪ ಕತೆ ಮುಗಿಸಿದ್ದರು. ಜೋಯಿಸರ ಅಂದಾಜು ಕೂಡಾ ಸರಿಯಾಯಿತು!

ಆದರೆ ನಾಡಕೋವಿಯಲ್ಲಿ ರುಂಡವೆಲ್ಲಾ ಛಿದ್ರ ಛಿದ್ರವಾಗಿ ಬಿದ್ದ ತಿಮ್ಮಯ್ಯಜ್ಜ, ಹಾವು ಕಚ್ಚಿ ಸತ್ತ ಅಜ್ಜ-ಇಬ್ಬರೂ ಐವತ್ತು ವರ್ಷ ಒಳಗಿನವರು. ತಿಮ್ಮಯ್ಯಜ್ಜ ಸತ್ತು ಬಿದ್ದಿದ್ದ ತೆಂಗಿನ ಮರದ ಬುಡದಲ್ಲಿ ರಕ್ತದ ಕಲೆಯನ್ನು ಎಷ್ಟೊಂದು ವರ್ಷ ಹುಡುಕಿದೆ? ಮಕ್ಕಳಿಲ್ಲದೆ ಸತ್ತವರು ತಿಮ್ಮಯ್ಯಜ್ಜ. ಎಳೆಯ ಮಕ್ಕಳನ್ನು ಬಿಟ್ಟು ಸತ್ತವರು ಅಜ್ಜ. ಬಾಲ್ಯದಲ್ಲಿಯೇ, ಅನಾಥರಂತೆ ಬೆಳೆದ ನನ್ನ ತಂದೆ ಚಿಕ್ಕಪ್ಪಂದಿರು. ಒಟ್ಟು ಚಿತ್ರ ನನ್ನ ಮನಸ್ಸಿನಲ್ಲಿ ಹಾಗೆಯೇ ಬೇರೂರಿ ಬಿಟ್ಟಿದೆ. ಈ ಸಂಗತಿಗಳು ನನ್ನ ಈಗಿನ ಮನಸ್ಸೆಂಬ ಮಡಿಕೆಯಲ್ಲಿ ಹಾಗೆಯೇ ಉಳಿದಿದೆ ಅನಾಥವಾಗಿ! ನಾನು ಐದನೆಯ ಕ್ಲಾಸಿಗೆ ಸೇರಬೇಕೆಂದುಕೊಳ್ಳುವಷ್ಟರಲ್ಲಿ ನಮ್ಮ ಕೂಡು ಕುಟುಂಬ ಒಡೆದು ಹೋಯಿತು. ಮನೆಯಲ್ಲಿ ಪಾಲಾಗುವುದಕ್ಕೆ ಸರಿಯಾದ ಕಾರಣವೇನು ಅಂತ ಗೊತ್ತಿಲ್ಲ. ಮನೆಯು ಪಾಲಾಗುವ ವಿಷಯ ಮಾತ್ರ ಚರ್ಚಿಸುತ್ತಿದ್ದರು.

ಯುದ್ಧದಲ್ಲಿ ವೈರಿಗಳನ್ನು ಗೆದ್ದು ಸಂಪಾದಿಸಿದ ಐಶ್ವರ್ಯವನ್ನು ಅರ್ಹರಾದ ಉತ್ತಮರಿಗೆ ದಾನಮಾಡಬೇಕು. ಅದರಿಂದಾಗುವ ಫಲ ಅಷ್ಟಿಷ್ಟಲ್ಲ. ಅದನ್ನು ಗೊತ್ತುಪಡಿಸಲು ದೇವೇಂದ್ರನಿಗೂ ಸಾಧ್ಯವಿಲ್ಲ. ದಾನ ಮಾಡುವುದು ರಾಜಧರ್ಮ. ಧೃತರಾಷ್ಟ್ರ, ನಿನ್ನ ಮಗನಿಗೆ ಈ ನೀತಿ ರಹಸ್ಯವು ತಿಳಿಯದು. (ಪದ್ಯ.11) (ವಿದುರ ನೀತಿ ಎಸ್. ರಂಗನಾಥಶರ್ಮಾ 2011 ಪುಟ.7)

ಕರಣಿಕನ ಹಗೆಗೊಂಡವಂಗೈ
ಶ್ವರಿಯ ಹಾನಿ ಚಿಕಿತ್ಸಕನನಾ
ದರಿಸದಾತಂಗಾಗದಾಯುಷ್ಯಾಭಿವೃದ್ಧಿಗಳು
ಅರಸ ಕೇಳಾಯುಷ್ಯ ಭಾಗ್ಯಗ
ಳೆರಡು ಕೆಡುವವು ತಪ್ಪದವನೀ
ಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ

(ಪದ್ಯ.18) ಶಾನುಭೋಗನೊಡನೆ ಹಗೆತನವನ್ನು ಬೆಳೆಸಿದರೆ ಧನದ ಹಾನಿ! ವೈದ್ಯನೊಡನೆ ವೈರವನ್ನು ಬೆಳೆಸಿದರೆ ಆಯುಷ್ಯದ ಹಾನಿ! ರಾಜ, ಸಜ್ಜನರನನು ದ್ವೇಷಿಸಿದರೆ ಧನ ಆಯುಷ್ಯ ಇವೆರಡೂ ಹಾನಿಗೆ ಒಳಗಾಗುತ್ತವೆ. ಆದ್ದರಿಂದ ಸಜ್ಜನರೊಡನೆ ದ್ವೇಷವನ್ನು ಬೆಳೆಸಬಾರದು. (ವಿದುರ ನೀತಿ ಎಸ್. ರಂಗನಾಥಶರ್ಮಾ 2011 ಪುಟ.9)

* * * * *

ನನ್ನ ಜೀವನದಲ್ಲಿ ನಡೆದ ದೊಡ್ಡ ದುರಂತವೆಂದರೆ ತಂದೆಯ ಸಾವು ಅದರಿಂದ ನಾನು ಚೇತರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ತಂದೆಯ ಹೆಣವನ್ನು ನೋಡುವುದು ಅಸಾಧ್ಯವೆಂದು ಅನಿಸಿತು ಒಂದು ಕ್ಷಣ. ನನಗೆ ಏನು ಮಾಡುವುದು ಎಂದು ತಿಳಿಯಲಿಲ್ಲ. ಒಂದರೆ ಘಳಿಗೆ ತಬ್ಬಿಬ್ಬುಗೊಂಡೆ. ಸಾವು ತುಂಬಾ ಭಯಾನಕವೆಂದುಕೊಂಡೆ: ಆದರೆ ತಂದೆಯ ಸಾವು ಮತ್ತು ಸಾಂತು ಬೈದೈತಿಯು ಕಟ್ಟಿದ ಹುಲಿಯುಗುರು; ಬಾಲ್ಯದಲ್ಲಿ ನನ್ನನ್ನು ಎಳೆದು ನರಕದಲ್ಲಿ ತಳ್ಳಿ ಆಸೆ ತೋರಿಸಿ ಪಾಪಿಷ್ಠನೆಂದ ಅವಳು; ಅಪಾರ ಪ್ರೀತಿ ತೋರಿಸಿ ಅಂಗೈಯಲ್ಲಿದ್ದ ಮಿಣಿಕು ಹುಳವನ್ನು ಆಕಾಶಕ್ಕೆ ಬಿಟ್ಟ ನನ್ನ ಶಾಂಭವಿ: ನನ್ನ ಮಗುವಿನ ತಾಯಿಯಾಗಲಿದ್ದ ಶರಧಿ. ಎಲ್ಲವೂ ಒಂದಲ್ಲ ಒಂದು ದಿನ ನನ್ನನ್ನು ಚಿತೆಗಾಗಿ ಕಾದಿಟ್ಟ ಸೌದೆಗಳಾಗಬಹುದು ಎಂದು ನಾನು ಊಹಿಸಿರಲಿಲ್ಲ.

ಅಪ್ಪ ಸಾಯುವಾಗ ಗುಬ್ಬಚ್ಚಿ ಮರಿಯಂತಾಗಿದ್ದರು. ಅವರ ಕೈಬೆರಳುಗಳು ಸಪೂರವಾಗಿದ್ದವು. ಅವುಗಳಲ್ಲಿ ಮಾಂಸವಿರಲಿಲ್ಲ. ಎಲುಬಿನ ಕಡ್ಡಿಗಳು ತೆಂಗಿನ ಕಡ್ಡಿಗಳನ್ನು ಜೋಡಿಸಿದ ರೀತಿಯಲ್ಲಿದ್ದವು. ಅವರ ಬಲಗೈಯ ತರ್ಜನಿ ಬೆರಳ ಉಂಗುರ ಜಾರಿಬರುವ ಸ್ಥಿತಿಯಲ್ಲಿತ್ತು. ಅಳುತ್ತಿರುವ ತಾಯಿ, ಅಕ್ಕ ತಂಗಿಯರು; ಏನೂ ತಿಳಿಯದ ತಮ್ಮ; ಸಾಲ ಹಿಂತಿರುಗಿಸುವಂತೆ ಪೀಡಿಸಲು ಕಾಯುತ್ತಿರುವ ನಕ್ಷತ್ರಿಕರು. ಅರೆ ತೆರೆದ ತಂದೆಯ ಕಣ್ಣು ನನ್ನನ್ನು ಅಯೋಮಯನನ್ನಾಗಿಸಿತು. ಏನೇನೂ ಯೋಚಿಸಲಾಗದ ಮನೋಸ್ಥಿತಿಯಲ್ಲಿದ್ದ ನಾನು ಅಪ್ಪನ ಕೈ ಬೆರಳುಗಳನ್ನು ಹಾಗೆಯೇ ಹಿಡಿದುಕೊಂಡು ಕುಳಿತಿದ್ದೆ. ಯಾರೋ ಅಂದರು: "ಹೆಣದ ಕಣ್ಣನ್ನು ಮುಚ್ಚಿ". ತಕ್ಷಣ ನನಗೆ ಅರಿವಾಯಿತು. ನಾನೇ ತಂದೆಯ ಹೆಣದ ಕಣ್ಣನ್ನು ಮುಚ್ಚಿದೆ. ಮತ್ತೆ ಯಾರೋ ಹೇಳಿದರು, "ಹೆಣದ ಕೈಯಲ್ಲಿರುವ ಉಂಗುರ ಮತ್ತು ಕಿವಿಯ ಟಿಕ್ಕಿಯನ್ನು ತೆಗೆದು ಬಿಡಿ." ನಾನು ಖಡಾಖಂಡಿತವಾಗಿ ಎಂಬಂತೆ, 'ಬೇಡ' ಎಂದೆ. ಅದಕ್ಕೆ ಅಲ್ಲಿ ಸೇರಿದ ಹಿರಿಯರು, 'ಇಲ್ಲ. ಚಿನ್ನದ ಬೆಲೆ ನಿನಗೆ ಗೊತ್ತಿಲ್ಲ. ಅದು ಮಣ್ಣು ಸೇರುವುದು ಬೇಡ' ಎಂದರು. ತಂದೆಯು ಹೇಳಿದ ಮಾತು ನೆನಪಾಯಿತು; ಒಂದು ದಿನ ಹೇಳಿದ್ದರು– "ಈ ಉಂಗುರ ನನ್ನ ತಂದೆಯದು. ತಂದೆಯಿಂದ ನನಗೆ ಬಂದ ಬಳುವಳಿ." ತಂದೆಯ ಉಂಗುರ ತಂದೆಯೊಂದಿಗೆ ಹೋಗಲಿ ಎಂದು ಅನಿಸಿತು ನನಗೆ. ತಂದೆಯ ಹೆಣವನ್ನು ಸುಡಲು ಸಿದ್ಧತೆಯಾಗಬೇಕು; ಹೆಣಸುಡುವ ಜಾಗವೆಲ್ಲಿ ಎಂಬುದು ನಿಶ್ಚಯವಾಗಬೇಕು;– ಹೀಗೆ ಹಲವಾರು ಸಮಸ್ಯೆಗಳನ್ನು ಎದುರು ಬಂದು ನಿಂತಿವೆ. ನಾನು ಎದ್ದು ತಕ್ಷಣ ಮನೆಯ ಹಿಂದಿನ ಒಕ್ಕಲ ಗುಡಿಸಲಿನ ಹತ್ತಿರ ಹೋದೆ. 'ನಾಕು ಬೀಡಿಯಿದ್ದರೆ ಕೊಡು' ಎಂದು ಕೇಳಿದೆ. ಬೀಡಿ ಕಟ್ಟುತ್ತಿದ್ದ ಹುಡುಗಿ

ಹಸಿಯಾದ ಬೀಡಿಯನ್ನೇ ಕೊಟ್ಟಳು. ಅದನ್ನೇ ತೆಗೆದುಕೊಂಡು ಬಂದು ಬಚ್ಚಲಮನೆಯ ಒಲೆಯ ಎದುರು ಕುಳಿತುಕೊಂಡೆ. ಬಚ್ಚಲು ಮನೆಯ ಅಲ್ಯುಮಿನಿಯಂ ಹಂಡೆಯ ನೀರು ಕೊತಕೊತನೆ ಕುದಿಯುತ್ತಿತ್ತು. ಬೆಳಿಗ್ಗೆ ಅಪ್ಪನಿಗೆ ಸ್ನಾನ ಮಾಡಿಸಬೇಕಿತ್ತು. ಇಲ್ಲವೇ ಬಿಸಿನೀರಲ್ಲಿ ಬಟ್ಟೆಯನ್ನು ಅದ್ದಿ ಅವರ ಮೈಯ ಬೆವರನ್ನು ಒರೆಸಬೇಕಿತ್ತು. ಜೀವ ಹೋಗುವ ಮುನ್ನ ಅದಾಗಲಿಲ್ಲ. ಇನ್ನು ಏನಿದ್ದರೂ –ನೀರು ಬಿಸಿಯಾಗಿ ಕುದಿಯುತ್ತಿದ್ದರೂ ಅಪ್ಪನ ಜೀವವನ್ನು ಈ ನೀರಲ್ಲಿ ಸ್ನಾನ ಮಾಡಿಸಬಹುದೆ? ಅರೆಬರೆ ಹಸಿಯಾಗಿರುವ ಬೀಡಿಯನ್ನು ಕೆಂಡದ ಮೇಲೆ ಹಿಡಿದು ಬಿಸಿಮಾಡಿಕೊಂಡೆ. ಮುಟ್ಟಿನೋಡಿಕೊಂಡೆ. ಅನಂತರ ಬೀಡಿ ಹಚ್ಚಿ ಪುಸ ಪುಸನೆ ಹೊಗೆ ಬಿಟ್ಟೆ. ಕೊನೆಯಲ್ಲಿ ಅಳುವ ಸದ್ದು ಮಾತ್ರ. ನಾನು ಮನಸ್ಸಿನಲ್ಲಿಯೇ ಭಾವಿಸಿಕೊಂಡೆ. “ಯಾವುದೇ ಕಾರಣಕ್ಕೂ ಅಳಬಾರದು. ಆದುದಾಗಲಿ, ಎದುರಿಸಿಯೇ, ಎದುರಿಸುತ್ತೇನೆ.” ಬಚ್ಚಲ ಮನೆಯಲ್ಲಿ ದೊಡ್ಡ ಒಲೆಯ ಬಹುದೊಡ್ಡ ಸೌದೆ ರಾಶಿಗಳ ಎದುರು ಕುಳಿತು ನಾನು ಯೋಚಿಸಿದ್ದು ಏನಿದೆ ಅದು ಅನಂತರದಲ್ಲಿ ನನ್ನ ಜೀವನದುದ್ದಕ್ಕೂ ಬಂತು. –ಎದುರಿಸುವುದು?

ಆ ದಿನ ರಾತ್ರಿ ಅಪ್ಪನ ಹೆಣ ಮಲಗಿದ ಜಾಗದಲ್ಲಿ ನಾನು ಮಲಗಿದ್ದೆ; ಮಧ್ಯ ರಾತ್ರಿ ಅಪ್ಪ ಕರೆದರು– ‘ಬಾ ಮಗನೆ’ ದಡಕ್ಕನೆ ಎದ್ದೆ.

* * * * *

1992
ಡಿಸೆಂಬರ್
22

ಧರೆಯೊಳಗೆ ರವಿಮಂಡಲವನೊದೆ
ದುರವಣಿಸಿ ಹಾಯ್ದವರು ತಾವಿ
ಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದಲಿ
ಹರಣವನು ಬಿಟ್ಟವರುಗಳು ಸಂ
ಗರದೊಳಭಿಮುಖರಾಗಿ ಮರಣಾಂ
ರತವನೆಯ್ದುವರವರು ಅವನೀಪಾಲ ಕೇಳೆಂದ(19)

ಮರಣಾನಂತರದಲ್ಲಿ ಸದ್ಗತಿಯುನ್ನು ಪಡೆಯುತಕ್ಕವರು ಇಬ್ಬರು: ಸಂನ್ಯಾಸಿಯಾಗಿದ್ದು ಯೋಗಮಾರ್ಗದಲ್ಲಿ ಪ್ರಾಣವನ್ನು ಬಿಡತಕ್ಕವನು ಒಬ್ಬನು. ಯುದ್ಧಭೂಮಿಯಲ್ಲಿ ವೈರಿಗಳೊಡನೆ ಹೋರಾಡುತ್ತ ಸಾಯತಕ್ಕವನು ಇನ್ನೊಬ್ಬನು. (ಆದ್ದರಿಂದ ಕ್ಷಾತ್ರಧರ್ಮವು ಕಳಪೆಯೆಂದು ತಿಳಿಯಬೇಡ). (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.9)

"ಕೈ ನಡುಗುತ್ತಿತ್ತು. ಯಾವುದನ್ನು ಬರೆಯುತ್ತಿದ್ದಾರೆ ಅದರ ಅಕ್ಷರಗಳ ದೆಸೆಯಿಂದ  ಸ್ಪಷ್ಟ ತಿಳಿಯುತ್ತಿರಲಿಲ್ಲ. ಮಾತಾಡುವುದು ಕೂಡಾ ತುಂಬಾ ಅಸಾಧ್ಯವಾದ ವೇದನೆಯನ್ನು ಕೊಡುತ್ತಿತ್ತು. ಹತ್ತಿರ ಸುಳಿಯಲು ಜನರಿರಲಿಲ್ಲ. ನೋವು ತಡೆಯಲಾಗದೆಂದು ತಿಳಿದುಕೊಂಡು ತೆಗೆದುಕೊಂಡ ಮಾತ್ರೆಯು ಕೂಡಾ ನಾಟುತ್ತಿರಲಿಲ್ಲ.

"ಇದು ಜೀವನದ ಕೆಟ್ಟಗಳಿಗೆ ಇನ್ನು ಬದುಕುತ್ತೇನೋ ಇಲ್ಲವೋ ಸರಿಯಾಗಿ ತಿಳಿಯದು. ಜೀವನದಲ್ಲಿ ನಾನು ತಿಳಿದು ಯಾರಿಗೂ ಕೆಟ್ಟದೂ ಅಂತ ಮಾಡಿಲ್ಲ. ಕೆಟ್ಟದೂ ಅಂತ ಮಾಡುವ ಮನುಷ್ಯ ಈ ಕಾಲದಲ್ಲಿ ಚೆನ್ನಾಗಿ ಬದುಕುತ್ತಾರೆ. ಅವರಿಗೆ ಗೌರವ ಹೆಚ್ಚು." ಅಂತ ಅಸ್ಪಷ್ಟವಾದ ಅಕ್ಷರದಲ್ಲಿ ಬರೆಯಲಾಗಿತ್ತು. ಅಕ್ಷರವು ಬರೆಯಲು ಕೂಡಾ ತುಂಬಾ ಕಷ್ಟಪಡಲಾಗಿತ್ತು. ಓದುವಾಗಲೇ ಅನಿಸುತ್ತಿತ್ತು. ನನಗೆ ತಂದೆಯ ಬಗ್ಗೆ ತುಂಬಾ ಪ್ರೀತಿ, ನಾನು ತುಂಬಾ ಹಚ್ಚಿಕೊಂಡದ್ದು ತಂದೆಯನ್ನು. ಹಾಗಾಗಿ ನನಗೆ ತಂದೆಯ ಬಗ್ಗೆ ಎಷ್ಟು ಪ್ರೀತಿಯೋ ಅಷ್ಟೆ ತಂದೆಯೂ ನನ್ನನ್ನು ಪ್ರೀತಿಸುತ್ತಿದ್ದರು. ನನ್ನ ತಂದೆ ಹೆಸರುಗಳಿಸಿದ ಮಹಾನ್ ವ್ಯಕ್ತಿಯಲ್ಲ.

ಅವರ ಬಗ್ಗೆ ಮುಂದೆ ಯಾರೂ ಬರೆಯುವ ಸಾಧ್ಯತೆಯಿಲ್ಲ "ತನ್ನ ತಂದೆಯ ಬಗ್ಗೆ ನಿಶಿತ ದಿನಚರಿಯಲ್ಲಿ ಬರೆದು ಇಟ್ಟುಕೊಂಡಿದ್ದು ಶಾಂಭವಿ ಮತ್ತು ದೇವದಾಸರು ಮದುವೆಯಾಗಬೇಕಾದ ಎರಡು ವರ್ಷ ಮೊದಲು ಮತ್ತು ಅವನು ಶಾಂಭವಿ ಇನ್ನು ಪ್ರೀತಿಸುತ್ತಿದ್ದಾಳೆಂಬ ನಂಬಿಕೆಯಿದ್ದಾಗ. ಬದುಕಿ ಉಳಿಯುವ ಹಂಬಲವನ್ನು ಕಳೆದುಕೊಂಡ ಮನುಷ್ಯನ ಸ್ಥಿತಿಯು ಹೇಗಿರುತ್ತದೆ ಎಂದು ಊಹಿಸುವುದು ಕಷ್ಟ. ತಂದೆಯ ಜೀವನದಲ್ಲಿ ಒಳ್ಳೆಯ ಗಳಿಗೆಯಿತ್ತು ಎಂದು ಯಾವಾಗಲೂ ಅನಿಸುತ್ತಿರಲಿಲ್ಲ. ಮನೆಯು ಒಡೆದು ಹೋದ ರಾತ್ರಿ ಅಪ್ಪ ಗಳಗಳನೆ ಅತ್ತುಬಿಟ್ಟಿದ್ದರು. ಸಣ್ಣ ವಯಸ್ಸಿನಲ್ಲಿ ಅದೂ ಆಟವಾಡಬೇಕಾದ ವಯಸ್ಸಿನಲ್ಲಿ ಸಂಸಾರ ನೊಗ ಏರಿಸಿಕೊಂಡವನಿಗೆ ನಗು ಅರಳುವುದು; ನೆಮ್ಮದಿಯಿರುವುದು ಸಾಧ್ಯವಿರಲಿಲ್ಲ. ತಂದೆ – ತಾಯಿ ಇಬ್ಬರೂ ತೀರಿ ಹೋದ ಮೇಲೆ ಮುಂದಿನ ಕತೆಯೇನು ಅಂದ ಬುದ್ಧಿ ಯೋಚಿಸಿದ್ದು ನಿಜ. ಒಂದೆರಡು ವರ್ಷ ಸೋದರಮಾವ ಬಂದು ತೋಟ ಗೀಟ ನೋಡ್ತೇನೆ ಅಂತ ಹೇಳಿದ್ದೂ ಅಷ್ಟೇ ಸತ್ಯ. ಸೋದರ ಮಾವನ ಹೆಸರು ಸುಬ್ರಾಯ. ಅಪ್ಪನ ಅಮ್ಮನ ತಮ್ಮ ಅಂದರೆ ಅಪ್ಪನಿಗೆ ಸೋದರ ಮಾವನಾದರೂ ಅಪ್ಪನಿಗಿಂತಲೂ ಒಂದು ಐದಾರು ವರ್ಷ ಹಿರಿಯರು. ಸಜ್ಜನ ಮತ್ತು ಸಾಧು ಸ್ವಭಾವದವರು. ಅವರಿಗೆ "ಸೂಜಿ ಸುಬ್ರಾಯ" ಅಂತ ಹೆಸರು ಬಂತು. ಅವರ ಹೆಂಡತಿಯ ಹೆಸರು ಲಕ್ಷ್ಮಿ. "ಮಂತು ಕೈ ಲಕ್ಷ್ಮಿ" ಅಂತ ಕರೆಯುತ್ತಿದ್ದರು. ರವಿಕೆಯನ್ನು ಕೈಯು ಮೊಸರು ಕಡೆಯುವ ಮಂತಿನ ಬುರುಡೆ ತರಹದ ವಿನ್ಯಾಸ ಮಾಡಿಸುತ್ತಿದ್ದರು. ಆ ಡಿಸೈನ್‌ನ ರವಿಕೆಯನ್ನೇ ಸದಾ ಹಾಕುತ್ತಿದ್ದರು. ಮಾವಿನ ಮಿಡಿಯ ಉಪ್ಪಿನಕಾಯಿ ಹಾಕುವುದರಲ್ಲಿ ಅವರಿಗೆ ವಿಶೇಷ ಪರಿಣತಿ. ಮಿಡಿ ಉಪ್ಪಿನಕಾಯಿ ಹಾಕುವುದರಲ್ಲಿ ಅವರಿಗಿದ್ದ ಪರಿಣತಿಯಿಂದಾಗಿ ಅವರೆದುರು ಉಪ್ಪಿನಕಾಯಿಗೆ ಗೋಗೆರೆಯುವವರು ಬಹಳ ಜನವಿದ್ದರು. ಎಷ್ಟು ಉಪ್ಪು ನೀರು ಬೇಕು ಎಷ್ಟು ಖಾರ ಬೇಕು. ಉಪ್ಪಿನ ಕಾಯಿಗೆ ಸಾಸಿವೆಯನ್ನು ಎಷ್ಟು ರುಬ್ಬಿ ಹಾಕಬೇಕೆಂಬುದು ಅವರಿಗಲ್ಲದೆ ಬೇರಾರಿಗೂ ಗೊತ್ತಾಗುತ್ತಿರಲಿಲ್ಲ. ಅವರು ಸಾಯುವ ತನಕವೂ ತಮ್ಮ ರವಿಕೆಯ ವಿನ್ಯಾಸವನ್ನು ಬದಲಾಯಿಸಲಿಲ್ಲ. ಉಪ್ಪಿನಕಾಯಿ ಹಾಕುವುದನ್ನು ಬಿಡಲಿಲ್ಲ. ಕಾಯಿಯಲ್ಲಿ ಅತ್ಯಂತ ಹುಳಿಯಾಗಿರುವ ಮಾವಿನ ಮಿಡಿಯು ಉಪ್ಪಿನಕಾಯಿ ಹಾಕಿದರೆ ಅದರ ರುಚಿಯೇ ಬೇರೆ. ಹುಳಿ ಮತ್ತು ಒಗರು ಎರಡೂ ಇರುವ ಮಾವಿನ ಮಿಡಿ ಉಪ್ಪು ನೀರಲ್ಲಿ ಮಿಂದು ಮಿಂದೂ ಬಾಡಿ ಹೋದ ಮೇಲೆ ಅದನ್ನು ಉಪ್ಪಿನ ಕಾಯಿ ಹಾಕಬೇಕು. ಅದಕ್ಕೆ ಹದ ಅಂತ ಬರುವುದು ಆವಾಗ ಎಂದು ಹೇಳುತ್ತಿದ್ದರು. ಹೀಗೆ ಹೇಳುವಾಗ ಅವರಿಗೆ ಅದು ಹೆಮ್ಮೆಯದೆನ್ನಿಸುತ್ತಿತ್ತು.

ತಂದೆಯ ಕೊನೆಯ ತಮ್ಮ ಆಗ ಸಣ್ಣ ವಯಸ್ಸಿನಲ್ಲಿ ತುಂಟನೆಂದರೆ ಬಹು ತುಂಟನಂತೆ. ಒಂಚೂರು ಹೇಳಿದ್ದೂ ಕೇಳುತ್ತಿರಲಿಲ್ಲವಂತೆ. ಅವರು ತಂಟೆ ಏನೇನು ಮಾಡುತ್ತಿದ್ದರು ಅಂತ ಹೇಳುವುದು ಕಷ್ಟ. ಈಸಿ ಚೆಯರಿನ ಕೋಲು ತೆಗೆದಿಡುವುದು ಅವರ ತುಂಟತನದ ಒಂದು ಸಾಕ್ಷಿ. ಒಂದು ದಿನ ತೋಟ ಸುತ್ತಾಡಿ ಬಂದು ಸುಬ್ರಾಯರು ಈಸಿ ಚೆಯರಿನ ಹಿಂಬದಿಯ ಕೋಲು ತೆಗೆದದ್ದು ತಿಳಿಯದೆ ಕುಳಿತರಂತೆ, ಅವರು ಆ ದಿನ ಬಿದ್ದಾಗ ಚಿಕ್ಕಪ್ಪ ಬಿದ್ದು ಬಿದ್ದು ನಗಾಡಿದರಂತೆ. ಆದರೆ ಸುಬ್ರಾಯರು ಚಿಕ್ಕಪ್ಪನಿಗೆ ಒಂಚೂರು ಬೈಯಲಿಲ್ಲ. ತಂದೆ ತಾಯಿಯಿಲ್ಲದ ಮಕ್ಕಳನ್ನು ಬೈದು ನಾನು ಯಾವ ನರಕಕ್ಕೆ ಹೋಗಲಿ ಎಂದು ಹೇಳುತ್ತಿದ್ದಾರಂತೆ.

ಒಂದು ದಿನ ಮರದ ಮಂಚಕ್ಕೆ ಒಂದು ಸೂಜಿ ಚುಚ್ಚಿ ಇಟ್ಟಿದ್ದರು ಚಿಕ್ಕಪ್ಪ. ಸುಬ್ರಾಯರು ಬಂದು ಮಂಚದ ಒಂದು ಭಾಗದಲ್ಲಿ ಕುಳಿತರು. ಸೂಜಿ ಕುಂಡೆಗೆ ಚುಚ್ಚಿತು. ಕುಂಡೆಯ ಮಾಂಸ ಖಂಡವನ್ನು ಆಪರೇಶನ್ ಮಾಡಿ ಸೂಜಿ ತೆಗೆಯಬೇಕಾಯಿತಂತೆ. ಅದಕ್ಕೆ ಅವರಿಗೆ ಸೂಜಿ ಸುಬ್ರಾಯರು ಅಂತ ಹೆಸರು ಬಂತು. ಒಂದೆರಡು ವರ್ಷ ತಂದೆ ತಾಯಿ ಇಲ್ಲದ ಮಕ್ಕಳನ್ನು ನೋಡಿ ಅನಂತರ ನನ್ನ ಅಪ್ಪನಿಗೆ ಜವಾಬ್ದಾರಿ ಒಪ್ಪಿಸಿ ಬೇರೆ ಜಾಗ ಮಾಡಿಕೊಂಡರು. ಅಲ್ಲಿಂದ ಪ್ರಾರಂಭವಾದದ್ದು ತಂದೆಯ ಹಣೆಯ ಮೇಲೆ ಗೆರೆಗಳು. ಸರಿಯಾಗಿ ಅಡ್ಡಗೆರೆಯನ್ನು ಕೊಯ್ದಂತೆ ನಾಲ್ಕು ಗೆರೆಗಳು ಮತ್ತು ಆಗಾಗ ಕಟ್ಟುತ್ತಿರುವ ಮೂಗನ್ನು ಸಲೀಸುಗೊಳಿಸಲು ಶ್ರೀಕೃಷ್ಣನಶ್ಯಪುಡಿ. ಒಂದು ಸಣ್ಣ ಡಬ್ಬಿಯಲ್ಲಿ ನಶ್ಯ ತುಂಬಿಕೊಂಡು ಸೊಂಟದಲ್ಲಿಟ್ಟುಕೊಳ್ಳುವ ರೂಢಿ ಜೊತೆಯಲ್ಲಿ. ತಂದೆ ತಾಯಿ ಇದ್ದರೆ ತಂದೆಯ ಹಣೆಯ ರೇಖೆ ಬದಲಾಗುತ್ತಿತ್ತೋ ಏನೋ ಎಂದು ಬಹಳ ಬಾರಿ ನಿಶಿತ ಯೋಚಿಸಿದ್ದಾನೆ. ಅಕಾಲಿಕವಾಗಿ ತಂದೆಯ ಪಾಲಿಗೆ ಬಂದುದು ಒಂದು ಪಿತೃತ್ವದ ಜವಾಬ್ದಾರಿ. ಇದು ಮಿಡಿಯನ್ನು ಕೂಡಾ ಹಣ್ಣು ಮಾಡುತ್ತದೆ. ಕುಸುಗಾಯಿಯು ಒಗರನ್ನು ಮಾತ್ರ ಕೊನೆಯ ತನಕ ಹಾಗೆಯೇ ಇಟ್ಟುಕೊಳ್ಳುತ್ತದೆ. ಬಾಲ್ಯದಲ್ಲಿಯೇ ತಂದೆ – ತಾಯಿಯರನ್ನು ಕಳೆದುಕೊಂಡು ನಿಷ್ಠುರ ಅನುಭವದ ಬಿಸಿಗೆ; ಮೈ ಮನಸ್ಸು ಒಡ್ಡಿ ನಿಂತವರಿಗೆ ಇರುವುದು ಎರಡೇ ಆಯ್ಕೆ: ಒಂದೋ ಎಲ್ಲವನ್ನೂ ಧಿಕ್ಕರಿಸಿ ನಿರಂತರವಾಗಿ ಎದುರು ಇದ್ದವರಿಗೆ ಹಾಯುವುದನ್ನು ಕಲಿಯುವುದು ಮತ್ತು ಹಿಂದೆ ನಿಂತವರಿಗೆ ಘಟೀರನೆ ಒದೆಯುವುದು. ಹಾಗೆ ಮಾಡದೆ ಹೋದರೆ ತಾನು, ತನ್ನ ಆಸ್ತಿತ್ವ ಎರಡೂ ಉಳಿಯುವುದಿಲ್ಲ ಎಂಬ ಅರಿವು ಇರಬೇಕು. ಇಲ್ಲವೇ ವಿನಾಕಾರಣ ತನ್ನೊಳಗೆ ತಾನೇ ಮೃದುವಾಗಿ ವಿಧಿಯ ಎದುರು ಕೈಯೊಡ್ಡಿ ನಿಂತು ಪಾಲಿಗೆ ಬಂದುದು ಪಂಚಾಮೃತವೆಂದು ತುಳಸಿನೀರು ಕುಡಿಯುವುದು. ಅಪ್ಪ ಎರಡನೆಯ ಜಾತಿಯವರು. ಮನುಷ್ಯ ಅಹಂಕಾರವನ್ನು: ಶೋಕಿಯನ್ನು

ಕಳೆದುಕೊಂಡು ಬದುಕಬೇಕೆಂದು ಅವನಿಗೆ ಅನಿಸಿರಲಿಲ್ಲ. ಅದು ಏಕೆಂದರೆ ಅದು ಯಾವುದೂ ಅವರಲ್ಲಿ ಇರಲಿಲ್ಲ. ಬದುಕಿನಲ್ಲಿ ರುಬ್ಬಿ ಹೋದ ಮನುಷ್ಯರಲ್ಲಿ ಇರಬಹುದಾದ ಎಲ್ಲಾ ಲಕ್ಷಣಗಳೂ ಅಪ್ಪನಲ್ಲಿತ್ತು. ಒಂದಲ್ಲ ಒಂದು ಕಷ್ಟಗಳು ಒದ್ದು ಸಮಯಕ್ಕೆ ಕಾದಂತೆ ಒಂದರ ಮೇಲೆ ಒಂದು ಬಂದೆರಗಿದವು. ಅಜ್ಜ ತೀರಿ ಹೋದಾಗ, ಅಜ್ಜಿಯೂ ಇಲ್ಲವಾದಾಗ – ಜಗತ್ತಿನ ಬಗ್ಗೆ ಯಾವ ಜ್ಞಾನವೂ ಸರಿಯಾಗಿ ಮೊಳೆದೋರಲಿಲ್ಲ. ಇದ್ದ ಒಂದೆಕ್ರೆ ಅಡಕೆಯ ತೋಟ ಹಾಳುಬಿತ್ತು. ಹೊಸ ತೋಟದಲ್ಲಿ ಅಡಿಕೆಯ ಬುಡ ಬಿಡಿಸುವವರಿಲ್ಲ. ಅಡಿಕೆ ಹೆಕ್ಕುವವರಿಲ್ಲ. ಒಲೆಯ ಮುಂದೆ ಮೂರೂ ಹೊತ್ತು ಕುಳಿತುಕೊಳ್ಳಬೇಕು ಅಡುಗೆ ಮಾಡುವುದು, ನೆಲ ಒರೆಸುವುದು, ಬಟ್ಟೆ ಒಗೆಯುವುದರಲ್ಲಿ ಕಳೆದುಹೋದ ಕಾಲವನ್ನು ಲೆಕ್ಕ ಹಾಕುವುದು ಕಷ್ಟ. ಮುಂದೆ ಎಲ್ಲಾ ಸಮಸ್ಯೆಗಳು ಬಗೆಹರಿಯಲು ತಂದೆ ಮಾಡಿದ ಉಪಾಯವೆಂದರೆ ಹರಕೆ ಅಷ್ಟೆ! ಮನುಷ್ಯನ ಶಕ್ತಿಯನ್ನು ಮೀರಿದ ದೈವಕ್ಕೆ ಮುಖ ಮಾಡಿ ನಿಂತ ತಂದೆಗೆ ಏನೇನು ಅನುಭವಗಳಾದವು ಅದನ್ನು ಪೂರ್ತಿಯಾಗಿ ದಾಖಲಿಸುವುದು ಅಸಾಧ್ಯ. ತಂದೆಯ ಜೀವನದ ಚರಿತ್ರೆಯ ಕೆಲವು ಭಾಗಗಳು ತನ್ನ ಅರಿವಿಗೆ ಬಂದ ಮೇಲೆ ತಾನು ನಿರೀಶ್ವರವಾದಿಯಾದೆ, ಜಾತಿಯ ಬಳ್ಳಿಯನ್ನು ಕತ್ತರಿಸಿದೆ. ಅದು ಅಪ್ಪನಿಂದ ಕಲಿತೆ. ಅಪ್ಪನಿಗೆ ಇದ್ದ ಸಜ್ಜನಿಕೆಯನ್ನು ದುರ್ಬಳಕೆ ಮಾಡಿಕೊಂಡ ಮನುಷ್ಯರಿಂದಾಗಿ ತಾನು ನಿಷ್ಠುರವಾದಿಯಾಗಬೇಕಾಗಿ ಬಂತು ಎಂದು ನಿಶಿತ ಯೋಚಿಸಿದ.

ತಂದೆಯ ಬಗೆಗಿನ ಕೆಲವು ಮರೆಯಲಾಗದ ಚಿತ್ರಗಳು ಅಗ್ಗಿಷ್ಟಿಕೆಯಂತೆ ಒಳಗೆ ಬೆಂಕಿಯ ಕಾವು ಮೂಡಿಸುತ್ತದೆ; ಅದರಿಂದ ತಪ್ಪಿಸಿಕೊಳ್ಳುವುದು ಕಷ್ಟವೆಂದು ಬೇರಾರಿಗೂ ಅಲ್ಲ ಸ್ವತಃ ನಿಶಿತನಿಗೂ ಗೊತ್ತು.

ಅಂದು ಶುಕ್ರವಾರ ಮಾಚಣ್ಣನ ಮನೆಯಲ್ಲಿ ಶಕ್ತಿ ಅಮ್ಮನವರ ಪೂಜೆ. ಶಕ್ತಿ ಅಮ್ಮನವರ ಪೂಜೆ ಎಂದರೆ ಅದು ಹಗಲಲ್ಲ, ಮಧ್ಯರಾತ್ರಿ ಹನ್ನೆರಡು ಗಂಟೆಯಲ್ಲದೆ ಪೂಜೆ ಮುಗಿಯುವಂತಿಲ್ಲ. ಪೂಜೆಯು ಅತ್ಯಂತ ರಹಸ್ಯವಾಗಿ ನಡೆಯುತ್ತಿತ್ತು. ಅಮ್ಮನವರ ಪೂಜೆ ಎಂದರೆ ಶಕ್ತಿ ಅಮ್ಮನವರ ಪೂಜೆ; ದೇವಿ ಪೂಜೆ ಎಂದು ಕರೆಯುತ್ತಿದ್ದರು. ಯಾರಾದರೂ ಬಾಳೆಯೆಲೆ ಕೊಯ್ಯುವಾಗ; ಅದರಲ್ಲಿ ಕೇಪುಳದ(ಸ್ಕಾರ)ಹೂವನ್ನೂ ಕೊಯ್ಯುವಾಗ ಯಾಕೆ ಬಾಳೆ? ಎಂದು ಕೇಳಿದರೆ "ಪೂಜೆ"ಗೆ ಅಂತ ಹೇಳಬೇಕೇ ಹೊರತು, ಯಾವ ಪೂಜೆ ಅಂತ ಹೇಳಲೇಬಾರದು. ಯಾವ ಮನೆತನದಲ್ಲಿ ಶಕ್ತಿ ಅಮ್ಮನವರ ಪೂಜೆ ಇದೆಯೋ ಅವರಿಗೆ ಮಾತ್ರ ಪೂಜೆಯ ಹೇಳಿಕೆ ಇರುತ್ತಿತ್ತು. ಪೂಜೆಗೆ ಇದ್ದ ನೆಂಟರಿಸ್ಟರಿಗೆ ಹೇಳುವ ಕ್ರಮವಿಲ್ಲ. ಅಮ್ಮನವರ ಪೂಜೆ ಇರುವ ಕುಟುಂಬದ ಹೆಣ್ಣನ್ನು ಬೇರೆಯವರ ಕುಟುಂಬಕ್ಕೆ

ಕೊಟ್ಟರೆ ಅವಳಿಗೂ ಪ್ರವೇಶವಿಲ್ಲ. ಮಕ್ಕಳಿಗೂ ಶಕ್ತಿ ಅಮ್ಮನವರ ಪೂಜೆಯ ರಹಸ್ಯ ತಿಳಿಯುತ್ತಿರಲಿಲ್ಲ. ಅದೂ ನಿಗೂಢವಾಗಿತ್ತು. ನೂರೆಂಟು ಜೋಡಿ ಕಿಸ್ಕಾರದ ಅಗತ್ಯವಿದ್ದುದರಿಂದ ಆ ಹೂವನ್ನು ಹುಡುಕಿಕೊಂಡು ಹೋಗುವುದು; ಗುಡ್ಡ ಗುಡ್ಡ ತಿರುಗುವುದು ಮಾತ್ರ ನಮಗೆ ತುಂಬಾ ಖುಶಿ ತರುತ್ತಿತ್ತು. ಬಲಿತ ಕೇಪುಳ ಹಣ್ಣೆಂದರೆ ಬಲು ರುಚಿ. ಕೇಪುಳ ಹಣ್ಣನ್ನು ಬಾಯಲ್ಲಿಟ್ಟುಕೊಳ್ಳುವುದು ಮತ್ತು ಅದರ ಹೂ ಕೊಯ್ಯುವುದು ನಮಗೆ ಆಗ ಬಹಳ ಇಷ್ಟ. ಯಾರು ಹೆಚ್ಚು ಹೂ ಕೊಯ್ಯುತ್ತಾರೆನ್ನುವುದಕ್ಕೆ ನಮ್ಮಲ್ಲಿ ಸ್ಪರ್ಧೆ ಏರ್ಪಡುತ್ತಿತ್ತು. ಯಾವಾಗಲೂ ಸೋಲು ಉಣ್ಣುವವನು ನಾನು. ಸೋತುದಕ್ಕೆ ಯಾವ ಕಾರಣವಾದರೂ ಹೇಳಿ ಜಗಳ ತೆಗೆದು ಅರ್ಧದಿಂದ ಓಡಿ ಬರುತ್ತಿದ್ದೆ. ಯಾಕೆಂದರೆ ತಿನ್ನುವಷ್ಟು ಕಿಸ್ಕಾರ ಹಣ್ಣು ಸಿಕ್ಕಿದ ಮೇಲೆ ನನಗೆ ಏನು ಕೆಲಸ? ಕಾಲು ಕೆರೆದು ಸಣ್ಣ ಯುದ್ಧ ಮಾಡಿ ಮನೆಗೆ ಓಡಿ ಯುದ್ಧದ ಸಕಾರಣವನ್ನು ಉಪ್ಪು, ಕಾರ ಹಚ್ಚಿ ಹೇಳುತ್ತಿದ್ದೆ. ಆದರೆ ಅದು ಉಪಯೋಗಕ್ಕೆ ಬರುತ್ತಿರಲಿಲ್ಲ. ಯಾಕೆಂದರೆ ಉಳಿದವರು ಕಿಸ್ಕಾರ ಹೂ ಕೊಯ್ಯುವುದೆಂದರೆ ಪವಿತ್ರ ಕೆಲಸವೆಂದೇ ನಂಬಿದ್ದರು.

ಶಕ್ತಿಯಮ್ಮನವರ ಪೂಜೆ ಎಂದರೆ ಆ ದಿನ ರಾತ್ರಿ ಆ ಮನೆತನಕ್ಕೆ ಸಂಬಂಧಿಸಿದವರು, ಹಿಂದಿನಿಂದಲೂ ಆ ಪೂಜೆಯನ್ನು ಮಾಡಿಕೊಂಡು ಬಂದವರು; ಭಾಗವಹಿಸುತ್ತಿದ್ದರು ಪ್ರಸಾದ ರೂಪವಾಗಿ ಅಕ್ಕಿಯಿಂದ ತಯಾರಿಸಿದ ವಿಶೇಷ ತಿಂಡಿ ಮತ್ತು ಬಾಳೆಕಾಯಿಯ ಸಾಂಬಾರು ಅಥವಾ ಆಲೂಗಡ್ಡೆಯ ಪದಾರ್ಥ ಸೇವಿಸುತ್ತಿದ್ದರು. ಮಕ್ಕಳಿಗೆ ಆಲೂಗಡ್ಡೆಯ ಪದಾರ್ಥವೆಂದರೆ ತುಂಬಾ ಇಷ್ಟ. ಬಟಾಣಿಯನ್ನು ಹೆಚ್ಚು ತಿನ್ನಬೇಡಿ. ಹೂಸು ಬಿಡುತ್ತೀರಿ ಅದು ವಾಯು ಅಂದರೆ ಯಾರು ಕೇಳಿಸಿಕೊಳ್ಳುತ್ತಿರಲಿಲ್ಲ. ಬಟಾಣಿಯನ್ನು ತಿನ್ನುವುದು ದೊಡ್ಡದೋ ಹೂಸು ಬಿಡುವುದು ದೊಡ್ಡದೊ? ಅದೂ ಅಲ್ಲದೆ ಯಾರು ಇಲ್ಲದ ಜಾಗ ನೋಡಿ ಹೂಸು ಬಿಟ್ಟರಾಯಿತು. ಆ ಮೇಲೆ, ಹೂಸು ಬಿಟ್ಟವರಾರು?

ಕಾಸು ಕೊಟ್ಟವರಾರು

ನನಗೂ ದೇವರಿಗೂ ಒಂದೇ ಮಾತು"

ಅಂತ ಹೇಳಿ ಮೊದಲು ಮಾತಾಡುತ್ತಾರೋ ಅವರೇ ಹೂಸು ಬಿಟ್ಟದ್ದು ಅಂತ ಸಾರಿದರೆ ಸರಿಯಾಯಿತು.

ದೇವಿಯ ಪೂಜೆಯೆಂದರೆ ಅದು ಅತ್ಯಂತ ರಹಸ್ಯವಾಗಿ ನಡೆಯುವಂತದ್ದು. ಹಿಂದೆ ಬಿಳಿಯ ದೊರೆಗಳು ಆಳುತ್ತಿದ್ದಾಗ ಶಕ್ತಿಯಮ್ಮನವರ ಪೂಜೆಯ ಮಧ್ಯರಾತ್ರಿಯ ಅನಂತರ ನಡೆಯುತ್ತಿತ್ತಂತೆ. ಆ ಕಾಲದಲ್ಲಿ ಪೂಜೆಯು ಹನ್ನೆರಡು ಗಂಟೆಗೆ

ನಡೆಯುತ್ತಿತ್ತಂತೆ. ಪೂಜೆಯ ಕಾರ್ಯದಲ್ಲಿ ಭಾಗವಹಿಸುವ ಮನೆತನದವರು ಪೂಜೆ ನಡೆಯುವ ಮನೆಯಲ್ಲಿ ಸೇರುತ್ತಿದ್ದುದೇ ಹನ್ನೆರಡು ಗಂಟೆ ರಾತ್ರಿಯ ವೇಳೆಯಲ್ಲಿ. ಕತ್ತಲೆಯಲ್ಲಿಯೇ ಅವರೆಲ್ಲರು ಬಂದು ಸೇರುತ್ತಿದ್ದರು. ಚಾವಡಿಯಲ್ಲಿ ಬೆಳಕು ಇಟ್ಟುಕೊಳ್ಳುತ್ತಿರಲಿಲ್ಲ ಮತ್ತು ಚಾವಡಿಗೆ ಬಾಗಿಲು ಇದ್ದವರು ಬಾಗಿಲು ಹಾಕಿಕೊಂಡು ಬಿಡುತ್ತಿದ್ದರಂತೆ. ಏನು ರಹಸ್ಯವಾದ ಚಟುವಟಿಕೆಯನ್ನು ಕೆಲವು ಬ್ರಾಹ್ಮಣರು ಮಾಡುತ್ತಿದ್ದರೆಂದು ತಿಳಿದ ಕಂಪನಿಯ ದೊರೆಗಳು ಬಂಟ್ವಾಳದಲ್ಲಿ ಮೊಕ್ಕಂ ಹೂಡಿದವರು ಬ್ರಾಹ್ಮಣರ ಪುರೋಹಿತರನ್ನು ಕರೆಸಿದರಂತೆ. ಪುರೋಹಿತರು ಅದು ನಮ್ಮ ಪೂಜೆಯ ಕಾರ್ಯ. ಕಂಪೆನಿ ಸರ್ಕಾರದ ವಿರುದ್ಧದ ಚಟುವಟಿಕೆಯಲ್ಲ ಎಂದು ವಿವರಿಸಿ ಹೇಳಿದ ಮೇಲೆ ಅವರಿಗೆ ನಂಬಿಕೆ ಬಂತು ಅಂತ ಊರವರು ಹೇಳುತ್ತಾರೆ. ಪೂಜೆಯ ಹೆಸರೆತ್ತಿ ಹೇಳುವುದು ಅಮ್ಮನವರ ಶಾಪಕ್ಕೆ ಕಾರಣವಾಗಬಹುದೆಂದು ಎಲ್ಲರೂ ಭಯಪಡುತ್ತಿದ್ದರು.

ರಾತ್ರಿ ಅಮ್ಮನವರ ಪೂಜೆಯನ್ನು ಮಾಡುತ್ತಿದ್ದುದು ಪುರೋಹಿತರು. ಪೂಜೆಯಲ್ಲಿ ಏನೇನು ನಡೆಯುತ್ತದೆ ಎಂದು ತಿಳಿಯುತ್ತಿರಲಿಲ್ಲ. ಒಂದು ಸಾರಿ ಮಾತ್ರ ರಾತ್ರಿ ಮಾಚಣ್ಣನವರ ಮನೆಯಲ್ಲಿ ಪೂಜೆ ನಡೆಯುವಾಗ ದೊಪ್ಪಯಮ್ಮನನ್ನು ಪುರೋಹಿತರು ಕರೆಯುವರು. ಅವರು ದೇವರು ಕೋಣೆಯ ಬಾಗಿಲು ಹಾಕಿಕೊಂಡರು. ಅಂತಹ ಸಂದರ್ಭದಲ್ಲಿ ದೇವರ ಕೋಣೆಯತ್ರ ಮಕ್ಕಳು ಹೋಗದಂತೆ ಎಚ್ಚರವಹಿಸುತ್ತಿದ್ದರು. ನನಗೆ ಇದು ಅತ್ಯಂತ ಕುತೂಹಲಕರವಾದ ವಿಷಯವಾಗಿತ್ತು. ಮೆಲ್ಲನೆ ಬಾಗಿಲಿನ ಸಂದಿಯಲ್ಲಿ ಇಣಕಿ ನೋಡಿದೆ. ಮಾಚಣ್ಣನ ಹೆಂಡತಿಯ ಪಾದಪೂಜೆ ಮಾಡಿದರು. ಇಷ್ಟು ನೋಡುತ್ತಿರುವಾಗ ನನ್ನ ಬೆನ್ನಿಗೆ ಪಟ್ ಅಂತ ನನ್ನ ಎರಡು ಬಿಗಿದು ಹಾಗೆಲ್ಲ ನೋಡಬಾರದು ಅಂತ ಹೇಳಿದರು. ಇದರಿಂದ ನನಗೆ ಪೂರ್ತಿ ವೀಕ್ಷಣೆಯು ಸಾಧ್ಯವಾಗಲಿಲ್ಲ. ದೊಡ್ಡವನಾದ ಮೇಲೆ ತಿಳಿಯಿತು. ಶಕ್ತಿರೂಪಿಣಿಯರಾದ ಹೆಂಗಸರನ್ನು ಪೂಜೆಮಾಡಲಾಗುತ್ತಿದೆ. ಅಮ್ಮನವರಿಗೆ ಮದ್ಯ ಮಾಂಸದ ನೈವೇದ್ಯವಾಗಬೇಕು. ನೈವೇದ್ಯಕ್ಕೆ ಕೋಳಿ ಕುಯ್ಯುವ ಕೆಲಸ ಸಾಮಾನ್ಯವಾಗಿ ಚಂದುನಾಯ್ಕನಿಗೆ. ನೈವೇದ್ಯಕ್ಕೆ ಬೇಕಾದ ಒಳ್ಳೆಯ ಹುಂಜವನ್ನು ಅವನು ಗುಟ್ಟಾಗಿ ಆಯ್ಕೆಮಾಡಿ ಇರಿಸಿಕೊಳ್ಳುತ್ತಿದ್ದ. ನೈವೇದ್ಯವಾದ ಮೇಲೆ ಕೋಳಿಯ ಬಲಿಯಾಗಲಿ; ಅವರ ರುಚಿಯಾಗಲಿ ಗೊತ್ತಿಲ್ಲವಾದುದ್ದರಿಂದ ಚಂದುನಾಯ್ಕ ಅದಕ್ಕಾಗಿ ಬೇಕಾದ ತಂತ್ರವನ್ನು ರೂಪಿಸುತ್ತಿದ್ದ. ಚಂದುನಾಯ್ಕ ಬಲಿತ ಕೋಳಿಯು ಕಣ್ಣಿಗೆ ಬಿದ್ದರೆ ಅದರ ತಲೆಕಡಿಯುವುದು ಹೇಗೆಂದು ಯೋಚಿಸುತ್ತಿದ್ದ. ಕೋಳಿಯನ್ನು ಸಾಕಿದವರು ಅದನ್ನು ಮಾರಲು ಒಪ್ಪದಿದ್ದರೆ ಖಡಾಖಂಡಿತವಾಗಿ ಹೇಳುತ್ತಿದ್ದ, ಕೋಳಿಯು ಪೂಜೆಗಿಡುವುದು ಅದನ್ನು

ಕೊಡದಿದ್ದರೆ ನಿಮ್ಮ ಮನೆತನಕ್ಕೆ ಶಾಪ ತಗಲುತ್ತದೆ. ಕೋಳಿಯನ್ನು ಯಾವ ಪೂಜೆಯಲ್ಲಿ ಬಲಿ ಕೊಡಲಾಗುತ್ತದೆ ಎಂದು ಹೇಳುತ್ತಿರಲಿಲ್ಲ. ಕೋಳಿ ಪದಾರ್ಥ ಮಾಡಿ ಹಿಂಬಾಗಿಲಿನಲ್ಲಿ ತಂದು ಪೂಜೆಯ ವೇಳೆಗೆ ತಲುಪಿಸುತ್ತಿದ್ದ ಹಾಗೇ ಮದ್ಯವನ್ನು ತಂದುಕೊಡುವ ಕೆಲಸವು ಅವನಿಗೆ ಮದ್ಯವನ್ನು ಹೊಟ್ಟೆಗೆ ಇಳಿಸಿ ಅನಂತರ ಪೂಜೆಗೆಂದುತಂದುಕೊಡುತ್ತಿದ್ದ. ಮದ್ಯಕ್ಕೆ ಒಂದು ಚೂರು ನೀರು ಸೇರಿಸಿ ಅನಂತರ ಯಾವ ಹೆಂಗಸರಿಗೆ ಪೂಜೆ ಮಾಡಲಾಗಿದೆಯೇ ಅದೇ ಹೆಂಗಸಿಗೆ  ಮತ್ತು ಆ ಮನೆತನದ ಗಂಡಸರಿಗೆ ಒಂದೊಂದು ಸಣ್ಣ ಬೆಳ್ಳಿ ಪಾತ್ರೆಯಲ್ಲಿ  ಕುಡಿಯಲು ಕೊಡುತ್ತಿದ್ದರು. ಶಕ್ತಿಯಮ್ಮನವರ ಸೇವೆಯೂ ಈ ಕಾರಣದಿಂದ ನಮಗೆ ಕುತೂಹಲ ಕೆರಳಿಸುವ ಮಾದರಿಯದಾಗಿರುತ್ತಿತ್ತು. ನಾನು ಇದನ್ನು ನೋಡಿದ ಮೇಲೆ ಬ್ರಾಹ್ಮಣರು ಕೋಳಿ ತಿನ್ನುವುದು ಮತ್ತು ಗುಂಡು ಹಾಕುವುದು ಎರಡೂ ನಿಷಿದ್ಧವಲ್ಲವೆಂಬ ತೀರ್ಮಾನಕ್ಕೆ ಬಂದಿದ್ದೆ. ನಾನು ಶಾಂಭವಿಯು ನನ್ನನ್ನು ನಿರಾಕರಿಸಿದ ಮೇಲೆ ಈ ಸೇವೆಯು ಹೆಚ್ಚು ಉಪಯುಕ್ತವಾಗಿತ್ತು. ಸಾರಾಯಿ ಎನ್ನುವುದು ಕರುಳನ್ನು ಹಿಂಡುವ ತನಕ ಖುಶಿ ಕೊಡುತ್ತಿತ್ತು. ಅಮಲು ಎನ್ನುವುದೂ ಹೇಗೂ ಇರಬಹುದು: ಅಧಿಕಾರ; ಪ್ರೇಮ, ಕುಡಿತ, ಅಹಂಕಾರ; ಹೆಣ್ಣಿನ ಎದೆಯ ತೂರಿ, ಹೆಣ್ಣಿಗೆ ಗಂಡಿನ ಸಪಾಟಾದ ಎದೆ. ಮಾದಕದ ಮಾತು ಹೀಗೆ ಅನೇಕ. ಅಯ್ಯೋ, ಈ ಜಗತ್ತಿನಲ್ಲಿ ಎಷ್ಟೊಂದು ಅಮಲುಗಳಿವೆ? ಮದುವೆಯಾಗಿ ಹತ್ತು ವರ್ಷದ ಮಗನಿರುವ ಹೆಂಗಸಿಗೆ ನಿಮಗೆ ಇಷ್ಟು ದೊಡ್ಡ ಮಗನಿದ್ದಾನಾ? ಅಂತ ಕೇಳಿ  ನೋಡಿ ಎಷ್ಟು ಬೇಗ ಆ ಹೆಂಗಸಿಗೆ ಅಮಲೇರುತ್ತದೆ? ಅಯ್ಯೋ, ನಿಮಗೆ ಅಂಥ ಅನಾಗರಿಕ ಗಂಡನಾ? ಅಂತ ತರಗತಿಗೆ ಹೇಳಿ ಇದ್ದಕ್ಕಿದ್ದಂತೆ ಅವಳಿಗೆ ಅಮಲೇರುತ್ತೆ – ಅಂತ ಈಗ ಅನಿಸುತ್ತದೆ. ನನ್ನ ವಿಕ್ಷಿಪ್ತವೆನ್ನಬಹುದಾದ ಚರಿತ್ರೆಯ ಪುಟಗಳಲ್ಲಿ ಇಂಥವರು ಬಹಳ ಜನರಿದ್ದಾರೆ ಹದ್ದುಗಳಂತೆ, ಇಲಿಗಳಂತೆ, ಹಾರಿಹೋಗುವ ಕಾಗೆಗಳಂತೆ. ಕೆಲವರು ಮಾಂಸಕ್ಕೆ ಕಾಯುತ್ತಾರೆ. ಕೆಲವರು ಇಲಿ – ಹೆಗ್ಗಣಗಳಂತೆ ಬಿಲದೊಳಗೆ ಇಳಿದುಬರುತ್ತಾರೆ. ಕಾಗೆಗಳಂತೆ ಹಾರಿ ಯಾರದೋ ಮನೆಯ ಮಾಡಿನ ಛಾವಣಿಯಲ್ಲಿ ಕುಳಿತು ಕ್ಯಾ. ಕ್ಯಾ ಅಂತೆನ್ನುತ್ತಾರೆ. ಯುದ್ಧಕ್ಕೆ ಕಾಯುತ್ತಾರೆ.

ವಿದುರನು ಯುದ್ಧನೀತಿಯನ್ನು ವಿವರಿಸುವಾಗ ಹೀಗೆ ಹೇಳುತ್ತಾನೆ.
ಸುರರ ಮೇಳದಲಾಡುವವರಿ
ಬ್ಬರು ಕಣಾ ಪ್ರಭುವಾಗಿಯು ಕ್ಷಮೆ
ವೆರಸಿದವನು ದರಿದ್ರನಾಗಿಯು ದಾನಿಯೆನಿಸುವನು
ಅರಿದೆನಿಸದತಿಬಲನ ಧರ್ಮೋ

**ತ್ಕರುಷ ದುರ್ಬಲಯುತನ ಸ್ವೈರಣಿ**
**ಸರಿಸವೆನಿಸದು ರಾಯ ಚಿತ್ತೈಸೆಂದನಾ ವಿದುರ(21)**

**ದಂಡಿಸಲು ಸಾಮರ್ಥ್ಯವಿದ್ದರೂ ಯಾವನು ಕ್ಷಮಿಸುವನೋ, ದರಿದ್ರನಾಗಿದರೂ ಯಾವನು ದಾನಮಾಡುವನೋ ಇವರಿಬ್ಬರು ಸ್ವರ್ಗದಲ್ಲಿ ದೇವತೆಗಳೊಡನೆ ನಲಿಯುತ್ತಾರೆ. ಧನವಂತನು ಮಾಡುವ ದಾನವಾಗಲಿ ಕೈಲಾಗದವನ ಸ್ವೈರಣೆಯಾಗಲಿ ಹೆಚ್ಚಿನದಲ್ಲ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.11)**

ಒಂದು ದಿನ ನನ್ನ ಅಪ್ಪ ಅನುಭವಿಸಿದ ದೊಡ್ಡ ಅವಮಾನದ ಸಂದರ್ಭವೊಂದು ನಡೆಯಿತು. ಅದು ಜರುಗಿದ್ದು ಮಾಚಣ್ಣನ ಮನೆಯಲ್ಲಿ. ಆಗ ಮಾಚಣ್ಣನ ದರ್ಬಾರು ಜೋರಾಗಿ ನಡೆಯುತ್ತಿತ್ತು ದುಡ್ಡು ಮತ್ತು ನೀರು ಅವೆರಡರ ವ್ಯತ್ಯಾಸ ಅವನಿಗೆ ಇರಲಿಲ್ಲ. ಸುಬ್ಬಣ್ಣನ ಜೊತೆಗಿನ ದೋಸ್ತಿಯೂ ಹೆಚ್ಚಾಗಿ ಅವರಿಬ್ಬರೂ ಗಳಸ್ಯಕಂಠಸ್ಯರಾದ ಕಾಲವದು. ಅವರಿಬ್ಬರ ನಡುವಣ ವಿಶ್ವಾಸ ಎಷ್ಟೊಂದು ತೀವ್ರವಾಗಿತ್ತೆಂದರೆ ಮಾಚಣ್ಣ ಕಡ್ಡಿಯನ್ನು ತೆಗೆದಿಡಬೇಕೆಂದರೆ ಅದಕ್ಕೆ ಬಡ್ಡಿ ಸುಬ್ಬಣ್ಣನ ಒಪ್ಪಿಗೆ ಬೇಕು. ಈವತ್ತು ನಮ್ಮ ಮನೆಯಲ್ಲಿ ಹೆಗ್ಗಣ ಬಿದ್ದಿತು. ಎಂದು ಹೇಳುವ ಮಟ್ಟಿಗಿನ ಸಲುಗಿಯಿದ್ದ ಕಾಲವದು. ಸುಬ್ಬಣ್ಣ, ಈವತ್ತು ಹೆಂಡತಿ ಮುಟ್ಟು. ಚೆಂಬು ಕವುಚಿ ಇಟ್ಟು ಬಿಟ್ಟಿದ್ದಾಳೆ. ಎಂದು ಹೇಳುತ್ತಿದ್ದ 'ಹೌದನಾ ಮಾರಾಯ, ನಿನ್ನೆ ಮನೆಗೆ ಹೋದಾಗ ರಾತ್ರಿ ಒಂಭತ್ತು ಗಂಟೆ. ದಾರಿಯಲ್ಲಿ ಹೋಗುವಾಗ ಏನೋ ಯೋಚನೆ ಮಾಡ್ತಾ ಹೋಗಿದ್ದೆ. ಮನೆಗೆ ಹೋದರೆ ನಮ್ಮ ಲಕ್ಷ್ಮಿ ಚೆಂಬು ಕವುಚಿಟ್ಟು ಬಿಟ್ಟಿದ್ದಾಳೆ. ಏನು ಮಾಡುವುದು? ರಾತ್ರಿ ಮಲಗುವಾಗ ನನಗಂತೂ ನಮಃ ಶಿವಾಯಮಂತ್ರ ಮಾತ್ರ ಉಳಿಯಿತು.' ಎಂದು ಸುಬ್ಬಣ್ಣ ಹೇಳುತ್ತಿದ್ದ ಸುಬ್ಬಣ್ಣ ತನ್ನ ಹೆಂಡತಿಯನ್ನು ಲಕ್ಷ್ಮೀಯೆಂಬ ಬಹುವಚನ ಪ್ರಯೋಗದ ಮೂಲಕ ಹೇಳುತ್ತಿದ್ದರೂ ಅದಕ್ಕೆ ವಿಶೇಷ ಅರ್ಥವಿರುತ್ತಿರಲಿಲ್ಲ.

ಮಾಚಣ್ಣನ ಮನೆಯಲ್ಲಿ ರಾತ್ರಿಯ ಪೂಜೆ. ಆ ದಿನ ಮಕ್ಕಳೆಲ್ಲರೂ ಹೂ ಕ್ಕೊದು, ಬರಬೇಕೆಂದು ಹೇಳಿದ್ದ ಮಕ್ಕಳೆಲ್ಲಾ ಕಿಸ್ಕಾರ ಹೂಕೊಯ್ದು ಕೊಡಬೇಕು. ಯಾರೂ ಹೆಚ್ಚು ಹೂ ಕೊಯ್ದು ಕೊಡುತ್ತಾರೋ, ಅವರಿಗೆ ಒಂದೊಂದು ಚಾಕಲೇಟು ಕೊಡ್ತೇನೆ. ಆ ದಿನಗಳಲ್ಲಿ ಚಾಕಲೇಟು ಎಂದರೆ ನಮಗೆಲ್ಲಾ ತುಂಬಾ ವಿಶೇಷವಾದುದು. ಹಿರಿಯರನ್ನು ಕೇಳದೆ ಹತ್ತು ಪೈಸೆಯ ಹುರಿಕಡ್ಲೆ ತೆಗೆದುಕೊಳ್ಳುವುದೇ ಅಪರಾಧವೆಂದೆನ್ನಿಸಿದ ದಿನಗಳವು. ಕಿಸ್ಕಾರವನ್ನು ಪ್ರತ್ಯೇಕ ತಟ್ಟೆಯಲ್ಲಿಡುವಾಗ ಸಂಜೆ ಆರೂವರೆ ದಾಟಿಹೋಗಿತ್ತು. ಮಾಚಣ್ಣ ಮಗನೆ ಹೆಚ್ಚು ಹೂಕ್ಕೊದುದರಿಂದ ಚಾಕಲೇಟು ನನಗೆ ಸಿಗಲಿಲ್ಲ. ಅವನು ತಿನ್ನುವುದನ್ನು ನೋಡುತ್ತಾ

ಕುಳಿತುದುದಾಯಿತು ಜೊಲ್ಲು ಸುರಿಸುತ್ತಾ. ಅನಂತರ ಮನೆಗೆ ಹೋಗಿ ಎಲ್ಲರನ್ನು ಪೂಜೆಗೆ ಕಳಿಸಿದೆ. ನಾನು ಮನೆಯಲ್ಲಿ ಉಳಿದುಕೊಂಡೆ.

ತಂದೆ ಆ ದಿನ ಎರಡು ಬಾಳೆ ಗೊನೆಯನ್ನು ಮಹಮ್ಮದ್ ಬ್ಯಾರಿಯ ಅಂಗಡಿಗೆ ಮಾರಿ ಬರುವಾಗ ರಾತ್ರಿ ಎಂಟು ಗಂಟೆ. ಮನೆಯಲ್ಲಿ ನನ್ನ ಒಬ್ಬನ ಹೊರತು ಯಾರೂ ಇಲ್ಲ. ತಂದೆ ಸ್ನಾನ ಮುಗಿಸಿ ಬಿಳಿಯ ಪಂಚೆ ಮತ್ತು ಹೆಗಲಿಗೆ ಒಂದು ಬೈರಾಸ ಹಾಕಿಕೊಂಡು ಹೊರಟರು. ಅವರ ಜೊತೆಗೆ ನಾನು, ಹೊರಡುವಾಗ ಅಪ್ಪನಿಗೆ ಹೇಳಿದೆ ಅಪ್ಪಾ ಎಲ್ಲರೂ ವೇಸ್ಟಿ ಉಟ್ಟುಕೊಂಡು (ವೇಸ್ಟಿಯೆಂದರೆ ತೆಳುವಿನ. ಅದು ಹೆಚ್ಚು ಬೆಲೆ ಬಾಳುವಂಥದ್ದು) ನೀವ್ಯಾಕೆ ಹೀಗೆ ಮಾಡ್ತಿರಾ? ಅದಕ್ಕೆ ತಂದೆ ಅಂದರು: 'ಅದನ್ನು ಕೊಂಡುಕೊಳ್ಳುವುದಕ್ಕೆ ಶಕ್ತಿ ಬೇಕು. ನೀನು ಕೆಲಸಕ್ಕೆ ಸೇರಿದ ಮೇಲೆ ನೀನೇ ಕೊಡಿಸು. ಮುಂದೆ ಈ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲ.' ಯಾಕೆಂದರೆ ನಾನು ಕೆಲಸಕ್ಕೆ ಸೇರುವ ವೇಳೆಯಲ್ಲಿ ತಂದೆಯವರು ಜೀವಂತ ಉಳಿಯಲಿಲ್ಲ.

ಮಾಚಣ್ಣನ ಮನೆಗೆ ತಲುಪಿದಾಗ ತಂದೆಯವರಿಗೆ 'ಬಾಯಾರಿಕೆ ಬೇಕಾ' ಅಂತ ಯಾರೂ ಕೇಳಲಿಲ್ಲ. ತಂದೆ ಬಾಯಿ ಬಿಟ್ಟು ಕುಡಿಯುವುದಕ್ಕೆ ಏನಾರೂ ಬೇಕಿತ್ತು. ಅಂದರು ಅದಕ್ಕೆ ಮಾಚಣ್ಣನ ಮಗ ಒಂದು ಲೋಟ ನೀರು ತಂದುಕೊಟ್ಟ. ತಂದೆಯವರು ಅವರ ಮನೆಯ ಚಾವಡಿಯಲ್ಲಿನ ಚೆಯರಿನಲ್ಲಿ ಕುಳಿತರು. ಸ್ವಲ್ಪ ಹೊತ್ತಿಗೆ ಅಲ್ಲಿಗೆ ಸುಬ್ಬಣ್ಣ ಬಂದಾಗ ಮಾಚಣ್ಣನ ಮಗ ಬಂದ: 'ನೀವು ಓ ಅಲ್ಲಿ ಕುಳಿತುಕೊಳ್ಳಿ' ಎಂದು ಹೇಳಿ ಸುಬ್ಬಣ್ಣನಿಗೆ ಚೆಯರಿನಲ್ಲಿ ಕುಳಿತುಕೊಳ್ಳಲು ಹೇಳಿದ ಮತ್ತು ಸುಬ್ಬಣ್ಣನಿಗೆ ಬಿಸಿ ಬಿಸಿಯಾದ ಕಾಫಿ ತಂದು ಕೊಟ್ಟ. ಊಟಕ್ಕೆ ಕುಳಿತುಕೊಳ್ಳುವಾಗಲೂ ಬಾಳೆಲೆಯ ಮುಂದೆ ಕುಳಿತ ನನ್ನ ತಂದೆಯನ್ನು ಎಬ್ಬಿಸಿ ಎರಡನೆಯ ಪಂಕ್ತಿಗೆ ಕೂತುಕೊಳ್ಳಲು ಹೇಳಿದ. ಹೀಗಾದುದು ಮಾತ್ರ ನನ್ನ ಮಟ್ಟಿಗೆ ದೊಡ್ಡ ಅವಮಾನ ಎಂದೆನ್ನಿಸಿತು. ನನ್ನ ಮನಸ್ಸಿನ ಮೇಲೆ ಗಾಢವಾಗಿ ಪ್ರಭಾವಿಸಿದ ಸಂಗತಿಗಳಿವು. ಅವಮಾನವು ಎಷ್ಟೊಂದು ರೀತಿಯ ಪಾಠವನ್ನು ಹೇಳುತ್ತದೆಯೆಂದರೆ ಅದನ್ನು ಜೀವಮಾನದಲ್ಲಿ ಒರಸಿ ಹಾಕಲು ಸಾಧ್ಯವಾಗುವುದಿಲ್ಲ. ತಂದೆ ಇದರಿಂದ ತುಂಬಾ ಯಾತನೆ ಅನುಭವಿಸಿರಬೇಕು – ಅದು ಅವರ ಅಂತರಂಗದಲ್ಲಿ ಗೊಡ್ಡು ಕಟ್ಟಿದ್ದಿರಬೇಕು. ಊಟಕ್ಕೆ ಕೂತವನನ್ನು ಎಬ್ಬಿಸಿದ್ದು ಒಂದು ಕ್ರೌರ್ಯ ಅಂತಲೇ ಈಗಲೂ ಅನಿಸುತ್ತದೆ. ಮಹಾ ಸಂಕೋಚದ ಸಜ್ಜನಿಕೆಯ ವ್ಯಕ್ತಿಯಾಗಿ ತಂದೆ ಅನುಭವಿಸಿದ ಯಾತನೆ ತನ್ನ ಕಣ್ಣ ಮುಂದೆ ಸುಳಿಯುತ್ತಿದೆ. ಅದು ತನ್ನನ್ನು ಜಾತಿ ಮತ್ತು ಧರ್ಮದ ವಿರೋಧಿಯಾಗಿಸಿತ್ತು ಎಂದುಕೊಂಡಿದ್ದ ನಿಶಿತ.

ಇದ್ದಕ್ಕಿದ್ದಂತೆ ಒಂದು ಮಳೆಗಾಲದಲ್ಲಿ ಹಳೆಯ ಅಡಿಕೆಯ ಮರಗಳು ಸೊಂಟ ಮುರಿದುಕೊಂಡು ಬಿದ್ದವು. ನೆಟ್ಟ ಅಡಿಕೆಯ ಸಸಿಗಳು ಫಲಕೊಡಲು ಇನ್ನೂ ಕಾಯಬೇಕು ಅಂಥ ಪರಿಸ್ಥಿತಿಯಲ್ಲಿ ತಂದೆ ಕೈತುಂಬಾ: ಮೈತುಂಬಾ ಸಾಲ. ತಂದೆಯಾದವನ ಕಣ್ಣಲ್ಲಿ ಇರುವುದು ಮಕ್ಕಳ ಭವಿಷ್ಯ. ತಂದೆಯಾಗಿರುವುದು ಎಂದರೆ ಅಷ್ಟೆ: ಸಂಸಾರದ ಕಷ್ಟಗಳನ್ನು ಕರುಳಲ್ಲಿ ಇಟ್ಟುಕೊಂಡು ಬದುಕುವುದು. ನನ್ನ ತಂದೆ ಮಾಡಿದ್ದು ಅದನ್ನು: ಅಕ್ಕಿಯನ್ನು ಕೊಂಡುಕೊಳ್ಳುವುದಕ್ಕೆ ದುಡ್ಡಿಲ್ಲವಾದಾಗ ಮರಗೆಣಸು ತಿಂದರು. ಜೋಳ ತಿಂದರು, ಹಲಸಿನ ಕಾಯಿಯ ಪಲ್ಯ ಮಾಡಿ ಅನ್ನ ತಿನ್ನದೆ ಬದುಕಿದರು. ಕಷ್ಟಗಳು ಬೆನ್ನು ಹಿಡಿದು ನೆರಳಿನಂತೆ ಬಂದಾಗ ಹೋಟೆಲಿನಲ್ಲಿ ಚಟ್ನಿ ಹಾಕಿಕೊಟ್ಟರು. ಅಡುಗೆಗೆ ಹೋದರೆ ಕೊನೆಗೆ ಉಳಿದದ್ದು ಒಂದು ಆಕಾಶ ಮತ್ತು ಮನೆಯ ಎದುರಿನ ಹಲಸಿನ ಮರ ಮಾತ್ರ.

* * * * *

ಬಡವರು ಸತ್ತರೆ ಸುಡಲು ಸೌದೆಗಳಿಲ್ಲ, ಒಡಲುರಿಗಳೆ ಸೌದೆಗಳು

ಉಭಯಕುಲಶುದ್ಧಿಯಲಿ ಹೆಚ್ಚಿದ
ವಿಭವದಲಿ ವಿಗ್ರಹದಲಿಧಿಕ
ಪ್ರಭೆಗಳಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ
ಅಭವನಂಘ್ರಿಯ ಸೇವೆಯಲಿ ಹರಿ
ನಿಭನೆನಿಸಿ ಬದುಕುವನು ರಾಜ್ಯಕೆ
ವಿಭುವೆನಿಸುವನು ರಾಯ ಚಿತ್ತೈಸೆಂದನಾ ವಿದುರ(79)

ತಂದೆತಾಯಿಗಳ ವಂಶಕ್ಕೆ ಕೀರ್ತಿಯನ್ನು ತಂದು ವೈಭವದಿಂದ ಬಾಳುತ್ತ ರಣರಂಗದಲ್ಲಿ ಶೂರನೆನಿಸಿ , ಸತ್ಯ ಸಾಹಿತ್ಯ ವಿನಯಗಳಲ್ಲಿ ಗಟ್ಟಿಗನೆನಿಸಿ, ಭಗವಂತನ ಸೇವೆಯಲ್ಲಿ ನಿಷ್ಠನಾಗಿ ದೇವೇಂದ್ರನಂತೆ ಬಾಳತಕ್ಕವನು ರಾಜ್ಯದ ಒಡೆಯನಾಗಲು ಅರ್ಹನು. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.79)

ತಂದೆ ತಾಯಿಗಳಾಜೆಯನು ಸಾ
ನಂದದಲಿ ಪಾಲಿಸುತ ಮದವನು
ಮುಂದುಗೆಡಿಸಿ ಸುಧರ್ಮದಲಿ ರಾಜ್ಯವನು ಪಾಲಿಸುತ

ಬಂಧುಬಳಗವ ಸಲಹಿ ಭೂಸುರ

ವೃಂದವನು ನೆರೆ ಹೊರೆವಡೆವ ಸುತ

ವಂದ್ಯನೈ ಲೋಕಕ್ಕೆ ಚಿತ್ತೈಸೆಂದನಾ ವಿದುರ(81)

ಮಹಾರಾಜ, ರಾಜಪುತ್ರನಾದವನು ತಂದೆ ತಾಯಿಗಳ ಆಜ್ಞೆಯನ್ನು ಸಂತೋಷದಿಂದ ಪಾಲಿಸುತ್ತ ವಿನಯದಿಂದ ನಡೆದುಕೊಳ್ಳಬೇಕು. ಧರ್ಮದಿಂದ ರಾಜ್ಯಪಾಲನೆಮಾಡಲು ನೆರವಾಗಿ ಬಂಧುಬಳಗಗಳನ್ನು ಸಲಹಿ ಬ್ರಾಹ್ಮಣರಿಗೆ ಆಶ್ರಯವನ್ನಿತ್ತು ಸನ್ಮಾರ್ಗದಲ್ಲಿ ನಡೆದುಕೊಂಡರೆ ಪೂಜಾರ್ಹನಾಗುತ್ತಾನೆ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.35)

## 1992
## ಜನವರಿ
## 9

ನಮ್ಮ ಮನೆಯ ಕೆಳಗಿನ ತೋಟದ ಬೇಲಿಯ ಪಕ್ಕದಲ್ಲಿಯೇ ಮೇಲಿನ ದಂಡೆಯಲ್ಲಿ ಒಂದು ಕಾಲು ಹಾದಿ. ಅದರಲ್ಲಿಯೇ ಸಾಮಾನ್ಯವಾಗಿ ಸುತ್ತಮುತ್ತಲಿನ ಜನರು ಓಡಾಡುತ್ತಿದ್ದರು. ನಾನು ನನ್ನ ಪಕ್ಕದ ಮನೆಯ ದೊಡ್ಡಪ್ಪನ ಮಕ್ಕಳು ಒಂದು ದಿನ ಅದರ ಪಕ್ಕದಲ್ಲಿರುವ ಮಾವಿನ ಮರಕ್ಕೆ ಕಲ್ಲು ಹೊಡೆಯುತ್ತಾ ನಿಂತಿದ್ದೆವು. ಮಧ್ಯಾಹ್ನ ಎರಡೂವರೆ – ಮೂರು ಗಂಟೆಯ ಹೊತ್ತು ಇರಬಹುದು. ರಜೆಯ ಸಮಯದಲ್ಲಿ ಊಟವಾದ ಮೇಲೆ ನಮ್ಮ ಆಟಗಳದ್ದೇ ಕಾರುಬಾರು ದೊಡ್ಡಪ್ಪನ ಮಗ ಕಿಲಾಡಿ. ಸೈಕಲ್ ರಿಂಗ್‌ಗೆ ಒಂದು ಕೊಡೆಯ ಕಡ್ಡಿಯನ್ನು ಬಳಸಿಕೊಂಡು ಅವನು ಉರುಳಿಸುತ್ತಿದ್ದ. ಅದು ಬಹಳ ದೊಡ್ಡ ಶಬ್ದವನ್ನು ಹೊರಡಿಸುತ್ತ ಕರ್‌ಕಿರ್ ಎಂದು ಹೇಳುತ್ತಿತ್ತು. ಊಟವಾಗಿ ಮನೆಯಲ್ಲಿ ನಿದ್ರೆ ಮಾಡುವ ಹಿರಿಯರಿಗೆ ತೊಂದರೆಯಾಗುತ್ತದೆಯೆಂದು ಅವರು ಹೊರಗಡೆ ಆಟವಾಡಿ ಅಂತ ಹೇಳುತ್ತಿದ್ದರು. ಆ ದಿವಸ ನಮ್ಮ ದೊಡ್ಡಪ್ಪನ ಮಗನ ನೇತೃತ್ವದಲ್ಲಿ ಮಾವಿನ ಮರಕ್ಕೆ ಕಲ್ಲು ಹೊಡೆಯುತ್ತ ನಿಂತಿದ್ದೆವು. ಒಂದು ಪೇಪರ್ ತುಂಡಿನಲ್ಲಿ ಅಕ್ಕ ಕಲ್ಲುಪ್ಪು ಕಟ್ಟಿಕೊಂಡು ಬಂದಿದ್ದಳು. ಬಿದ್ದ ಮಾವಿನಕಾಯಿಯನ್ನು ಕಲ್ಲಲ್ಲಿ ಜಜ್ಜಿ ಅದಕ್ಕೆ ಉಪ್ಪು ಸೇರಿಸಿಕೊಂಡು ತಿನ್ನುತ್ತಾ ಕುಳಿತಿದ್ದೆವು. ಆಗ ಕಾಲು ಹಾದಿಯಲ್ಲಿ ಯಾರೋ ಜೋರಾಗಿ ಕೂಗಾಡುತ್ತಾ ಬೈಯುತ್ತಾ ಹೋಗುವುದು ಕೇಳಿಸಿತು. ಆಗ ನಮಗೆ ಭಯ. ಎಲ್ಲರೂ ಮೆತ್ತಗೆ ತೋಟದತ್ರ ಯಾರು ಗಲಾಟೆ ಮಾಡುತ್ತಿದ್ದಾರೆ ಎಂದು ನೋಡಲು ತೊಡಗಿದೆವು. ಅವನು ಚಂದುನಾಯ್ಕ! ಚಂದುನಾಯ್ಕ ಸಪೂರ ಹಾಗೂ ಎತ್ತರದ ಆಳು. ಕುಡಿದರೆ ಮಾತ್ರ ಇಡೀ ಊರನ್ನೂ ಕದಡಿ ಮೇಲೆ ಕೆಳಗೆ ಮಾಡ್ತಾನೆ. 'ಕುಡಿದದ್ದು ಇಳಿದರೆ ಮಾತ್ರ ಪಾಪದ ಪ್ರಾಣಿ.

ಕುಡಿಯದಿದ್ದರೆ ಅವನಂಥಾ ಮನುಷ್ಯನಿಲ್ಲ. ಕುಡಿದರೂ ಅಷ್ಟೆ! ಪೇಟೆಯಿಂದ ರಾತ್ರಿ ಕುಡಿದು ಹೊರಟರೆ ಅವನು ಮನೆಗೆ ತಲುಪಿದರೆ ಸರಿ, ಇಲ್ಲವಾದರೆ ಎಲ್ಲೋ ದಾರಿಯಲ್ಲಿ ಬಿದ್ದಿದ್ದಾನೆ ಎಂದೇ ಅರ್ಥ. ಒಂದು ದಿನ ರಾತ್ರಿ ನಾನು ಎಂಟು ಗಂಟೆಯಿರಬಹುದು. ಕೈಯಲ್ಲಿ ಟಾರ್ಚ್ ಇತ್ಯಾದಿ ಯಾವುದೂ ಇಲ್ಲದೆ

ಬರುತ್ತಿದ್ದೆ. ಗುಡ್ಡದಿಂದ ಇಳಿಯುವಾಗ ಏನೋ ಮೆಟ್ಟಿ ಹೌಹಾರಿದೆ. ಕತ್ತಲೆಯಲ್ಲಿ ಮೆಟ್ಟಿದ್ದು ಅವನನ್ನು. ಎಷ್ಟೋ ರಾತ್ರಿ ಅವನು ಕುಡಿದು ದಾರಿಯಲ್ಲಿ ಬಿದ್ದಾಗ ಅವನ ಹೆಂಡತಿ ರುಕುಮಿಣಿ ಮತ್ತು ಮಗ ಸೂಟೆ ಹಿಡಿದುಕೊಂಡು ಹೋದದ್ದು ಇದೆ. ಎಬ್ಬಿಸಿ ಕರಕೊಂಡು ಬರುವಾಗ ಹಾದಿಯಲ್ಲಿ ಅವನ ಹೆಂಡತಿಗೆ ಹೊಡೆಯುವುದು; ದಾರಿಯಲ್ಲಿಯೇ ಕುಳಿತುಕೊಂಡು ನಾನು ಮನೆಗೆ ಬರುವುದಿಲ್ಲ ಎಂದು ಹಟ ಹಿಡಿಯುವುದು ಇದೆಲ್ಲಾ ಮರುದಿನದ ರೋಚಕ ಸುದ್ದಿಗಳು. ಎಷ್ಟೋ ದಿನ ಅವನ ಹೆಂಡತಿ, ಮಧ್ಯಾಹ್ನದ ಹೊತ್ತು – ಎಲ್ಲರೂ ನಿದ್ದೆ ಮಾಡುವ ಸಮಯಕ್ಕೆ ಮನೆಯ ಹಿತ್ತಿಲ ಬಾಗಿಲಲ್ಲಿ ಬಂದು ನನ್ನ ಅಮ್ಮನತ್ರ ಬೆನ್ನು ತೋರಿಸಿ ಅಳುತ್ತಿದ್ದಳು. ಅವಳು ಬೆನ್ನು ತೋರಿಸಿ ಅಳುವಾಗ ಅಮ್ಮ ಸಮಾಧಾನಪಡಿಸಿ ಬಾಗಿಲಲ್ಲಿ ಎಲೆಯಡಿಕೆ ಕೊಡುತ್ತಿದ್ದರು. ಒಂದು ದಿನದ ಘಟನೆ ಮಾತ್ರ ಚೆನ್ನಾಗಿ ನೆನಪಿದೆ; ಆ ದಿನ ಮಧ್ಯಾಹ್ನ ಚಂದುನಾಯ್ಕನ ಹೆಂಡತಿ ರವಿಕೆ ಕೂಡಾ ಹಾಕದೆ (ನಮ್ಮ ಊರಿನಲ್ಲಿ ಕೆಲವು ಹೆಂಗಸರು ಕಡು ಬೇಸಿಗೆಯ ಸಮಯದಲ್ಲಿ ರವಿಕೆಯನ್ನು ಹಾಕಿಕೊಳ್ಳುತ್ತಿರಲಿಲ್ಲ. ಇದರಿಂದ ಅವರು ರವಿಕೆ ಹಾಕುತ್ತಿದ್ದ ಜಾಗವು ಗೋಧಿ ನಾಗರದಂತೆ ಫಳಫಳನೆ ಹೊಳೆಯುತ್ತಿದ್ದವು.) ಬಂದವಳು ಅಮ್ಮನನ್ನು ಹಿತ್ತಿಲ ಕಡೆಗೆ ಕರೆದಳು. ಅಮ್ಮ ಹೋದರು ಅವರ ಜೊತೆಗೆ ನಾನು ಕೂಡಾ. ಅವಳು ಅಮ್ಮನನ್ನು ನೋಡುತ್ತಲೇ ಜೋರಾಗಿ ಅಳತೊಡಗಿದಳು, ಇನ್ನು ಬದುಕಲು ಸಾಧ್ಯವೇ ಇಲ್ಲ. ಅವರಿಗೆ ಕುಡಿದರೆ ಮೈ ಮೇಲೆ ಧ್ಯಾನವೇ ಇಲ್ಲ. ನೋಡಿ – ನಿನ್ನೆ ರಾತ್ರಿ ಕುಡಿದುಕೊಂಡು ಬಂದು ಹೇಗೆ ಮಾಡಿದರು? ಬರುವಾಗ್ಲೇ ಸರಿಯಾಗಿ ಕುಡ್ಕಂಡಿದ್ರು, ಅಂಗಳಕ್ಕೆ ಬಂದ ಕೂಡಲೇ 'ಏಯ್ ಮುಂಡೆ ಎಲ್ಲಿ ಹೋಗಿದ್ದಿಯೊ? ಏಯ್ ಸೂಳೆ ಯಾವ ನಿನ್ ಮಿಂಡ ಬಂದಿದ್ದಾ?' ಎಂದು ಬೈಯ್ಯತೊಡಗಿದರು. ನಾನು ಅಡುಗೆ ಮನೆಯಲ್ಲಿದ್ದೆ. ಮಗ ಹೋಗಿ, 'ಅಮ್ಮ ಗಂಜಿ ಬಸಿಯುತ್ತಿದ್ದಾಳೆ' ಎಂದು ಹೇಳಿದ ಕೂಡಲೇ ಅವರು ಅಲ್ಲಿಂದಲೇ 'ರಂಡೇ ಮಗನೆ ನಡಿಯಾಚೆ' ಎಂದು ಹೇಳುತ್ತಾ ಅವನಿಗೆ ಒದೆಯ ತೊಡಗಿದ್ದರು. ಗಂಜಿ ಬಸಿಯುತ್ತಿದ್ದವಳು ಪಾತ್ರೆಯನ್ನು ಅಲ್ಲಿಯೇ ಇಟ್ಟು ಅಂಗಳಕ್ಕೆ ಓಡಿ ಮಗನನ್ನು ಬಿಡಿಸಿದೆ. ನನಗೂ ಸಿಟ್ಟು ತಡೆಯಲಾಗಲಿಲ್ಲ. "ಹ್ಞೂಂ ಕೊಲ್ಲುವುದಿದ್ದರೆ ಕೊಲ್ಲಿ. ಮೊದಲು ನನ್ನ ಕೊಲ್ಲಬೇಕು ನಂತ್ರ ಮಕ್ಕಳನ್ನು. ತಲೆಗೆ ಹ್ಯೊಕೊಂಡು ಬಂದ್ರೆ ಕಣ್ಣೇ ಕಾಣುವುದಿಲ್ಲ ನಿಮಗೆ ಅಂದೆ. ಅವರು ನನ್ನನ್ನು ಅಂಗಳಕ್ಕೆ ದೂಕಿ ಹಾಕಿ ನನ್ನ ಬೆನ್ನಿಗೆ ಕಚ್ಚಿದರು" ಅಂತ ಅಳುತ್ತಲೇ ಅವಳ ಬೆನ್ನು ತೋರಿಸಿದಳು. ಬೆನ್ನಿನಲ್ಲಿ ನಾಯ್ಕ ಕಚ್ಚಿದ ಗುರುತು ಇತ್ತು. ಹಲ್ಲು ಊರಿದ ಜಾಗದಲ್ಲಿ ಗುರುತು ಸರಿಯಾಗಿ ಕಾಣಿಸುತ್ತಿತ್ತು. ನನಗೆ ಅದನ್ನು ನೋಡಲು ಸಾಧ್ಯವಾಗದೆ ಮುಖ ತಿರುಗಿಸಿದೆ. ಚಂದುನಾಯ್ಕ ಒಬ್ಬ ರಾಕ್ಷಸ ಅಂತ ಅನಿಸಿದ್ದು

ಆವಾಗ! ಅಮ್ಮ ಅವಳಿಗೆ ತೆಂಗಿನೆಣ್ಣೆಯಲ್ಲಿ ಅರಿಶಿನ ಹುಡಿಯನ್ನು ಹಾಕಿ ಅವಳ ಬೆನ್ನಿಗೆ ಹಚ್ಚಿದರು. ಆದರೆ ಕುಡಿದು ಬಂದರೆ ಚಂದುನಾಯ್ಕ ಮನುಷ್ಯನಲ್ಲ ಎಂದು ಅನಿಸಿದ್ದು ಮನಸ್ಸಿನಲ್ಲಿ ಹಾಗೆಯೇ ಇತ್ತು. ಆ ದಿವಸ ಮಧ್ಯಾಹ್ನ ಅವನು ಕುಡಿದು ಬರುವಾಗ ನನಗೆ ಹೆದರಿಕೆಯಾಗಿ ನಾನು ಅಡಗಿ ಕುಳಿತೆ. ನನ್ನ ಹತ್ತಿರದಲ್ಲಿಯೇ ನನ್ನ ದೊಡ್ಡಪ್ಪನ ಮಗ ಕೂಡಾ ಅಡಗಿ ಕುಳಿತ. ಅಲ್ಲಿಂದಲೇ ಅಣ್ಣ ಒಂದು ಕಲ್ಲನೆತ್ತಿ ಚಂದುನಾಯ್ಕ ಹೋಗುತ್ತಿದ್ದ ದಾರಿಗೆ ಬಿಸಾಡಿದ. ಅದು ಚಂದುನಾಯ್ಕನಿಗೆ ಗೊತ್ತಾಗುವಾಗ ನಾವು ಮನೆಗೆ ಪರಾರಿ, ಆದರೂ ಕುಡಿದವನಿಗೆ ಬುದ್ಧಿ ಕಲಿಸಿದ ಹೆಮ್ಮೆಯಿತ್ತು.

ಇಹಪರದ ಸುಖಸಂಗತಿಯ ಸಂ
ಗ್ರಹಿಸಿ ವೇದಾಚಾರದಲಿ ಸ
ನ್ನಿಹಿತನಾಗಿ ಸಮಸ್ತ ಕಳೆಯಲಭಿಜ್ಞನೆಂದೆನಿಸಿ
ಅಹಿತಕುಲವನು ಸಮರದಲಿ ನಿ
ರ್ವಹಿಸಿ ಶರಣಾಗತರ ಪಾಲಿಸು
ತಿಹಡವನು ಮಗನೆನಿಸುವನು ಭೂಪಾಲ ಕೇಳೆಂದ(82)

ಇಹಪರಗಳಲ್ಲಿ ಹಿತವಾಗುವ ಕಾರ್ಯವನ್ನು ಮಾಡುತ್ತ, ವೇದೋಕ್ತವಾದ ಆಚಾರವನ್ನು ಪಾಲಿಸುತ್ತ, ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾಗಿ, ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವ ಪರಾಕ್ರಮಿಯಾಗಿ, ಶರಣಾಗತರನ್ನು ರಕ್ಷಿಸತಕ್ಕವನು ರಾಜಪುತ್ರನೆನಿಸಲು ಅರ್ಹನಾಗುತ್ತಾನೆ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.35)

ಇಂದ್ರಿಯವನೊಡೆತುಳಿದು ಕರ್ಮದ
ಬಂದಿಯನು ತಲೆಗಬಳಚಿ ವಿಷಯದ
ದಂದುಗವನೀಡಾಡಿ ಮಾಯಾಪಾಶವನು ಹರಿದು
ದ್ವಂದ್ವವಿರಹಿತನಾಗಿ ವಿಶ್ವದ
ಲೊಂದಿ ಮೆರೆಯಲು ಬಲ್ಲವನು ಗುರು
ವೆಂದೆನಿಸುವನು ರಾಯ ಚಿತ್ತೈಸೆಂದನಾ ವಿದುರ(83)

ಇಂದ್ರಿಯಗಳನ್ನು ಜಯಿಸಿ, ಕರ್ಮದ ಕೋಟಲೆಗಳಿಗೆ ಸಿಲುಕದೆ, ವಿಷಯಸುಖಗಳನ್ನು ದೂರಮಾಡಿ, ಮಾಯಾ ಪಾಶವನ್ನು ಹರಿದು, ಸುಖದುಃಖಗಳೆಂಬ ದ್ವಂದ್ವಗಳನ್ನು ಮೀರಿದವನು ಗುರುವೆನಿಸಲು ಅರ್ಹನಾಗುತ್ತಾನೆ. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.35)

ಮಹಾರಾಜ, ರಾಜನೀತಿ ಧರ್ಮಶಾಸ್ತ್ರವಿಹಿತವಾದ ಆಚಾರ

ವೇದಾಧ್ಯಯನ-ಇವುಗಳಲ್ಲಿ ನಿಪುಣನಾಗಿಯೂ ಪಂಡಿತರಿಗೆ ಪ್ರಿಯನಾಗಿಯೂ ಶಾಂತಿಪೌಷ್ಟಿಕ ಕರ್ಮಗಳಲ್ಲಿ ದಕ್ಷನಾಗಿಯೂ ಜ್ಯೋತಿಷವನ್ನು ಬಲ್ಲವನಾಗಿಯೂ ಗುಣಶಾಲಿಯಾಗಿಯೂ ಅನೇಕ ಶಾಸ್ತ್ರಗಳನ್ನು ಓದಿದವನಾಗಿಯೂ ಇರತಕ್ಕವನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕು. (ವಿದುರ ನೀತಿ ಎನ್. ರಂಗನಾಥಶರ್ಮಾ 2011 ಪುಟ.37)

* * * * *

ಕುಡಿದರೆ ಬಹಳ ವಿಕಾರದ ಪ್ರಾಣಿಯಂತೆ ಕಿರುಚಾಡುವುದು; ಹೆಂಡತಿಯ ಬೆನ್ನಿಗೆ ಗುದ್ದುವುದು; ಅವಳ ಬೆನ್ನಿಗೆ ಪರಚುವುದು ಮುಂತಾದವುಗಳನ್ನು ಮಾಡುವ ಚಂದುನಾಯ್ಕ ಹಗಲು ಹೊತ್ತಿಗೆ ಅದೂ ಅವನು ಕುಡಿಯದಿದ್ದರೆ ಅವನಂಥ ಪಾಪ ಸ್ವಭಾವದ ಮನುಷ್ಯ ಮತ್ತೊಬ್ಬನಿಲ್ಲ. ಅವನು ಮೂಲತಃ ಮಹಾದಡ್ಡನೂ ಸೋಮಾರಿಯೂ ಆಗಿದ್ದ. ಕೆಲಸಕ್ಕೆ ಹೋದರೆ ಹೋದ – ಬಿಟ್ಟರೆ ಬಿಟ್ಟ. ಅವನ ಹೆಂಡತಿ ಮನೆಗೆಲಸ ಮಾಡಿ: ಊರಿನಲ್ಲಿ ಯಾರಾದರೂ ಬಾಣಂತಿಯರಿದ್ದರೆ ಅವರಿಗೆ ಗೆನವಾದ ಸ್ನಾನ ಮಾಡಿಸಿ; ಇಲ್ಲವೇ ಭತ್ತ ಕುಟ್ಟಿ ಅಥವಾ ಹುಣಿಸೆಹಣ್ಣು ಬಿಡಿಸಿ ಅಥವಾ ಹಲಸಿನ ಕಾಯಿಯನ್ನು ಉಪ್ಪುನೀರಲ್ಲಿ ಹಾಕಿ ಕಾಲ ಕಳೆಯುತ್ತಿದ್ದಳು. ಚಂದುನಾಯ್ಕ ಕುಡಿಯಲು ಬೇಕಾದ ನಾಕು ಕಾಸು ಸಿಕ್ಕಿದರೆ ಸರಿ. ಇಲ್ಲವಾದರೆ ಸೇಂದಿ ಅಂಗಡಿಗೆ ಹೋಗಿ ಸಾಲ ಮಾಡಿ ಸೇಂದಿ ಕುಡಿಯುವುದು;

ತಪ್ಪಿದರೆ ಮುಸ್ಸಂಜೆಯ ಸಮಯಕ್ಕೆ ಸರಿಯಾಗಿ ಸಾರಾಯಿ ಅಂಗಡಿಗೆ ಹೋಗಿ ಸಾರಾಯಿ ಕುಡಿದು ಒಂದೆರಡು ಉಪ್ಪಿನ ಹರಳನ್ನು ಬಾಯಲ್ಲಿ ಹಾಕಿಕೊಂಡು ಹೊರಡುವುದು ಚಂದುನಾಯ್ಕನ ಅಭ್ಯಾಸ. ಕುಡಿದು ಅಮಲೇರುವ ತನಕ ಅವನದು ತಂಟೆ ತಕರಾರಿಲ್ಲ. ಕುಡಿದರೆ ಮಾತ್ರ ಏನಿದ್ದರೂ ಗಲಾಟೆ. ಅವನ ಪೆದ್ದುತನವು ನನಗೆ ಅರ್ಥವಾದದ್ದು ಮಾತ್ರ ನಾನು ಹೈಸ್ಕೂಲಿನಲ್ಲಿ ಓದುವಾಗ. ಅದುವರೆಗೆ ಅವನ ಬಗೆಗಿದ್ದ ವಿಪರೀತವಾದ ಭಯವು ನನ್ನಲ್ಲಿ ಕಾಣೆಯಾದುದ್ದು ಕೂಡಾ ಆ ಸಮಯದಲ್ಲಿ. ಚಂದುನಾಯ್ಕನ ಮಗ ನನಗಿಂತ ಎರಡು ಮೂರು ವರ್ಷ ಚಿಕ್ಕವನು. ಅವನ ಹೆಸರು ಕೃಷ್ಣ. ನಮ್ಮೂರಿನಲ್ಲಿ ಈ ತರ ಕೃಷ್ಣ, ನಾರಾಯಣ ಮುಂತಾದ ಹೆಸರುಗಳಿಗೆ ಅಡ್ಡ ಹೆಸರಿಡುವುದು. ರೂಢಿಯ ಹಾಗೆಯೇ ಕೃಷ್ಣನಿಗೆ ನಾವು "ಸಣ್ಣ ಕಿಟ್ಟ" ಎಂದು ಕರೆಯುತ್ತಿದ್ದವು. ಈ ಕಿಟ್ಟನಿಗೆ ಒಂದು ದಿನ ಐಸ್‌ಕ್ಯಾಂಡಿ ತಿನ್ನಬೇಕು ಅಂತ ಆಸೆಯಾಯಿತು. ಅದಕ್ಕೆ ಅಪ್ಪನತ್ರ ಹಟ ಹಿಡಿದು ನಾನೂ ನಿನ್ನೊಟ್ಟಿಗೆ ಬರ್ತೇನೆ ಎಂದು ಅಳತೊಡಗಿದ. ಈ ಚಂದುನಾಯ್ಕ 'ಪೇಟೆಯಿಂದ ನಾನೇ ನಿನಗೇ ಐಸ್‌ಕ್ಯಾಂಡಿ ತರ್ತೇನೆ' ಅಂತ ಹೇಳಿದ ನಟ್ಟನಡು

ಮಧ್ಯಾಹ್ನ ಐಸ್‌ಕ್ಯಾಂಡಿಯನ್ನು ತನ್ನ ಹೆಗಲಿನ ವಸ್ತ್ರದಲ್ಲಿ ಸುತ್ತಿಕೊಂಡು ಹೊರಟ. ಮನೆಗೆ ತಲುಪುವಾಗ ಐಸ್‌ಕ್ಯಾಂಡಿಯ ಕಡ್ಡಿ ಮಾತ್ರ ಉಳಿಯಿತು; ಅನಂತರ ಚಂದುನಾಯ್ಕ, 'ಕಿಟ್ಟನಿಗೆ ಐಸ್‌ಕ್ಯಾಂಡಿ ತಂದ ಹಾಗೆ ಅಂತ...' ಒಂದು ಗಾದೆಯ ಮಾತು ಚಾಲ್ತಿಗೆ ಬಂತು.

* * * * *

ಕುಡಿತವೆಂಬ ಹಟಮಾರಿ ಬೇತಾಳ ಭ್ರಮೆಯು ನನಗೆ ಆವರಿಸಲಿದೆಯೆಂಬ ಸಂಗತಿಯು ನನಗೆ ತಿಳಿದಿರಲಿಲ್ಲ. ಭ್ರಾಂತಿಗೆ ಕರೆದೊಯ್ಯುವುದೆಂದರೆ ಕುಡಿತವೆಂಬ ಸಂಗತಿಯೂ ಅರಿವಿಗೆ ಬಂದಿರುವುದು ಅನಂತರದ ವರ್ಷಗಳಲ್ಲಿ. ಚಂದುನಾಯ್ಕ ಕುಡಿಯುತ್ತಾ ಎಲ್ಲವನ್ನು ಮರೆಯುತ್ತಿದ್ದ– ಸುಖ: ದುಃಖ: ಸಿಟ್ಟು: ಅಸಹನೆ.

ಅವನಿಯಲಿ ಜನಜನಿತ ಧನ ಧಾ
ನ್ಯವನು ಕಳಹಲಗೈದು ಸಂತೋ
ಷವನು ಮಾಡುವ ಕಡೆಯಲೊಂಕೆ ನೂರು ಮಡಿಯಾಗಿ
ಲವಲವಿಕೆ ಮಿಗಲಿತ್ತು ಸಪ್ತಾಂ
ಗವನು ಸಲಹುತ್ತಿರಲುಬೇಹುದು
ರವಿಯವೊಲು ಸಾವಿರ ಮುಖದೊಳವನೀಶ ಕೇಳೆಂದ(125)

1992
ಜನವರಿ
23

ಅಜ್ಜ ಹೇಳಿದರು:

ಅದು ಆಕಸ್ಮಿಕ. ಜೀವನದ ತಿರುವಿನಲ್ಲಿ ಒಂದೊಂದು ಕ್ಷಣ ಈ ಥರದ ದೊಡ್ಡ ಘಟನೆಗಳಿಗೆ ಒಂದು ಘಟನೆಯೇ ಕಾರಣವಾಗುತ್ತದೆ. ಅದನ್ನು ಬದಲಾಯಿಸುವುದು ತುಂಬಾ ಕಷ್ಟ. ಘಟನೆಯ ಮೂಲವು ಯಾವುದೇ ಇರಲಿ – ಅದು ಅನೇಕ ಸಂದರ್ಭದಲ್ಲಿ ಬದಲಾವಣೆಯನ್ನು ತರುತ್ತದೆಯೆಂಬುದರಲ್ಲಿ ಎರಡು ಮಾತಿಲ್ಲ. ನನಗೂ ಆದದ್ದು ಅಷ್ಟೆ. ಒಂದೇ ಒಂದು ಸಣ್ಣ ಕ್ಷಣ – ಅಪೂರ್ವವೂ, ವಿಚಿತ್ರವೂ ಆದ ತಿರುವನ್ನು ತಂದೊಡ್ಡುತ್ತದೆಯೆಂಬುದರ ಅರಿವಿಲ್ಲದೆ ನನ್ನಲ್ಲಿ ಅದು ಜರುಗಿದೆ. ಅವಳು ಬಂದುದು ಒಂದು ಮಳೆಗಾಲದ ದಿನ. ಮಳೆಯೆಂದರೆ ಮಳೆ; ಸಿಡಿಲು ಬೇರೆ. ತೋಟದಲ್ಲಿ ಇದ್ದವನು ಮತ್ತೆ ಮರಳಿ ಮನೆಗೆ ಹೋಗಲು ಸಾಧ್ಯವಿಲ್ಲ – ಎಂಬಷ್ಟು ಜೋರಾಗಿ ಹೊಡೆದ ಮಳೆಯದು. ತೋಟದ ನಡುವಲ್ಲಿ ಇದ್ದವನು ಈ ಮಳೆಯನ್ನು ತಡೆಯಲು ಸಾಧ್ಯವಿಲ್ಲವೆಂದು ನಾನು ಓಡೋಡಿ ತೋಟ ಕಾವಲಿಗೆ ಹಾಕಿದ ಮಾಳದಲ್ಲಿ ನಿಂತುಕೊಂಡೆ. ಅದೇ ಸಮಯಕ್ಕೆ ಸರಿಯಾಗಿ ಅವಳು ಬಂದಳು – ನೀರಲ್ಲಿ ಒದ್ದೆಯಾದ ಹಕ್ಕಿಯಂತೆ! ಆಗ ನನ್ನ ವಯಸ್ಸು ಹೆಚ್ಚು ಕಡಿಮೆ ಮೂವತ್ತೋ ಮೂವತ್ತೆರಡೋ ಇದ್ದಿತು. ಕಲ್ಲು ಕರಗಿಸುವ ವಯಸ್ಸದು. ಮಾಳದತ್ರ ಬಂದವಳಿಗೆ ಕೂಡಾ ಇಪ್ಪತ್ತಾರೋ.... ಇಪ್ಪತ್ತೇಳೋ ವರ್ಷ ಇರಬಹುದು. ನಾನು ಅಂದಾಜು ಮಾಡಿದೆ.

ಅದರಿಂದ ಆಚೆಗೆ ಅವಳ ವಯಸ್ಸು ಎಷ್ಟು ಅಂತ ಯಾವತ್ತೂ ನಾನು ಕೇಳಿಲ್ಲ. ನನ್ನ ವಯಸ್ಸು ಎಷ್ಟು ಅಂತ ಅವಳು ಕೇಳಿಲ್ಲ. ಜೀವನದಲ್ಲಿ ಮುಂದೆ ತೆರೆಯಬಹುದಾದ ಅದ್ಭುತ ಕ್ಷಣಗಳಿಗೆ ಮತ್ತು ಆಕಸ್ಮಿಕ ತಿರುವುಗಳಿಗೆ ಅದು ಅಪೂರ್ವವಾದ ಮುನ್ನುಡಿಯನ್ನು ಬರೆಯಿತು ಎನ್ನುವುದು ಮಾತ್ರ ಅಪ್ಪಟ ಸತ್ಯ. ಅವಳು ತೋಟದ ಹತ್ತಿರದ ಕಾಲು ಹಾದಿಯಲ್ಲಿ ಹೋಗುತ್ತಿದ್ದವಳು ಆ ಜೋರಾದ ಮಳೆಯನ್ನು ಸಹಿಸಲಾಗದೆ ತೋಟದೊಳಗೆ ಬಂದಳು. ತಲೆಯ ಮೇಲಿನ ಗೊರಬನ್ನು ತೆಗೆದು ತೋಟದ ಮಾಳದಲ್ಲಿರುವ ಗೂಟಕ್ಕೆ ನೇತು ಹಾಕಿದಳು. ಧಾರಾಕಾರವಾಗಿ ಸುರಿಯುವ ಮಳೆ; ತೋಟದ ನಡುವಿನಿಂದಾಗಿ ಒಂದು ಸಣ್ಣನೆಯ ಕತ್ತಲು ಆವರಿಸಿಕೊಂಡಿತು. ಅವಳು ಗೊರಬನ್ನು ಗೂಟಕ್ಕೆ

ನೇತು ಹಾಕುವುದಕ್ಕೂ ಒಂದು ಸಳಕ್ಕನೆ ಮಿಂಚು ಬರುವುದಕ್ಕೂ ಸರಿಯಾಯಿತು. ಮಿಂಚಿದ್ದರಿಂದಲೋ ಏನೋ ಅವಳು ಹೆದರಿಕೊಂಡು "ಅಯ್ಯಯ್ಯೋ" ಅಂದಳು. ನಿಜವಾಗಿಯೂ ಆ ಕ್ಷಣದಲ್ಲಿ "ಅಯ್ಯಬ್ಬಾ" ಎಂದು ಹೇಳಿದ್ದಕ್ಕಿಂತ ಹೆಚ್ಚಾಗಿ ಆ ಮಳೆಯಲ್ಲಿ ನೆನೆದು ಹೋದ ಅವಳ ಬಟ್ಟೆ ಅವಳ ಮೈಗೆ ಅಂಟಿಕೊಂಡಿದ್ದು ಮಾತ್ರ ನನಗೆ ಕಾಣಿಸಿತು.

ಹಾಸಿಗೆಯಲ್ಲಿ ಗಂಡಿಗೆ ಬೇಕಾದ್ದು ಕೊಟ್ಟು. ಬೇಕಾದ್ದು ಪಡೆದುಕೊಳ್ಳಬಹುದಾದ ಹೆಣ್ಣು ಎನ್ನುವುದರಲ್ಲಿ ಮಾತ್ರ ಸಂಶಯವಿಲ್ಲ. ಆ ಕಾಲಕ್ಕೆ ಹೆಂಗಸರು? ಇತ್ಯಾದಿ ಹಾಕಿ ಗೊತ್ತಿಲ್ಲ. ಮಳೆಯಲ್ಲಿ ಒದ್ದೆಯಾಗಿ ಬಂದಿರುವುದರಿಂದ ಅವಳ ಎದೆಗೆ ರವಿಕೆಯು ಅಂಟಿಕೊಂಡಿದೆ. ಸೊಂಟ ಸರಿಯಾಗಿ ಹೊಳೆಯುತ್ತಿದೆ. ಒಂದು ಕ್ಷಣ ಅವಳನ್ನು ನೋಡುತ್ತಾ ನಾನು ಕಾಲ ಕಳೆದೆ. ನನ್ನ ಕಣ್ಣುಗಳು ಅವಳನ್ನು ಅಳೆಯುತ್ತದೆ – ತೂಕ, ಎತ್ತರ, ಬಾಗು, ಬಳುಕು, ಉಬ್ಬು–ತಗ್ಗು ಎಂಬುದು ಅವಳಿಗೂ ಅರಿವಿಗೆ ಬಂದಿರಬೇಕು. ತಟ–ತಟನೆ ಬೀಳುತ್ತಿರುವ ತಲೆಯ ಮೇಲಿನ ಹನಿಯನ್ನು ಒರೆಸಿಕೊಂಡಳು. ಬಲಗೈಯಿಂದ ತಲೆಯ ಮೇಲಿನ ಹನಿಯನ್ನು ಒರೆಸುವಾಗ ಅವಳೆದೆಯಿಂದ ಜಾರಿದ ಸೆರಗು ಒಂದು ಕ್ಷಣ ನನ್ನನ್ನು ಅಲ್ಲೋಲ ಕಲ್ಲೋಲ ಮಾಡಿತು. ಈವಾಗ–ಈಗ–ಅದೂ ಈ ವಯಸ್ಸಿನಲ್ಲಿ ಆ ಕ್ಷಣವನ್ನು ನೆನಪಿಸಿಕೊಳ್ಳುತ್ತಿದ್ದೇನೆ: ಆ ದಿನದ ಸುಖ–ಮತ್ತೆ ಯಾವಾಗಲೂ ನನಗೆ ದೊರೆಯಲಿಲ್ಲ ಅನ್ನುವುದು ಅಷ್ಟೇ ನಿಜ. ಹೆಣ್ಣಿನೊಂದಿಗೆ ಮೊದಲು ದೊರೆಯುವ ಸುಖ ಅನಂತರ ಅವಳು ಒಲಿದು ಬಂದು ಸುಖ ಕೊಟ್ಟಾಗಲೂ ದೊರೆಯುವುದಿಲ್ಲ. ಮೊದಲು ಪಡೆದ ಸುಖ – ಅದು ಅರ್ಧದಲ್ಲಿಯೇ ಮುಕ್ತಾಯವಾದರೂ ಆ ಒಗರು ಯಾವತ್ತೂ ಇರುತ್ತದೆ. ಒಗರು ಸುಖ ಗಂಡಿಗೆ ಮತ್ತು ಹೆಣ್ಣಿಗೆ ಮತ್ತೆ ಹಾಸುಗೆಯಲ್ಲಿ ಜೊತೆ ಸೇರುವಾಗ ಪ್ರಜ್ಞಾಪೂರ್ವಕವಾಗಿ ಮೈಬಿಚ್ಚಿಕೊಂಡಾಗಲೂ ದೊರೆಯುವುದಿಲ್ಲ. ಗುರ್ತ ಪರಿಚಯವಿಲ್ಲದ ಗಂಡು ಮತ್ತು ಹೆಣ್ಣು ಒಡನಾಡುವಾಗ ಗಂಡಿಗೆ ಆ ಹೆಣ್ಣಿನ ದೇಹದ ಪ್ರತಿಯೊಂದು ತಿರುವು ಅಪೂರ್ವ. ಹೆಣ್ಣಿಗೂ ಅಷ್ಟೆ: ಹಾಸುಗೆಯಲ್ಲಿ ಗಂಡೂ – ಹೆಣ್ಣು ಪರಿಚಿತರಂತೆ ವರ್ತಿಸುವಾಗ ಎಲ್ಲವೂ ಮೊದಲೆ ತಿಳಿದಿರುತ್ತದೆ. ಒಂದು, ಎರಡು, ಮೂರು, ನಾಲ್ಕು ಹೀಗೆ ಅನುಕ್ರಮವಾಗಿ, ಮತ್ತು ಆ ಕ್ಷಣದಲ್ಲಿ ಹೆಂಡತಿಯೆಂಬ ಕಾಷ್ಠದ ಗೊಂಬೆ, ಹೆಂಡತಿಯೆಂಬ ಕುರಿಮರಿಗೆ ಸುಖ ಕೊಟ್ಟು ಗೊತ್ತಿಲ್ಲ – ತಗೊಂಡು ಗೊತ್ತಿಲ್ಲ. ರಾತ್ರಿಯೊಂದರ ಹೊರತು! ಹಗಲು–ಸುಡು ಸುಡುವ ಬಯಕೆ ಬಂದರೂ ಮುಟ್ಟಲಾಗದೆ ಇರುವಂಥ ಕೆಡುಕು ಹೆಣ್ಣು. ಆವಾಗ ಮತ್ತೆ ತಟಕ್ಕನೆ ಒಂದು ಗುಡುಗು ಮತ್ತು ಅದರ ಬೆನ್ನ ಹಿಂದಿನಲ್ಲಿ ಕಣ್ಣು ಕೋರೈಸುವ ಮಿಂಚು.

ಅವಳು ನಗುತ್ತಲೇ "ಈ ಮಿಂಚು ನೋಡಿದರೆ ಭಯವಾಗುತ್ತದೆ" ಅಂದಳು. ನಾನು ಉಗುಳು ನುಂಗಿದೆ. ನಿಧಾನವಾಗಿ ಹೇಳಿದೆ "ಈ ಮಳೆ ಎಷ್ಟು ಹೊತ್ತಿಗೆ ನಿಲ್ಲುತ್ತದೋ ಗೊತ್ತಿಲ್ಲ. ಎಲ್ಲಿಗೆ ಹೊರಟೆ?"

"ಸಾಮಾನು ತರುವುದಕ್ಕೆ ಹೊರಟೆ. ಈ ಮಳೆಯಿಂದ ಇಲ್ಲಿಗೆ ಬಂದು ನಿಂತ ಹಾಗಾಯಿತು"

"ಬರೀ ಮಳೆಬಂದರೆ ಅಡ್ಡಿಯಿಲ್ಲ ಆದರೆ ಅದರೊಂದಿಗೆ

ಗುಡುಗು ಬೇರೆ. ಚಳಿ ಹಿಡಿಯಿತಪ್ಪ"

ಅವಳು ಎಷ್ಟು ಜೋರಿನವಳು ಎಂದು ಅರ್ಥವಾದದ್ದು ಅವಳು ಕೊಟ್ಟ ಉತ್ತರದಿಂದ ತಿಳಿಯಿತು.

"ಗಂಡಸರಿಗೆ ಚಳಿ ಹೆಚ್ಚು. ಮನೆಗೆ ಹೋಗಿ ಬಿಸಿಮಾಡಿಕೊಳ್ಳಿ. ಬೆವರು ಸುರಿಯುವ ಹಾಗೆ ಹಾಗಾಗುತ್ತದೆ"?

"ಅಯ್ಯೋ ಮನೆಗೆ ಹೋದ್ರೆ ಏನು ಮಣ್ಣು? ಅವಳಿಗೆ ಚಳಿಗಾಲ, ಬೇಸಿಗೆ, ಮಳೆ ಎಲ್ಲಾ ಒಂದೆ"! ಅಂತ ಕಿಲಾಡಿ ನಗುವಿನಲ್ಲಿ ಹೇಳಿದೆ. "ನಿನ್ಗೆ ಮನೆಗೆ ಹೋದ್ರೆ ಚಳಿನಿಂತು ಹೋಗುತ್ತದೆ." ಎಂದವನೇ ಅವಳ ಮುಖ ನೋಡಿದೆ "ಅಯ್ಯೋ ನನ್ನ ಕರ್ಮವೆ ಅವನೂ ಕೊರಡು ಎಂದವಳು", "ಹಾಳಾಗಿ ಹೋಗ್ಲಿ ಈ ಮಳೆ" ಅಂದಳು.

ಈಗ ನಿಜವಾಗಿಯೂ ತಡೆಯಲಾಗಲಿಲ್ಲ ನನಗೆ ಸೊಂಟದಲ್ಲಿ ಒಂದು ಬೈರಾಸ್ ಬಿಟ್ರೆ ಬೇರೆ ಏನೂ ಇರ್ಲಿಲ್ಲ. ಹಿಂದೆ ಮುಂದೆ ನೋಡದೆ ಅವಳ ಹತ್ರ ಹೋಗಿ ನಿಂತೆ. ಅವಳಿಗೆ ಏನನ್ನಿಸಿತೋ ಏನೋ–ನನಗೆ ಒತ್ತಿಕೊಂಡು ನಿಲ್ಲುವಂತೆ ಬಂದಳು. ನಾನು ಅವಳನ್ನು ಗಟ್ಟಿ ಹಿಡಿದುಕೊಂಡೆ. ಅದೇನು ಸುಖಕೊಟ್ಟಳು? ಹೊರಗಡೆ ಮಳೆ ಆ ಚಳಿಯಲ್ಲಿಯೂ ಅವಳು ಮೊದಲು ಬೇಡ ಬೇಡಾ ಅಂದವಳು ನನ್ನನ್ನು ಗಟ್ಟಿ ಹಿಡಿದುಕೊಂಡಳು. ಗಂಡಸಿನ ಸುಖದಿಂದ ವಂಚಿತಳಾದ ಹೆಣ್ಣು ಹುಲಿಯಂತೆ – ನನ್ನ ಮೈಮೇಲೆ ಹೊರಳಾಡಿದಳು. ಪರಚಿದಳು. ಎಲ್ಲಾ ಕಡೆ ಅವಳೇ ಮುಂದುವರಿದಳು – ಅವಳು ಮುಂದುವರಿದು ದೇಹದ ಮೂಲೆಯಿಂದ ರಸವನ್ನು ಹಿಂಡಿತೆಗೆದಂತೆ ತೆಗೆದಳು. ಹೋಗ್ಲಿ ಬಿಡು, ನೀನು ಮದುವೆಯಾಗದವನು. ಅದರ ಬಗ್ಗೆ ನಿನ್ನತ್ರ ಹೇಳಿ ಸುಖವಿಲ್ಲ. ಆದ್ರೆ ಆವತ್ತಿಂದ ಅವಳನ್ನು ಬಿಡಲಿಲ್ಲ. ಅವಳು ನನ್ನನ್ನು ಬಿಡಲಿಲ್ಲ. ಹೆಂಡ್ತಿಗಿಂತ ಹೆಚ್ಚು.

ಅನಂತರ ಒಂದು ಸಾರಿ ಅವಳು ಸೊಪ್ಪಿನ ಗುಡ್ಡೆಗೆ ಬಂದಿದ್ದಳು. ಸೊಪ್ಪು ಕಡಿದು ನಾನು ಅದನ್ನು ಕಟ್ಟಿಟ್ಟು ಕುಳಿತಿದ್ದೆ. ಬಾಯಿಗೆ ಎಲೆ ಅಡಿಕೆ ಹಾಕಿಕೊಂಡು

ಬಂದಿದ್ದಳು. ಬಂದವಳೇ ಸೊಪ್ಪಿನ ಕಟ್ಟಿನ ಮೇಲೆ ಕುಳಿತಳು. ಸೊಪ್ಪು ಸವರಿದವನು ಅದನ್ನೆಲ್ಲಾ ರಾಶಿ ಹಾಕಿದಾಗ, ಅವಳ ಬಗ್ಗೆಯೇ ಆಲೋಚಿಸುತ್ತಿದ್ದೆ. ಅದು ಕೂಡಾ ಎಷ್ಟು ಗಂಟೆಗೆ ಎಂದು ತಿಳಿದುಕೊಂಡೆ? ಹೆಚ್ಚು ಕಡಿಮೆ ಐದು ಗಂಟೆ ಇರಬಹುದು. ಆ ದಿನ ಮಧ್ಯಾಹ್ನದ ತನಕ ತೆಂಗಿನ ಮರದ ಬುಡ ಬಿಡಿಸಿದ್ದೆ. ತೆಂಗಿನ ಮರಗಳಿಗೆ ಬುಡ ಬಿಡಿಸಿ ಅದಕ್ಕೆ ಸೊಪ್ಪು ಬೇಕೆಂದುಕೊಂಡಿದ್ದೆ. ಆ ದಿನ ಸಂಜೆ ಸೊಪ್ಪಿನ ಗುಡ್ಡೆಗೆ ಹಾಕಬೇಕೆಂದಿದ್ದೆ. ಅದಕ್ಕೆ ಹೋದದ್ದು ಕಾಸರಕನ ಸೊಪ್ಪು ಕಡಿಯಲು ನಾಲ್ಕೈದು ದಿನಗಳು ಹಿಂದೆ ಸುಖವುಂಡವಳು ಮತ್ತೆ ಸುಖವುಣ್ಣುವುದಕ್ಕೆ ಬಂದಿದ್ದಾಳೆ ಎಂದೇ ಅನಿಸಿತು. "ಬಾ ಎಂದು ಹೊರಟೆ, ಸೊಪ್ಪಿನ ಹೊರೆಯ ಮೇಲೆ ಕುಳಿತವಳು ಕುಳಿತಲ್ಲಿಂದಲೆ ನಾನು ಬರುವುದಿಲ್ಲ ನೀವು ಯಾಕೆ ಕರೀತೀರಿ ಅಂತ ಗೊತ್ತು ನನಗೆ ಅದೆಲ್ಲಾ ಬೇಡ ಎಂದಳು. ಕುದಿದು ಬರುತ್ತಿರುವ ಆಸೆಯನ್ನು ನಾನಂತೂ ತಡೆಯಲು ಸಾಧ್ಯವಿರಲಿಲ್ಲ. ಸುತ್ತ ನೋಡಿ ಅವಳ ಹತ್ತಿರ ಹೋಗಿ, ಅವಳ ತೋಳನ್ನು ಹಿಡಿದುಕೊಂಡು ಮತ್ತೊಮ್ಮೆ ಕರೆದೆ. ಅವಳ ಮುಖದಲ್ಲಿಯೂ ಬಯಕೆ ಕುಣಿಯುತ್ತಿತ್ತು. ಕಣ್ಣಿನಲ್ಲಿ ದಾಹವಿತ್ತು. ಆಸೆಯೊತ್ತಿ ಬರುವ ಹೆಂಗಸರೂ ಆಸೆಯಿಲ್ಲ ಅಂತಲೇ ತೋರಿಸಿಕೊಳ್ಳುತ್ತಾರೆ. ಬೇಡವೆಂದು ಹೇಳುತ್ತಾರೆ. ಅವರ ಮನಸ್ಸಿನಲ್ಲಿ ಅದು ಬೇಕಂತಲೇ ಇರುತ್ತದೆ. ಅವಳು ಎದ್ದು ನಿಂತಳು. ಅವಳ ಕೈಯನ್ನು ಹಿಡಿದುಕೊಂಡು ಒಂದು ಗೇರು ಬೀಜದ ಮರದಡಿಗೆ ಹೋದೆ. ಇಬ್ಬರಿಗೂ ಅವಸರವಿತ್ತು. ಅವಳು ಬೇಗೆ ಬೇಗ ಎಂದಳು. ಎಲ್ಲಾ ಮುಗಿಸಿದೆವೆಂಬ ತೃಪ್ತಿ ಹೊರತು ಬೇರೆ ಏನೂ ಇರಲಿಲ್ಲ. ಮುಗಿದ ಮೇಲೆ "ತಡವಾಯಿತು. ನಾನು ಹೋಗ್ತೇನೆ" ಎಂದಳು, "ಸರಿಯೆಂದೆ."

ಮೂರನೆಯ ಬಾರಿ ಅವಳನ್ನು ಹುಡುಕಿಕೊಂಡು ಹೋದೆ. ನಾನು ಅವಳ ಮನೆಯತ್ರ ಹೋದಾಗ ಹೊತ್ತು ಕಂತಿ ಒಂದೆರಡು ಗಳಿಗೆಯಾಗಿರಬಹುದೋ ಏನೋ? ಅವಳ ಮನೆಯ ಅಂಗಳದಲ್ಲಿ ಅವಳ ಮಗ ಸುಬ್ಬ – ಹತ್ತು ವರ್ಷದ ಹುಡುಗ ನಾಯಿಯೊಂದಿಗೆ ಆಟವಾಡುತ್ತಾ ಕುಳಿತಿದ್ದ. ನಾನು ಹೋದ ತಕ್ಷಣ ನಾಯಿ ಬಗುಳಿ ಮತ್ತೆ ಸುಮ್ಮನಾಯಿತು.

"ನಿನ್ನ ತಾಯಿ ಎಲ್ಲಿ?"

"ಅಮ್ಮ ಸ್ನಾನ ಮಾಡುವುದಕ್ಕೆ ಹೋಗಿದ್ದಾರೆ."

"ಹ್ಞೂಂ ಹೋಗಿ ನಾನು ಬಂದೆ ಅಂತ ಹೇಳು"

'ನೀವ್ಯಾರು?'

'ನಾನು.........' ಹೇಳಿದೆ

ಅವನು ಓಡಿ ಹೋಗಿ ಮತ್ತೆ "ಕೂತಿರಬೇಕಂತೆ ಈಗ ಬರ್‍ತಾರಂತೆ" ಎಂದ "ಸರಿ"ಯೆಂದೆ. ಅವನು ಮನೆಯೊಳಗೆ ಓಡಿಹೋಗಿ ಮಣೆ ತೆಗೆದುಕೊಂಡು ಬಂದು ಅಂಗಳದಲ್ಲಿ ಇಟ್ಟ. ನಾನು ಕುಳಿತುಕೊಂಡೆ. ಈ ಗಳಿಗೆಗೆ ಸುಬ್ಬ ಅಡ್ಡನಾದ ಎಂದೇ ಅನಿಸಿತು. ಚಕ್ಕನೆ ಹೊಳೆಯಿತು.

"ಏಯ್ ಸುಬ್ಬ ನೀನು ಹೋಗಿ ಕುಣಿಯ ಹೊಗೆ ಸೊಪ್ಪು ತೆಗೆದುಕೊಂಡು ಬಾ, ಹಾಗೇ ಅಂಗಡಿಯಿಂದ ಓಲೆ ಬೆಲ್ಲ ತಗೊಂಡು ತಿನ್ನು" ಎಂದೆ. ವಾಲೆ ಬೆಲ್ಲದ ಆಸೆಗೆ ಸುಬ್ಬ ಓಡಿಹೋದ. ಅವನು ಆ ಕಡೆಗೆ ಹೋದದ್ದೇ ತಡ ನಾನು ಮೆಲ್ಲನೆ ಎದ್ದು ಅವಳ ಬಚ್ಚಲ ಮನೆಯತ್ರ ಹೋದೆ. ಅವಳು ಸ್ನಾನ ಮಾಡುತ್ತಿದ್ದುದು ಅವಳು ಹೊಯ್ದುಕೊಳ್ಳುವ ನೀರಿನ ಶಬ್ದದಿಂದ ಕೇಳಿಸಿತು. ಅವಳ ಬಚ್ಚಲ ಮನೆಯ ಬಾಗಿಲು ಮೆಲ್ಲನೆ ಬಡಿದೆ. ಅವಳು ಒಳಗಿನಿಂದಲೇ ಯಾರು? ಎಂದು ಕೇಳಿದಳು. ಮೆಲ್ಲನೆ "ನಾನು" ಎಂದೆ. ಅವಳು ಬಚ್ಚಲ ಮನೆಯ ಬಾಗಿಲು ತೆರೆದಳು. ನಾನು ಒಳಗೆ ನುಗ್ಗಿದ ತಕ್ಷಣ ಬಾಗಿಲು ಹಾಕಿಕೊಂಡಳು. ಅವಳ ಮಗ ವಾಪಸು ಬರುವಷ್ಟು ಹೊತ್ತಿಗೆ ನಾನು ಅಂಗಳದ ಮಣೆಯ ಮೇಲೆ ಕುಳಿತಿದ್ದೆ ಮತ್ತು ಅವಳ ಮಾತಿಗೆ ಉತ್ತರ ಕೊಟ್ಟಿದ್ದೆ. 'ಇನ್ನು ಕದ್ದು ಮುಚ್ಚಿಬೇಡ. ನಾನು ನಿನ್ನನ್ನು ಇಟ್ಟುಕೊಳ್ಳುತ್ತೇನೆ. ನೀನೂ ಅಷ್ಟೆ ನನ್ನನ್ನು ಬಿಟ್ಟು ಬೇರೆ ಕಡೆ ಹೋಗಬಾರದು ತಿಳೀತಾ?' ಅವಳೂ ಪ್ರಮಾಣ ಮಾಡಿದಳು. ಅದರಂತೆ ನಡೆದಳು. ನಾನೂ ಅಷ್ಟೆ."

ಈ ಕತೆಯನ್ನು ನನ್ನ ಅಜ್ಜ ನನಗೆ ಹೇಳಿದ್ದು ನಾನು ಓದುತ್ತಿರುವಾಗ– ಅದೂ ಯಾರೂ ಇಲ್ಲದ ಸಮಯದಲ್ಲಿ; ಬೇಯಿಸಿದ ಹಲಸಿನ ಬೇಳೆಯನ್ನು ತಿನ್ನುತ್ತಾ. ಅವರಿಗೆ ಅದು ನೈತಿಕ ಸಮಸ್ಯೆಯೆಂದು ಕಾಣಿಸಲಿಲ್ಲ. ಅದು ಹೆಮ್ಮೆಯ ಪ್ರಶ್ನೆ.

* * * * *

ಹೆಣ್ಣನ್ನು ಇಟ್ಟುಕೊಳ್ಳುವುದು ಎಂದರೆ ಸುಲಭದ ಕೆಲಸವಲ್ಲ. ಗಂಡಸರಿಗೆ ಎರಡೆರಡು ಹೆಂಗಸರನ್ನು ಆಳುವ ಶಕ್ತಿ ಬೇಕು. ಗಂಡಿಗೆ ಹೆಣ್ಣಿನ ಅಂತರಂಗದ ಕುದುರೆ: ಹೆಣ್ಣಿನ ದೇಹದ ಕುದುರೆಯನ್ನು ಓಡಿಸುವ ತಿಳಿವು ಇರಬೇಕು. ದೇಹ ಮತ್ತು ಮನಸ್ಸು ಗಟ್ಟಿಯಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ನನಗಂತೂ ಹೆಣ್ಣು–ಗಂಡಿನ ಸಂಬಂಧವೆಂದರೆ ಬೇರೆ ಏನೂ ಅಲ್ಲ– ಅದು ದೇಹದ ಪ್ರಶ್ನೆ–ಮನಸ್ಸಿನ ಪ್ರಶ್ನೆ, ಬೇರೆ ಎಂತಹದಿದೆ? ನಾನಿಟ್ಟುಕೊಂಡ ಹೆಣ್ಣಿಗೆ ಮದುವೆಯಾಗಿತ್ತು. ಮಗನಿದ್ದ ನಾನಿಟ್ಟುಕೊಂಡ ಮೇಲೆ ಅವಳು ಅವಳ ಗಂಡನಿಗೆ ಹೇಳಿದಳಂತೆ– ರಾತ್ರಿ ನೀವೂ ಜಗುಲಿಯಲ್ಲಿ ಮಲಗಬೇಕು. ಅವಳಿಗೆ ಬೇರೆ ಯಾರೂ ಬೇಕಿರಲಿಲ್ಲ. ನನಗೂ

ಅಷ್ಟೆ;" ಅಜ್ಜ ಕತೆ ಹೇಳಿ ಅದಕ್ಕೊಂದು ಸಮಾರೋಪದ ಟಿಪ್ಪಣಿ ಕೂಡಾ ಮಂಡಿಸಿದ್ದರು.

'ಧರ್ಮಶೀಲತೆ ಅತಿಕ್ರಾಂತವಾದರೆ ನಾಶ ಮಾಡುತ್ತದೆ.
ಧರ್ಮಶೀಲತೆ ಕಾರ್ಯತಃ ಪಾಲಿತವಾದರೆ ರಕ್ಷಿಸುತ್ತದೆ.
ಅತಿಕ್ರಾಂತವಾದ ಧರ್ಮಶೀಲತೆ ನಮ್ಮನ್ನು ಆಗಲು
ಧರ್ಮಶೀಲತೆಯನ್ನು ಅತಿಕ್ರಮಿಸಬಾರದು.
(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 245)
ಸಗೋತ್ರವಿವಾಹವನ್ನು ಮನು ತಿರಸ್ಕರಿಸಿದ್ದಾನೆ.
(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 254)

ನೀಚವರ್ಗದವರೊಡನೆ ಇಟ್ಟುಕೊಳ್ಳುವ ಸಂಬಂಧದಿಂದ ಪಶು, ಯಾನ ಇತ್ಯಾದಿಗಳ ಸಂಗದಿಂದ ರಾಜಸೇವೆಯ ಸ್ವೀಕಾರಧಿಂದ ಕುಲಗಳು ಅಧೋಗತಿಗೆ ಇಳಿಯುತ್ತವೆ. (ಮನುಸ್ಮೃತಿ 4 – 3,7)

ಸವರ್ಣೀಯ ಸ್ತ್ರೀಯನ್ನು ಮದುವೆಯಾಗಬೇಕು. ಆದರೆ ಆಕೆ ವಿಭಿನ್ನ ಗೋತ್ರದವಳಾಗಿರಬೇಕು ಎಂದು ಮನುವು ಹೇಳುತ್ತಾನೆ. (ಮನುಸ್ಮೃತಿ )

ಬ್ರಾಹ್ಮ, ದೈವ, ಆರ್ಷ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಒಟ್ಟು ಎಂಟು ಪ್ರಕಾರಗಳನ್ನು ಮನುವು ಹೇಳಿದ್ದಾನೆ. ಮೊದಲ ನಾಲ್ಕರಿಂದ ಉತ್ತಮ ಪರಿಶುದ್ಧ ಸಂತತಿಯು ಸಾಧ್ಯ. ವಿವಾಹವಾಗುವ ಬಗೆ ಪತ್ನಿಯ ಲಕ್ಷಣಗಳಲ್ಲದೆ ಅದಕ್ಕೆ ಯೋಗ್ಯಕಾಲವು ಮುಖ್ಯವೆಂಬುದು ಅವನ ಅಭಿಪ್ರಾಯವಾಗಿದೆ. (ಮನುಸ್ಮೃತಿ 3 – 39, 40)

ದೇವ ಯಜ್ಞವೆಂದರೆ ದೇವತೆಗಳಿಗೆ ಅಗ್ನಿಯ ಮೂಲಕ ಆಹುತಿಯನ್ನು ಅರ್ಪಿಸುವುದು. ಪಶು–ಪಕ್ಷಿ–ಮಾನವರಿಗೆ ಆಹಾರ ನೀಡುವುದು ಭೂತಯಜ್ಞ. ಅತಿಥಿಗಳನ್ನು ಬರಮಾಡಿಕೊಂಡು ಸತ್ಕರಿಸುವುದು ನೃಯಜ್ಞ

(ಮನುಸ್ಮೃತಿ 3: 6–8–81: 3: 122 – 285)

ಧರ್ಮವನ್ನು ಕಾಪಾಡಲು ಪರಮಾತ್ಮನು ದಂಡವನ್ನು ನಿರ್ಮಿಸಿದನು. ಇವರ ಹೆದರಿಕೆಯಿಂದ ಎಲ್ಲಾ ಜೀವಿಗಳು ಸನ್ಮಾರ್ಗವನ್ನು ಅವಲಂಬಿಸಬೇಕಾಗುತ್ತದೆ. ಈ ತತ್ವದ ಪುರುಷಾಕಾರವಿದ್ದಂತೆ ರಾಜನಿದ್ದಾನೆ. ರಾಜನು ದೇವಾಂಶನು ಆದುದರಿಂದ ಪ್ರಜಾರಕ್ಷಣೆಯಲ್ಲಿ ಆತನು ನಿಜಕ್ಕೂ ದೇವರ ಪ್ರತಿನಿಧಿಯಾಗಿದ್ದಾನೆ.

(ಮನುಸ್ಮೃತಿ 7 –22; 4–301, 9–303–11)

1992
ಫೆಬ್ರವರಿ
19

ಕುಂಬ್ಳೆ ಸೀಮೆಯ ಬ್ರಾಹ್ಮಣರೆಂದರೆ ಮಹಾನ್ ಪಿಸುಣಾರಿಗಳು ಮತ್ತು ಗಂಟು ಕಟ್ಟಿಡುವವರು ಎನ್ನುವ ಕಲ್ಪನೆ ವಿಟ್ಲ ಸೀಮೆಯ ಬ್ರಾಹ್ಮಣರಿಗೆ ಇದ್ದ ಕಾಲವದು. ಅದೂ ಅಲ್ಲದೆ ಕುಂಬಳೆ ಸೀಮೆಯವರಿಗೆ ವಿಟ್ಲ ಸೀಮೆಯ ಬ್ರಾಹ್ಮಣರ ಬಗ್ಗೆ ಒಂಚೂರು ಅಸಡ್ಡೆ. ವಿಟ್ಲ ಸೀಮೆಯವರದು ಅಬ್ಬರವೇ ಹೆಚ್ಚು, ಧಾರಾಳಿಗಳು ಆದರೆ ವ್ಯವಹಾರ ಜ್ಞಾನವೇ ಇಲ್ಲವೆಂದು ಕುಂಬಳೆ ಸೀಮೆಯುವರು ತಿಳಿದುಕೊಂಡಿದ್ದರು. ಎರಡೂ ಕಡೆಯವರಲ್ಲಿ ಹೊಕ್ಕು ಬಳಕೆ ತುಂಬಾ ಕಮ್ಮಿ. ವಿಟ್ಲ ಸೀಮೆ ಮತ್ತು ಕುಂಬಳೆ ಸೀಮೆಯವರ ನಡುವೆ ಅಡ್ಕಸ್ಥಳದ ಹತ್ತಿರ ಹೊಳೆಯೂ ಅಡ್ಡವಾಗಿತ್ತು. ಮಳೆಗಾಲದಲ್ಲಿ ಆಗ ಒಂದು ಸೀಮೆಯ ಜನ ಮತ್ತೊಂದು ಸೀಮೆಯ ಜನರೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಒಂದೋ ದೋಣಿ ಇಲ್ಲವೇ ತೆಪ್ಪಮಾಡಿಕೊಂಡು ಆ ಕಡೆಯಿಂದ ಈ ಕಡೆಗೆ; ಈ ಕಡೆಯಿಂದ ಆ ಕಡೆಗೆ ಹೋಗಬೇಕಾಗುತ್ತಿತ್ತು. ಈ ತೆಪ್ಪ-ಗಿಪ್ಪ ಹಿಡಿದುಕೊಂಡು ಹೋಗಿ ಬರಬೇಕಾದ ಅಗತ್ಯವಂತೂ ಎರಡು ಕಡೆಯವರಿಗೆ ಅಷ್ಟಾಗಿ ಇರಲಿಲ್ಲ. ಮಧ್ಯಾಹ್ನ ಊಟಕ್ಕೆ ಕುಳಿತಾಗ ಸಾಂಬಾರಿನ ಖಾರ ಕಡಿಮೆಯಾದರೆ ವಿಟ್ಲ ಸೀಮೆಯ ಜನ ಖಡಾ ಖಂಡಿತವಾಗಿ ಒಂದು ಮಾತಂತೂ ಹೇಳಿಯೇ ಹೇಳುತ್ತಿದ್ದರು "ಇದೇನಿದು ಸಾಂಬಾರ್ ಖಾರವೇ ಇಲ್ಲ. ಸಿಹಿ ಹೆಚ್ಚಾಗಿದೆ. ಇದೆಲ್ಲಾ ಕುಂಬಳೆ ಸೀಮೆಯವರಿಗೆ ಸೈ"

ಕುಂಬಳೆ ಸೀಮೆಯವರೂ ಹಾಗೆಯೇ ಹೇಳುತ್ತಿದ್ದರು – 'ವಿಟ್ಲ ಸೀಮೆಯಲ್ಲಿ ಪಾಯಸಕ್ಕೂ ಒಂದೆರಡು ಹಸಿಮೆಣಸು ಹಾಕದೆ ಇರುವವರಲ್ಲ'. ಇದೆಲ್ಲಾ ಪ್ರಚಾರದಲ್ಲಿ ಇದ್ದ ಸಂಗತಿಗಳೇ ಹೊರತು ಇದರಲ್ಲಿ ಸತ್ಯಾಂಶವಿತ್ತು ಎಂದು ಹೇಳಲು ಬರುವುದಿಲ್ಲ. ಕುಂಬ್ಳೆ ಸೀಮೆಯವರು ಕುಂಬ್ಳೆಯ ಗೋಪಾಲಕೃಷ್ಣನ ಸನ್ನಿಧಿಗೆ ನಡೆದುಕೊಳ್ಳುವವರು; ಕುಂಬ್ಳೆಯ ಅರಸರ ಕೈ ಕೆಳಗಿನವರು ಎಂಬ ಭಾವನೆಯು ಬ್ರಿಟಿಷರ ಬರುವವರೆಗೂ ಅವರ ಮನಸ್ಸಿನಲ್ಲಿ ಮನೆ ಮಾಡಿತ್ತು.

ವಿಟ್ಲ ಸೀಮೆಯವರು ವಿಟ್ಲದ ಅರಸರಿಗೆ ನಡೆದುಕೊಳ್ಳುವವರು. ಕಂಪನಿಯ ಸರ್ಕಾರವು ಕೂಡಾ ವಿಟ್ಲದವರೊಂದಿಗೆ ಚೆನ್ನಾಗಿಯೇ ನಡೆದುಕೊಂಡಿತ್ತು. ವಿಟ್ಲದ

ಅರಸರು ತುಳು ಮನೆಮಾತಿನವರು. ದೇವಸ್ಥಾನದಲ್ಲಿಯೂ ಅವರಿಗೆ ಮೊದಲ ಮನ್ನಣೆಯಿತ್ತು. ವಿಟ್ಲದ ಸುತ್ತುಮುತ್ತಿನ ಬ್ರಾಹ್ಮಣರು ವಿಟ್ಲದ ಅರಸೊತ್ತಿಗೆಗೆ ಪ್ರತಿವರ್ಷವು ಕಾಣಿಕೆಯೊಪ್ಪಿಸುತ್ತಿದ್ದುದರಿಂದ ಹಾಗೂ ಬ್ರಾಹ್ಮಣರಿಗೆ ವಿಟ್ಲದ ಅರಸರು ಉಂಬಳಿಗೆ ಜಮೀನು ಕೊಟ್ಟಿದ್ದರಿಂದ ಅವರವರ ಸಂಬಂಧವು ಚೆನ್ನಾಗಿತ್ತು. ಮದುವೆಯಿರಲಿ, ಉಪನಯನವಿರಲಿ ಬ್ರಾಹ್ಮಣರು ಮೊದಲು ಆಮಂತ್ರಣವನ್ನು ಅರಸರಿಗೆ ಕೊಟ್ಟು ಅರಸರ ಪ್ರೀತಿಗೆ ಪಾತ್ರರಾಗುತ್ತಿದ್ದರು. ಎಲ್ಲದಕ್ಕಿಂತ ಹೆಚ್ಚಾಗಿ ಅರಸರ ಬಗೆಗಿನ ಗೌರವವನ್ನು ಬ್ರಾಹ್ಮಣರು ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಪಡಿಸುತ್ತಿದ್ದರು. ಕುಂಬಳೆ ಸೀಮೆಯ ಬ್ರಾಹ್ಮಣರ ಕತೆಯು ಇದಕ್ಕಿಂತ ಬೇರೆಯೆಂದು ಭಾವಿಸಬೇಕಾಗಿಲ್ಲ. ಆದರೆ ಮದುವೆಯ ಸಂಬಂಧ ಮಾತ್ರ ಕುಂಬಳೆ ಸೀಮೆಯವರದ್ದು ಕುಂಬಳೆ ಸೀಮೆಗೂ: ವಿಟ್ಲದ ಸೀಮೆಯವರದು ವಿಟ್ಲದ ಸೀಮೆಗೂ ಮೀಸಲಾಗಿತ್ತು.

ಮದುವೆಯ ಸಂಬಂಧದಲ್ಲಿ ಸೀಮೆಯನ್ನು ದಾಟಿದ ಕತೆಯೊಂದು ಮಾತ್ರ ತುಂಬಾ ಕುತೂಹಲದಾಯಕವಾದದ್ದು. ಅದು ಅಡ್ಡಡ್ಕದ ಮಹಾಬಲಭಟ್ಟರ ಮಗ ತಿರುಮಲನಿಗೆ ಸಂಬಂಧಿಸಿದ್ದು. ಮಹಾಬಲ ಭಟ್ಟರ ಮಗನೇ ಈ ತಿರುಮಲ ಭಟ್ಟ. ಮಹಾಬಲಭಟ್ಟರಿಗೆ ಒಟ್ಟು ಆರು ಜನ ಹೆಣ್ಣು ಮಕ್ಕಳು ಮತ್ತು ತಿರುಮಲ ಮಹಾಬಲಭಟ್ಟರು ಆರು ಜನ ಹೆಣ್ಣು ಮಕ್ಕಳಲ್ಲಿ ಮೊದಲನೆಯ ಎರಡು ಹೆಣ್ಣು ಮಕ್ಕಳನ್ನು ಪಳ್ಳತ್ತಡ್ಕ; ಮತ್ತು ಏತಡ್ಕಕ್ಕೆ ಕೊಟ್ಟರು. ಮಹಾಬಲಭಟ್ಟರ ಎರಡು ಹೆಣ್ಣು ಮಕ್ಕಳನ್ನು ಮದುವೆ ಮಾಡಿದ ಮೇಲೆ ಮಗನಿಗೆ ಹುಡುಗಿ ಹುಡುಕಲು ಪ್ರಾರಂಭಿಸಿದರು. ಕುಂಬೈ ಸೀಮೆಯಲ್ಲಿ ತಿರುಮಲ ಒಪ್ಪುವ ಹೆಣ್ಣು ಸಿಗಲಿಲ್ಲ. ತಿರುಮಲ ಒಪ್ಪಿದ ಹೆಣ್ಣನ್ನು ಆ ಹೆಣ್ಣುಗಳೇ ಒಪ್ಪಲಿಲ್ಲ. ಹೆಚ್ಚು ಕಡಿಮೆ ಹತ್ತೂ-ಹನ್ನೆರಡು ಹುಡುಗಿಯರನ್ನು ನೋಡಿದ ತಿರುಮಲ ಕೊನೆಗೆ ಈ ಹುಡುಗಿಯರನ್ನು ನೋಡುವ ಸಹವಾಸವೇ ಬೇಡವೆಂದು; ಬ್ರಹ್ಮಚಾರಿಯಾಗಿ ಉಳಿಯುವುದೇ ಲೇಸೆಂದು ತೀರ್ಮಾನಕ್ಕೆ ಬಂದಿದ್ದ. ತೋಟದಲ್ಲಿ ಬಿದ್ದ ನಾಲ್ಕು ಹಣ್ಣಡಿಕೆಯನ್ನು ಹೆಕ್ಕುವುದು ಒಳ್ಳೆಯದು. ಸುಮ್ಮನೆ ಹುಡುಗಿಯರನ್ನು ನೋಡುವುದಕ್ಕೆ ಹೋಗಿ ಕೆಲಸ ದಂಡ ಮಾಡುವುದು ಯಾಕೆಂದು ಭಾವಿಸಿ ಒಂದು ದಿನ ಅದನ್ನು ತಂದೆಯತ್ರ ಹೇಳಿಯೂ ಆಯಿತು. 'ಹುಡುಗಿ ಹುಡುಕುವ ವ್ಯಾಪಾರವೇ ಬೇಡ. ಈ ಜಗತ್ತಿನಲ್ಲಿ ಹುಟ್ಟಿದವರೆಲ್ಲ ಮದುವೆಯಾಗಿ ಮಾಡಿರುವ ಉದ್ಧಾರ ಸಾಕು. ನಾನಂತೂ ಇನ್ನು ಹುಡುಗಿಯರನ್ನು ನೋಡುವ ಕೆಲಸಕ್ಕೆ ಹೋಗುವುದಿಲ್ಲ.' ಮಹಾಬಲಭಟ್ಟರು ಮಾತ್ರ ಹಾಗೆಲ್ಲ ನಿರಾಶೆಯಾಗುವ ಪೈಕಿಯಲ್ಲ. ಆದದ್ದು ಆಗಲಿ ಎಂದು ನೋಡುವ ಪೈಕಿ. "ಕಾಲಕೂಡಿ ಬಂದರೆ ಎಲ್ಲಾ ಸರಿಯಾಗುತ್ತದೆ ನೋಡುವಾ" ಎಂದರು.

ಒಂದು ದಿವಸ ಮಧ್ಯಾಹ್ನ ಊಟದ ನಂತರ ಮಹಾಬಲಭಟ್ಟರು ಚಾವಡಿಯಲ್ಲಿ ಮಲಗಿಕೊಂಡು ಸಣ್ಣ ನಿದ್ದೆ ಹೊಡೆಯುತ್ತಿರುವಾಗ ಅಲ್ಲಿಗೆ ದಲ್ಲಾಳಿ ಸುಬ್ಬಣ್ಣ ಬಂದ. ದಲ್ಲಾಳಿ ಸುಬ್ಬಣ್ಣ ಎತ್ತರದ ಆಳಲ್ಲ. ಹೆಗಲಿನಲ್ಲಿ ಒಂದು ಖಾಕಿ ಚೀಲ. ಖಾಕಿ ಚೀಲದಲ್ಲಿ ಯಾರ್‍ಯಾರದೋ ಜಾತಕದ್ದೇ ಒಂದು ಬಂಡಲ್. ಮಧ್ಯಾಹ್ನದ ಊಟಕ್ಕೆ ಒಂದು ಮನೆಗೆ, ರಾತ್ರಿಯ ಊಟಕ್ಕೆ ಮತ್ತೊಂದು ಮನೆಗೆ. ಯಾರ್‍ಯಾರ ಮನೆಯಲ್ಲಿ ಮೈನೆರೆದ ಹುಡುಗಿಯರಿದ್ದಾರೆ ಎಂದು ತಲಾಶ್ ಮಾಡಿ ರಾತ್ರಿ ಅವರ ಮನೆಯಲ್ಲಿ ಮೊಕ್ಕಾಂ ಹೂಡುವುದು; ಮರುದಿವಸ ಬೆಳಿಗ್ಗೆ ಹೊರಡುವಾಗ ಅವರ ಜಾತಕವನ್ನು ದಾರಿಖರ್ಚಿಗೆ ದುಡ್ಡು ಕಿತ್ಕೊಂಡು ಹೊರಡುವುದು ಅವನ ರೂಢಿ. ಜಾತಕ ಅದಲು ಬದಲು ಮಾಡಬೇಕಿದ್ದರೆ ಅದಕ್ಕೆ ಫೀಸು. ಜಾತಕವನ್ನು ಸರಿಮಾಡಬೇಕಿದ್ದರೆ ಅದಕ್ಕೆ ರೇಟು. ಅವನು ಜೀವನದಲ್ಲಿ ಮಹತ್ವಾಕಾಂಕ್ಷಿ ಏನಲ್ಲ. ಹೆಣ್ಣು ಹೆತ್ತವರತ್ರ ಏನು ಮಾತಾಡಬೇಕು– ಮದುವೆಗೆ ತಯಾರಿರುವ ಗಂಡಿನತ್ರ ಏನು ಮಾತಾಡಬೇಕು ಎಂದು ಮಾತ್ರ ತಿಳಿದುಕೊಂಡವನು. ಒಟ್ಟು ದಿನ ಖರ್ಚಿಗೆ ಏನಾದರೂ ವ್ಯವಸ್ಥೆಯಾದರೆ ಸೈ. ಅದರಿಂದ ಆಚೆಗೆ ಏನೂ ಇಲ್ಲ. ಜನರಿಗೆ ತನ್ನ ಬಗ್ಗೆ ಒಂದು ಅಸಡ್ಡೆಯಿದೆಯೆಂದು ಅವನಿಗೂ ಗೊತ್ತು. ಹಿಂದಿನಿಂದ "ದಲ್ಲಾಳಿ ಭಟ್ಟ ಬಂದ" ಎಂದು ಹೇಳುತ್ತಾರೆಯೆಂತಲೂ, ತನಗೆ ಯಾವ ಗೌರವವಿಲ್ಲವೆಂತಲೂ ಅರ್ಥಮಾಡಿಕೊಂಡಿರುವ ಸುಬ್ಬಣ್ಣ ಅದಕ್ಕೆಲ್ಲಾ ತಲೆಕೆಡಿಸಿಕೊಂಡರೆ ತನ್ನ ಬದುಕು ಸಾಗುವುದಿಲ್ಲವೆಂತಲೇ ಭಾವಿಸಿಕೊಂಡಿದ್ದಾನೆ. ಬೇಡಿ ತಿನ್ನುವವನಿಗೆ ಯಾವ ಮರ್‍ಯಾದೆ?

ಅಂಥ ಸುಬ್ಬಣ್ಣ ನಟ್ಟನಡು ಮಧ್ಯಾಹ್ನ ಮಹಾಬಲ ಭಟ್ಟರ ಮನೆಯಂಗಳಕ್ಕೆ ಕಾಲಿಡುವಾಗ ಮಹಾಬಲಭಟ್ಟರ ಹೆಂಡತಿ ಬಟ್ಟಲಿನಲ್ಲಿ ಉಳಿದುದನ್ನು ಕಲಸಿ ನಾಯಿಗೆ ಹಾಕುತ್ತಿದ್ದರು. ತೊಂಡೆ ಬಳ್ಳಿಯ ಚಪ್ಪರದಡಿಯಲ್ಲಿ ಇಟ್ಟ ಒಡೆದ ಮಡಕೆಯಲ್ಲಿ ಬಿದ್ದ ಅನ್ನವನ್ನು ತಿನ್ನುವ ಸಂಭ್ರಮದಲ್ಲಿ ನಾಯಿಯೂ ಕೂಡಾ ಸುಬ್ಬಣ್ಣನಿಗೆ ಬೊಗಳಿ ತನ್ನ ಜಾತಿ ಮರ್‍ಯಾದೆಯನ್ನು ಸಲ್ಲಿಸುವುದನ್ನು ಮರೆತುಬಿಟ್ಟಂತೆ ಇತ್ತು. ಅಂಗಳಕ್ಕೆ ಕಾಲಿಟ್ಟ ಸುಬ್ಬಣ್ಣ "ಓಯ್, ಅಕ್ಕಂಗೆ ಊಟ ಆಯ್ತು ಅಂತ ಅನಿಸುತ್ತದೆ" ಎಂದು ಹೇಳುತ್ತಲೇ ಬಂದ. "ಸೌತೆಕಾಯಿಯ ಹುಳಿಯ ಪರಿಮಳ ಮೂಗಿಗೆ ಬಡಿದದ್ದೇ ತಡ, ನಾನು ಈ ಕಡೆಗೆ ಬಂದು ಬಿಟ್ಟೆ" ಎಂದು ಹೇಳುತ್ತಾ ತೊಂಡೆ ಚಪ್ಪರದಡಿಯಲ್ಲಿ ಕಾಲು ತೊಳೆದುಕೊಂಡದ್ದೂ ಆಯಿತು. ಮಹಾಬಲ ಭಟ್ಟರ ಹೆಂಡತಿಯು ಉತ್ತರ ಕೊಡುವ ಪ್ರಮೇಯವೇ ಬರಲಿಲ್ಲ. ಸುಬ್ಬಣ್ಣ ಉತ್ತರ ನಿರೀಕ್ಷಿಸಿಯೂ ಇರಲಿಲ್ಲ. ಅವನು ಚಾವಡಿಯ ಮೆಟ್ಟಿಲು ಹತ್ತುತ್ತಲೇ; 'ಅಯ್ಯೋ, ಏನು ಸೆಕೆಯಪ್ಪಾ ಇದು? ಅಕ್ಕಾ ಒಂದು ಲೋಟ ನೀರು ಮಜ್ಜಿಗೆಯಿದ್ದರೆ

ಕೊಟ್ಟು ಬಿಡಿ. ಈ ಬೇಸಿಗೆಯಲ್ಲಿ ಮೈ ಒರತೆ ನೋಡಿದರೆ ಸಾಕಪ್ಪ – ಓ ಭಟ್ರು ನಿದ್ದೆ ಮಾಡಿದ ಹಾಗೆ ಕಾಣಿಸುತ್ತದೆ" ಎಂದ ಸುಬ್ಬಣ್ಣನ ತಾರಕ ಸ್ವರದಿಂದ ಎಚ್ಚರಗೊಂಡ ಮಹಾಬಲಭಟ್ಟರು "ಓ ಸುಬ್ಬಣ್ಣ, ಯಾವಾಗ ಬಂದೆ? ನಿನ್ನ ಮೂಗಿನ ತುದಿಯಲ್ಲಿ ನೊಣ ಬಂದು ಕೂತ ಹಾಗೆ ಕಾಣಿಸ್ತದೆ, ಇಲ್ಲವಾದರೆ ಇಲ್ಲಿ ಸೌತೆ ಹುಳಿ ಮಾಡಿದ ದಿವಸ ನೀನು ಹಾಜರಿ" ಎಂದರು. ಅವರ ಮಾತಿನಲ್ಲಿದ್ದ ವ್ಯಂಗ್ಯ ಅರ್ಥವಾದರೂ ಅದನ್ನು ಅರ್ಥವಾಗದವನಂತೆ, 'ನಿಮ್ಮ ನಿದ್ದೆಗೆ ತೊಂದರೆಯಾಯಿತೊ ಏನೋ?' ಎಂದ.

ಮಹಾಬಲಭಟ್ಟರ ಹೆಂಡತಿ ನೀರು ಮಜ್ಜಿಗೆ ತಂದುಕೊಟ್ಟಿದ್ದನ್ನು ಕುಡಿಯುತ್ತಾ ಊಟದ ಕಡೆಗೆ ಕಾಯುತ್ತಾ ಕೂತ, ಅರ್ಧ ನಿದ್ದೆಯಿಂದ ಎದ್ದ ಮಹಾಬಲಭಟ್ಟರು 'ಎಯ್, ಇವಳೇ ಇದ್ದದ್ದನ್ನು ಬಡಿಸು' ಎಂದರು.

ಊಟವಾದ ಮೇಲೆ ಸುಬ್ಬಣ್ಣ ಬಾಯಿಗೆ ಅಡಿಕೆ ಹೋಳು ಹಾಕಿಕೊಳ್ಳುತ್ತಾ "ಹೌದು ಭಟ್ಟರೆ, ಏನು ಮಗನಿಗೆ ಮದುವೆ ಮಾಡಿಸುವ ಯೋಚನೆ ಬಂತಾ ಇಲ್ಲವಾ?" ಎಂದು ಕೇಳಿದ.

"ನೋಡಬೇಕು, ಸರಿಯಾದ ಹುಡುಗಿ ಸಿಕ್ತಾ ಇಲ್ಲ"

"ಹುಡುಗಿ ಸಿಗದೆ ಏನಾಗಿದೆ? ನೀವು ಹೂಂ ಅಂದರೆ ನೂರು ಜಾತಕ ನಾನು ತಂದುಕೊಡುತ್ತೇನೆ. ಹುಡುಗಿಯರಿಗೆ ಏನು ಬರಗಾಲವಾ"?

"ಬರಗಾಲ ಅಂತ ನಾನು ಹೇಳಿದೆನಾ? ಈ ಕುಂಬ್ಳೆ ಸೀಮೆಯಲ್ಲಿ ಸರಿಯಾದ ಹುಡುಗಿ ಸಿಕ್ತಾ ಇಲ್ಲ. ಒಂದೋ ಅಟ್ಟೆಕಾಲು ಅಥವಾ ಕೋಲು ಮುಸುಡು. ಒಟ್ಟು ಪ್ರಯೋಜನವಿಲ್ಲ. ಬಂದ ಹುಡುಗಿ ದನ ಕರು ನೋಡುವವಳಾಗಬೇಕು. ಅಡಿಕೆ ಬಿದ್ದರೆ ಹೆಕ್ಕಿಕೊಂಡು ಬರುವ ಹಾಗಿರಬೇಕು, ಅಕ್ಷರಾಭ್ಯಾಸ ಇಲ್ಲದಿದ್ರೂ ಅಡ್ಡಿಯಿಲ್ಲ. ಒಂದು ನಾಕಕ್ಷರ ಕಲಿತರೆ ಹುಡುಗಿಯರ ಕಾಲು ನೆಲದ ಮೇಲೆ ನಿಲ್ಲುವುದಿಲ್ಲ. ಈ ಕಲಿಕಾಲದಲ್ಲಿ ಹೀಗೆಯೇ ನೋಡು – ನಾವೆಲ್ಲಾ ಮದುವೆಯಾಗುವಾಗ ಹೀಗಿತ್ತಾ? ಮೈನೆರೆಯುವ ಮೊದಲು ಮದುವೆಯಾಗ್ತಿತ್ತು. ಈಗ ನೆರೆದು ನಾಲ್ಕು ವರ್ಷವಾದರೂ ತಾತ್ಯೆ ಅಂತ ಕುಣಿತಾವೆ ಹುಡುಗಿಯರು. ಈ ಕುಂಬ್ಳೆ ಸೀಮೆಯಲ್ಲಿ ಹುಡುಗಿಯರನ್ನು ತಲಾಶ್ ಮಾಡಿ ಸಾಕಾಯ್ತು. ಇವ್ನಂತೂ ಮದುವೆ ಬೇಡಾಂತ ಕೂತು ಬಿಟ್ಟಿದ್ದಾನೆ" ಅಂತ ಹೇಳುತ್ತಾ ಮಹಾಬಲಭಟ್ಟರು ವೀಳ್ಯದೆಲೆಯ ತೊಟ್ಟು ಮುರಿದು ಅದರ ಬೆನ್ನಿಗೆ ಸುಣ್ಣ ಸವರತೊಡಗಿದರು.

"ಕುಂಬ್ಳೆ ಸೀಮೆ ಬೇಡವಾದ್ರೆ ವಿಟ್ಲ ಸೀಮೆಯಿಂದ ನೋಡಿದರಾಯಿತು. ನೀವು ಏನೇ ಹೇಳಿ – ವಿಟ್ಲ ಸೀಮೆಯ ಹುಡುಗಿಯರು ಚುರುಕು. ಯಾವ

ಕೆಲಸ ಬೇಕಾದ್ರೂ ಮಾಡ್ತಾರೆ. ಅಡುಗೆಯಲ್ಲಿ ವ್ಯತ್ಯಾಸ ಬಿಟ್ರೆ ಬೇರೆ ಏನು ಸಮಸ್ಯೆ ಹೇಳಿ?" ಸುಬ್ಬಣ್ಣ ಒಂದು ಪೀಠಿಕೆ ಹಾಕಿದ. ಸುಬ್ಬಣ್ಣನ ಪೀಠಿಕೆಯಲ್ಲಿರುವ ಸ್ವರವನ್ನು ಅಂದಾಜು ಮಾಡಿದ ಮಹಾಬಲ ಭಟ್ರು "ವಿಟ್ಲ ಸೀಮೆಯ ಹುಡುಗಿಯರು ತೊಂದರೆಯಿಲ್ಲ ನಿಜ. ಆದ್ರೆ ಹುಳಿಗೆ ಒಂದು ತೆಂಗಿನಕಾಯಿ ಇಲ್ಲದಿದ್ರೆ ಅವರಿಗೆ ಆಗುವುದಿಲ್ಲ. ಪಾಯಸಕ್ಕೆ ಬೆಲ್ಲ ಹಾಕಿ ಗೊತ್ತಿಲ್ಲ ಆ ಕಡೆಯವರಿಗೆ" ಎಂದರು. ಅದಕ್ಕೆ ಸುಬ್ಬಣ್ಣ ಮನಸ್ಸಿನಲ್ಲಿಯೇ ಈ ಕುಂಬ್ಳೆ ಸೀಮೆಯವರ ಪಿಸುಣಾರಿ ಬುದ್ಧಿಯನ್ನು ಇವರೆಲ್ಲಿ ಬಿಡುತ್ತಾರೆಂದು ಭಾವಿಸಿಕೊಂಡನಾದರೂ ಅದನ್ನು ಬಾಯಿ ಬಿಟ್ಟು ಹೇಳಲಿಲ್ಲ. ಬಾಯಲ್ಲಿ ತುಂಬಿಕೊಂಡ ಎಲೆಯಡಿಕೆಯನ್ನು ಉಗುಳುವ ನೆವನಕ್ಕೆ ಹೊರ ಬಂದು ಮತ್ತೆ ಹೇಳಿದ: 'ನಿಮ್ಗೆ ಒಂದು ಗೊತ್ತಿಲ್ಲಾಂತ ಕಾಣುತ್ತದೆ-ವಿಟ್ಲ ಸೀಮೆಯವರ ಕೈ ಧಾರಾಳ ಅಂತಾದರೂ ಗಂಡನ ಮನೆಗೆ ಬಂದ ಮೇಲೆ ಸುಧಾರಿಸದೆ ಎಲ್ಲಿ ಹೋಗ್ತಾರೆ? ಅಂಥಾ ಹುಡುಗಿಯನ್ನೇ ನಾನು ತಲಾಶ್ ಮಾಡಿ ಬಿಟ್ಟಿದ್ದೇನೆ. ಸಮಯ ಸಂದರ್ಭ ಬಂದರೆ ಎಂಥಾ ಕೆಲಸವಾದರೂ ಮಾಡಬಹುದಾದ ಹುಡುಗಿ, ತುಂಬಾ ಸಣ್ಣ ಪ್ರಾಯದಲ್ಲಿಯೇ ಅವಳ ಅಪ್ಪ-ಅಮ್ಮ ತೀರಿಹೋದರು. ಹುಡುಗಿಯ ಅಣ್ಣನದೆ ಜವಾಬ್ದಾರಿ. ಅವನೇ ಅಂದನಪ್ಪ ಮೊನ್ನೆ – ನನ್ನ ತಂಗಿಗೊಂದು ಗಂಡು ಹುಡುಕಿಕೊಡಿ ಅಂತ, ಮೈನೆರೆದು ಒಂದು ವರ್ಷವಾಯಿತಪ್ಪ ಸ್ವಲ್ಪ ಗಿಡ್ಡ. ಅದು ಬಿಟ್ಟರೆ ಬೇರೆ ಏನೂ ಇಲ್ಲ. ನೋಡಲು ಒಳ್ಳೇ ಜವೆ ಗೋಧಿಯ ಬಣ್ಣ, ಸ್ವಲ್ಪ ಬಡತನ ಬೇರೆ, ಕೆಲಸ ಮಾಡಿ ಗೊತ್ತುಂಟು. ಹೆಸರು ದುರ್ಗಾಪರಮೇಶ್ವರಿ. ಅಂತ'. ಸುಬ್ಬಣ್ಣ ತನಗೆ ಗೊತ್ತಿರುವ ಸಂಗತಿಯನ್ನು ಬಣ್ಣ ಹಚ್ಚಿ ಹೇಳಿದ, ಮಹಾಬಲ ಕೂಡಾ ಬಾಯಲ್ಲಿ ತುಂಬಿಸಿಕೊಂಡ ತಾಂಬೂಲವನ್ನು ಉಗುಳಿ ಬಂದು, 'ಕೈ – ಬಾಯಿ ಹೇಗಿದೆ ಅಂತ ಹೇಳು? ಆ ಎಲ್ಲಕ್ಕಿಂತ ಜಾತಕ ಕೂಡಿ ಬರಬೇಕು. ಜಾತಕ ಕೂಡಿ ಬಂದರೆ; ಕುಂಬ್ಳೆ ಗೋಪಾಲಕೃಷ್ಣನ ಕೃಪೆಯಿದ್ದರೆ ವಾಲಗ ಊದಿಸಬಹುದು" ಎಂದರು.

"ನೀವೂ ಆ ಹುಡುಗಿಯನ್ನು ನೋಡಿ ಆಮೇಲೆ ಹೇಳಿ, ಬೇಕಿದ್ದರೆ ಜಾತಕ ಕೊಡ್ತೇನೆ. ಜಾತಕವನ್ನು ತಕ್ಕಮಟ್ಟಿಗೆ ನೋಡ್ತೀರಲ್ಲ" ಎನ್ನುತ್ತಾ ಸುಬ್ಬಣ್ಣ ಚೀಲದಿಂದ ಪರಮೇಶ್ವರಿಯ ಜಾತಕವನ್ನು ತೆಗೆದ. ಭಟ್ಟರು ಭೂತಕನ್ನಡಿ ಹಿಡಿದು ಎರಡೂ ಜಾತಕವನ್ನು ನೋಡಿ ಲೆಕ್ಕಚಾರ ಮಾಡತೊಡಗಿದರು. ಮಧ್ಯೆ ಮಧ್ಯೆ ಸುಬ್ಬಣ್ಣನ ಒಗ್ಗರಣೆ ಬೇರೆ. ಎಲ್ಲಾ ಮುಗಿದ ಮೇಲೆ ಭಟ್ಟರು" ಹೂಂ ಅಡ್ಡಿಯಿಲ್ಲ" ಎಂದರು.

"ಕೂಟ ಹೊಂದಾಣಿಕೆ ಬರುತ್ತದೋ ಹೇಳಿ?"

"ಕೂಟ ಚೆನ್ನಾಗಿದೆ. ಲಕ್ಷಣವೂ ಅಡ್ಡಿಯಿಲ್ಲ"

"ಇನ್ನು ನಿಮ್ಮ ಮಗನತ್ರ ಒಂದು ಮಾತು ಕೇಳಿದರಾಯಿತು"

"ಅವನಿಗೇನು ಗೊತ್ತಾಗ್ತದೆ"

"ಆದರೂ ಅವನು ತಾನೆ ಮದುವೆಯಾಗುವವನು"

"ಸುಬ್ಬಣ್ಣ ನಾನು ಹೇಳಿದಷ್ಟು ಮಾಡು, ಬೆಳಿಗ್ಗೆ ನೀನೂ ಅವನೂ ಹೋಗಿ ಹುಡುಗಿಯನ್ನು ನೋಡಿ ಬನ್ನಿ. ನೀವು ಅವರ ಮನೆಗೆ ಯಾಕೆ ಹೋದಿರಿ ಅಂತ ಹೇಳುವುದು ಬೇಡ – ಅಡ್ಡಿಯಿಲ್ಲ ಎಂದಾದರೆ ಉಳಿದ ವಿಚಾರ"

ಸುಬ್ಬಣ್ಣನಿಗೆ ಸಂತೋಷವಾಯಿತು. "ಅಡ್ಡಿಯಿಲ್ಲ ನೀವು ಹೇಳಿದ ಹಾಗೆ ಮಾಡ್ತೇನೆ" ಎಂದ.

"ನಾನು ಹೇಳಿದ್ದಕ್ಕಿಂತ ಆಚೆ ಈಚೆ ಏನಾದರೂ ಮಾಡಿದರೆ ನೋಡು ನಿನ್ನ" ಎಂದ ಮಹಾಬಲಭಟ್ಟರ ಮಾತು ಚುಚ್ಚಿತು. ಹತ್ತು ಮನೆಗೆ ಹೊಕ್ಕು ಬಂದವನಿಗೆ ಈ ಮಾತು ಅನಿರೀಕ್ಷಿತ ಅಂತ ಅನ್ನಿಸಲಿಲ್ಲ. ಅದಕ್ಕಿಂತ ನಾಕು ಜನರ ನಡುವೆ ಹೋಗಿ ಬಂದವನಿಗೆ ಈ ಮಾತುಗಳು ಕೂಡಾ ದೊಡ್ಡ ಸಂಗತಿಯಾಗಿರಲಿಲ್ಲ. ಮನಸ್ಸಿನಲ್ಲಿಯೇ ಅಂದುಕೊಂಡ, ಇಂಥ ಮಾತುಗಳೂ ಎಷ್ಟು ಕೇಳಿ ಬಿಟ್ಟಿದ್ದೇನೋ? ಒಂದು ಕಿವಿಯಲ್ಲಿ ಕೇಳಿ ಇನ್ನೊಂದು ಕಿವಿಯಲ್ಲಿ ಬಿಟ್ಟರಾಯಿತು. ಹೇಳಿದ್ದನ್ನೇ ಹೇಳಿ ಪ್ರಯತ್ನ ಮಾಡುವುದು, ಆದರೆ ಆಯಿತು, ಹೋದರೆ ಹೋಯಿತು. ಎಲ್ಲಾ ತಿರುಮಲನ ಹಣೆಬರಹ. ಮಹಾಬಲಭಟ್ಟರು "ನಾನು ಒಂಚೂರು ತೋಟ ತಿರುಗಿ ಬರ್ತೇನೆ. ನಾಕು ಮಡಲು ಎಳೆದು ಹಾಕಿದರೆ ಅಷ್ಟು ಕೆಲಸವಾದ ಹಾಗಾಯಿತು" ಎಂದುಕೊಂಡು ಬೈರಾಸನ್ನು ಸೊಂಟಕ್ಕೆ ಸುತ್ತಿಕೊಂಡು ತೋಟದ ಕಡೆ ಹೆಜ್ಜೆ ಹಾಕಿದರು. ಅವರು ಆ ಕಡೆ ಹೋದದ್ದೇ ತಡ ಮಹಾಬಲಭಟ್ಟರ ಹೆಂಡತಿ ಬಂದು ಸುಬ್ಬಣ್ಣನತ್ರ ಪಂಚಾಯಿತಿ ಶುರುಮಾಡಿದರು. ಹುಡುಗಿ ಹೇಗೆ? ಏನು? ಎತ್ತ? ಈ ವಿಷಯಗಳೇ.

ಸುಬ್ಬಣ್ಣನೂ ಒಂದು ಮೊಳಕ್ಕೆ ನಾಲ್ಕು ಮೊಳ ಸೇರಿಸಿ ಹೇಳಿದ. "ಏನೋಪ್ಪಾ ಒಟ್ಟಿನಲ್ಲಿ ಇವನಿಗೊಂದು ಮದುವೆ ಅಂತ ಆದರಾಯಿತು. ಇವನಿಗೋ ಮೂಗಿನ ತುದಿಯಲ್ಲಿ ಸಿಟ್ಟು ಬೇರೆ. ಈ ದೂರ್ವಾಸ ಮುನಿಯೊಂದಿಗೆ ಸುಧಾರಿಸಿಕೊಳ್ಳುವವರಾದರೆ ಸರಿಯಪ್ಪ" ಎಂದು ಹೇಳುತ್ತಾ ಕಷ್ಟಸುಖ ಮಾತಾಡುತ್ತಾ ಕುಳಿತರು. ಅವರು ಮಾತುಕತೆಯ ನಡುವೆಯೇ, ತಿರುಮಲನು ಬಂದು ಕುಳಿತ. ವಿಷಯಾಂತರವಾಗಿ ಎಲ್ಲಿಗೋ ಹೋಯಿತು. ಸಂಜೆಗತ್ತಲು ಕಳೆಯುವ ತನಕ.

ಬೆಳಿಗ್ಗೆ ಕೋಳಿ ಕೂಗುವ ಮೊದಲು ಹೊರಟ ತಿರುಮಲ ಮತ್ತು ಸುಬ್ಬಣ್ಣ ಸರಿಯಾಗಿ ಹೊತ್ತು ಮೂಡುವಾಗ ಕೆಲವು ಮೈಲು ನಡೆದಾಗಿತ್ತು. ಸುಬ್ಬಣ್ಣನಿಗೆ ಮಾತಿನ ಬರವಿಲ್ಲ. ಒಬ್ಬನೇ ಹೋಗುವಾಗಲೂ ಹಾದಿಯಲ್ಲಿರುವ ಕಾಸರಕನ ಮರವನ್ನಾದರೂ ಮಾತಾಡಿಯಾನು, ತಿರುಮಲನೂ ಅಷ್ಟೇ: ತನ್ನನ್ನು ತಾನೇ ಕೊಚ್ಚಿಕೊಳ್ಳುವುದೆಂದರೆ ಎಲ್ಲಿಲ್ಲದ ಪ್ರೀತಿ. ತಂದೆಯ ಎದುರು ಮಾತಾಡಿ ಗೊತ್ತಿಲ್ಲದವನಂತೆ ಇದ್ದರೂ ಉಳಿದ ಯಾರ ಹತ್ತಿರವಾದರೂ ಒಂದೇ ಪೆಟ್ಟಿಗೆ ಇಪ್ಪತ್ತು ಹಪ್ಪಳ ಹುಡಿ ಮಾಡುತ್ತೇನೆ ಎಂದು ಹೇಳುವ ಉತ್ತರಕುಮಾರ. ಮಾತಿನ ಗುಂಡು ಹಾರಿಸುವುದರಲ್ಲಿ ಅವನಂಥ ವೀರನಿಲ್ಲ. ಸುಬ್ಬಣ್ಣ ಉದ್ಯೋಗಾರ್ಥಕ್ಕಾಗಿ ಮಾತನ್ನು ಬಣ್ಣ ಬಣ್ಣಗೊಳಿಸುವುದರಲ್ಲಿ ನಿಪುಣನಾದರೆ ತಿರುಮಲ ಸ್ವಭಾವ ಜನ್ಯವಾಗಿ ಮಾತು ಕಲಿತವನು. ಇದರಿಂದಾಗಿ ಇಬ್ಬರ ಮಾತು ಸರಿಯಾಗಿಯೇ ಇತ್ತು. ಮಾತು..... ಮಾತು.... ತಲೆ ಬುಡವಿಲ್ಲದ ಸಂಗತಿಗಳು.

ಸುಬ್ಬಣ್ಣ ಮತ್ತು ತಿರುಮಲ ಇಬ್ಬರೂ ಬಂದಿಳಿದದ್ದು ಪೆರ್ಲಕ್ಕೆ. ಪೆರ್ಲದಿಂದ ಒಂದೈದು ಮೈಲಿ ನಡೆದರಾಯಿತು ಎಂದುಕೊಂಡರು. ತಿರುಮಲ "ಒಂದು ಒಳ್ಳೆಯ ಖಡಕ್ ಚಾ ಕುಡಿದರೆ ಇನ್ನೂ ಸ್ವಲ್ಪ ನಡೆಯಬಹುದು ಏನಂತೀ?" ಎಂದ. ಸುಬ್ಬಣ್ಣ "ಅದು ಸರಿ, ಬೆಳಿಗ್ಗೆ ಖಡಕ್ ಚಾ ಒಳ್ಳೆಯದು" ಎಂದ. ಆದರೂ ಮನಸ್ಸಿನಲ್ಲಿಯೇ ಅಂದುಕೊಂಡ "ಅಬ್ಬಾ ಮೋಟಾರ್‌ಗೆ ಖರ್ಚು ಉಳಿಸುವ ಪಿಸುಣಾರಿ ಬುದ್ಧಿ" ಲೆಕ್ಕಕ್ಕೆ ಪ್ರತಿ ಲೆಕ್ಕ ಹಾಕಬೇಕೆಂದುಕೊಂಡು ಚಾದ ಹೋಟೆಲಿಗೆ ನುಗ್ಗಿದರು. ಇಬ್ಬರೂ ಚಾ ಕುಡಿದರು. "ಹೌದೋ ತಿರುಮಲಣ್ಣಾ ಚಾ ಕುಡಿದ ಮೇಲೆ ಏನಿದ್ದರೂ ಬಾಯಿ ಸಪ್ಪ ಸಪ್ಪೆ ಆಗುತ್ತದೆ. ಒಂದು ಬೀಡಿ ಸೇದಿದರೆ ಬಾಯಿ ಸಪ್ಪೆ ಆಗುವುದು ನಿಲ್ಲುತ್ತದೆ. ಬಾಯಿ ವಾಸನೆಯೂ ಹೋಗುತ್ತದೆ" ಎಂದ ಸುಬ್ಬಣ್ಣ ಕಾಯದೆ ಹೋಟೇಲಿನ ಹತ್ತಿರದ ಗೂಡಂಗಡಿಗೆ ನುಗ್ಗಿದ. ತಿರುಮಲನಿಗೂ ಗತಿಯಿಲ್ಲದೆ ಅವನ ಹಿಂದೆ ಹೋದ. ತಿರುಮಲನೇ ಬೀಡಿಯ ಕಾಸು ಕೊಡಬೇಕಾಯಿತು. ಸುಬ್ಬಣ್ಣ ಎರಡು ದಂ ಬೀಡಿ ಸೇದುವಷ್ಟರಲ್ಲಿ ಪೆರ್ಲದ ಬಸ್ ಸ್ಟ್ಯಾಂಡಿಗೆ ನೇತ್ರಾವತಿ ಮೋಟಾರ್ ಸರ್ವೀಸ್ ಬಂತು. ನೇತ್ರಾವತಿ ಮೋಟಾರ್ ಸರ್ವೀಸ್ ಅಂದರೆ ಒಂದೇ ಒಂದು ಬಸ್ಸು. ಬೆಳಿಗ್ಗೆ ಒಂದು ಟ್ರಿಪ್, ಸಂಜೆ ಒಂದು ಟ್ರಿಪ್. ಬಸ್ ಡ್ರೈವರ್ ಶಿವಪ್ಪ ಅನಾದಿ ಕಾಲದವನು. ಸದಾ ಒಂದು ಲುಂಗಿ. ಒಂದು ಖಾಕಿ ಶರಟು. ಹೆಗಲಿಗೆ ಒಂದು ಟವಲ್. ಅವನ ಸರ್ವೀಸ್‌ನಲ್ಲೇ ನಲವತ್ತು ಮೈಲಿಗಿಂತ ಹೆಚ್ಚು ವೇಗ ಹೋಗಿ ಗೊತ್ತಿಲ್ಲವೆಂದೇ ಅವನು ಹೇಳಿಕೊಳ್ಳುತ್ತಿದ್ದಾನೆ. ಡ್ರೈವರ್ ಸೀಟಿನ ಹಿಂದಿನ ಸೀಟಿನಲ್ಲಿ ಹೆಂಗಸರು ಬಿಟ್ಟರೆ ಯಾರೂ ಕೂತುಕೊಳ್ಳಬಾರದು ಎಂದು ತಾಕೀತು ಮಾಡಿದ್ದಾನೆ. ಅವನ

ಹಿಂದಿನ ಸೀಟಿನಲ್ಲಿ ಕೂತ ಹೆಂಗಸರು ಕಾಣಿಸುವಂತೆ ತನ್ನ ಎದುರಿನ ಕನ್ನಡಿಯನ್ನು ಸರಿಮಾಡಿ ಇಟ್ಟುಕೊಂಡಿದ್ದಾನೆ. ಆ ಸೀಟಲ್ಲಿ ಗಂಡಸರು ಕೂತರೆ ತುಂಬಾ ಸಿಟ್ಟು ಬರುತ್ತದೆ. ಬಸ್ಸು ನಿಲ್ಲಿಸಿದಾಗ ಬಲಗಡೆಯಲ್ಲಿರುವ ಸೈಡಿನ ಕನ್ನಡಿಯನ್ನು ಒಮ್ಮೆ ಓರೆಮಾಡಿ ಮತ್ತೆ ನೇರಮಾಡಿ ನೋಡಿಕೊಳ್ಳುತ್ತಾನೆ. ಇರುವುದೊಂದೇ ಮೋಟಾರು ಗಾಡಿಯಾದರೂ ಅದರ ಬಳಕೆ ಜನರಿಗೆ ಹೆಚ್ಚಿಲ್ಲ. ಹತ್ತಿರದ ಊರಿನಲ್ಲಿರುವ ನೆಂಟರಿಷ್ಟರನ್ನು ನೋಡಲು ಜನರು ತಮ್ಮ ಕಾಲಿನ ಬಲವನ್ನು ನಂಬಿಕೊಂಡಿದ್ದಾರೆ. ಒಂದು ಮೈಲು ಎರಡು ಮೈಲು ಅಂತ ಏನು–ಹತ್ತು ಮೈಲು ದೂರದ ತನಕ ಕಾಲು ನಡಿಗೆಯನ್ನು ನಂಬಿದವರೆ ಹೆಚ್ಚು. ಒಳದಾರಿಯಲ್ಲಿ ನಡೆಯುವಷ್ಟು ಸುಖ ಬೇರೆ ಯಾವುದರಲ್ಲಿಯೂ ಇಲ್ಲವೆಂದು ತಿಳಿದುಕೊಂಡು ಒಳಹಾದಿಯಲ್ಲಿಯೇ ನಡೆಯುವವರು ಹೆಚ್ಚು ಇರುವುದರಿಂದ ಮೋಟಾರಿನಲ್ಲಿ ದೂರದ ಕಡೆಗೆ ಓಡಾಡುವವರು ಮಾತ್ರ ಇರುತ್ತಾರೆ. ಮೋಟಾರಿನಲ್ಲಿ ಓಡಾಡಿದರೆ ಮೈಲಿಗೆಯಾಗುತ್ತದೆ. ಹೋದ ತಕ್ಷಣ ಸ್ನಾನ ಮಾಡಬೇಕೆಂದು ಹಳೆಯ ಕಾಲದವರ ಚಿಂತೆ. ಮೇಲು ಜಾತಿಯವರೂ ಮೋಟಾರಿನಲ್ಲಿರುತ್ತಾರೆಂದು ಹಳೆಯ ಕಾಲದ ಶೂದ್ರರ ಚಿಂತೆ. ಸ್ವಲ್ಪಸ್ವಲ್ಪ ಆಧುನಿಕರಾದವರು ಮಾತ್ರ ಮೋಟಾರನ್ನು ಏರುತ್ತಾರೆ. ಇಂಥ ವಿಷಯಗಳಲ್ಲಿ ಒಂದಿಷ್ಟು ತಲೆ ಬಿಸಿ ಮಾಡಿಕೊಳ್ಳದವನೆಂದರೆ ಸುಬ್ಬಣ್ಣ. ಸಮಯ ಸಂದರ್ಭ ನೋಡಿಕೊಂಡು ವ್ಯವಹರಿಸುವ ಚಾಣಾಕ್ಷ. ಅವನು ಸಂಗಡಿಗರು ಸಿಕ್ಕಿದರೆ ನಡೆಯಲೂ ತಯಾರು. ನಡೆಯುವವರು ಸಿಕ್ಕಿದರೆ "ಅಯ್ಯೋ, ಈ ಮೋಟಾರುಗಳಲ್ಲಿ ಓಡಾಡಬಾರದು, ಸೊಂಟದ ನೋವು ಮಾತ್ರ ಅದರ ಪ್ರಯೋಜನ. ಏನು ಸುಖವಿಲ್ಲ" ಅಂತ ಹೇಳುತ್ತಾನೆ. ಮೋಟಾರಿನಲ್ಲಿ ಹೋಗುವ ಎಂದರೆ ಅದಕ್ಕೆ ಸೈ." ಮೋಟಾರಿನ ಸುಖ ಯಾವುದರಲ್ಲಿದೆ. ಜಲ್ದಿ ಕೆಲಸ ಮುಗಿಯುತ್ತದೆ." ಅಂತ ಹೇಳ್ತಾನೆ. ಆದರೆ ತಿರುಮಲನತ್ರ ಒಂದು ಸ್ವಲ್ಪವಾದರೂ ಖರ್ಚು ಮಾಡಿಸಬೇಕೆಂದಿದ್ದರೆ ಮೋಟಾರಿಗೆ ಹತ್ತಬೇಕು ಅಂತ ಅವನ ಲೆಕ್ಕಚಾರ. ತಿರುಮಲನ ಲೆಕ್ಕಾಚಾರವೇ ಬೇರೆ. "ಹುಡುಗಿ ನೋಡಲು ಮೋಟಾರಿನಲ್ಲಿ ಹೋದರೆ ತನ್ನ ಜಬರದಸ್ತು ಹೆಚ್ಚುತ್ತದೆ" ಇಬ್ಬರೂ ಮನಸ್ಸಿನಲ್ಲಿ ಬೇರೆ ಬೇರೆ ಲೆಕ್ಕ ಹಾಕಿಕೊಂಡು ಕೊನೆಗೆ ಮೋಟಾರನ್ನೇರಿದರು.

ಮೋಟಾರಿನಿಂದ ಇಳಿದಾಗ ಸಮಯ ಹೆಚ್ಚು ಕಡಿಮೆ ಹತ್ತೂವರೆ ಹನ್ನೊಂದು ಗಂಟೆ ಆಗಬಹುದೋ ಏನೋ? ಬಸ್ಸಿಳಿದು ಹೊಳೆದಾಟಿ ಕಾಲು ಹಾದಿಯಲ್ಲಿ ಮಾತಾಡುತ್ತಾ ಬರುವಾಗ ದಾರಿಯಲ್ಲಿ ದುರ್ಗಾಪರಮೇಶ್ವರಿಯ ಅಣ್ಣ ಸಿಕ್ಕಿದ. ಎದುರುಗಡೆಯಿಂದ ಬರುವ ಅಪರಿಚಿತರನ್ನು ಕಂಡು "ನಿಮಗೆ ಎಲ್ಲಾಯಿತು? ದೂರ" ಎಂದು ಕೇಳಿದ. ತಿರುಮಲ ಪ್ರವರ ಒಪ್ಪಿಸಲು ಬಾಯಿ ತೆರೆಯುವಾಗಲೇ ಸುಬ್ಬಣ್ಣ 'ಕುಂಬ್ಳೆ ಸೀಮೆ ಕಡೆಯಿಂದ ಬಂದೆವು" ತಿರುಮಲ ಕಡೆಗೆ ತೋರಿಸುತ್ತಾ

'ಇವರು ಈ ಊರು ನೋಡಲು ಬಂದಿದ್ದರು. ಯಾರನ್ನೋ ಕಾಣಬೇಕಿತ್ತು.' ಎಂದ. ದುರ್ಗಾಪರಮೇಶ್ವರಿಯ ಅಣ್ಣ "ಅಯ್ಯೋ, ಹಾಗಾ ಸಮಾಚಾರ. ನಾನು ಪೇಟೆಗೆ ಹೋಗಿ ಬರ್ತೇನೆ. ನೀವು ನನ್ನ ಮನೆ ಕಡೆ ಹೋಗಿ; ಮನೆಯಲ್ಲಿ ನನ್ನ ತಂಗಿಯಿದ್ದಾಳೆ. ಮಧ್ಯಾಹ್ನ ಊಟ ಮಾಡಿ" ಎಂದ. ಸುಬ್ಬಣ್ಣನಿಗೆ ವಿವರ ಒಪ್ಪಿಸಲು ಇಷ್ಟವಾಗಲಿಲ್ಲ.

ಇಬ್ಬರೂ ಮನೆಯತ್ತ ಬರುವಾಗ ದುರ್ಗಾಪರಮೇಶ್ವರಿ ಅಡುಗೆ ಮನೆಯಲ್ಲಿದ್ದಾಳೆ. ಯಾರೋ ಬಂದುದನ್ನು ನೋಡಿ ಪಾತ್ರೆಯನ್ನು ಇಳಿಸಿ ಹಾಗೆಯೇ ಹೊರಗೆ ಬಂದಳು. ಅವಳ ಮುಖವನ್ನು ನೋಡಿ ಸುಬ್ಬಣ್ಣ ಅಂದ "ಅಕ್ಕಾ, ನಿಮ್ಮ ಮುಖದಲ್ಲಿ ಮಸಿಯಾಗಿದೆ" ಅವಳನ್ನು ನೋಡಿದ ತಿರುಮಲ ಅವಳ ಮುಖ ತೊಳೆಯಲು ಒಳಗೆ ಹೋದ ತಕ್ಷಣ ಸುಬ್ಬಣ್ಣನಿಗೆ ಅಂದ "ನನ್ನ ಒಪ್ಪಿಗೆಯುಂಟು".

* * * * *

ಮದುವೆಯಾದ ಎರಡು ವರ್ಷಗಳಲ್ಲಿ ಗಂಡನನ್ನು ಕಳೆದುಕೊಂಡ ದುರ್ಗಾಪರಮೇಶ್ವರಿ ತವರು ಮನೆಯತ್ತ ಹೊರಟಳು. ಒಂದು ಹಿಡಿ ಅನ್ನಕ್ಕೆ, ಒಂದು ಚಾಪೆಗೆ. ತವರು ಮನೆಗೆ ಬರುವಾಗ ದುರ್ಗಾಪರಮೇಶ್ವರಿ ದುಗ್ಗಮ್ಮ ಆದಳು. ಆದದ್ದು ಇಷ್ಟು: ಮದುವೆಯಾಗಿ ಒಂದು ವರ್ಷ ದಾಟಿದ ಮೇಲೆ ಹೆಂಡತಿಯ ಬಗ್ಗೆ ತಿರುಮಲನಿಗೆ ಆಸಕ್ತಿಯೂ ಕುಂದತೊಡಗಿತು. ತಂದೆ ಮನೆಯಲ್ಲಿ ಇಲ್ಲ ಎಂದಾದರೆ ಚಾವಡಿಯಲ್ಲಿ ಕುಳಿತು ಎಲೆಯಡಿಕೆ ಮೇಯುವುದು, ಹರಟೆಕೊಚ್ಚುವುದು, ಗಳಿಗೆಗೊಮ್ಮೆ, 'ಓ ಹೌದನಾ ಒಂದು ಒಳ್ಳೆ ಚಾ ಮಾಡಿತಾ, ಯಾಕೋ ತಲೆನೋವು' ಅನ್ನುವುದು. ಗಾಳಿಸೇವನೆಗೆ ಹೊರಟರೆ ಮತ್ತೆ ಮೂರು ಸಂಜೆ ಹೊತ್ತಿಗೆ ಮನೆಗೆ ಹೊಕ್ಕು ಬಿಡುವುದು ಅವನ ರೂಢಿಯಾಯಿತು.

ತಂದೆ ಮನೆಯಲ್ಲಿದ್ದರೆ ಮಾತ್ರ ಬೆಳಿಗ್ಗೆ ತಿಂಡಿ ತಿಂದು ತೋಟಕ್ಕೆ ಹೋಗಿ ಹಣ್ಣಡಿಕೆ, ಬಿದ್ದ ತೆಂಗಿನಕಾಯಿ ಹೆಕ್ಕಿಕೊಂಡು ಬರುವುದು ಮತ್ತೆ ಮಧ್ಯಾಹ್ನ ತೋಟಕ್ಕೆ ಹೋಗಿ ತೋಟ ಕಾಯಲು ಹಾಕಿದ ಮಾಳದಲ್ಲಿ ನಿದ್ದೆ ಹೊಡೆಯುವುದು ರೂಢಿ ಮಾಡಿಕೊಂಡ. "ವಯಸ್ಸಾಗುತ್ತಾ ಬಂದ ಹಾಗೆ ಮೊದಲಿನ ಹಾಗೆ ಕಣ್ಣು ಕಾಣುವುದಿಲ್ಲ. ರಾತ್ರಿ ತೋಟ ಕಾಯಲು ನನ್ನಿಂದಾಗುವುದಿಲ್ಲ" ಎಂದು ಪದೇ ಪದೇ ಹೇಳುವ ಮಹಾಬಲಭಟ್ಟರ ಮಾತಿಗೆ ಎದುರು ಮಾತಾಡುವುದು ಬೇಡವೆಂದು ತಿರುಮಲ ರಾತ್ರಿ ಒಂದೊಂದು ದಿನ ತೋಟದಲ್ಲಿ ಮಲಗುತ್ತಿದ್ದುದು ನಿಜ. ಮದುವೆಯಾದ ಹೊಸತರಲ್ಲಿ ಒಂದು ದಿನ ದುರ್ಗಾಪರಮೇಶ್ವರಿ ವಿಟ್ಲ

ಸೀಮೆಯ ಕ್ರಮದಲ್ಲಿ ಅಡುಗೆ ಮಾಡಿದ್ದಳು. ಸಿಹಿ ಸಿಹಿಯಾದ ಸಾಂಬಾರ್ ತಿಂದು ಅವಳಿಗೂ ಸಾಕಾಗಿತ್ತು. ಅವಳಿಗೆ ಅದು ಸೇರುತ್ತಲೇ ಇರಲಿಲ್ಲ. ಮಜ್ಜಿಗೆಯಲ್ಲಿ ಊಟ ಮಾಡೋಣವೆಂದರೆ ಬೆಳಿಗ್ಗೆಯೇ ಮಜ್ಜಿಗೆಗೆ ಒಂದಿಷ್ಟು ನೀರು ಸೇರಿಸಿ ಒಂದಕ್ಕೆರಡು ಮಾಡುವ ಅತ್ತೆ ದೆಸೆಯಿಂದ ಮಜ್ಜಿಗೆಯೂಟ ಅವಳಿಗೆ ಬೇಡವಾಗಿತ್ತು. ತಿರುಮಲನಂತೂ ಹೆಂಡತಿ ಊಟ ಮಾಡಿದ್ದಾಳಾ, ಬಿಟ್ಟಿದ್ದಾಳಾ ಎಂದು ಕೇಳುವ ಪೈಕಿಯೇ ಅಲ್ಲ. ಊಟವಾದ ಮೇಲೆ ಹೆಂಗಸರ ಪಂಕ್ತಿಗೆ ಯಾವುದು ಉಳಿಯಿತು. ಯಾವುದು ಬಿಟ್ಟಿತು ಎಂದು ತಿಳಿದುಕೊಳ್ಳುವುದು ತನ್ನ ಗಂಡಸುತನಕ್ಕೆ ಅವಮಾನವೆಂದು ಉಳಿದ ಗಂಡಸರಂತೆ ಭಾವಿಸಿಕೊಂಡಿದ್ದ. ಆ ದಿನ ಎಲ್ಲರೂ ಊಟ ಮಾಡುವಾಗ "ಓ, ವಿಟ್ಲ ಸೀಮೆಯ ಅಡುಗೆಯಪ್ಪ; ಬಾಯಿಗೆ ಇಡುವ ಹಾಗಿಲ್ಲ. ಇದಕ್ಕಿಂತ ಒಂದೆರಡು ತುಂಡು ಉಪ್ಪಿನಕಾಯಿ ಹಾಕಬಹುದಿತ್ತು" ಅಂತ ಹಂಗಿಸಿದ್ದೇ, ಹಂಗಿಸಿದ್ದು. ದುರ್ಗಾಪರಮೇಶ್ವರಿಗೆ ಬಂದ ಅಳುವನ್ನು ತಡೆಯಲಾಗದೆ ಹಿತ್ತಲಿನ ಕಡೆಗೆ ಹೋಗಿ ಕಣ್ಣೀರು ಸುರಿಸಿದಳು, ಅವಳಿಗೆ ದೊಡ್ಡ ಅವಮಾನ. ಆದರೆ ಉಳಿದವರು ಯಾರೂ ಬಂದು ಅವಳಿಗೆ ಸಮಾಧಾನ ಹೇಳಲಿಲ್ಲ.

ದುರ್ಗಾಪರಮೇಶ್ವರಿಯ ಮನಸ್ಸಿನಲ್ಲಿ ನಡೆದ ಮತ್ತೊಂದು ಘಟನೆ ಅವಳನ್ನು ಹಿಂಡಿ ಹಿಪ್ಪೆಮಾಡಿತು. ಮದುವೆಯಾಗಿ ಬಂದ ಮೂರನೆಯ ಅಥವಾ ನಾಲ್ಕನೆಯ ದಿನದ ಮಧ್ಯಾಹ್ನ ನಡೆದ ಸಂಗತಿಯದು. ಗಂಡಸರೆಲ್ಲಾ ಊಟವಾಗಿ ಎದ್ದುಹೋದ ಮೇಲೆ

ದುರ್ಗಾಪರಮೇಶ್ವರಿ ಬಾಳೆಲೆಯನ್ನು ತೆಗೆಯಲು ಹೊರಟಳು. ಅವಳು ಇನ್ನೇನು ತಿರುಮಲನ ಬಾಳೆಲೆಯನ್ನು ತೆಗೆಯಬೇಕೆನ್ನುವಷ್ಟರಲ್ಲಿ ತಿರುಮಲನ ತಾಯಿ, 'ಬೇಡ, ಅದನ್ನು ತೆಗೆಯಬೇಡ, ಗಂಡ ಊಟ ಮಾಡಿದ ಬಾಳೆಯೆಲೆಯಲ್ಲಿಯೇ ಹೆಂಡತಿಯೂ ಊಟ ಮಾಡಬೇಕು, ಅದು ಶಾಸ್ತ್ರ' ಅಂದರು. ದುರ್ಗಾಪರಮೇಶ್ವರಿ ತಿರುಮಲನುಂಡ ಬಾಳೆಲೆಯನ್ನು ನೋಡಿದಳು. ನುಗ್ಗೆಯನ್ನು ತಿಂದು ಅದರ ದಂಟನ್ನೂ; ಮೂಲೆಯಲ್ಲಿಟ್ಟಿದ್ದ ಕರಿಬೇವಿನ ಸೊಪ್ಪನ್ನು ನೋಡಿ ಅವಳಿಗೆ ವಾಕರಿಕೆ ಬಂದಂತೆ ಆಯಿತು. ಅರ್ಧ ತಿಂದಿಟ್ಟ ನುಗ್ಗೆಯ ದಂಟು; ಕರಿಬೇವಿನ ಸೊಪ್ಪು ತಿರುಮಲ ಊಟದ ಕೊನೆಯಲ್ಲಿ ಬಾಯಿಗೆ ಕೈಹಾಕಿ ಹಲ್ಲಿನೆಡೆಯಲ್ಲಿ ಸಿಕ್ಕಿಕೊಂಡಿದ್ದ ಚುಂಗನ್ನು ಇಟ್ಟಿದ್ದು ನೋಡಿ ಸೌಟನ್ನು ಹೊಟ್ಟೆಗೆ ಹಾಕಿ ತಿರುವಿದ ಅನುಭವವಾಯಿತು. ಗಂಡನ ಎಂಜಲೆಲೆಯಲ್ಲಿ ಊಟ ಮಾಡಬೇಕೆಂದು ಯಾವ ಶಾಸ್ತ್ರದಲ್ಲಿ ಹೇಳಿದೆ? ಸ್ವಲ್ಪ ಹೊತ್ತು ಆಲೋಚಿಸಿದಳು. ಆ ಬಾಳೆಲೆಯಲ್ಲಿ ಊಟ ಮಾಡಲು ಸಾಧ್ಯವೇ ಇಲ್ಲವೆಂದು ಅನ್ನಿಸಿತು. ಬೇಕಿದ್ದರೆ

ಶಾಸ್ತ್ರವನ್ನು ಅತ್ತೆ ಆಚರಿಸಿಕೊಳ್ಳಲಿ. ತನ್ನ ಕೈಯಲ್ಲಂತೂ ಇದು ಸಾಧ್ಯವಿಲ್ಲ'ವೆಂದು ಗಂಡನ ಎಂಜಲು ಬಾಳೆಲೆಯನ್ನು ತೆಗೆದಳು.

ತಿರುಮಲನ ತಾಯಿಗೆ ಸಿಟ್ಟು ಬಂದಿದ್ದು ನಿಜ. ಆದರೆ ಮದುವೆಯಾದ ಹೊಸತರಲ್ಲಿ ಬಯ್ಯುವುದು ಸರಿಯಲ್ಲವೆಂದುಕೊಂಡು ಸುಮ್ಮನುಳಿದಳು. ಅನಂತರ ದುರ್ಗಾಪರಮೇಶ್ವರಿಯು ಯಾವತ್ತೂ ಗಂಡನ ಎಂಜಲು ಬಾಳೆ ಎಲೆಯಲ್ಲಿ ಊಟ ಮಾಡುವ ಶಾಸ್ತ್ರದ ಕಡೆಗೆ ಮುಖ ಮಾಡಲಿಲ್ಲ. ತಿರುಮಲನ ತಾಯಿ ಒಂದೆರೆಡು ಸರ್ತಿ ಅದರ ಪ್ರಸ್ತಾಪ ಮಾಡಿದ್ದಕ್ಕೆ ದುರ್ಗಾಪರಮೇಶ್ವರಿ ಮೆತ್ತಗೆ ಆದರೂ ದೃಢವಾಗಿ ಹೇಳಿದಳು: "ನನಗೆ ಎಂಜಲೆಲೆಯಲ್ಲಿ ಊಟ ಮಾಡಲು ಸಾಧ್ಯವೇ ಇಲ್ಲ ಅತ್ಯೋರೆ" ತಿರುಮಲನ ತಾಯಿಗೆ ಇವಳು ಬೇಗನೆ ಬಾಗುವ ಕುಳವಲ್ಲ ಎಂದು ಅನಿಸಿತು. ಅತ್ತೆ ಮಾವ ತನ್ನ ಮಾತಿಗೆ ಸೊಪ್ಪು ಹಾಕದಿರುವವಳು ಮುಂದೇನು ಮಾಡಿಯಾಳು ಎಂಬ ಭಾವ ಮೂಡಿ ಬಂತು. ತಿರುಮಲನಿಗೆ ಇದ್ಯಾವುದೂ ಮುಖ್ಯವೆಂದು ಅನಿಸಲಿಲ್ಲ. ಹೆಂಡತಿಯ ಮಾತಿಗೆ ಕಿವಿಗೊಡುವುದು, ಅವಳ ಇಷ್ಟಾನಿಷ್ಟಗಳ ಬಗೆಗೆ ತಿಳಿಯುವುದು ಹೇಗೆ ಅವನಿಗೆ ಮುಖ್ಯವಾಗಿರಲಿಲ್ಲವೋ ಅದೇ ರೀತಿ ತಾಯಿಯ ಮಾತಿಗೆ ಕಿವಿಗೊಡುವುದು ಮುಖ್ಯವಾಗಿರಲಿಲ್ಲ. ಹೆಂಡತಿಗೆ ಸಲುಗೆ ಕೊಟ್ಟರೆ ಅವಳು ತಲೆಗೆ ಹತ್ತಿ ಕೂತುಕೊಳ್ತಾಳೆ. ತಾಯಿಯ ಮಾತಿಗೆ ತಲೆಕೊಟ್ಟರೆ ಕವಡೆಕಾಸಿನ ಬೆಲೆಯಿಲ್ಲ. ಹೆಂಡತಿಯೆಂದರೆ ಅಷ್ಟೆ: "ಶಯನೇಶು ವೇಶ್ಯಾ." ಇಡೀ ಮನೆಯಲ್ಲಿ ತನ್ನ ಮಾತನ್ನು ಕೇಳುವ ಜೀವವಿಲ್ಲವೆಂದು ದುರ್ಗಾಪರಮೇಶ್ವರಿಗೆ ಆವಾಗಲೇ ಅನಿಸಿತ್ತು. ಮಾತು ಮಾತಿಗೆ ಕುಂಬ್ಳೆ ಸೀಮೆ, ವಿಟ್ಲ ಸೀಮೆಯ ಸುದ್ದಿ ಮಾತ್ರ ತಪ್ಪಲಿಲ್ಲ–'ವಿಟ್ಲ ಸೀಮೆಯವರಿಗೆ ಏನು ಗೊತ್ತು?' ಇದು ದಿನದ ಮಾತು.

ಒಂದು ದಿವಸ ರಾತ್ರಿ ತಿರುಮಲ ತೋಟ ಕಾವಲಿಗೆ ಹೋದವನು ಮರುದಿನ ಬೆಳಿಗ್ಗೆ ಎಷ್ಟು ಹೊತ್ತಾದರೂ ಬರಲಿಲ್ಲ. ನೋಡಿದರೆ ಅವನು ತೋಟದ ಮಾಳದಲ್ಲಿ ಹೆಣವಾಗಿ ಮಲಗಿದ್ದಾನೆ. ಮೈಯಿಡೀ ಪಚ್ಚೆಯಾಗಿದೆ. ಹೆಣ ನೋಡಿ ಯಾರಿಗೂ ಸಂಶಯ ಬರಲಿಲ್ಲ. ಹಾವು ಕಚ್ಚಿದೆ. ಆ ದಿನ ದುರ್ಗಾಪರಮೇಶ್ವರಿಗೆ ಆದ ದುಃಖಕ್ಕೆ ಮಿತಿಯಿಲ್ಲ. ವರ್ಷಾಂತಿಕ ಆಗುವ ಹೊತ್ತಿಗೆ ಅವಳ ಭವಿಷ್ಯ ಏನಾಗಬೇಕು ಎನ್ನುವ ತೀರ್ಮಾನವೂ ಆಯಿತು. ವರ್ಷಾಂತಿಕದ ಸಂಜೆ ಊಟವಾದ ಮೇಲೆ ನಾಕು ಸಮಸ್ತರ ಎದುರು ಮಹಾಬಲ ಭಟ್ಟರೇ ಬಾಯಿತೆರೆದರು. "ದುಗ್ಗಮ್ಮನ ಮುಂದಿನ ಕತೆಯೇನು ಅಂತ ನಾಕು ಸಮಸ್ತರು ನಿರ್ಣಯ ಮಾಡಬೇಕು. ಅವಳಿಗೆ ಮಗುವಿದ್ದಿದ್ದರೆ ಬೇರೆ ಪ್ರಶ್ನೆಯಿತ್ತು. ಈಗ ಆ ಪ್ರಶ್ನೆಯಿಲ್ಲ" ಎಂದು ಹೇಳುತ್ತಾ ಅಡಿಕೆಯ ಚೂರನ್ನು ಬಾಯಿಗೆ ಹಾಕಿಕೊಂಡರು.

ವರ್ಷಾಂತಿಕಕ್ಕೆ ಬಂದ ಪುರೋಹಿತರೂ ಎಲೆ ಅಡಿಕೆಯ ತಟ್ಟೆಗೆ ಕೈಹಾಕುತ್ತಾ "ಲೆಕ್ಕ ಪ್ರಕಾರ ಅವಳು ಇಲ್ಲಿಯೇ ಇರಬೇಕು" ಎಂದರು. ಚಾವಡಿಯಲ್ಲಿ ತನ್ನ ಬಗೆಗೆ ನಡೆಯುತ್ತಿರುವ ಮಾತುಕತೆಯನ್ನು ಕೇಳಿಸಿಕೊಂಡ ದುಗ್ಗಮ್ಮನೂ ನಾಕು ಜನರಿಗೆ ಕಾಣಿಸದಂತೆ ಬಾಗಿಲ ಮರೆಯಲ್ಲಿ ಅಳುತ್ತಾ ಕುಳಿತುಕೊಂಡಳು. ಊರಿನ ಗುರಿಕಾರರು ಮಾತ್ರ ಸ್ವಲ್ಪ ಯೋಚಿಸುವಂತೆ ಕಾಣಿಸಿತು. ಅವರು ಆಲೋಚಿಸುವುದನ್ನು ನೋಡಿ ಪುರೋಹಿತರೆ, "ಗುರಿಕಾರರಾಗಲೀ, ಅವಳ ಅಣ್ಣನಾಗಲೀ ಏನಾದರೂ ಒಂದು ಮಾತು ಹೇಳಿದರೆ ಮುಂದಿನದನ್ನು ಯೋಚಿಸಬಹುದು" ಎಂದರು. ದುರ್ಗಾಪರಮೇಶ್ವರಿಯ ಅಣ್ಣ "ಕುಂಬಳ ಬಳ್ಳಿಗೆ ಕುಂಬಳಕಾಯಿ ಭಾರವಲ್ಲ. ನಾನು ಅವಳನ್ನು ಕರಕೊಂಡು ಹೋಗ್ತೇನೆ" ಎಂದ. ಮಹಾಬಲಭಟ್ಟರು, "ನಾನು ಹೇಳ್ತೇನೆ ಅಂತ ಯಾರೂ ಏನೂ ತಿಳಿದುಕೊಳ್ಳಬಾರದು ಹೆಣ್ಣು ಕೂಸು ಅದು. ಅವಳಿಗೂ ಅವಳ ಅತ್ತೆಗೂ ಹೊಂದಾಣಿಕೆ ಅಷ್ಟಕಷ್ಟೆ. ಅದಕ್ಕಿಂತ ಹೆಚ್ಚಾಗಿ ಯಾವ ಸುಖಕ್ಕೆ ಅಂತ ಇಲ್ಲಿರಬೇಕು ಹೇಳಿ. ನಮ್ಗೆ ಕುಂಭೈ ಸೀಮೆಯವರಿಗೆ, ಹಿಂದೆ ಒಂದು ಮುಂದೆ ಒಂದು ಅಂತ ಮಾತಾಡಿ ಗೊತ್ತಿಲ್ಲ. ತೌರುಮನೆಯ ಸಂಬಂಧ ಕಡಿದು ಬಂದವಳು ಪುನಃ ಅಲ್ಲಿಗೆ ಹೋಗಬೇಕು. ಇಲ್ಲಿ ಏನಿದೆ ಅವಳಿಗೆ ಮಕ್ಕಳೇ ಸಂಸಾರವೇ? ಅದಕ್ಕೆ ಅವಳು ಬೇಕಿದ್ದರೆ ತವರು ಮನೆಗೆ ಹೋಗಲಿ. ಬೇಕಾದಾಗ ಬಂದು ಹೋಗ್ತಾ ಇರಲಿ" ಎಂದರು. ಈಗ ಗುರಿಕಾರರು ಬಾಯಿ ತೆರೆದರು, "ಈಗ ಅವಳು ತವರು ಮನೆಗೆ ಹೋಗುವುದೋ ಅಥವಾ ಇಲ್ಲಿಯೇ ಇರುವುದೋ ಅನ್ನುವುದು ಶಾಸ್ತ್ರದ ಪ್ರಶ್ನೆಯಿಲ್ಲ. ಅವಳ ತವರು ಮನೆಯಲ್ಲಿರುವುದು ಒಂದು ಅಂಗೈ ಅಗಲದ ಜಾಗ. ಅವಳ ಅಣ್ಣನೂ ಸಂಸಾರವಂದಿಗ. ನನ್ನನ್ನು ಕೇಳಿದರೆ ಮಹಾಬಲಭಟ್ಟರು ಅವಳ ಅಶನಾರ್ಥಕ್ಕೆ ಅಂತ ಒಂದು ಮುಡಿ ಅಕ್ಕಿಯನ್ನಾದರೂ ವರ್ಷಕ್ಕೆ ಒಂದು ಸಾರಿ ಕಳಿಸಿಕೊಡಲಿ, ಏನಂತೀರಿ ಪುರೋಹಿತರೆ", ಗುರಿಕಾರರ ಮಾತಿಗೆ ಎಲ್ಲರೂ ತಲೆಯಲ್ಲಾಡಿಸಿದರು.

ದುರ್ಗಾಪರಮೇಶ್ವರಿಯು ಅವರ ಮಾತನ್ನು ಕೇಳಿ ಸೀರೆಯ ಸೆರಗಿನಲ್ಲಿ ಕಣ್ಣೀರು ಒರಸಿಕೊಂಡಳು. ಅವಳ ಅಣ್ಣನಿಗೆ ಏನನ್ನಿಸಿತೋ ಏನೋ ತಕ್ಷಣ "ನನ್ನ ತಂಗಿಗೂ ಒಂದು ಮಾತು ಕೇಳ್ತೇನೆ" ಅಂದ. ಅವಳು ಒಳಗಡೆ ಬಂದು "ಇಲ್ಲಿಗೆ ನಿನ್ನ ಇಲ್ಲಿನ ನೀರಿನ ಋಣ ಮುಗಿಯಿತು. ಬರ್ತಿ ಅಂತಾದರೆ ಬಾ" ಅಂದ. ದುರ್ಗಾಪರಮೇಶ್ವರಿಯೂ ಹೂಂಗುಟ್ಟಿದಳು. ಅಣ್ಣನ ಮನೆಗೆ ಬಂದವಳು ಎಲ್ಲರ ಬಾಯಲ್ಲಿ 'ದುಗ್ಗಮ್ಮ' ಅಂತ ಕರೆಸಿಕೊಂಡಳು.

ಇಂಥ ದುಗ್ಗಮ್ಮನನ್ನು ನಾನು ಭೇಟಿಯಾದಾಗ ಅವಳು ಹಣ್ಣು ಹಣ್ಣು ಮುದುಕಿ. ಬೆಳಿಗ್ಗೆ ಒಮ್ಮೆ, ಸಂಜೆ ಒಮ್ಮೆ ತುಳಸಿಕಟ್ಟೆಗೆ ಸುತ್ತು ಹಾಕಿ ಕೈಯಲ್ಲೊಂದು

ತುಳಸಿ ಸರ ಹಿಡಿದುಕೊಂಡು ರಾಮ ರಾಮ, ಶಿವ ಶಿವಾ ಅಂತ ಹೇಳುವುದು. ಅದು ಮುಗಿದ ಮೇಲೆ ಚಾವಡಿಯ ಮೂಲೆಯಲ್ಲಿ ಚಾಪೆ ಬಿಡಿಸಿಕೊಂಡು ಕೂರುವುದು ಮಾತ್ರ ಮಾಡುತ್ತಿದ್ದಳು. ಅವಳ ಕತೆ ಅಷ್ಟು ಮಾತ್ರವಾಗಿರಲಿಲ್ಲ:

* * * * *

**"ಬಾಲಕsರಿಲ್ಲದ ಬಾಲಿದ್ಯಾತರಜನ್ಮ?**
**ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದ್ಹಾಂಗ॥ ॥**
**ಅಂತ ಹಾಡಿದೆಯೆಂದು ಹೇಳುತ್ತಿದ್ದಳು. ಅವಳ ಮಟ್ಟಿಗದು ಅರ್ಧ ಸತ್ಯ."**

ಬ್ರಹ್ಮ ಹತ್ಯೆ, ಸುರಾಪಾನ, ಸ್ತೇಯ ಮತ್ತು ಗುರುತಲ್ಪ ಗಮನವನ್ನು ಮಹಾಪಾತಕವೆಂದು ಗೌತಮದಿಂದ ಹಿಡಿದು ಮನು, ಯಾಜ್ಞವಲ್ಕ್ಯರು ಹೇಳಿದ್ದಾರೆ. ಪಾಪಿಗಳೊಡನೆ ಸೇರುವುದೂ ಮಹಾಪಾತಕವಾಗಿದೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 285)

ತಾಯಿ, ಮಗಳು, ಸೊಸೆಯರೊಡನೆ ನಡೆಸಿದ ವ್ಯಭಿಚಾರಕ್ಕೆ ಅಗ್ನಿ ಪ್ರವೇಶವೇ ಪ್ರಾಯಶ್ಚಿತ್ತವೆಂದು ವಿಷ್ಣುವು ಹೇಳುತ್ತಾನೆ. ಮನುವಿನ ಪ್ರಕಾರ ಬ್ರಹ್ಮಘ್ನನು ಸ್ವೇಚ್ಛೆಯಿಂದಲೇ ಬಿಲ್ಲಾಳುಗಳ ಬಾಣಕ್ಕೆ ಗುರಿಯಾಗಬೇಕು. ಯಾಜ್ಞವಲ್ಕ್ಯನು ಶರೀರದ ಅತೀ ಮುಖ್ಯ ಭಾಗಗಳನ್ನು ಯಜ್ಞಕ್ಕೆ ಆಹುತಿ ಮಾಡಬೇಕೆಂದು ಹೇಳುತ್ತಾನೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 286)

ಬ್ರಹ್ಮಹತ್ಯದೋಷಕ್ಕೆ ಮನು ಮತ್ತು ಯಾಜ್ಞವಲ್ಕ್ಯರು ಹನ್ನೆರಡು ವರ್ಷ ವ್ರತವಾಚರಿಸಬೇಕೆಂದು ಹೇಳುತ್ತಾರೆ. ಅನುದ್ದೇಶಪೂರ್ವಕ ನರಹತ್ಯೆ ಮಾಡಿದವನು ಕಾಡಿನಲ್ಲಿ ಗುಡಿಸಲನ್ನು ಕಟ್ಟಿಕೊಂಡು ಭಿಕ್ಷೆ ಬೇಡಿಕೊಂಡು ಮೃತನ ತಲೆಬುರುಡೆಯನ್ನು ಲಾಂಛನವನ್ನಾಗಿಸಿಕೊಂಡು ಇರಬೇಕಾಗುತ್ತದೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 286)

ಸಂಸಾರಗಳಲ್ಲಿ ಮೊಟ್ಟಮೊದಲನೆಯದು ಗರ್ಭಾದಾನ. ಯಕ್ತಕಾಲದಲ್ಲಿ ದಂಪತಿಗಳು ಒಟ್ಟುಗೂಡಿ ಪಿತೃಋಣವನ್ನು ತೀರಿಸಲು ಕೈಗೊಳ್ಳುವ ಕ್ರಮವು ಗರ್ಭಾದಾನವೆಂದೆನ್ನಿಸುತ್ತದೆ. ಶ್ರುತಿಗಳ ಪಿತೃ ಋಣ ತೀರಿಸದಿದ್ದರೆ ನರಕ ಪ್ರಾಪ್ತಿಯಾಗುತ್ತದೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 294)

ಸಂಸ್ಕಾರ ಎಂಬ ಪದವು ಕೃ ಮೂಲ ಧಾತುವಿನಿಂದ ಜನಿಸಿ ಸಂ ಎಂಬ ಉಪಸರ್ಗ ಮತ್ತು 'ಘುಸ್' ಎಂಬ ಅಂತ್ಯ ಪ್ರತ್ಯಯದಿಂದ ಒಡಗೂಡಿ ಅನೇಕ ಅರ್ಥಗಳಲ್ಲಿ ಬಳಕೆಯಾಗಿದೆ. ಮೀಮಾಂಸಕರು ಯಜ್ಞಾಹುತಿ, ಪ್ರೋಕ್ಷಣೆ, ಕರ್ಮದಿಂದ ಉದಿಸುವ ಕರ್ಮಗಳೇ ಸಂಸ್ಕಾರಗಳೆಂದು ಕರೆದಿದ್ದಾರೆ.

ನೈಯಾಯಿಕರು ಶರೀರ ಪ್ರವೃತ್ತಿಯಿಂದ ಉದಿಸಿದ ಆತ್ಮದ ಒಂದು ಕೃತಕ ಧರ್ಮಗುಣವೆಂದು ಕರೆದರು ಅದ್ವೈತಿಗಳು ಶರೀರಪ್ರವೃತ್ತಿಯಿಂದ ಉದಿಸಿದ ಆತ್ಮದ ಒಂದು ಕೃತಕ ಗುಣಧರ್ಮವೆಂದು ಕರೆದರು. ನೈಯಾಯಿಕರು ಅನುಭವಗಳಾಗಿರುವ ಸ್ವಯಂ ಪುನರು ತ್ಪತ್ತಿ ಶಕ್ತಿಯೆಂದು ಕರೆದರು.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 291)ಈ ಗುಣ ಧರ್ಮಗಳು ಕೂಡಾ ನೈತಿಕವಾಗಿ ಸರಿಯಾದ ಕ್ರಮವೆಂದು ಹೇಳಲಾಗಿದೆ

1. ಗರ್ಭಧಾರಣ 2. ಪುಂಸವನ 3. ಸೀಮಂತೋನ್ನಯನ 4. ಜಾತಕರ್ಮ 5. ನಾಮಕರಣ 6. ನಿಷ್ಕ್ರಮಣ 7. ಅನ್ನಪ್ರಾಶನ 8. ಚೂಡಾಕರಣ 9. ಕರ್ಣವೇಧ 10. ವಿದ್ಯಾರಂಭ ಅಥವಾ ಅಕ್ಷರಾರಂಭ 11. ಉಪನಯನ 12. ವೇದಾರಂಭ 13. ಶೇಶಾಂತ 14. ಸಮಾವರ್ತನ 15. ವಿವಾಹ 16. ಅಂತೇಷ್ಟಿ ಇವು ಹತ್ತು ಹನ್ನೆರಡು ಮತ್ತು ಹದಿಮೂರು ಆಮೇಲೆ ಆರಂಭವಾದವು.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 291)ಸಂಸ್ಕಾರವನ್ನು ಬಹಳ ಮುಖ್ಯವೆಂದು ಹೇಳಲಾಗಿದೆ.ಸಂಸ್ಕಾರದಲ್ಲಿ ಬದಲಾವಣೆಯಾದರೆ ಅದನ್ನೂ ತಪ್ಪು ಎಂದು ಹೇಳುತ್ತಿದ್ದರು.

ಗರ್ಭಧಾರಣೆಯು ನಿಶ್ಚಿತವಾದ ಮೇಲೆ ತಾಯಿಗೆ ಶಾರೀರಿಕ ಮತ್ತು ಮಾನಸಿಕ ಚಿಕಿತ್ಸೆಯನ್ನು ನೀಡಲಾಗುತ್ತದೆ. ಗರ್ಭಧಾರಣೆಯಾದ ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಚಂದ್ರನು ಪುರುಷ ನಕ್ಷತ್ರದಲ್ಲಿರುವಾಗ ಅದರಲ್ಲಿಯೂ ಶಿಷ್ಯ ನಕ್ಷತ್ರದಲ್ಲಿರುವ ಯಾವುದಾದರೂ ಒಂದು ದಿನ ಪುಂಸವನವನ್ನು ಆಚರಿಸಲಾಗುವುದು. ಆ ದಿನ ತಾಯಿಯು ಉಪವಾಸವಿರುತ್ತಾಳೆ. ಮತ್ತು ಆಲದ ಮರದ ಕುಡಿಯನ್ನು ಕುಟ್ಟಿ ತೆಗೆದ ರಸವನ್ನು ಆ ರಾತ್ರಿ 'ಹಿರಣ್ಯಗರ್ಭಾಹ' ಮುಂತಾದ ವೇದಮಂತ್ರಗಳನ್ನು ಉಚ್ಚರಿಸುತ್ತಾ ಆಕೆಯ ಮೂಗಿನ ಹೊಳ್ಳೆಯಲ್ಲಿ ಹಾಕುತ್ತಾರೆ. ಪುರುಷ ನಕ್ಷತ್ರದೊಂದಿಗೆ ಚಂದ್ರನ ಸಂಯೋಗವಾಗುವುದು ಗಂಡು ಸಂತಾನ ಇಲ್ಲವೆ ಪೌರುಷವುಳ್ಳ ಶಿಶುವಿನ ಜನನದ ಸೂಚಕ. ಆದ್ದರಿಂದಲೇ ಪುಂಸವನವೆಂದರೆ ಭ್ರೂಣವನ್ನು ಸ್ವಚ್ಛಗೊಳಿಸಲಾಗುತ್ತದೆ. ಸುಶ್ರುತನು ವಟಶುಂಗ, ಸಹದೇವಿ ಮತ್ತು

ವಿಶ್ವದೇವ ಎಂಬ ಗಳನ್ನು ಹಾಲಿನೊಂದಿಗೆ ಪುಡಿಮಾಡಿ ಗರ್ಭಿಣಿ ಸ್ತ್ರೀಯ 'ಮೂಗಿನ ಬಲಹೊಳ್ಳೆಯಲ್ಲಿ ಮೂರು ನಾಲ್ಕು ತೊಟ್ಟನ್ನು ಹಾಕಿದಲ್ಲಿ ಗಂಡು ಸಂತಾನವಾಗುವುದೆಂದು ಹೇಳಿದ್ದಾನೆ. (ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 294)

ಆಚರಣೆಗೂ ಒಂದು ರೀತಿಯ ವಿಶಿಷ್ಟತೆಯಿದೆ. ಆಚರಣೆಯ ವಿರೋಧ ನ್ಯಾಯ ಸಮ್ಮತವಲ್ಲ.

**1992**
**ಜನವರಿ**
**27**

ನನಗೆ ಇದು ತಿಳಿದು ಮಾಡಿದೆನೋ ಅಥವಾ ತಿಳಿಯದೆ ಮಾಡಿದೆನೋ ಅಂತ ಅನೇಕ ವರ್ಷಗಳ ತನಕ ಅರ್ಥವಾಗಲಿಲ್ಲ. ಆಗ ಅದು ಸರಿಯಾಗಿ ಅರ್ಥಪೂರ್ಣವಾದುದೆಂದು ಅನಿಸಲಿಲ್ಲ. ಈಗ ಇದು ಇದ್ದಕಿದ್ದಂತೆ ನೆನಪಿಗೆ ಬಂದಿದೆ. ಮುಂದೆ ಯಾವುದನ್ನು ಹೇಳಲಿದ್ದೇನೆ ಎಂದು ತಿಳಿಯದ ಹೊತ್ತಿನಲ್ಲಿ ಹೇಳಲಿರುವ ವಿಷಯಗಳ ಚಿತ್ರ ಒಮ್ಮೊಮ್ಮೆ ಕಣ್ಣಮುಂದೆ ಸುಳಿಯುತ್ತದೆ. ಶನಿವಾರ ಸಂಜೆಯದು–ಮೂರು ಗಂಟೆ ದಾಟಿರಬೇಕು. ಮೌನ ಒಂದರ ಹೊರತು ಮತ್ತೇನೂ ಇಲ್ಲ. ಮೌನ–ಮೌನ–ಮೌನ! ಇಂಥದ್ದೇ ಒಂದು ಶನಿವಾರ. ಸರಿಸುಮಾರು ಇಷ್ಟು ಹೊತ್ತಿಗೆ ನನಗೆ ಅವಳ ಭೇಟಿಯಾಯಿತು. ಅವಳ ವಯಸ್ಸು ಆಗ ಹದಿನಾಲ್ಕೋ–ಹದಿನೈದು ಇರಬಹುದು. ಅದೂ ನನಗೆ ಸರಿಯಾಗಿ ಗೊತ್ತಿಲ್ಲ. ನನ್ನ ವಯಸ್ಸು ಆಗ ಹದಿನೆಂಟು ಅಂತ ಕಾಣುತ್ತದೆ. ಅದು ನನ್ನ ಜೀವನದಲ್ಲಿ ನಡೆಯುತ್ತಿರಲಿಲ್ಲ. ನಡೆಯಬಾರದಿತ್ತು. ಆದರೂ ಅದು ನಡೆದಿದೆ ಮತ್ತು ನನ್ನ ಹೃದಯದಲ್ಲಿ ಒಂದು ಗೆರೆಯೆಳೆದು ಅದರಲ್ಲಿ ಒಂದು ಕಪ್ಪು ಚುಕ್ಕೆಯಿಟ್ಟು ಹೋಗಿದೆ. ಅವನ್ನು ಒರಸಿಹಾಕಲು ನಾನು ಅನೇಕ ವರ್ಷ ಪ್ರಯತ್ನ ಮಾಡಿದೆ. ಒರೆಸಿ ಹಾಕಲು ಸಾಧ್ಯವಾಗದೆ ಕಷ್ಟಪಟ್ಟಿದ್ದೇನೆ. ಶಾಂಭವಿ ಅಂತ ಅವಳ ಹೆಸರು. ನೋಡಲು ತುಂಬಾ ಚೆನ್ನಾಗಿದ್ದಳು. ದುಂಡಗಿನ ಮುಖ. ಅವಳ ಅಪ್ಪ–ಅಮ್ಮನಿಗೆ ಅವಳು ಮತ್ತು ಅವಳ ತಮ್ಮ ವೇದಪ್ರಕಾಶ ಇಬ್ಬರೇ ಮಕ್ಕಳು. ಅವಳ ಅಪ್ಪನಿಗೆ ಹೆಚ್ಚು ಕಡಿಮೆ ಹನ್ನೆರಡು ಎಕ್ರೆ ಜಮೀನು. ಅದರಲ್ಲಿ ಆರು ಎಕ್ರೆ ಅಡಿಕೆ ತೋಟ. ಒಂದೂವರೆ ಎಕ್ರೆ ಗದ್ದೆ. ಊರಿನಲ್ಲಿ ಮೊಟ್ಟ ಮೊದಲು ಮಹೀಂದ್ರಾ ಜೀಪ್ ಇಟ್ಟುಕೊಂಡವರು ಅವರು ಮಾತ್ರ. ಅವಳ ಅಮ್ಮನ ಹೆಸರು ಸಾವಿತ್ರಿ, ತಂದೆ ಸುಬ್ರಹ್ಮಣ್ಯ. ಒಬ್ಬಳೇ ಮಗಳಾದ್ದರಿಂದ ಅವಳನ್ನು ತುಂಬಾ ಪ್ರೀತಿಯಿಂದ ಸಾಕಿದರು. ಅವಳು ಹೈಸ್ಕೂಲಿಗೆ ಸೇರುವಾಗ ನಾನು ಪಿ.ಯು.ಸಿ. ಯನ್ನು ಓದಲು ಸೇರಿದ್ದೆ. ಮಾತು ಅಂದರೆ ಮಾತು. ಅವಳ ಮಾತು ತೊಳೆದಿಟ್ಟ ಮುತ್ತಿನಂತೆ ಅಂತ ಈಗಲೂ ಅನಿಸುತ್ತದೆ. ತುಂಬಾ ಒಳ್ಳೆಯ ಹುಡುಗಿ. ಮುಖದಲ್ಲಿ ಒಂದು ಕಳೆ ಮಿನುಗುತ್ತಿತ್ತು. ಪ್ರತಿಯೊಂದು ಭಾಷಣ ಸ್ಪರ್ಧೆಯಲ್ಲಿಯೂ ಅವಳ ಹೆಸರಿರುತ್ತಿತ್ತು. ನನ್ನದೂ ಇರುತ್ತಿತ್ತು. ನಾನು ಸೇರಿದ ವರ್ಷ ಮೊಟ್ಟಮೊದಲು ವಿದ್ಯಾರ್ಥಿ ಸರಕಾರ

ಅಂತ ಜಾರಿಗೆ ಬಂತು. ಶಾಲೆಯ ವಿದ್ಯಾರ್ಥಿ ಸರಕಾರದಲ್ಲಿ ನಾನು ಸಾಂಸ್ಕೃತಿಕ ಮಂತ್ರಿ, ಅವಳು ಉಪ – ಸಾಂಸ್ಕೃತಿಕ ಮಂತ್ರಿ. ಮೋಹನ್ ಆಳ್ವ ವಿದ್ಯಾರ್ಥಿ ಸರಕಾರದಲ್ಲಿ ಮುಖ್ಯಮಂತ್ರಿ, ರಾಮಚಂದ್ರ ಏನಕಲ್ಲು ವಿರೋಧಿ ನಾಯಕ. ಮೊದಲ ವಿದ್ಯಾರ್ಥಿ ಸರಕಾರದ ಅಧಿವೇಶನವು ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಎದುರು ನಡೆಯಿತು. ಆ ದಿನ ಯಾರ‍್ಯಾರಿಗೆ ಯಾವ್ಯಾವ ಪ್ರಶ್ನೆಗಳು ಬಂದವು ಅಂತ ನನಗೆ ನೆನಪಿಲ್ಲ. ಅಧಿವೇಶನದಲ್ಲಿ ಶಾಂಭವಿ ನನ್ನ ಪಕ್ಕದಲ್ಲಿ ಕುಳಿತಿದ್ದಳು. ನನಗೆ ಒಳಗೊಳಗೆ ಭಯ ಮತ್ತು ಆತಂಕ. ಈವತ್ತಿಗೂ ಅಷ್ಟೆ ಸಾರ್ವಜನಿಕರ ಎದುರು ಮಾತಾಡುವುದು ಅಂದರೆ ತುಂಬಾ ಸಂಕೋಚ. ಜನರೆದುರು ನಿಲ್ಲುವುದು; ನಾಕಾರು ಜನರೊಂದಿಗೆ ಹರಟೆ ಹೊಡೆಯುವುದು, ನಗಿಸುವುದು, ನಾಟಕ ಮಾಡುವುದು. ಯಾವುದೂ ನನ್ನ ಕೈಯಲ್ಲಿ ಆಗುವುದಿಲ್ಲ. ನಾನು ಮುದುಡಿಕೊಳ್ಳುತ್ತೇನೆ:– ನಾಚಿಕೆ ಮುಳ್ಳಿನಂತೆ! ಅವರ‍್ಯಾರಾದರೂ ತಮಾಷೆ ಮಾಡಿದರೆ ದಿನಗಟ್ಟಲೆಯೇನು, ವರ್ಷಗಟ್ಟಲೆ ಅದರ ಬಗ್ಗೆ ಆಲೋಚಿಸುತ್ತೇನೆ.

ಶಾಂಭವಿ ಆ ದಿನ ನನ್ನ ಪಕ್ಕದಲ್ಲಿ ಕುಳಿತವಳು ಯಾವುದಕ್ಕೂ ಹೆದರಿದ ಹಾಗೆ ಕಾಣಿಸಲಿಲ್ಲ. ಅವಳಿಗೆ ಅಪಾರವಾದ ಧೈರ್ಯವಿದೆಯೆಂದು ನನಗನ್ನಿಸಿತು. ವಿರೋಧಪಕ್ಷದ ನಾಯಕ ರಾಮಚಂದ್ರ ಏನಕಲ್ಲು ನನಗೆ ಒಂದು ಪ್ರಶ್ನೆಯನ್ನು ಕೇಳಿದ, "ಈ ವರ್ಷ ಶಾಲೆಯ ಗೋಡೆ ಬರಹದ ಪತ್ರಿಕೆ ಬಂದಿಲ್ಲ ಯಾಕೆ? ಸಾಂಸ್ಕೃತಿಕ ಮಂತ್ರಿಗಳು ಉತ್ತರಿಸಬೇಕು" ನಾನು ಉತ್ತರಕ್ಕೆ ತಡಕಾಡಿ ಮೋಹನ್ ಆಳ್ವನ ಮುಖ ನೋಡಿದೆ. ನಾನು ಉತ್ತರಿಸುವುದಕ್ಕೆ ತಡಕಾಡುವುದನ್ನು ಕಂಡು ರಾಮಚಂದ್ರ ವ್ಯಂಗ್ಯದಲ್ಲಿ, "ಸಾಂಸ್ಕೃತಿಕ ಮಂತ್ರಿಗಳಿಗೆ ಉತ್ತರಕೊಡಲು ಆಗಿಲ್ಲವೆಂದಾದರೆ ಉಪಸಾಂಸ್ಕೃತಿಕ ಮಂತ್ರಿಗಳು ಹೇಳಲಿ" ಎಂದ. ತಟ್ಟನೆ ಶಾಂಭವಿ, "ಗೋಡೆ ಬರಹದ ಪತ್ರಿಕೆ ಬರುವುದಿಲ್ಲ ಅನ್ನುವುದು ನಿಜ. ಆದರೆ ವಿರೋಧಿ ನಾಯಕರು ಗೋಡೆ ಬರಹವನ್ನು ಬರೆಯುವುದು ನಿಲ್ಲಿಸಿಲ್ಲ. ಲೇಡಿಸ್ ಟಾಯ್ಲೆಟಿನಲ್ಲಿಯೂ ವಿರೋಧಿನಾಯಕರು ಬರೆಯುತ್ತಾರೆ" ಎಂದಳು. ಇಡೀ ಸಭೆ ಗೊಳ್ಳೆಂದು ನಗಾಡಿದಾಗ ರಾಮಚಂದ್ರನ ಮುಖ ಸಪ್ಪಗಾಯಿತು. ಸ್ಪೀಕರ್ ಜಾಗದಲ್ಲಿ ಕುಳಿತಿದ್ದ ರಜಾಕ್ "ಶಾಂತಿ, ಶಾಂತಿ" ಎಂದು ಬೆಲ್ ಹೊಡೆದ, ನನಗೂ ಅದನ್ನು ಕೇಳಿ ನಗೆ ಬಂತು. ಅಲ್ಲಿಂದ ಅನಂತರ ನಾನೂ ಶಾಂಭವಿ ವಾರಕ್ಕೊಮ್ಮೆಯಾದರೂ ಪರಸ್ಪರ ಮಾತಾಡಬೇಕಿತ್ತು. ಆ ಪರಿಚಯದಿಂದ ನನಗೂ ಅವಳಲ್ಲಿ ಮಾತಾಡುವಾಗ ಸಂಕೋಚವಿರಲಿಲ್ಲ. ಒಂದು ದಿನದ ಶನಿವಾರ ಅವಳು ನನ್ನ ಹತ್ತಿರ "ನಾನು ನಿನ್ನನ್ನು ಪ್ರೀತಿಸುತ್ತೇನೆ" ಅಂದಳು. ನಾನು ಮೆಲ್ಲನೆ ಅವಳ ಕೈಯನ್ನು ಹಿಡಿದುಕೊಂಡೆ–ಒಂದು ಮಲ್ಲಿಗೆಯನ್ನು ಹಿಡಿಯುವಂತೆ. ಆ ದಿನ

ನಾನು ಹಾಕಿಕೊಂಡದ್ದು ಕಡುನೀಲಿ ಶರಟನ್ನು. ಸುಮಾರು ವರ್ಷ ಅದನ್ನು ಹಾಗೇ ಇರಿಸಿಕೊಂಡದ್ದೆ. ಆದರೆ ಒಂದು ದಿನ ಬಹಳ ವರ್ಷಗಳ ತರುವಾಯ ಯಾರನ್ನೋ ಮದುವೆಯಾದಳು. ಅಂದಿನಿಂದ ನನಗೆ ನೀಲಿ ಶರ್ಟೆಂದರೆ ಇಷ್ಟವಿಲ್ಲ. ನನ್ನ ಮನಸ್ಸಿನಾಳದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಅಲೆಯನ್ನು ರೂಪಿಸಿದ್ದು ಯಾವ ಘಟನೆಯೆಂದು ಕೇಳಿದರೆ ಈಗ ಹೇಳುವುದು ಕಷ್ಟವಾಗುತ್ತದೆ. ಶಾಂಭವಿಯ ಮೃದುವಾದ ಕೆಂಪು ಅಂಗೈ, ಅವಳ ಮಾತಿನ ಕ್ರಮ, ಅವಳು ನನ್ನಲ್ಲಿ ಇಟ್ಟುಕೊಂಡಿದ್ದ ಪ್ರೀತಿ ನನ್ನ ಮೇಲೆ ಯಾವುದೋ ಅಲೆಯಂತೆ ಬೀಸಿ ಕೆಲವು ವರ್ಷದ ಮೇಲೆ ಮಾಯವಾಯಿತು.

* * * * *

ಒಂದು ದಿನ ಅಜ್ಜ ಎಲ್ಲಿಗೋ ಹೋದ ದಿನ ರಾತ್ರಿ ಚಿಮಿಣಿ ದೀಪವನ್ನು ಉರಿಸಿ–ಅದನ್ನು ಗೂಡಲ್ಲಿ ಇಟ್ಟ ಅಜ್ಜಿ ಚಾವಡಿಯಲ್ಲಿ ಕುಕ್ಕುರು ಕಾಲಲ್ಲಿ ಕುಳಿತುಕೊಂಡು "ಓಂ ನಮಃ ಶಿವಾಯ" ಎಂದು ಹೇಳುವ ಹೊತ್ತಲ್ಲಿ ಅಜ್ಜಿಯತ್ರ ಯಾಕೋ ಪಟ್ಟನೆ ಕೇಳಿದೆ, "ಅಜ್ಜಿ ನೀವ್ಯಾಕೆ ಸದಾ ಅಜ್ಜನತ್ರ ಜಗಳವಾಡ್ತಾ ಇರ್ತೀರಿ? ನಿಮಗ್ಯಾಕೆ ಅಜ್ಜನನ್ನು ಕಂಡರೆ ಆಗುವುದಿಲ್ಲ?" ಕುಕ್ಕುರುಗಾಲಲ್ಲಿ ಕುಳಿತಿದ್ದ ಅಜ್ಜಿ ಕಾಲು ನೀಡಿಕೊಂಡು ಕುಳಿತರು. ಅಜ್ಜಿಯು ಒಂದು ಕ್ಷಣ ಅತ್ತರು ಅಂತ ಕಾಣಿಸುತ್ತದೆ. ಮುಖದ ಮೇಲೆ ಬೆಳಕು ಸರಿಯಾಗಿ ಬೀಳುತ್ತಿರಲಿಲ್ಲ. ಆದರೆ ಅವರು ಸೆರಗಿನಲ್ಲಿ ಕಣ್ಣು ಒರಸಿಕೊಳ್ಳುವುದು ಕಾಣಿಸಿತು. ಅಜ್ಜಿಗೆ ಬೇಸರವಾಯಿತು ಅಂತ ಗೊತ್ತಾಯಿತು. ಅದಕ್ಕೆ 'ಹೋಗ್ಲಿ ಬಿಡಿ ಅಜ್ಜಿ' ಅಂದೆ "ನಿನಗೆ ನನ್ನ ಹೊಟ್ಟೆಯಲ್ಲಿರುವ ದುಃಖ ಗೊತ್ತಾಗುವುದಿಲ್ಲ. ನಾನು ಜಗಳವಾಡ್ತೇನೆ ಅಂತ ಅನಿಸುತ್ತದೆ. ಜಗಳವಾಡದೇ ಹೋಗಿದಿದ್ದರೆ ನಿನ್ನ ಅಜ್ಜ ನನ್ನನ್ನು ಹುರಿದು ಮುಕ್ಕುತ್ತಿದ್ದರು. ಇಷ್ಟು ಹೊತ್ತಿಗೆ ನನ್ನ ತಿಥಿ ಸುಮಾರು ಆಗಿ ಹೋಗುತ್ತಿತ್ತು" ಎಂದರು. ಅಜ್ಜನ ಅತ್ಯಂತ ದೊಡ್ಡಮನೆಯಲ್ಲಿ; ಅದೂ ಕತ್ತಲೆಯಲ್ಲಿ ಅಜ್ಜಿ ಅಳುತ್ತಿದ್ದಾರೆಂದನ್ನಿಸಿ ಕತ್ತಲೆಯಲ್ಲಿ ಹಾರಾಡುತ್ತಾ ಇರುವ ಮಿಂಚು ಹುಳುಗಳನ್ನು ನೋಡುತ್ತಾ ಕುಳಿತೆ. ಅಜ್ಜಿಗೂ ಸ್ವಲ್ಪ ಹೊತ್ತು ಯಾವ ಮಾತೂ ಬೇಡವೆಂದು ಅನಿಸಿತೋ ಏನೋ? ಸುಮ್ಮನಿದ್ದರು. ಆಮೇಲೆ ಹೇಳತೊಡಗಿದರು.

ಅಜ್ಜಿಯ ಹೆಸರು ಲಕ್ಷ್ಮಮ್ಮ. ಕಿವಿಯಲ್ಲಿ ಓಲೆ, ಹಣೆಗೆ ಕುಂಕುಮದ ಅಡ್ಡಬೊಟ್ಟು ಇಟ್ಟುಕೊಳ್ಳುತ್ತಿದ್ದರು. ಚೌಕುಳಿ ಸೀರೆಯುನ್ನುಡುತ್ತಿದ್ದರು. ತಲೆಗೂದಲು ಉದ್ದವಿಲ್ಲವಾದ್ದರಿಂದ ಯಾವಾಗಲೂ ಚೌರಿ ಹಾಕಿ ಜುಟ್ಟು ಹಾಕಿಕೊಳ್ಳುತ್ತಿದ್ದರು. ಅಡ್ಡನಾಮ ಸರಿಯಾಗಿ ಬರುವುದಿಲ್ಲವೆಂದು ಬಾಳೆಲೆಯನ್ನು ಸ್ವಲ್ಪ ಬಾಡಿಸಿ ಅದರಲ್ಲಿಯೇ ಬೇಕಾದ ಅಳತೆಗೆ ಕತ್ತರಿಸಿ ಅದನ್ನು ಇಟ್ಟುಕೊಳ್ಳುತ್ತಿದ್ದರು. ಅದರ

ಮೇಲೆ ಜೇನುಮೇಣ ಹಾಕಿ; ಕುಂಕುಮ ಹಾಕಿಕೊಳ್ಳುತ್ತಿದ್ದುದರಿಂದ ನಾಮ ಅಳಿಸಿ ಹೋಗುತ್ತಿರಲಿಲ್ಲ. ಎಷ್ಟು ಬೆವರಿದರೂ ಕುಂಕುಮದ ಗೀಟು ಮಾಯವಾಗುತ್ತಿರಲಿಲ್ಲ. ಬೇಸಿಗೆಯಿರಲಿ, ಚಳಿಯಿರಲಿ, ಮಳೆಯಿರಲಿ ಬೆಳಿಗ್ಗೆಯೇ ಎದ್ದು ಸ್ನಾನಮಾಡಿ ಕುಂಕುಮ ಇಟ್ಟುಕೊಂಡು ದೇವರಿಗೆ ನಮಸ್ಕಾರ ಮಾಡಿ ನಿತ್ಯದ ಅಡುಗೆಯ ಕೆಲಸವನ್ನು ಅವರು ಪ್ರಾರಂಭಿಸುತ್ತಿದ್ದರು. ಬೆಳಿಗ್ಗೆ ದೇವರಿಗೆ ನಮಸ್ಕಾರ ಮಾಡುವಾಗ ಹತ್ತು ಸರ್ತಿ ರಾಮ ರಾಮ ಅನ್ನುವುದು. ಸಂಜೆ ಕೈ–ಕಾಲು ತೊಳೆದುಕೊಂಡು ಬಂದು ಹತ್ತು ಸರ್ತಿ ಓಂ ನಮಃ ಶಿವಾಯ ಓಂ ನಮಃ ಶಿವಾಯ ಅನ್ನುವುದು ಮಾತ್ರ ಅವರ ಕೆಲಸ. ಅದರಾಚೆಗೆ ಅವರಿಗೆ ಯಾವ ಮಂತ್ರವೂ ಗೊತ್ತಿಲ್ಲ. ತಂತ್ರವೂ ಗೊತ್ತಿಲ್ಲ. ನನ್ನ ಅಜ್ಜಿ ಅಜ್ಜನನ್ನು ಮದುವೆಯಾದಾಗ ಎಂಟು ವರ್ಷವೋ ಹತ್ತು ವರ್ಷವೋ ಆಗಿರಬೇಕು. ಮದುವೆ ಧಾರೆಯ ದಿನ ಅಜ್ಜಿಯನ್ನು ಅಜ್ಜಿಯ ಸೋದರಮಾವನೇ ಎತ್ತಿಕೊಂಡು ತಂದು ಕೂರಿಸಿದರಂತೆ.

ಅಜ್ಜಿ ಹೇಳಿದರು "ಆಗ ಮಿಣಿ ಮಿಣಿ ಉರಿಯುವ ಚಿಮಿಣಿ ದೀಪದ ಅರೆಗತ್ತಲು ಮತ್ತು ಮಿಂಚು ಹುಳಗಳ ಸಂಭ್ರಮದ ನಡುವೆ, ನನ್ನ ಸೋದರ ಮಾವ ನನ್ನನ್ನು ಎತ್ತಿಕೊಂಡು ತಂದು ಧಾರೆಯ ಮಂಟಪದಲ್ಲಿ ನಿಲ್ಲಿಸಿದರು. ಧಾರೆಯ ಮಂಟಪವೆಂದರೆ ಏನೆಂದುಕೊಂಡಿ? ಧಾರೆಯ ಮಂಟಪಕ್ಕೆ ಬಾಳೆಯ ಕಂಬ ನೆಟ್ಟಿದ್ದರು. ಅದಕ್ಕೆ ಬಾಳೆಯ ಗೊನೆ. ಅಡಿಕೆಯ ಸಿಂಗಾರ ಎಲ್ಲಾ ಕಟ್ಟಿದ್ದರು. ನಾಕು ಮೂಲೆಯಲ್ಲಿ ಕಟ್ಟಿ ನಿಲ್ಲಿಸಿದ್ದ ಬಾಳೆಯ ಕಂಬ. ಅದಕ್ಕೆ ಸುತ್ತಿನ ಮಲ್ಲಿಗೆಯ ಮಾಲೆ, ಏನು ಸಂಭ್ರಮ? ಈಗಿನ ಕಾಲದಲ್ಲಿ ಆ ಥರದ ಮದುವೆಯೆಲ್ಲಾ ಎಲ್ಲಿ ಸಿಗ್ತದೆ ಹೇಳು? ಎಲ್ಲಾ ಆಟದ ಮದುವೆ. ಈವತ್ತು ಮದುವೆ, ನಾಳೆ ಬೆಳಿಗ್ಗೆಯೇ ಹುಡುಗಿಯನ್ನು ಕರೆದುಕೊಂಡು ಮದುವಣಿಗ ಹೊರಟು ಹೋಗಿಯೂ ಆಯಿತು. ಆಗೆಲ್ಲ ಕಡಿಮೆಯೆಂದರೂ ಎಂಟ್ಹತ್ತು ದಿನ ಮದುವೆ. ಮದುವೆಯ ದಿಬ್ಬಣದ್ದೇ ಒಂದು ಗೌಜಿ. ಹುಡುಗಿ ಸಣ್ಣ ಪ್ರಾಯದವಳಾದರೆ ದಿಬ್ಬಣದಲ್ಲಿ ಅವಳ ಮಾವನೆ ಅವಳನ್ನು ಎತ್ತಿಕೊಂಡು ಹೋಗ್ಬೇಕು. ದಿಬ್ಬಣದಲ್ಲಿ ವಾಲೆ ಪಾಟಾಕಿ; ವಾದ್ಯ ಇರಲೇಬೇಕು. ಮದುಮಕ್ಕಳನ್ನು ಕರಕೊಂಡು ಹೋಗಲು ಶ್ರೀಮಂತರಾದರೆ ಪಲ್ಲಕ್ಕಿ ಮಾಡಿದರೂ ಮಾಡಿಯಾರೆ! ಮದುಮಕ್ಕಳು ಎಂಟು ದಿನವಂತೂ ಹೋಮದ ಹೊಗೆ ನುಂಗಬೇಕು. ಎಂಟು ದಿನ ಹೋಮದ ಹೊಗೆ ನುಂಗಿದ ಮದುವಣಿಗ ಮದುವಣಗಿತ್ತಿಯರ ಕಣ್ಣು ಕೆಂಪಾಗಿ ಒಳ್ಳೆ ಕೆಂಡದ ಹಾಗೆ ಆಗುತ್ತಿತ್ತು." ಇಷ್ಟು ಹೇಳಿದ ಅಜ್ಜಿ, "ಮಗಾ, ಒಳಗೆ ಹೋಗಿ ಎಲೆಯಡಿಕೆಯ ಬುಟ್ಟಿ ತಗೊಂಡು ಬಾ" ಅಂದರು. ನಾನು ಓಡಿಹೋಗಿ ಎಲೆಯಡಿಕೆಯ ಚೂರು ಬಾಯಿಗೆ ಹಾಕುತ್ತಾ ಮುಂದುವರಿಸಿದರು, "ನಿನ್ನ ಅಜ್ಜ ದೊಡ್ಡ ದೈತ್ಯ ನೋಡು, ಕೊಯ್ದರೆ ನಾಲ್ಕು

ಹಲಗೆಯಾಗಬಹುದು, "ಎಂದರು. ಅಜ್ಜಿಯ ಮಾತು ಕೇಳಿ ನನಗೆ ನಗೆ ಬಂತು. ನಗುತ್ತಲೇ ಹೇಳಿದೆ. "ಅಜ್ಜ ಹಲಗೆಯಾಗ್ತಾರೋ ಬಿಡ್ತಾರೋ ಗೊತ್ತಿಲ್ಲ. ಆದರೆ ಹಲಗೆಯಂತೂ ಕೊಯ್ತಾರೆ ನಿದ್ದೆಯಲ್ಲಿ" ಅಜ್ಜಿಗೂ ನಗು ಬಂದು, "ಅದು ಹೌದು, ಅವರು ಗೊರಕೆ ಹೊಡೆಯುವುದು ನೋಡಿದರೆ ಹಲಗೆಯನ್ನು ಗರಗಸ ಹಾಕಿ ಕೊಯ್ದು ಹಾಗೆ ಕೇಳಿಸುತ್ತದೆ" ಎಂದರು. ಕಡೆ ಬಾಯಲ್ಲಿ ತುಂಬಿಕೊಂಡಿದ್ದ ಎಲೆಯಡಿಕೆಯನ್ನು ಉಗುಳಿ ಬಂದು ಮತ್ತೆ ಹೇಳಿದರು. "ನಾನು ಕುಳ್ಳಿ, ನಿನ್ನ ಅಜ್ಜ ಉದ್ದ, ಅಜ್ಜನ ಕೊರಳಿಗೆ ಹಾರ ಹಾಕಲು ನನಗೆ ಎಲ್ಲಿ ಸಾಧ್ಯವಾಗುತ್ತದೆ? ನನ್ನ ಮಾವನೇ ಎತ್ತಿಕೊಂಡು ಹಾರ ಹಾಕಿಸಿದರು. ಇನ್ನೇನು ಧಾರೆಯಾಗಬೇಕು. ಅಷ್ಟು ಹೊತ್ತಿಗೆ ಎಲ್ಲಿತ್ತೋ ಏನು ಕತೆಯೋ – ಜೋರಾಗಿ ಮಳೆ ಬಂತು ನೋಡು! ಎಲ್ಲರೂ ಒದ್ದೆ. ಆ ಮಳೆಯಲ್ಲಿಯೇ ಧಾರೆಯ ಮಹೂರ್ತವಂತೂ ಆಯ್ತು. ಆ ದಿನ ಮಳೆಯಲ್ಲಿ ಊಟ ಮಾಡಿದವರು ಮಾಡಿದರು, ಬಿಟ್ಟವರು ಬಿಟ್ಟರು. ಮದುವೆಯಾಗಿ ಒಂದು ತಿಂಗಳಲ್ಲಿ ಶುರುವಾಯಿತು – ಗಾಣದ ಎತ್ತು ದುಡಿಯುವ ಹಾಗೆ ನನ್ನ ಕೆಲಸ. ನಿನ್ನ ಅಜ್ಜನ ತಾಯಿ ಇದ್ದರು. ದೊಡ್ಡ ಕಿರಾತಕಿ ಅವರು. ಅಡುಗೆ ಮಾಡುವುದಕ್ಕೆ ನಾನು ಬೇಕು, ಅಡುಗೆಯಾದ ಕೂಡಲೇ ಅವರು ಅದನ್ನು ಮುಚ್ಚಿ ಇಡುತ್ತಿದ್ದರು. ಸರಿಯಾಗಿ ಊಟ ಮಾಡಲು ಬಿಡುತ್ತಿರಲಿಲ್ಲ. ಹಿಂದಿನ ದಿನ ಉಳಿದ ಅನ್ನವನ್ನೇ ನನಗೆ ಬಡಿಸುತ್ತಿದ್ದರು. ಒಮ್ಮೊಮ್ಮೆ ಹೊಡೆಯುತ್ತಿದ್ದರು. ಅಮ್ಮ ಮಗ ಇಬ್ಬರೂ ಸೇರಿ ಮಾಡಬಾರದನ್ನೆಲ್ಲಾ ಮಾಡಿದರು. ನಿನ್ನಜ್ಜನ ತಾಯಿ ತೀರಿಹೋದಾಗ ಕಷ್ಟಮುಗಿಯಿತು ಎಂದುಕೊಂಡೆ. ಆದರೆ ಮತ್ತೆ ನಿನ್ನ ಅಜ್ಜ ಆ ಹೆಂಗಸನ್ನು ಇಟ್ಟುಕೊಂಡರಲ್ಲ – ರಂಡೆಯನ್ನು. ನಿನ್ನ ಅಜ್ಜ ಏನೇನು ಮಾಡಿದರೋ ಅದೆಲ್ಲವನ್ನು ಅವರೇ ಉಣ್ಣುತ್ತಾರೆ ಅಂತ ಕಾಯ್ತೇನೆ" ಅಜ್ಜಿ ಮುಂದೆಯೂ ಹೇಳುತ್ತಿದ್ದರೋ ಏನೋ? ಅಷ್ಟು ಹೊತ್ತಿಗೆ ಅಂಗಳದಲ್ಲಿ ಅಜ್ಜ ಒಂದು ಸೂಟೆ ಹಿಡಿದುಕೊಂಡು ಬಂದರು. ಅಜ್ಜಿ ಮಾತಾಡುವುದನ್ನು ನಿಲ್ಲಿಸಿ ಒಳಗೆ ಹೋದರು. ಹೆಗಲಲ್ಲಿ ಹಾಕಿಕೊಂಡಿದ್ದ ಶಾಲಿನಲ್ಲಿ ಸುತ್ತಿ ತಂದಿದ್ದ ಕಡ್ಲೆಮಿಠಾಯಿಯನ್ನು ಕೊಟ್ಟು ಅಜ್ಜ ಹೇಳಿದರು, "ಅಜ್ಜಿಗೂ ಕೊಡು" ಮಿಂಚು ಹುಳ ಹೇಗೆ ಮಿಂಚುತ್ತದೆಯೆಂದು ತಿಳಿಯದ ನನಗೆ ಅಜ್ಜ–ಅಜ್ಜಿಯರ ಸಂಬಂಧದಲ್ಲಿಯೂ ಒಂದು ನಿಗೂಢತೆಯಿದೆಯೆಂದು ಅನಿಸಿತು. ಅಜ್ಜ ಸರಿಯೆ? ಅಜ್ಜಿ ಸರಿಯೆ? ಗೊತ್ತಾಗದೆ ಆ ಕತ್ತಲಲ್ಲಿ ಬೊಗಸೆಯ ತುಂಬಾ ಮಿಂಚು ಹುಳ ಹಿಡಿದುಕೊಂಡು ಅವುಗಳ ಬೆಳಕನ್ನು ನೋಡುತ್ತಾ ಕುಳಿತಿದ್ದೆ: ಬಹಳಷ್ಟು ಹೊತ್ತು!

* * * * *

"ತೋರ ಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು"

ಮೇಧಾ ತಿಥಿಯ ಪ್ರಕಾರ ಪ್ರಾಯಶ್ಚಿತ್ತ ಶಬ್ದವು ರೂಢಿಯ ಅರ್ಥದಲ್ಲಿ ನೈಮಿತ್ತಿಕ ಕರ್ಮದ ಒಂದು ಪ್ರಭೇದವನ್ನು ಹೇಳುತ್ತದೆ. ಈ ಶಬ್ದವು ತಪಸ್ಸೆಂದು ಅರ್ಥಕೊಡುವ ಪ್ರಾಯಸ್ ಮತ್ತು ನಿರ್ಧಾರವೆಂದು ಅರ್ಥಬರುವ ಚಿತ್ರ ಇವುಗಳ ಒಂದು ಸಮಾಸವೆಂದು ನಿರ್ವಚನ ಮಾಡುತ್ತದೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 283)

ಪ್ರಾಯಶ್ಚಿತ್ತವು ಕೇವಲ ಪಾಪ ಪರಿಹಾರಕ್ಕೆ ಸಾಧನವೆಂದು ಸೂತ್ರ ಕಲ್ಪವು ಹೇಳುತ್ತದೆ.ಭಾರತದಲ್ಲಿ ಪ್ರಾಯಶ್ಚಿತ್ತವೂ ಕೂಡಾ ನ್ಯಾಯದ ಒಂದು ವಿಧಾನವೆಂಬುದಿಲ್ಲಿ ಮನನೀಯ

ವಿಶ್ವರೂಪನ ಪ್ರಕಾರ ಉದ್ದೇಶಪೂರ್ವಕವಾಗಿ ಪಾಪವೆಸಗಿದವರಿಗೆ ನರಕವು ಲಭಿಸುತ್ತದೆ. ಯಾಜ್ಞವಲ್ಕರು ಇಪ್ಪತ್ತೊಂದು ನರಕವನ್ನು ಹೇಳಿದ್ದಾರೆ. ವಿಶ್ವರೂಪನು ಪ್ರಾಯಶ್ಚಿತ್ತವನ್ನು ಅಕರಣಕ್ಕೆ ಸಮಾನವೆಂದು ಅರ್ಥಮಾಡಿದ್ದಾನೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 284)

ಮನು ಮತ್ತು ಯಾಜ್ಞವಲ್ಕ್ಯರು ನಾಸ್ತಿಕ್ಯವನ್ನು ಪಾತಕವೆಂದು ಪರಿಗಣಿಸಿದ್ದಾರೆ.

(ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ.2 1971 ಪುಟ. 284) ಪಾತಕಗಳಲ್ಲಿ ಬೇರೆ ಬೇರೆ ರೀತಿಗಳಿವೆ_

1992
ಜನವರಿ
29

ಮಾಲಿಂಗನ ಮನೆ ಎರಡು ಗುಡ್ಡೆಗಳ ನಡುವಿನ ಇಳಿಜಾರಿನಲ್ಲಿದೆ. ಮಳೆಗಾಲದಲ್ಲಿ ಜೋರು ಮಳೆ ಬಂದರೆ ಗುಡ್ಡೆಯಿಂದ ಬರುವ ನೀರು ಅವನ ಮನೆ ಎದುರಿನ ತೋಡಿನಲ್ಲಿ ಇಳಿದು ಹೋಗುತ್ತದೆ. ಅವನು ಒಂದು ಹದಿನೈದೋ-ಹದಿನಾರೋ ವರ್ಷದವನಿರುವಾಗ ಕುಂಬ್ಳೆ ಕಡೆಯಿಂದ ಈ ಕಡೆಗೆ ಬಂದ ಅಂತ ಕೆಲವರು ಹೇಳಿದರೆ ಮತ್ತೆ ಕೆಲವರು ಸುಳ್ಯದ ಕಡೆಯಿಂದ ಬಂದನೆಂತಲೂ, ಅವನ ತಾಯಿಯನ್ನು ಯಾರೋ ಇಟ್ಟುಕೊಂಡಿದ್ದರೆಂತಲೂ ತಾಯಿಗೂ ಅವನಿಗೂ ಸರಿಬಾರದ್ದರಿಂದ ಊರು ಬಿಟ್ಟನೆಂತಲೂ ಹೇಳುತ್ತಾರೆ. ಮತ್ತೆ ಕೆಲವರು ಎಲ್ಲೋ ಕದ್ದು ಸಿಕ್ಕಿಹಾಕಿಕೊಂಡು ಸಾಕಷ್ಟು ಒದೆ ತಿಂದು ಬಂದ ಅಂತ ಹೇಳುತ್ತಾರೆ. ಮಾಲಿಂಗನ ಎದುರು ಯಾರೂ ಏನು ಹೇಳದಿದ್ದರೂ ಅವನ ಹಿಂದೆ ಒಂದಕ್ಕೊಂದು ಕತೆ ಹಬ್ಬುತ್ತಲೇ ಇತ್ತು. ಊರಿನ ಹಿಡುವಳಿದಾರರಾದ ಬ್ರಾಹ್ಮಣರಿಗೆ ಮತ್ತು ಗದ್ದೆಯನ್ನು ನಂಬಿದ ಬಂಟರಿಗೆ ಅವನ ಬಗ್ಗೆ ಎಲ್ಲಿಲ್ಲದ ಅನುಮಾನ ಮತ್ತು ಅಸಹನೆ. ಅಸಹನೆಗೆ ಕಾರಣ ಅವನ ಬಿಳಿಯ ಪಂಚೆ ಮತ್ತು ಬಿಳಿಯ ಅಂಗಿ. ಪೇಟೆಗೆ ಅವನು ಹೊರಟ ಎಂದಾದರೆ ಬಿಳಿಯ ಪಂಚೆ ಮತ್ತು ಬಿಳಿಯ ಶರಟನ್ನು ಹಾಕಿಕೊಳ್ಳುತ್ತಿದ್ದ. ಶರ್ಟಿನ ಕಾಲರ್ ಬಳಿ ಬೆವರಿನ ಕಲೆಯಾಗಬಾರದೆಂದು ಒಂದು ಕರ್ಚೀಫನ್ನು ಮಡಚಿ ಮಡಿಕೆ ಮಾಡಿ ಕೊರಳಿಗೆ ಹಾಕಿಕೊಳ್ಳುತ್ತಿದ್ದ.

ಇನ್ನೊಂದು ಅವನ ಅತ್ಯಂತ ಶಿಸ್ತು ಬದ್ಧವಾದ ಕ್ರಾಪ್. ಪೇಟೆಗೆ ಹೊರಡುವಾಗ ಹರಳೆಣ್ಣೆ ಹಾಕಿಕೊಂಡು ಅದಕ್ಕೆ ನೀರು ಚುಮುಕಿಸಿ ಚೆಂದ ಬಾಚಿಕೊಳ್ಳುತ್ತಿದ್ದ. ಅವನ ತಿದ್ದಿದ ಕ್ರಾಪ್ ಹಾಳಾಗುತ್ತಿರಲಿಲ್ಲ. ಬ್ರಾಹ್ಮಣರು ಪೇಟೆಗೆ ಹೋಗುವಾಗಲೂ ದೊಡ್ಡ ಶಾಲು ಹೊದ್ದುಕೊಂಡರೆ ಮುಗಿಯಿತು. ಬಂಟರದೊಂದು ಪಟ್ಟೆ ಪಟ್ಟೆಯಾದ ಲುಂಗಿ ಮತ್ತು ಶರ್ಟ್. ಮಾಲಿಂಗನ ಶೈಲಿಯೇ ಬೇರೆ. ಕೂಲಿಗೆ ಹೋಗುವ ವಿಷಯದಲ್ಲಿಯೂ ಅವನು ಭಾರೀ ಕಟ್ಟುನಿಟ್ಟು, ಬೆಳಿಗ್ಗೆ ಒಂಬತ್ತೂವರೆಯಲ್ಲದೆ ಯಾವುದೇ ಕೆಲಸಕ್ಕೆ ಹೋಗುತ್ತಿರಲಿಲ್ಲ. ಮಧ್ಯಾಹ್ನ ಒಂದು ಗಂಟೆಗೆ ಕೆಲಸ ಬಿಟ್ಟಾಯಿತು. ಮಧ್ಯಾಹ್ನದ ಅನಂತರ ಎರಡೂವರೆಗೆ ಕೆಲಸ ಪ್ರಾರಂಭ. ಐದೂವರೆಗೆ ಕೆಲಸ ಮುಕ್ತಾಯ. ಯಾವುದೇ ಕಾರಣದಿಂದ ಅದಕ್ಕಿಂತ ಹೆಚ್ಚು ಕೆಲಸ ಮಾಡುತ್ತಿರಲಿಲ್ಲ. ಭಾನುವಾರವೂ ಅಷ್ಟೆ:

ಕಡ್ಡಾಯವಾಗಿ ರಜೆಯನ್ನು ಪಾಲಿಸುತ್ತಿದ್ದ. ಐದೂವರೆಯಾದ ಮೇಲೆ ಯಾವ ಕೆಲಸ ಹೇಳಿದರೂ ಖಡಾ ಖಂಡಿತವಾಗಿ ಆಗುವುದಿಲ್ಲ ಎಂತಲೇ ಹೇಳಿಬಿಡುತ್ತಿದ್ದ. ಒಂದೇ ಮನೆಗಾಗಲೀ; ಒಬ್ಬರದೇ ತೋಟಕ್ಕಾಗಲೀ ಕೆಲಸ ಮಾಡುವುದು ಅವನಿಂದ ಆಗದ ಮಾತು. ಹೆಚ್ಚುವರಿ ಕೆಲಸ ಹೇಳಿದರೆ ಅವನತ್ರ ಒಂದು ಗಾದೆಯ ಮಾತು ಸಿದ್ಧವಾಗಿರುತ್ತಿತ್ತು. "ಬ್ರಾಹ್ಮಣರ ಎದುರು ನಿಲ್ಲಬಾರದು, ಕುದುರೆಯ ಹಿಂದೆ ನಿಲ್ಲಬಾರದು" ಈ ಮಾತನ್ನು ಹೆಚ್ಚು ಚಾಲ್ತಿಗೆ ತಂದವನು ಕೂಡಾ ಅವನೇ. ಶನಿವಾರ ರಾತ್ರಿ ಮಾತ್ರ, ಅದೂ ಮನೆಯಲ್ಲಿ ಕುಡಿಯುವ ಅಭ್ಯಾಸ ಇಟ್ಟುಕೊಂಡಿದ್ದ. ಬೀಡಿ, ಎಲೆಯಡಿಕೆಯ ಅಭ್ಯಾಸ ಅವನ ಹತ್ತಿರವೂ ಸುಳಿಯಲಿಲ್ಲ. ಯಾರು ಕೇಳಿದರೂ ತನಗೆ ಗತಿ ಗೋತ್ರ ಇಲ್ಲವೆಂದೇ ಹೇಳಿಬಿಡುತ್ತಿದ್ದ.

ಗುಡ್ಡಗಳ ನಡುವಿನ ಜಾಗದಲ್ಲಿ ಒಂದು ಸಣ್ಣ ಮನೆಯನ್ನು ಕಟ್ಟಿಕೊಂಡು ಮನೆಯ ಹಿಂದೆ ಬಸಳೆ, ತೊಂಡೆ ಚಪ್ಪರ ಹಾಕಿ ಮನೆಯ ಎದುರು ಒಂದೆರಡು ತೆಂಗಿನ ಸಸಿ ಹಾಕಿ ಅವುಗಳನ್ನು ಆರೈಕೆ ಮಾಡಿಕೊಂಡಿದ್ದ. ಮದುವೆಯಾಗಿ ಹೆಣ್ಣನ್ನು ಕರೆದುಕೊಂಡು ಬರುವಾಗಲೂ ಯಾರಿಗೂ ಹೇಳಿದವನಲ್ಲ. ದೂರದಿಂದ ಮದುವೆಯಾದ ಅವನ ಹೆಂಡತಿ ಚಿನ್ನಮ್ಮ ತೌರುಮನೆಗೆ ಹೋದದ್ದನ್ನು ಕಂಡವರಿಲ್ಲ. ಶನಿವಾರ ಮಾತ್ರ ಸಂಜೆ ಗಂಡನ ಜೊತೆಗೆ ಪೇಟೆಗೆ ಹೋಗಿ ಮನೆಗೆ ಬೇಕಾದ ಸಾಮಾನು ತೆಗೆದುಕೊಂಡು ಬರುತ್ತಾಳೆ.

ಮಳೆಗಾಲದಲ್ಲಿ ಮನೆಯಿಂದ ಹೊರಗೆ ಹೊರಡದ ಜನ ಬೇಸಿಗೆಯಲ್ಲಿ ಮೈತುಂಬಾ ಕೆಲಸ ಹೊತ್ತುಕೊಂಡವರು ಮಾಲಿಂಗನ ವಿಷಯದಲ್ಲಿ ಹೆಚ್ಚೆಲ್ಲಾ ಮಾತಾಡುತ್ತಾ ಕಾಲಕ್ಷೇಪ ಮಾಡುವಂತಿರಲಿಲ್ಲ. ಬ್ರಾಹ್ಮಣರಿಗೆ ಬೇಸಿಗೆಯಲ್ಲಿ ಅಡಿಕೆಕೊಯ್ಲು, ಅಡಿಕೆ ಹೆಕ್ಕುವುದು, ಅದನ್ನು ಒಣಗಿಸುವುದು, ಮಳೆಗಾಲಕ್ಕಾಗಿ ಅಡಿಕೆ ಹಾಳೆಯನ್ನು ಒಣಗಿಸಿ ಬಿಸಿ ನೀರ ಒಲೆಗಾಗಿ ಕಟ್ಟಿಡುವುದು ಇಂಥದ್ದೇ ಕೆಲಸ. ಎಲ್ಲಕ್ಕಿಂತ ಹೆಚ್ಚಾಗಿ ಮಾಲಿಂಗನ ಮನೆ ಊರಿನ ಮಧ್ಯೆ ಇಲ್ಲವಾದ್ದರಿಂದ ಯಾರೂ ಅದಕ್ಕೆ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಮಾಲಿಂಗನೂ ಅಷ್ಟೆ: ತಾನಾಯಿತು ತನ್ನ ಕೆಲಸವಾಯಿತು ಅಂತ ಇದ್ದವನು. ಅವನ ಹೆಂಡತಿ ಚಿನ್ನಮ್ಮನದು ಕೋಲು ಮುಖ, "ಒಣಗಿದ ಮೀನು ಅವಳು" ಅಂತ ಮಾಲಿಂಗ ಹೇಳುವುದಿದೆ. ಮಾಲಿಂಗನದು ಗಟ್ಟಿಮುಟ್ಟಾದ ದೇಹ. ದುಂಡಗಿನ ಮುಖ. ಅರೆಕೆಂಪು ಬಣ್ಣ. ಅವನ ಹೆಂಡತಿಯದು ಕಪ್ಪು ಬಣ್ಣ. ಕಡ್ಡಿಪೊರಕೆಯಂಥಾ ದೇಹ. ಅವಳ ಬತ್ತಿಹೋದ ಮೈಯಿಂದಾಗಿ ಅವಳಿಡೀ ಮೈಯಲ್ಲಿ ಬರೀ ಎಲುಬು ಮಾತ್ರ ಇದೆಯೆಂದು ಮಾಲಿಂಗ ಭಾವಿಸಿಕೊಂಡದ್ದು ಮಾತ್ರವಲ್ಲ ಶನಿವಾರ ಕುಡಿದಾಗ ಅವಳ ಮೇಲೆ ವಿಪರೀತ ಸಿಟ್ಟು ಬಂದು ಯಾವ ಶನಿ ನೀನು ನನಗೆ ಗಂಟು ಬಿದ್ದೆ? ಎಂದು

ಬೈಯುತ್ತಾನೆ. ಅವಳ ಬೈಗುಳವನ್ನು ಮಾತ್ರ ಯಾವತ್ತೂ ಚಿನ್ನಮ್ಮ ಗಂಭೀರವಾಗಿ ಪರಿಗಣಿಸಲಿಲ್ಲ. ಮಾತ್ರವಲ್ಲ, ಜಗತ್ತಿನಲ್ಲಿ ಅತ್ಯಂತ ಕಡಿಮೆ ಮಾತನ್ನು ಆಡುವವಳು ಎಂಬುದನ್ನು ಪುರಾವೆ ಸಮೇತ ಒದಗಿಸುತ್ತಿದ್ದಳು. ಮಾಲಿಂಗ ಬೈಯಲು ಪ್ರಾರಂಭಿಸಿದರೆ ಎದ್ದು ಒಳಗಡೆ ಹೋಗುವುದು ಇಲ್ಲವೇ ಅಂಗಳಕ್ಕಿಳಿದು ಕುಳಿತುಕೊಳ್ಳುವುದನ್ನು ಕರಗತ ಮಾಡಿಕೊಂಡಳು.

ಗಂಡನ ವಿಷಯದಲ್ಲಿ ಚೆನ್ನಮ್ಮನ ಮೆಚ್ಚುಗೆಯೆಂದರೆ ಅವನ ನಿಯಮ. ಯಾವಾಗ ಬೇಕೋ ಆವಾಗ ಕುಡಿಯುವುದಿಲ್ಲ. ಬೀಡಿ, ಎಲೆಯಡಿಕೆಯ ದುಶ್ಚಟವಿಲ್ಲದಿರುವುದು, ಯಾವುದೇ ಬೇಸರವಿಲ್ಲದೆ, ಒಮ್ಮೊಮ್ಮೆ ತೀವ್ರ ಬೇಸರಗಳಲ್ಲಿ ಗಂಡ – ಹೆಂಡತಿ ವರ್ಷಗಟ್ಟಲೆ ಕಳೆದರು. ಮಾಲಿಂಗ ಮತ್ತು ಚೆನ್ನಮ್ಮರಿಗೆ ಇಬ್ಬರು ಮಕ್ಕಳೂ ಆದರು. ಒಂದು ಹೆಣ್ಣು ಮತ್ತೊಂದು ಗಂಡು. ಹೆಣ್ಣಿಗೆ ಚಂದಮ್ಮ ಮತ್ತು ಗಂಡು ಮಗುವಿಗೆ ಚೋಮನೆಂದು ಹೆಸರಿಟ್ಟರು. ಚಂದಮ್ಮ ಶಾಲೆಗೆ ಸೇರುವ ತನಕ ಅಂಥ ಯಾವ ವ್ಯತ್ಯಾಸಗಳೂ ಇರಲಿಲ್ಲ. ಶಾಲೆಯ ಹುಡುಗರು 'ಚಂದಮ್ಮ'ನನ್ನು ಚಂದಮಾಮ ಎಂದು ಕರೆಯುತ್ತಿದ್ದರು. ಅಕ್ಷರವಾಗಲೀ, ಲೆಕ್ಕವಾಗಲೀ ತಲೆಗೆ ಹತ್ತದ್ದರಿಂದ ಚಂದಮ್ಮನನ್ನು ಶಾಲೆಯಿಂದ ಬಿಡಿಸಿಯಾಯಿತು. ಚೋಮನೂ ಅಷ್ಟೆ: ಎರಡನೆಯ ತರಗತಿಯಲ್ಲಿ ಎರಡುವರ್ಷ ಕೂತು ಅನಂತರ ಮೂರನೆಯ ತರಗತಿಗೆ ಬಂದ. ಅಲ್ಲಿಯೂ ಎರಡು ವರ್ಷ ಕೂತ. ಒಂದೊಂದು ತರಗತಿಯಲ್ಲಿ ಎರಡೆರಡು ವರ್ಷ ಕೂತರೂ ಚೋಮನಿಗಾಗಲೀ, ಶಾಲೆಯ ಮೇಷ್ಟ್ರಿಗಾಗಲಿ ಯಾವ ಬೇಸರವೂ ಆಗಲಿಲ್ಲ. ಮೇಷ್ಟ್ರಿಗೆ ಬೇಕಾದ ಸಣ್ಣಪುಟ್ಟ ಕೆಲಸ ಮಾಡಿಕೊಡುವುದರಲ್ಲಿ ಚೋಮನೇ ಮುಂದು. ಮಧ್ಯಾಹ್ನ ಶಾಲೆಯ ಗಂಟೆ ಹೊಡೆಯುವುದು, ಬಾವಿಯಿಂದ ನೀರು ಸೇದಿ ಒಳಗೆ ತುಂಬುವುದು, ಇತ್ಯಾದಿ. ಅಗತ್ಯವಿದ್ದರೆ ಒಂದೇ ಪೆಟ್ಟಿಗೆ ಒಂದೆರಡು ಮೈಲು ದೂರವಿರುವ ಪೇಟೆಗೆ ಹೋಗಿ ಮೇಷ್ಟ್ರಿಗೆ ಬೇಕಾದ ಗಣೇಶ ಬೀಡಿ ತರುವುದು, ವಾಲೆ ಬೆಲ್ಲ ತರುವುದು, ಮೊದಲಾದ ಕೆಲಸಗಳನ್ನು ಅವನು ಯಾವ ಬೇಸರವಿಲ್ಲದೆ ಮಾಡುತ್ತಿದ್ದ.

ಮಧ್ಯಾಹ್ನ ಎರಡು ಗಂಟೆಯ ಮೇಲೆ ನಡೆಯುವ ಲೆಕ್ಕದ ಪಾಠ ತಪ್ಪಿದರೆ ಆಯಿತು. ಇಲ್ಲದಿದ್ದರೆ ಲೆಕ್ಕತಪ್ಪಿ ಬೆಂಚಿನ ಮೇಲೆ ನಿಲ್ಲಬೇಕು ಅಥವಾ ಮೇಷ್ಟ್ರ ಬೆತ್ತದಿಂದ ಏಟು ತಿನ್ನಬೇಕು. ಮಧ್ಯಾಹ್ನ ಶಾಲೆಯ ಗಂಟೆ ಹೊಡೆದ ಕೂಡಲೆ, ಮೇಷ್ಟ್ರ ಹತ್ತಿರ ಹೋಗಿ, "ಸಾರ್, ಅಂಗಡಿಗೆ ಹೋಗಿ ಬರ್ಬೇಕಾ? ಅಂಗಡಿಯಿಂದ ಏನಾದರೂ ತರಬೇಕಾ?" ಇತ್ಯಾದಿ ಪ್ರಶ್ನೆಗಳನ್ನು ಕೇಳುತ್ತಿದ್ದ. ಈ ಉಪಾಯಗಳನ್ನು ಕಂಡುಕೊಂಡ ಚೋಮ ಒಂದೆರಡು ಸಾರಿ ಸಿಕ್ಕಿಬಿದ್ದ. ಒಂದು ಸಾರಿ ಸಂಜೆ ನಾಲ್ಕು ಗಂಟೆಗೆ ಮೇಷ್ಟ್ರು ಮಕ್ಕಳನ್ನು ಆಟಕ್ಕೆ ಬಿಟ್ಟಾಗ ನಡೆದದ್ದು:

ಮೇಷ್ಟ್ರು "ಏಯ್, ಚೋಮ ಇಲ್ಲಿ ಬಾ" ಎಂದು ಕರೆದರು. ಚೋಮ ರಾಮನ ಬಂಟನಂತೆ ಓಡಿಹೋಗಿ, "ಸಾರ್" ಎಂದ. ಮೇಷ್ಟ್ರ ಜೇಬಿನಿಂದ ಒಂದು ಬೀಡಿಯನ್ನು ತೆಗೆದು ಇದನ್ನು ಎಲ್ಲಿಂದಾದರೂ ಉರಿಸಿಕೊಂಡು ಬಾ ಎಂದರು. ಚೋಮ ಶಾಲೆಯ ಹತ್ತಿರದ ಮನೆಗೆ ಹೋಗಿ ಅದನ್ನು ಉರಿಸಿ ಒಂದು ಧಂ ಸೇದಿಕೊಂಡು, ಒಂದು ಕೈಯಲ್ಲಿ ಅರ್ಧ ಉರಿದಿರುವ ಸೌದೆ ಮತ್ತು ಬೀಡಿಯನ್ನು ಹಿಡಿದುಕೊಂಡು ಬಂದ. ಮೇಷ್ಟ್ರಿಗೆ ಅದನ್ನು ಕೊಟ್ಟ, ಬೀಡಿಯ ಒಂದು ತುದಿಯಲ್ಲಿ ಎಂಜಲಾಗಿರುವುದನ್ನು ನೋಡಿ ಮೇಷ್ಟ್ರಿಗೆ ಅನುಮಾನವಾಯಿತು. ಆ ಬೀಡಿಯನ್ನು ಬಿಸಾಕಿ ಅವನ ಕಿವಿಯನ್ನು ಹಿಂಡಿದರು.

ಅಂಗಡಿಯಿಂದ ವಾಲೆ ಬೆಲ್ಲ ತರುವಾಗ ಬೆಲ್ಲ ನೆಕ್ಕಿ ಆ ಬೆಲ್ಲವನ್ನು ಅವುಗಳ ಮಧ್ಯೆ ಇರಿಸುತ್ತಿದ್ದ. ಇದರಲ್ಲಿಯೂ ಚೋಮ ಸಿಕ್ಕಿಬಿದ್ದ. ಆದರೂ ಮೇಷ್ಟ್ರಿಗೆ ಚೋಮನ ಸೇವೆಯಿಂದ ತುಂಬಾ ಅನುಕೂಲವಾಗಿತ್ತು.

ಚಂದಮ್ಮನಿಗೆ ಹದಿಮೂರು ವರ್ಷವಿರುವಾಗಲೇ ಮದುವೆಯೂ ಆಗಿ ಅವಳೂ ಗಂಡನ ಮನೆಗೆ ಹೋಗಿಯಾಯಿತು. ಅದಾದ ಮೇಲೆ ಮಾಲಿಂಗನ ಜೀವನದಲ್ಲಿ ಒಂದು ದೊಡ್ಡ ತಿರುವು ಉಂಟಾಯಿತು.

ಕೆಳ್ಮನೆಯ ನಾರಾಯಣ ಭಟ್ಟರ ಮೂಲ ಒಕ್ಕಲು ಪರಮೇಶ್ವರ. ಅವನಿಗೆ ನಾಕು ಹೆಣ್ಮಕ್ಕಳು. ಐದು ಗಂಡು ಮಕ್ಕಳು ಹುಟ್ಟಿದವು. ಕೆಳ್ಮನೆಯ ಪರಮ ಎನ್ನುವುದೇ ಅವನ ಅಡ್ಡ ಹೆಸರು. ಐದು ಗಂಡು ಮಕ್ಕಳು ಹುಟ್ಟಿದ ಮೇಲೆ ಒಂದಿನ ತೀರಿಹೋದ. ಅದೂ ಒಂದು ವರ್ಷ ಕಾಯಿಲೆ ಬಿದ್ದು ಅವನು ಕ್ಷಯ ರೋಗದಿಂದ ತೀರಿಹೋದರೂ ಅವನ ಹೆಂಡತಿಗೆ ಮಾತ್ರ ಅವನು ತೀರಿ ಹೋದದ್ದು ಪ್ರೇತದ ಕಾಟದಿಂದ ಎಂಬ ಪ್ರಬಲ ನಂಬಿಕೆಯಿತ್ತು. ಅವನು ಜೀವಂತ ಇರುವಾಗಲೇ ಮೊದಲನೆಯ ಮಗಳನ್ನು ಮದುವೆ ಮಾಡಿಕೊಟ್ಟಿದ್ದ. ಎರಡನೆಯ ಮಗಳು ಸುಂದ್ರಿ. ನಾರಾಯಣ ಭಟ್ಟರ ಮನೆಯ ನೆಲ ಒರಸುವುದು, ಬಟ್ಟೆ ಒಗೆಯುವುದು, ಹಟ್ಟಿಯ ಕೆಲಸವೆಲ್ಲಾ ಅವಳದು. ಬೆಳಗಿನ ಎಂಟು ಗಂಟೆಗೆ ಅವಳು ಕೆಲಸಕ್ಕೆ ಹಾಜರಾದರೆ ಸಂಜೆ ಐದೂವರೆಯ ತನಕ ಇದ್ದಬದ್ದ ಕೆಲಸ ಮಾಡುತ್ತಾ ಕಾಲ ಕಳೆಯುವುದು ಅವಳ ರೂಢಿ. ಕೆಳ್ಮನೆ ನಾರಾಯಣ ಭಟ್ಟರ ಹೆಂಡತಿಗೆ ಸುಂದ್ರಿ ಇಲ್ಲವಾದರೆ ಹೊತ್ತೇ ಹೋಗುವುದಿಲ್ಲವೆಂದು ಅವರು ಹೇಳಿಕೊಳ್ಳುವುದಿದೆ. ಮಧ್ಯಾಹ್ನದ ಊಟವಾದ ಮೇಲೆ ಗಂಡಸರು ಅರ್ಧಗಂಟೆ ನೆಲಕ್ಕೆ ಮೈಚಾಚಿದಾಗ ಸುಂದರಿ ಭಟ್ಟರ ಹೆಂಡತಿಯ ತಲೆಯ ಹೇನು ಕುಟ್ಟುವುದು, ಅವರ ತಲೆ ಬಾಚಿ ಬಿಡುವುದು. ತಲೆಗೆ ನೊರೆ ಕಾಯಿಯ ಸ್ನಾನ ಮಾಡಿಸುವುದು, ಮುಂತಾದವುಗಳನ್ನು ಮಾಡಿ ಅವರನ್ನು ತುಂಬಾ ಹಚ್ಚಿಕೊಂಡಿದ್ದಳು. ತಂದೆ

ಪರಮ ತೀರಿಹೋದ ಮೇಲೆ ಮನೆ ತುಂಬಾ ಇರುವ ತಂಗಿ, ತಮ್ಮಂದಿರು: ಮತ್ತು ಒಂದಲ್ಲ ಒಂದು ಕಾಯಿಲೆಯಿಂದ ಮಲಗಿರುವ ತಾಯಿಯನ್ನು ನೋಡಿಕೊಳ್ಳುವ ಜವಾಬ್ದಾರಿಯೂ ಅವಳ ಮೇಲೆ ಬಿತ್ತು. ವಯಸ್ಸು ಇಪ್ಪತ್ತು ದಾಟಿ ಹೋದರೂ ಅವಳಿಗೆ ಈ ಜವಾಬ್ದಾರಿಗಳಿಂದ ಮದುವೆಯ ಆಸೆಯು ಒಮ್ಮೊಮ್ಮೆ ಬಂದರೂ ಅದು ಹಾಗೆಯೇ ಇಂಗಿ ಹೋಗತೊಡಗಿತು.

ಇಂಥ ಸಂದರ್ಭದಲ್ಲಿ ನಾರಾಯಣ ಭಟ್ಟರು ತೋಟದಲ್ಲಿ ಅಡಿಕೆ ಬುಡ ಬಿಡಿಸಿ, ಸೊಪ್ಪು ಹಾಕಿ ಅದರ ಮೇಲೆ ಗೊಬ್ಬರ, ಮಣ್ಣು ಹಾಕುವುದಕ್ಕೆ ಮಾಲಿಂಗನನ್ನು ಕರೆದರು. ಮಾಲಿಂಗನೂ ಒಂದು ವಾರದ ಮಟ್ಟಿಗೆ ಕೆಲಸಕ್ಕೆ ಒಪ್ಪಿಕೊಂಡ. ಮಧ್ಯಾಹ್ನ ಊಟವಾದ ಮೇಲೆ ಸುಂದರಿಯ ಮನೆಗೆ ಹೋಗಿ ವಿಶ್ರಾಂತಿಯನ್ನು ತೆಗೆದುಕೊಡುವ ಬರುವ ರೂಢಿ ಇರಿಸಿಕೊಂಡ. ಬ್ರಾಹ್ಮಣರ ಎದುರು ನಿಲ್ಲುವುದು ಕಷ್ಟ! ಮಾಲಿಂಗನ ವಯಸ್ಸು ಆಗ ನಲವತ್ತಾರು ದಾಟಿರಬಹುದು. "ನಾನು ಹುಟ್ಟಿದ ಹೊತ್ತು ವೇಳೆ"ಯನ್ನು ಯಾರು ಬರೆದಿಟ್ಟಿದ್ದಾರೆ? ಎನ್ನುವುದು ಅವನ ನಂಬಿಕೆ. ಬೆಳಗಿನ ಮನೆಕೆಲಸ ಮುಗಿಸಿ ಸುಂದರಿಯೂ ಮಧ್ಯಾಹ್ನದ  ನಂತರ ತೋಟಕ್ಕೆ ಹೋಗಿ ಬರಲು ತೊಡಗಿದಳು.

ಮಧ್ಯಾಹ್ನದ ವಿಶ್ರಾಂತಿಗೆ ಹೋಗುವ  ಮಾಲಿಂಗನೂ ಸುಂದರಿಯನ್ನು ಇಷ್ಟಪಡತೊಡಗಿದ. ಮಾಲಿಂಗ ಸುಂದರಿಯನ್ನು ಬೇಕು ಬೇಕೆಂತಲೆ ಮಾತಾಡಿಸಲು ಪ್ರಾರಂಭಿಸಿದ. ಸುಂದರಿಯೂ ಮಾಲಿಂಗನ ಮಾತಿಗೆ ಮರಳಾಗತೊಡಗಿದಳು. ಒಂದು ಶನಿವಾರ ಇದ್ದಕ್ಕಿದ್ದಂತೆ ಸಂಜೆಯ ಹೊತ್ತಿಗೆ ಮಾಲಿಂಗ ಸುಂದರಿಯ ಮನೆಯ ಹತ್ತಿರ ಕುಡಿದುಕೊಂಡು ಬಂದ. ಅರ್ಧ ಅಮಲು ಏರಿತ್ತು. ಸುಂದರಿಯು ಆಗಷ್ಟೇ ಕೆಲಸ ಮುಗಿಸಿಕೊಂಡು ಬಂದಿದ್ದಳು. ಸುಂದರಿಯ ಅಮ್ಮ ಅಂಗಳದಲ್ಲಿ ಕೊನೆಯ ಮಗನಿಗೆ ಬೈಯುತ್ತಲೇ ಕುಳಿತುಕೊಂಡಿದ್ದಳು. ಮಾಲಿಂಗ ಅಂಗಳಕ್ಕೆ ಬಂದದ್ದೆ ತಡ ಸುಂದರಿಯು ಗಡಿಬಿಡಿಯಲ್ಲಿ  ಮನೆಯೊಳಗೆ ಹೋಗಿ ಒಂದು ಮಣೆಯನ್ನು ತೆಗೆದುಕೊಂಡು ಬಂದು ಅದನ್ನು  ಅವಳ ಅಮ್ಮನ ಎದುರು ಇಟ್ಟಳು. ಮಾಲಿಂಗ ಬಂದವನು  ಮಣೆಯ ಮೇಲೆ ಕುಳಿತುಕೊಂಡ ಸುಂದರಿ 'ಕುಡಿಯಲು ಏನಾದರೂ ತರಬೇಕಾ?' ಎಂದು ಕೇಳಿದಳು. "ಕುಡಿಯಲು ಏನೂ ಬೇಡ ಬೇಕಾದ್ದನ್ನು ಕುಡಿದು ಬಂದಿದ್ದೇನೆ" ಎಂದ ಮಾಲಿಂಗ. ಸುಂದರಿಯ ಅಮ್ಮ "ಮತ್ತೆ?" ಎಂದಳು. ಮಾಲಿಂಗ "ಒಂದು ವಿಶೇಷ ಸುದ್ದಿಯಿದೆ. ತುಂಬಾ ಮುಖ್ಯವಾದ್ದು. ಅದನ್ನು ಮಾತಾಡುವುದಕ್ಕೆ ಬಂದೆ" ಎಂದು ಹೇಳುತ್ತಾ ಸುಂದರಿಯ ಮುಖ ನೋಡಿದ. ಸುಂದರಿಯೂ ಅವನ ಮುಖವನ್ನೇ ನೋಡುತ್ತಾ "ಅಂಥದ್ದೇನು ವಿಶೇಷ?" ಎಂದು ಕೇಳಿದಳು "ನೀನು ಕೂತುಕೋ" ಎಂದು ಹೇಳುತ್ತಾ ಮಾಲಿಂಗ

ಕಿಸೆಯಲ್ಲಿದ್ದ ಮಿಠಾಯಿಯನ್ನು ಮಕ್ಕಳಿಗೆ ತೆಗೆದುಕೊಟ್ಟು ಹೋಗಿ ಆಟವಾಡಲು ಹೇಳಿದ.

ಯಾವುದೋ ವಿಶೇಷ ಸುದ್ದಿಗೆ ಮಾಲಿಂಗ ಪೀಠಿಕೆಯನ್ನು ಹಾಕುತ್ತಿದ್ದಾನೆಂದು ಸುಂದರಿಯ ಅಮ್ಮನಿಗೆ ಅನಿಸಿತಾದರೂ ಅವಳು ಬಾಯಿ ಬಿಡಲಿಲ್ಲ. ಮಾಲಿಂಗ ಕಿಸೆಯಿಂದ ಎಲೆಯಡಿಕೆ ತೆಗೆದುಕೊಂಡು ಅದನ್ನು ಸುಂದರಿಯ ಅಮ್ಮನ ಕೈಯಲ್ಲಿ ಕೊಟ್ಟು "ನಾನು ಸುಂದರಿಯನ್ನು ಕೈಹಿಡಿಯ ಬೇಕೆಂದಿದ್ದೇನೆ. ಕೈ ಹಿಡಿಯುವ ಧಾರೆಗೆ ನೀವು ಒಪ್ಪಿಕೊಳ್ಳಬೇಕು ಎಂದು ಕೇಳಿಕೊಳ್ಳುತ್ತೇನೆ. ಸುಂದರಿಗೆ ಮೂಗು ಬೊಟ್ಟು; ತಾಳಿ; ಸ್ವಲ್ಪ ದುಡ್ಡು ಕೊಡ್ತೇನೆ. ಬೇಡ ಅಂತ ಹೇಳಬೇಡಿ" ಎಂದ ಸುಂದರಿ ಮತ್ತು ಅವಳಮ್ಮ ಇಬ್ಬರೂ ಮುಖ ಮುಖ ನೋಡಿಕೊಂಡರು. ಸುಂದರಿಯ ಮುಖದಲ್ಲಿ ಸಂಭ್ರಮವಿತ್ತು. ಅವಳ ತಾಯಿ ಯೋಚಿಸತೊಡಗಿದಳು. ಸುಂದರಿಯನ್ನು ಮದುವೆಯಾಗುವ ವಿಷಯದಲ್ಲಿ ಆ ಮೂವರು ಒಂದೇ ರಹಸ್ಯ ಕಾಪಾಡಿಕೊಳ್ಳಬೇಕಾದ ಅಗತ್ಯವಿತ್ತು. ಇನ್ನು ಒಂದೇ ವಾರದಲ್ಲಿ ಸುಂದರಿಯನ್ನು ಕೈ ಹಿಡಿಯುವುದು ನಿಶ್ಚಿಯವೆಂದು ಮಾಲಿಂಗ ಭರವಸೆಯನ್ನು ಕೊಟ್ಟಿದ್ದರೂ ಮನಸ್ಸಿನೊಳಗೇ ಚಿನ್ನಮ್ಮನ ಪ್ರತಿಕ್ರಿಯೆಯು ಯಾವುದಿರಬಹುದು ಎನ್ನುವ ಬಗ್ಗೆ ಸಣ್ಣ ಅನುಮಾನವಿತ್ತು. ಎಲ್ಲಿ ಊರಿನವರ ಎದುರು ಅಪಹಾಸ್ಯಕ್ಕೆ ಗುರಿಯಾಗಬಹುದೇನೋ ಎಂಬ ಅಳುಕು ಇತ್ತು. ಕೂಡಿಕೆ ಮದುವೆಯಿಂದ ಸುಖವಾಗುತ್ತದೋ ಬಿಡುತ್ತದೋ ಅದು ಆಮೇಲಿನ ವಿಷಯ. ಚಿನ್ನಮ್ಮ ಒಪ್ಪಿಗೆ ಕೊಡದಿದ್ದರೆ ಅವಳನ್ನು ಮನೆಯಿಂದ ಹೊರಗೆ ಹಾಕ್ತೇನೆ ಎನ್ನುವುದೇ ಸೈ ಅಂತಲೂ ಯೋಚಿಸಿದ. ಸುಂದರಿಯ ಪ್ರಶ್ನೆ ಬೇರೆಯಿತ್ತು – ತಾನು ಮಾಲಿಂಗನಿಗೆ ಎರಡನೆಯ ಹೆಂಡತಿ. ಮಾಲಿಂಗನ ಮಗಳ ಮದುವೆಯಾಗಿದೆ. ಮಾಲಿಂಗನ ಬಗ್ಗೆ ತನಗಿರುವ ಪ್ರೇಮವು ಯಾವ ಬಗೆಯದು ಅನ್ನುವುದಕ್ಕಿಂತ ಚಿನ್ನಮ್ಮ ಹೇಗೆ ನಡೆಸಿಕೊಳ್ತಾಳೋ, ಏನು ಕತೆಯೋ ಅಂತ ಯೋಚಿಸುತ್ತಾ ಇಡೀ ರಾತ್ರಿ ಕಳೆದಳು. ಚಿನ್ನಮ್ಮ ಒಂದು ಕತ್ತಿಯನ್ನು ಹಿಡಿದುಕೊಂಡು ಅಟ್ಟಿಸಿಕೊಂಡು ಬಂದಂತೆ. ತಾನು ಬೆತ್ತಲೆಯಾಗಿ ಓಡಿದಂತೆ. ಅಷ್ಟು ಹೊತ್ತಿಗೆ ಹುಲಿಯು ಮೈಮೇಲೆ ಹಾರಿ ತನ್ನನ್ನು ತಿಂದಂತೆ ಕನಸು ಬಿತ್ತು. ಕನಸಿಗೆ ಹೆದರಿ ಅವಳು ಎಚ್ಚೆತ್ತು ಕುಳಿತಳು. ಹೆದರಿಕೆ ಹೋಗಲು ತುಂಬಾ ಹೊತ್ತು ಬೇಕಾಯಿತು. ಸುಂದರಿಯ ಅಮ್ಮನಿಗೂ ರಾತ್ರಿ ನಿದ್ದೆ ಬರಲಿಲ್ಲ. ಸುಂದರಿಯನ್ನು ಮಾಲಿಂಗನಿಗೆ ಮದುವೆ ಮಾಡಿಕೊಡಲು ಒಪ್ಪಿದ್ದೇನೋ ನಿಜ. ಆದರೆ ಮುಂದೆ ತನ್ನ ಸಂಸಾರದ ಗತಿಯೇನು? ಗಂಡ ಇದ್ದಿದ್ದರೆ ಈ ಮದುವೆಗೆ ಒಪ್ಪುತ್ತಿದ್ದನಾ ಮುಂತಾಗಿ ಯೋಚಿಸತೊಡಗಿದಳು. ಅಂತೂ ಆ ಮೂವರೂ ಆ ದಿನ ರಾತ್ರಿ ನಿದ್ದೆಯಿಲ್ಲದೆ ಕಳೆದರು.

ಮರುದಿನದ ಕೆಲಸಕ್ಕೆ ರಜೆ ಹಾಕಿ ಮಾಲಿಂಗ ಪೇಟೆಗೆ ಹೋಗಿ ಸುಂದರಿಗೆ ಬೇಕಾದ ಹಸಿರು ಬಳೆ; ಕೆಂಪು ರಿಬ್ಬನ್; ಹಳದಿ ಸೀರೆ, ರವಿಕೆಯ ಬಟ್ಟೆಯನ್ನು ತೆಗೆದುಕೊಂಡು ಬಂದು ಸುಂದರಿಯತ್ರ ಕೊಟ್ಟು, ಯಾರಿಗೂ ಹೇಳಬೇಡ. ಮದುವೆಯಾಗುವ ತನಕ ಬಾಯಿ ಬಿಟ್ಟರೆ ಪಂಜುರ್ಲಿಯ ಆಣೆಯೆಂದು ತಾಕೀತು ಮಾಡಿ ಹೊರಟು ಹೋದ.

ಮಾತುಕತೆಯಾದ ಎರಡು ದಿನದಲ್ಲೆ ಯಾರಿಗೂ ಹೆಚ್ಚು ತಿಳಿಯದೆ ಮಾಲಿಂಗ ಮತ್ತು ಸುಂದರಿಯರ ಮದುವೆಯಾಯಿತು. ಕೂಡಿಕೆ ಮದುವೆಗೆ ಚಂದುನಾಯ್ಕನ ಒಬ್ಬನ ಹೊರತಾಗಿ ಬೇರೆ ಯಾರೂ ಬರಲಿಲ್ಲ. ಬರಲು ಆಮಂತ್ರಣವೂ ಇರಲಿಲ್ಲ. ಆ ದಿನ ಸಂಜೆಯೇ ಮಾಲಿಂಗ ಹೆಂಡತಿಯನ್ನು ಕರೆದುಕೊಂಡು ತನ್ನ ಮನೆಯತ್ರ ಹೋದ. ಅವನು ಮತ್ತು ಸುಂದರಿ ಮನೆಯ ಮೆಟ್ಟಿಲು ಹತ್ತುವಾಗಲೇ ಚೆನ್ನಮ್ಮನಿಗೆ ತಿಳಿದದ್ದು: ಗಂಡ ಇನ್ನೊಂದು ಮದುವೆಯಾಗಿದ್ದಾನೆ!

ಸುಂದರಿ ಮತ್ತು ಮಾಲಿಂಗ ಮದುವೆಯಾದ ಒಂದೇ ವಾರದಲ್ಲಿ ಚೋಮ ಊರು ಬಿಟ್ಟು ಓಡಿ ಹೋದ. ಅನೇಕ ವರ್ಷಗಳ ತನಕ ಅವನು ನಾಪತ್ತೆಯಾಗಿದ್ದ. ಸುಂದರಿ ಮತ್ತು ಚೆನ್ನಮ್ಮನ ನಡುವಿನ ಜಗಳದಲ್ಲಿ ಮಾಲಿಂಗ ಹಸಿ ಹೊಟ್ಟೆಗೆ ಕುಡಿಯುತ್ತಾ; ಊಟ ಮಾಡದೆ ಸೊರಗುತ್ತಾ ಹೋದವನು ಒಂದು ದಿನ ಮಲಗಿದವನು ಮತ್ತೆ ಏಳಲೇ ಇಲ್ಲ! ಈಚೆಗೆ ಮೂಡಿಗೆರೆಯತ್ರ ಚೋಮ ನನಗೆ ಸಿಕ್ಕಿದ.

* * * * *

**ಚೋಮನ ತಲೆಗೂದಲು ಬಿಳಿಯಾಗಿದೆ. "ದರಖಾಸ್ತು ಜಮೀನು ಮಾಡಿಕೊಂಡು ಇದ್ದೇನೆ" ಅಂದ.**

**"ಸರೆಟ್ಟು ಬರೆಯಿನವು ಇರೆಟ್ಟು ಉಜ್ಜುಂಡ ಪೋಪುಂಡಾ?"(ತುಳುಗಾದೆ)**

**(ತಲೆಯಲ್ಲಿ ಬರೆದುದು ಎಲೆಯಲ್ಲಿ ಉಜ್ಜಿದರೆ ಹೋಗುತ್ತದಾ?)**

1992
ಜನವರಿ
29

ಪರಮೇಶ್ವರನ ತಂದೆಯ ಹೆಸರು ತುಕ್ರ. ಸುಂದರಿಯ ಅಜ್ಜ. ಅವನಿಗೆ "ಹುಲಿ ತುಕ್ರ"ನೆಂತಲೂ; ಹಿಂದಿನಿಂದ "ಓರೆ ಮುಕುಳಿ ತುಕ್ರ"ನೆಂತಲೂ ಕರೆಯುತ್ತಿದ್ದರು. ಅವನಿಗೆ ಆ ಹೆಸರು ಬರಲು ಮುಖ್ಯ ಕಾರಣ ಹುಲಿ. ಅದು ಪರಮನ ತಂದೆಯ ಕಾಲ ಮತ್ತು ನಾರಾಯಣ ಭಟ್ಟರ ತಂದೆಯ ಕಾಲವೂ ಹೌದು. ಅಂದರೆ ಊರಿನವರು ಹೇಳುವ ಪ್ರಕಾರ, ಆಗ ಪರಂಗಿಯವರು ಆಳುತ್ತಿದ್ದರು. ಪರಂಗಿಯವರಲ್ಲಿ ಕೆಲವರಿಗೆ ಆಗ ಹುಲಿ, ಚಿರತೆ, ಆನೆಗಳನ್ನು ಬೇಟೆಯಾಡುವ ಹವ್ಯಾಸವಿತ್ತು. ಅವರಲ್ಲಿ ಒಬ್ಬ ಬಿಳಿಯ ದೊರೆ ವಿಟ್ಲದಲ್ಲಿ ಬಂದು ಮೊಕ್ಕಾಂ ಹೂಡಿ ಕಳಂಜಿಮಲೆ ಕಾಡಿನಲ್ಲಿದ್ದ ಹುಲಿಗಳನ್ನು ಬೇಟೆಯಾಡಿದ್ದ. ಹಾಗೆ ಬೇಟೆಯಾಡಲು ಅವನು ವಿಟ್ಲದ ಅರಸರಿಂದ ಅನುಮತಿಯನ್ನು ಬೇಡಿದ್ದನೆಂತಲೂ ಊರವರು ಮಾತಾಡಿಕೊಳ್ಳುತ್ತಿದ್ದರು. ಕಳಂಜಿಮಲೆಯ ಕಾಡು ಮಾತ್ರ ತುಂಬಾ ಭಯಾನಕವಾದುದು ಅಂತಲೂ ಹೇಳುತ್ತಿದ್ದರು. ಆಗ ಕಳಂಜಿಮಲೆ ಕಾಡು ಎರಡು ವಿಷಯಗಳಿಗೆ ತುಂಬಾ ಪ್ರಸಿದ್ಧಿ. ಒಂದು ಅಲ್ಲಿಯ ಹುಲಿಗಳು. ಇನ್ನೊಂದು ದೊಡ್ಡ ದೊಡ್ಡ ಬೀಟೆಯ ಮರಗಳು. ವಿಟ್ಲದಿಂದ ಉಕ್ಕುಡದ ಹತ್ತಿರ ಬರುವಾಗ ಸಿಗುವ ಕಳಂಜಿಮಲೆ ಕಾಡಿನ ನಡುವಣ ರಸ್ತೆಯಲ್ಲಿ ಸಾಮಾನ್ಯವಾಗಿ ಒಬ್ಬೊಬ್ಬರು ಓಡಾಡುತ್ತಿರಲಿಲ್ಲವೆಂದೂ, ಎತ್ತಿನಗಾಡಿಯಲ್ಲಿ ಬರುವವರು ಒಂದೊಂದು ಗುಂಪು ಮಾಡಿಕೊಂಡು ಬರುತ್ತಿದ್ದರು ಎಂತಲೂ ಜನರು ಮಾತಾಡಿಕೊಳ್ಳುತ್ತಿದ್ದರು. ರಾತ್ರಿಯ ಹೊತ್ತು ಅಲ್ಲಿ ಓಡಾಡುವವರು ತುಂಬಾ ಹೆದರಿಕೊಳ್ಳುತ್ತಿದ್ದರು. ಅದಕ್ಕೆ ಕೆಲವರು ವಿಟ್ಲದ ಛತ್ರದಲ್ಲಿ ರಾತ್ರಿ ಉಳಿದು ಮರುದಿವಸ ಬೆಳಿಗ್ಗೆ ಪ್ರಯಾಣ ಬೆಳೆಸುತ್ತಿದ್ದರು. ಪರಂಗಿಯವರು ಬಂದ ಮೇಲೆ ವಿಟ್ಲದಿಂದ ಸರಿಯಾದ ರಸ್ತೆ ನಿರ್ಮಾಣವಾಯಿತು.

ಜನರು ಹೆಚ್ಚಿನ ಸಂಖ್ಯೆಯಲ್ಲಿ ಓಡಾಡಲು ಪ್ರಾರಂಭಿಸಿದರು. ಉಕ್ಕುಡದ ಹತ್ತಿರದ ಕಾಡು ನಾಶವಾಗತೊಡಗಿತು. ಕಾಡಿನಿಂದ ನರಿಗಳು ಊರಿನೊಳಗೆ ಬಂದು ಕೋಳಿ ಹಿಡಿದುಕೊಂಡು ಹೋಗುವುದು ಮಾಮೂಲಿಯಾಯಿತು. ಕೋಳಿ ಸಾಕಿದ ಜನರು ಕೋಳಿಗಳಿಗೆ ಒಂದೊಂದು ಗೂಡು ಮಾಡಿ ಅವನ್ನು ರಾತ್ರಿ

ಸೆರೆಮನೆಗೆ ತಳ್ಳುವುದು ಸಹಜ ಕ್ರಮವಾಯಿತು. ಇಂಥ ಸಮಯದಲ್ಲಿಯೇ ರಾತ್ರೋ ರಾತ್ರಿ ಹುಲಿಗಳು ಕೊಟ್ಟಿಗೆಗೆ ನುಗ್ಗಿ ದನ ಕರುಗಳನ್ನು

ಎತ್ತಿಕೊಂಡು ಹೋಗಬಹುದೆಂಬ ಭಯದಲ್ಲಿ ಕೊಟ್ಟಿಗೆಗೂ ಸರಿಯಾದ ಬಂದೋ ಬಸ್ತು ಮಾಡಲು ಪ್ರಾರಂಭಿಸಿದರು.

ಪರಂಗಿ ದೊರೆಯೊಬ್ಬ ವಿಟ್ಲಕ್ಕೆ ಬಂದು ಮೊಕ್ಕಾಂ ಹೂಡಿದವನು ವಿಟ್ಲದ ದೊರೆಗಳಿಂದ ಬೇಟೆಗೆ ಅನುಮತಿಯನ್ನು ಪಡೆದ. ಬ್ರಿಟಿಷರ ಕೋವಿಗೆ ಹೆಚ್ಚು ಪ್ರಚಾರ ಬಂದಿದ್ದು ಈ ಕಾಲದಲ್ಲಿ. ಬಂದವನು ಕಳಂಜಿ ಮಲೆಯಲ್ಲಿರುವ ಹುಲಿ ಬೇಟೆಗೆ ಪ್ರಾರಂಭಿಸಿದ್ದರಿಂದ ಅಲ್ಲಿನ ಹುಲಿಗಳು ದಿಕ್ಕಾಪಾಲಾಗಿ ಹೋದವು ಎಂದು ಜನರು ಮಾತಾಡುತ್ತಿದ್ದುದು ಮಾತ್ರವಲ್ಲ ಕಾಡಿನ ಹುಲಿಗಳನ್ನು ನಾಡಿಗೆ ಅಟ್ಟಿದ್ದರಿಂದ ಅದರ ಪಾಪವೂ ಅವನಿಗಿರಲಿ ಎಂದು ಶಾಪ ಹಾಕುತ್ತಿದ್ದರು.

ಒಂದು ದಿವಸ ರಾತ್ರಿ ಹಟ್ಟಿಯೊಂದರಿಂದ ಒಂದು ಕರುವನ್ನು ಹುಲಿಯೊಂದು ಎಳೆದುಕೊಂಡು ಹೋಯಿತು. ಅದು ಒಕ್ಕಲು ಮನೆಯೊಬ್ಬನ ಹಟ್ಟಿಯಲ್ಲಿ ನಡೆದ ಘಟನೆ. ಆ ಒಕ್ಕಲು ಮನೆಯವನೇ ತುಕ್ರ. ತುಕ್ರನ ಮನೆಯು ಆವಾಗ ಇದ್ದುದು ಗುಡ್ಡದ ಇಳಿಜಾರಿನಲ್ಲಿ. ಮುಳಿ ಹುಲ್ಲಿನಲ್ಲಿ ಕಟ್ಟಿಕೊಂಡಿದ್ದ ಸಣ್ಣ ಮನೆಯದು. ಮನೆಗೆ ಗೋಡೆಯಿರಲಿಲ್ಲ. ತೆಂಗಿನ ಮಡಲನ್ನು ಹೆಣೆದು ಗೋಡೆಯ ಬದಲಿಗೆ ಕಟ್ಟಿಕೊಂಡಿದ್ದ. ಮನೆಯ ಮಾಡನ್ನು ಇಳಿಸಿ ಪಕ್ಕದಲ್ಲಿಯೇ ಒಂದು ಹಟ್ಟಿಯನ್ನು ಮಾಡಿಕೊಂಡಿದ್ದ. ಹಟ್ಟಿಗೆ ಒಂದು ಪ್ರತ್ಯೇಕವಾದ ಬಾಗಿಲು ಅಂತ ಇರಲಿಲ್ಲ.

ಅಡಿಕೆಯ ಸಲಾಕೆಯನ್ನು ಸುತ್ತ ಕಟ್ಟಿ ಒಂದು ಕಡೆ ಮಾತ್ರ ಬಿಟ್ಟಿದ್ದ. ಅವನ ಹಟ್ಟಿಯಲ್ಲಿ ಇದ್ದದ್ದು ಎರಡೇ ಎರಡು ದನಗಳು; ಒಂದು ಕರು. ರಾತ್ರಿ ಯಾವಾಗಲೂ ಹಟ್ಟಿಗೆ ಒಂದು ಹನೆ ಮರದ ಮಡಲನ್ನು ಮಾತ್ರ ಸಿಕ್ಕಿಸುತ್ತಿದ್ದ. ಹನೆ ಮರದ ಮಡಲು ಸರಿಯಾಗಿ ಒಣಗಿದರೆ ಒಂಚೂರು ಮುಟ್ಟಿದರೂ ಸಾಕು ಸರಿಯಾದ ಶಬ್ದ ಹೊರಡಿಸುತ್ತದೆ. ತುಕ್ರನ ಲೆಕ್ಕಾಚಾರವೆಂದರೆ ಯಾವುದೇ ಪ್ರಾಣಿ ರಾತ್ರಿ ಕೊಟ್ಟಿಗೆಗೆ ಬಂದರೆ ಹನೆ ಮರದ ಮಡಲನ್ನು ತುಳಿದುಕೊಂಡು ಹೋಗಬೇಕು, ತುಳಿದರೆ ಶಬ್ದ ಬರುತ್ತದೆ ಹಾಗೂ ಎಚ್ಚರವಾಗುತ್ತದೆ.

ಆ ದಿವಸ ಅದೇನು ಗ್ರಹಚಾರವೋ ಏನೊ? ರಾತ್ರಿ ಹಟ್ಟಿಯ ಬಾಗಿಲಿಗೆ ಅವನು ಹನೆ ಮರದ ಮಡಲನ್ನು ಅಡ್ಡ ಇಡಲು ಮರೆತು ಬಿಟ್ಟ. ಮಧ್ಯೆ ರಾತ್ರಿ ಹೊತ್ತು ಹಟ್ಟಿಯ ಕಡೆಯಲ್ಲಿ ಸದ್ದು ಕೇಳಿಸಿತಾದರೂ ವಿಪರೀತ ಕುಡಿದು ಮಲಗಿದ ತುಕ್ರನಿಗೆ ಎದ್ದು ಕೂರುವಷ್ಟು ತಾಕತ್ತಿರಲಿಲ್ಲ. ಅದಕ್ಕೆ ಮತ್ತೆ ಹೊರಳಿ ಮಲಗಿಬಿಟ್ಟಿದ್ದ.

ಮರುದಿನ ಬೆಳಿಗ್ಗೆ ಎದ್ದು ಅವನ ಹೆಂಡತಿ ಹೋಗಿ ಹಟ್ಟಿಯನ್ನು ನೋಡಿದರೆ ಕರು ಮಂಗಮಾಯ! ಕರುವಿನ ರಕ್ತ ಹಟ್ಟಿಯಿಂದ ಮುಂದೆಯೂ ಬಿದ್ದಿತ್ತು. ತುಕ್ರನಿಗಾಗಲಿ ಅವನ ಹೆಂಡತಿಗಾಗಲಿ ಕರು ಮಾಯವಾದ್ದರ ಕಾರಣ ಊಹಿಸುವುದು ಕಷ್ಟವಾಗಿರಲಿಲ್ಲ.

ಹುಲಿಯೋ ಕತ್ತೆ ಕಿರುಬನೋ ಕರುವನ್ನು ತಿಂದು ಮುಗಿಸಿದೆಯೆಂದು ಮಾತ್ರ ಯೋಚಿಸಿದರು. ಈ ವಿಷಯ ಮಾತ್ರ ಕಿವಿಯಿಂದ ಕಿವಿಗೆ ಹೋಯಿತು: 'ತುಕ್ರನ ಹಟ್ಟಿಗೆ ಹುಲಿ ನುಗ್ಗಿದೆಯಂತೆ.' ಆ ದಿನದಿಂದ ಊರಿನಲ್ಲಿ ಬಂದೋಬಸ್ತು ಮತ್ತಷ್ಟು ಬಿಗಿಯಾಯಿತು. ಮೊದಲು ನಾಯಿಯನ್ನು ಕಟ್ಟಿ ಹಾಕದಿದ್ದವರು ಕೂಡಾ ಮನೆಯ ಚಾವಡಿಯಲ್ಲಿ ಕಟ್ಟಿಹಾಕತೊಡಗಿದರು. ಸರಪಳಿಯಲ್ಲಿ ಬಿಗಿಸಿಕೊಂಡು ರೂಢಿಯಿಲ್ಲದ ನಾಯಿಗಳು ರಾತ್ರಿಯಲ್ಲಿ ಅವನ್ನು ಕಟ್ಟಿಹಾಕಿದ್ದಕ್ಕೆ ವೃಥಾ ಬೊಗಳತೊಡಗಿದವು. ನಾಯಿಗಳು ಬೊಗಳ ತೊಡಗಿದಾಗ ಹೆಂಗಸರಿಗೆ ಮತ್ತು ಮಕ್ಕಳಿಗೆ ಹುಲಿಯನ್ನು ನೋಡಿ ಬೊಗಳುತ್ತಿವೆಯೆಂದು ಅನಿಸಿ ಎದೆಯಲ್ಲಿ ಅವಲಕ್ಕಿ ಕುಟ್ಟುತ್ತಿತ್ತು. ಸರಪಳಿಯಿಂದಾಗಿ ನಾಯಿಗಳು ಆ ಕಡೆ-ಈ ಕಡೆ ಹೋಗುವುದು ಸಾಧ್ಯವಾಗದಿದ್ದಾಗ ಅವುಗಳ ಪ್ರತಿಭಟನೆಯೂ ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗುತ್ತಿತ್ತು. ನಾಯಿಗಳ ಹೇಲು-ಉಚ್ಚೆ ತೆಗೆಯುತ್ತಾ "ಥೂ ನಾಯಿಗೆ ಹುಟ್ಟಿದವನೆ" ಎಂದು ಬೈಯುವುದು ಮಾಮೂಲಿ ದೃಶ್ಯವಾಗಿತ್ತು. ಕೆಲವರು ಚಿಮಿಣಿ ದೀಪದ ಬತ್ತಿಯನ್ನು ಸಣ್ಣಗಿರಿಸಿ ಇಡೀ ರಾತ್ರಿ ಉರಿಯುವಂತೆ ಮಾಡಿದರೆ ಮತ್ತೆ ಕೆಲವರು ಹೊನ್ನೆಣ್ಣೆಯನ್ನು ದೀಪಕ್ಕೆ ಹಾಕಿ ಉರಿಸಿಡತೊಡಗಿದರು. ಕೆಲವರು ಮನೆಯ ಅಂಗಳದಲ್ಲಿ ದೊಡ್ಡ ದೊಡ್ಡ ಸೌದೆಯನ್ನು ಇರಿಸಿ ಅವನ್ನೇ ಉರಿಸತೊಡಗಿದರು. ರಾತ್ರಿಯಾಗುವ ಮೊದಲು ಗಂಡಸರು ಮನೆಯನ್ನು ಸೇರಿಕೊಂಡದ್ದರಿಂದ ಮಕ್ಕಳ ಕಿರುಚಾಟಕ್ಕೆ ಕೂಡಾ ಆಸ್ಪದವಿಲ್ಲದಂತಾಯಿತು. ದೊಡ್ಡವರು ಚಾವಡಿಯಲ್ಲಿನ ಮಾಡಿನಲ್ಲಿ ದೊಡ್ಡ ದೊಡ್ಡ ಬಡಿಗೆಯನ್ನು ಇಡತೊಡಗಿದರು. "ಹುಲಿಯ ಉಪದ್ರ ಜಾಸ್ತಿಯಾಯಿತಪ್ಪಾ. ಈ ಬಿಳಿ ಜನರು ಏನೇನು ಮಾಡ್ತಾರೆ ಅಂತ ಹೇಳುವುದಕ್ಕೆ ಬರುವುದಿಲ್ಲ" ಎಂದು ಬೈಯುವವರು ಇದ್ದರು. ರಾತ್ರಿಯಲ್ಲಿ ನಾಯಿಗಳು ಬೊಗಳುವುದು, ಸಣ್ಣ ಸಣ್ಣ ಸದ್ದುಗಳು ಕೂಡಾ ಜನರಿಗೆ ನಿದ್ದೆಯಿಲ್ಲದಂತೆ ಮಾಡಿದವು. ಹಗಲಿಡೀ ಕೆಲಸ ಮಾಡಿ ದಣಿದ ಹೆಂಗಸರು ರಾತ್ರಿ ಮಲಗಿದರೆ ಗಂಡನ ಗೊರಕೆ ಕೇಳಿ ಎಚ್ಚರಗೊಳ್ಳುವ ಮತ್ತು ಹೆದರಿಕೊಳ್ಳುವ ಪ್ರಮೇಯ ಬಂತು. ಹೀಗೆ ಒಂದು ವಾರ ಕಳೆಯಿತು. ಕೆಲವರಿಗೆ ನಿಧಾನವಾಗಿ ಹುಲಿಯ ಬಗೆಗಿನ ಹೆದರಿಕೆ ಕಡಿಮೆಯಾಯಿತು.

ತುಕ್ರ ನಾಯ್ಕನ ಮನೆಯ ಹತ್ತಿರ ಗುಡ್ಡದಿಂದ ಹರಿದು ನೀರು ಬಿದ್ದು ಬಿದ್ದು ಒಂದು ಹೊಂಡ ಉಂಟಾಗಿತ್ತು. ಕಲ್ಲುಗಳ ನಡುವೆ ಇದ್ದ ಈ ಗುಂಡಿ

ಎಂಟ್ಟತ್ತು ಅಡಿಯಷ್ಟು ಆಗಿರಬಹುದು. ಸುತ್ತಲೂ ಗಿಡಮರಗಳು ಬೆಳೆದಿದ್ದವು. ಬೇಗನೆ ಅಲ್ಲೊಂದು ಗುಂಡಿಯಿದೆಯೆಂದು ಯಾರಿಗೂ ತಿಳಿಯುತ್ತಿರಲಿಲ್ಲ.

ಒಂದು ದಿವಸ ಬೆಳಗಿನ ಜಾವಕ್ಕೆ ಸರಿಯಾಗಿ ಅಂದರೆ ಐದು ಗಂಟೆಯ ಹೊತ್ತಿಗೆ ಸರಿಯಾಗಿ ಆ ಗುಂಡಿಯ ಹತ್ತಿರದಿಂದ ಹುಲಿಯೊಂದು ಗರ್ಜಿಸಿದ್ದು ಕೇಳಿಸಿತು. ಎಲ್ಲರೂ ಗಾಢ ನಿದ್ದೆಯಲ್ಲಿದ್ದರು. ಹುಲಿಯ ಗರ್ಜನೆಯನ್ನು ಕೇಳಿಸಿಕೊಂಡ ಹೆಂಗಸರು ಗಂಡಸರನ್ನು ಎಬ್ಬಿಸಿ ವಿಷಯ ತಿಳಿಸಿದರು. ಆಯಾ ಮನೆಗಳಿಂದ ಆ ಗುಂಡಿಯು ಯಾವ ದಿಕ್ಕಿಗೆ ಬರುತ್ತದೋ ಆ ದಿಕ್ಕನ್ನೂ ಸೂಚಿಸಿದರು. ಮತ್ತೆ ಸ್ವಲ್ಪ ಹೊತ್ತಿಗೆ ಪುನಃ ಗರ್ಜನೆ ಕೇಳಿಸಿತು. ಏನೋ ಆಗಿದೆಯೆಂದು ಊರಿನವರಿಗೆ ತಿಳಿಯಿತಾದರೂ ಹೆಚ್ಚು ಮುಂದುವರಿಯುವ ಧೈರ್ಯ ಯಾರಿಗೂ ಉಂಟಾಗಲಿಲ್ಲ. ಗಂಡಸರು ಒಬ್ಬೊಬ್ಬರೇ ಹೋಗಿ ಪಟೇಲರ ಮನೆಯ ಚಾವಡಿಯನ್ನು ಸೇರಿಕೊಂಡರು. ಎಲ್ಲರೂ ಚಾವಡಿಯಲ್ಲಿ ಸೇರುವ ಹೊತ್ತಿಗೆ ಬೆಳಗ್ಗಿನ ಒಂಬತ್ತೂವರೆ ಹತ್ತು ಗಂಟೆಯಾಗಿತ್ತು.

ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಮಾತಾಡಲು ಪ್ರಾರಂಭಿಸಿದರು. ಇದು ಪಂಜುರ್ಲಿಯ ಕಾಟ ಅಂತ ಒಬ್ಬರೆಂದರೆ ಮತ್ತೊಬ್ಬರು "ಏನೂ ಇಲ್ಲ– ಇದು ಹುಲಿಯ ಕಾಟ ಅಷ್ಟೆ. ವಿಟ್ಲದ ದೊರೆಗಳಿಗೆ ನಾವು ದೂರು ಕೊಟ್ಟು ಬಿಡುವ" ಅಂತ ಅಂದರು. 'ಏನಾಯಿತು ಅಂತ ಪರಿಸ್ಥಿತಿ ಗೊತ್ತಾಗದೆ ನಾವು ಏನು ಮಾಡುವುದು? ಹುಲಿಯೇ ಆದರೆ ಹುಲಿಯನ್ನು ಕೊಲ್ಲದೆ ಬೇರೆ ನಿರ್ವಾಹವಿಲ್ಲ. ಎಲ್ಲಕ್ಕಿಂತ ಇದು ಊರಿನ ಮಾರ್ಯಾದೆಯ ಪ್ರಶ್ನೆ. ಅದಕ್ಕಿಂತ ಹೆಚ್ಚಾಗಿ ಹುಲಿಯನ್ನು ಹೀಗೆ ಬಿಟ್ಟರೆ ನಾಳೆ ಇಲ್ಲಿ ಮನುಷ್ಯರು ಓಡಾಡುವುದೇ ಕಷ್ಟ" ಅಂತ ಪಟೇಲರು ಹೇಳಿದರು. 'ಪಟೇಲರೇ, ಅದು ಏನೋ ಸರಿ, ಆದ್ರೆ ಏನು ಮಾಡುವುದು? ಹುಲಿ ಒಂದೇ ಸಮನೆ ಕಿರುಚಾಡುವುದು ಕೇಳಿಸ್ತಾ ಇದೆ. ಏನು ಮಾಡುವುದು ಅಂತ ಬೇಕಲ್ಲಾ? ಒಬ್ಬರು ರಾಗ ಎಳೆದರು. ಮೂಲತಃ ಪುಕ್ಕಲು ಸ್ವಭಾವದ ಪುರೋಹಿತರು "ನಮ್ಮ ಜಾಗ್ರತೆಯಲ್ಲಿ ನಾವು ಇದ್ದರಾಯಿತು. ಹೊರತು ಇನ್ನು ಹುಲಿಯನ್ನು ಕೊಲ್ಲಲು ಹೋದರೆ ಒಂದಕ್ಕೆರಡು ಆಗ್ತದೆಯಷ್ಟೆ. ಅದರಿಂದಾಚೆಗೆ ಏನೂ ಆಗುವುದಿಲ್ಲ ಊರಿಗೆ ಶಾಂತಿ ಮಾಡಿದರೆ ಸರಿ" ಎಂದರು. ಅವರ ಪುಕ್ಕಲು ಸ್ವಭಾವದ ಅರಿವಿದ್ದ ಪಟೇಲರು, "ಊರಿಗೆ ಶಾಂತಿ ಮಾಡಿಡುವುದು ಎಲ್ಲಾ ಸರಿ, ಆದ್ರೆ ಅದು ಈಗ ಉಪಯೋಗಕ್ಕೆ ಬರುವುದಿಲ್ಲ. ಒಂದು ಹತ್ತು ಜನ ಸರಿಯಾದ ಬಡಿಗೆ, ಪಿಕಾಸಿ ಏನೇನೊ ಇದೆಯೋ ಅದೆಲ್ಲಾ ತಗೊಂಡು ಹೋಗುವುದು. ಸಾಧ್ಯವಾದರೆ ಹುಲಿಯನ್ನು ಕೊಲ್ಲುವುದು ಇಲ್ಲವಾದರೆ ಹುಲಿಯನ್ನು ಮತ್ತೆ ಕಾಡಿಗೆ ಓಡಿಸುವುದು. ಬೇರೆ ಏನೂ ದಾರಿ ಕಾಣಿಸುವುದಿಲ್ಲ.

ಪರಿಸ್ಥಿತಿಯು ಏನಾಗಿದೆಯಂತ ತಿಳಿಯದೆ ಮುಂದುವರಿಯುವುದು ಕಷ್ಟ" ಅಂತ ಹೇಳಿ ಮೂಗಿಗೆ ಒಂದು ಚಿಟಿಕೆ ನಶ್ಯ ಏರಿಸಿಕೊಂಡರು. ಅದಕ್ಕೆ ಪುರೋಹಿತರು, "ಏನೋಪ್ಪಾ ಊರಿನವರಿಗೆ ಏನು ಸರಿಯಂತಾ ತಿಳಿಯುತ್ತದೋ ಅದನ್ನು ಮಾಡಿ. ನಾನಂತೂ ನನ್ನ ಜೀವನದಲ್ಲಿ ಹುಲಿಯನ್ನು ಬಿಡಿ ಒಂದು ಇಲಿಯನ್ನು ಕೂಡಾ ಕೊಂದವನಲ್ಲ. ಅದೂ ಅಲ್ಲದೆ ವೈದಿಕರು ಪ್ರಾಣಿ ಹಿಂಸೆಯನ್ನು ಮಾಡಬಾರದು ಅಂತ ಶಾಸ್ತ್ರವೇ ಹೇಳಿದೆ" ಎಂದರು. ಅದಕ್ಕೆ ಪಟೇಲರು, "ನೀವು ಹಿಂಸೆ ಮಾಡಿ ಅಂತ ನಾನು ಹೇಳುವುದಿಲ್ಲ. ನಾವೆಲ್ಲಾ ಮಾಂಸ ತಿನ್ನುವವರು. ನಮಗೆ ಇದೆಲ್ಲಾ ದೊಡ್ಡ ಸುದ್ದಿಯಲ್ಲ. ಒಂದು ಹತ್ತು ಹನ್ನೆರಡು ಜನ ನನ್ನ ಜೊತೆ ಬಡಿಗೆ ಹಿಡಿದುಕೊಂಡು ಬನ್ನಿ. ಹುಲಿಯ ಕೈಯಲ್ಲಿ ಸಾಯಬೇಕು ಅಂತ ಹಣೆಯಲ್ಲಿ ಬರೆದಿದ್ದರೆ ಅದನ್ನು ತಪ್ಪಿಸಲಾಗುತ್ತದಾ? ಯಾರು ಬರುತ್ತಾರೋ ಅವರಿಗೆ ಈವತ್ತು ನಮ್ಮ ಮನೆಯಲ್ಲಿಯೇ ಗಡದ್ದು ಊಟ" ಅಂದರು. ಪಟೇಲರ ಮಾತು ಕೇಳಿ ಕೆಲವರಿಗೆ ಉಮೇದು ಬಂತು. "ಉದ್ದುದ್ದ ಭರ್ಜಿ ಮಾಡಿಕೊಳ್ಳಿ" ಎಂದು ಪಟೇಲರು ಅಪ್ಪಣೆ ಹೊರಡಿಸಿದರು. ವೈದಿಕರಲ್ಲಿ ಕೆಲವರು "ಇವೆಲ್ಲಾ ತಮಗೆ ಸರಿಯಾಗುವ ವ್ಯಾಪಾರವಲ್ಲ" ಎಂದುಕೊಂಡು ಜಾಗ ಖಾಲಿಮಾಡಿದರು. "ಧೈರ್ಯದ ಎಣ್ಣೆ ಬೇಕಿದ್ದರೆ ನಾನು ತಂದು ಕೊಡ್ತೇನೆ" ಎಂದು ಸುಂದ್ರ ಪೂಜಾರಿ ಹೇಳಿದ. ಸುಂದ್ರ ಪೂಜಾರಿ ಗೇರು ಹಣ್ಣಿನ ಸಾರಾಯಿ ಮಾಡುವುದರಲ್ಲಿ ಪರಿಣಿತ. ಗೇರುಹಣ್ಣು ಎಲ್ಲಿದ್ದರೂ ಅವನು ಬಿಡುವುದಿಲ್ಲ. ಗೇರುಹಣ್ಣು ಸಿಗದಿದ್ದರೆ ಈ ದಿನ ತಾಳೆ ಮರದ ಹಣ್ಣಿನಿಂದಾದರೂ ಸಾರಾಯಿ ಮಾಡುವವನು. ಅವನು ಮಾಡಿರುವ ಸಾರಾಯಿ ಮತ್ತು ಸೇಂದಿ ಎರಡೂ ತುಂಬಾ ಗರಮ್ಮಾಗಿರುತ್ತವೆಯೆಂದು ಜನರು ತಿಳಿದಿದ್ದರು. ಗೇರು ಹಣ್ಣಿನ ಸಾರಾಯಿಯನ್ನು ಚೆಲ್ಲಿ ಒಂದು ಬೆಂಕಿಕಡ್ಡಿ ಗೀರಿದರೆ ಹೊತ್ತಿಕೊಳ್ಳುತ್ತದೆಯೆಂದು; ಅದನ್ನು ಸ್ವಲ್ಪ ಕುಡಿದರೂ ಸಾಕು ಎಂತಲೂ ಎಲ್ಲರೂ ತಿಳಿದಿದ್ದರು.

ಸುಂದ್ರ ಪೂಜಾರಿ ಗೇರು ಹಣ್ಣನ್ನು ಕೊಳೆಹಾಕಿ ಅದಕ್ಕೆ ಕೋಳಿಯ ಹೇಲನ್ನು ಮಿಶ್ರ ಮಾಡುತ್ತಾನೆ. ಅಂತ ಸುದ್ದಿ. ಅವನತ್ರ ಸಾರಾಯಿಯಲ್ಲೂ ಬೇರೆ ಬೇರೆ ವಿಧವಿದೆ. ಮೊದಲು ಸ್ವಲ್ಪ ಕುಡಿಯಲು ಕೊಟ್ಟ ಮೇಲೆ – ಅನಂತರದಲ್ಲಿ ಅದಕ್ಕೆ ಸರಿಯಾಗಿ ನೀರನ್ನು ಮಿಶ್ರಗೊಳಿಸುತ್ತಿದ್ದ. ಕುಡಿದವರಿಗೆ ಕುಡಿದಷ್ಟು ಸಾಕಾಗುತ್ತಿರಲಿಲ್ಲ. ಸಾರಾಯಿ ಕುಡಿಯುವವರು ಅವನಿಗೆ ಸಾರಾಯಿಯ ಬದಲು ಬೇರೆ ಏನು ಕೊಟ್ಟರೂ ನಡೆಯುತ್ತಿತ್ತು. ಹಣ್ಣಡಿಕೆ, ತೆಂಗಿನಕಾಯಿ; ಗೇರು ಬೀಜ, ಇವು ಮೂರು ಊರಿನ ಜನಕ್ಕೆ ಅತ್ಯಂತ ಸುಲಭವಾಗಿ ದೊರೆಯುತ್ತಿದ್ದ ವಸ್ತುಗಳು. ಕುಡಿತದ ಚಟವುಳ್ಳವರು ಅವರಿವರ ತೋಟದಿಂದ ಹಣ್ಣಡಿಕೆಯನ್ನೋ; ತೆಂಗಿನ

ಕಾಯಿಯನ್ನೋ ಕದ್ದು ತಗೊಂಡು ಹೋಗಿ ಕೊಟ್ಟು ತಮ್ಮ ಚಪಲ ತೀರಿಸಿಕೊಳ್ಳುತ್ತಿದ್ದರು. ಬುಟ್ಟಿ ಹೆಣೆಯುವವರು; ಚಪ್ಪಲಿ ಹೊಲೆಯುವವರು, ಮರಕೆಲಸದವರು ಮಾತ್ರ ಬೇರೆ ಬೇರೆ ವಸ್ತುಗಳನ್ನು ಕೊಟ್ಟೋ ಅಥವಾ ದುಡ್ಡು ಕೊಟ್ಟೋ ಕುಡಿಯುತ್ತಿದ್ದರು. ಪಟೇಲರಿಗೆ ಮಾತ್ರ ಅವನು ಪುಕ್ಸಟೆಯಾಗಿ ದೊಡ್ಡ ದೊಡ್ಡ ಪಾತ್ರೆಯಲ್ಲೋ; ಸೋರೆ ಬುರುಡೆಯಲ್ಲೋ ಸಾರಾಯಿ ತುಂಬಿಕೊಡುತ್ತಿದ್ದ.

ಸುಂದ್ರ ಪೂಜಾರಿ, 'ಗರ್ವದೆಣ್ಣೆ ಕೊಡ್ತೇನೆ' ಎಂದಾಗ ಮಾತ್ರ ಎಲ್ಲರಿಗೂ ಖುಷಿಯಾಯಿತು. ಪಟೇಲರು ಮಾತ್ರ ತಾಕೀತು ಮಾಡಿದರು, "ಯಾರೂ ಕುಡಿಯುವುದಿದ್ದರೂ ಕುತ್ತಿಗೆ ತನಕ ಕುಡಿಯಬಾರದು. ಒಂದೊಂದು ಲೋಟ ಮಾತ್ರ ಕುಡಿಯಬೇಕು" ಎಲ್ಲರೂ ಅದಕ್ಕೆ ಸೈ ಎಂದರು. ಸುಂದ್ರ ಪೂಜಾರಿ ಅಲ್ಲಿಯೇ ಇದ್ದ ಹುಡುಗನನ್ನು ಓಡಿಸಿ ಸಾರಾಯಿ ತರಿಸಿಕೊಂಡು ಎಲ್ಲರಿಗೂ ಒಂದೊಂದು ಲೋಟ ಹಂಚಿದ. ತುಕ್ರ ಮಾತ್ರ ಒಂದು ಲೋಟ ಕುಡಿದು "ಇದರಲ್ಲಿ ನನ್ನ ಗಂಟಲಿಗೆ ಪಸೆ ಕೂಡಾ ಆಗಿಲ್ಲ" ಎಂದ. ಪಟೇಲರ ಬೈದರೂ ಮತ್ತೊಂದು ಲೋಟಕ್ಕೆ ಸಾರಾಯಿ ಹಾಕಿಸಿಕೊಂಡು ಗಟ ಗಟನೆ ಕುಡಿದು ಉಪ್ಪಿನ ಹರಳನ್ನು ಬಾಯಿಗೆ ಹಾಕಿಕೊಂಡ. ಪಟೇಲರು, "ನಿಮ್ಮ ಕತೆ ನೋಡಿದರೆ ಇದು ಸದ್ಯಕ್ಕೆ ಆಗುವ ವ್ಯಾಪಾರವಲ್ಲ" ಎಂದು ಗದರಿದ ಮೇಲೆ ಎಲ್ಲರೂ ಕುಳಿತಲ್ಲಿಂದ ಎದ್ದರು.

ಇಷ್ಟೆಲ್ಲಾ ಮಾತು ಕತೆಯಾಗುವಾಗ ಮಧ್ಯಾಹ್ನ ಹನ್ನೆರಡು ಗಂಟೆ ಆಗಿ ಹೋಯಿತು. ಒಬ್ಬೊಬ್ಬರು ಒಂದೊಂದನ್ನು ಕೈಯಲ್ಲಿ ಹಿಡಿದುಕೊಂಡು ಹೊರಟರು. ಕೆಲವರು ಕೈಯಲ್ಲಿ ಅಡಿಕೆಯ ಸಲಾಕೆಯಿಂದ ಮಾಡಿದ ಭರ್ಜಿ, ಮತ್ತೆ ಕೆಲವರ ಕೈಯಲ್ಲಿ ಹಾರೆ, ಮತ್ತೆ ಕೆಲವರು ಪಿಕಾಸಿ ಹಿಡಿದುಕೊಂಡು ಹೊರಟರು. ಪಟೇಲರು ಎಲ್ಲರ ಎದುರು ನಿಂತಿದ್ದರು. ಹುಲಿ ಹಿಡಿಯಲು ಒಂದು ಸೈನ್ಯವೇ ತಯಾರಾಗಿತ್ತು. ಈ ಯಾವ ಪರಿಕರವೂ ಹುಲಿಗೆ ನಾಟುವುದಿಲ್ಲ ಮತ್ತು ಹುಲಿಯನ್ನು ಕೊಲ್ಲಲು ಬೇಕಾದ ಧೈರ್ಯ ಮತ್ತು ಬುದ್ಧಿವಂತಿಕೆ ಎರಡು ಇಲ್ಲವೆಂಬ ಸತ್ಯ ಮಾತ್ರ ಯಾರಿಗೂ ಅರಿವಾಗಿರಲಿಲ್ಲ. ಕಾಡು, ಹಂದಿ ಮತ್ತು ಕೋಳಿಗಳನ್ನು ಉಪಾಯದಿಂದ ಕೊಂದು ಹೆಸರು ಮಾಡಿದ್ದ ಕುಂಞಣ್ಣ ಮಾತ್ರ ಮನಸ್ಸಿನಲ್ಲಿ ಆಲೋಚಿಸಿದ: ಹುಲಿಯನ್ನು ಕೊಲ್ಲುವುದು ಅಷ್ಟು ಸುಲಭದ ಬಾಬ್ತಲ್ಲ. ಗರ್ವದೆಣ್ಣೆಯನ್ನು ಹಾಕಿಕೊಂಡವರು ದಾರಿಯಲ್ಲಿ ಒಂದೊಂದು ಮಾತನ್ನು ಉದುರಿಸತೊಡಗಿದರು. ಎಲ್ಲರೂ ತುಕ್ರನ ಮನೆಯ ಹತ್ತಿರ ಬಂದು ಅವನ ಅಂಗಳದಲ್ಲಿ ಜಮೆಯಾದರು. ಹುಲಿಯು ಗರ್ಜಿಸುವುದು ಕಡಿಮೆಯಾದ್ದರಿಂದ, 'ಯಾವ ದಿಕ್ಕಿನಿಂದ ಶಬ್ದ ಕೇಳಿಸಿತೋ ಆ ಕಡೆಗೆ ಎಲ್ಲರೂ ಗಲಾಟೆ ಮಾಡಿಕೊಂಡು

ಹೋದರೆ ಹುಲಿ ಓಡಿ ಹೋಗುವುದಂತೂ ನಿಜ. ಅದು ಕೈಗೆ ಸಿಗುವುದಿಲ್ಲ' ಎಂದು ಕುಂಞಣ್ಣ ಅನುಭವಸ್ಥನಂತೆ ಹೇಳಿದ.

"ಓಡಿ ಹೋದರೆ ಹೋಗಲಿ" ಎಂದು ಪಟೇಲರು ಹೇಳಿದರು. ಅವರಿಗೂ ಸಣ್ಣ ಪುಕ್ಕಲುತನ ಆವರಿಸಿತು. ಎಲ್ಲರೂ ಗಲಾಟೆ ಮಾಡುತ್ತಾ ನುಗ್ಗಿದರು. ಪುನಃ ಹುಲಿಯ ಗರ್ಜಿಸಿದ್ದು ಕೇಳಿದಾಗ ಅರ್ಧಕ್ಕರ್ಧ ಜನರು ಹೆದರಿ ಕಂಗಾಲು. ಅವರಲ್ಲಿ ಕೆಲವರಿಗೆ ಹುಲಿಯು ಗುಂಡಿಯತ್ರ ಇದೆಯೆಂದು ಖಚಿತವಾಯಿತು. ಕುಂಞಣ್ಣ ಕೊಂಚ ಧೈರ್ಯದಿಂದ 'ಯಾರೂ ಗಲಾಟೆ ಮಾಡಬೇಡಿ. ನಾನು ಮೆಲ್ಲ ಮರ ಹತ್ತಿ ನೋಡುತ್ತೇನೆ" ಎಂದು ಹತ್ತಿರವಿದ್ದ ನೇರಳೆಯ ಮರವನ್ನು ಹತ್ತಿ ಸುತ್ತ ನೋಡಿದ. ಆಗ ಅವನಿಗೆ ನಿಜವಾಯಿತು. "ಹುಲಿಯು ಗುಂಡಿಯೊಳಗೆ ಬಿದ್ದಿದೆ". ಮರದಿಂದ ಇಳಿದವನು ಎಲ್ಲರಿಗೂ ವಿಷಯ ತಿಳಿಸಿದ. ನಿಧಾನವಾಗಿ ಎಲ್ಲರೂ ಗುಂಡಿಯ ಹತ್ತಿರ ನಡೆದರು. ಹುಲಿಯು ಗುಂಡಿಯೊಳಗೆ ಬಿದ್ದದ್ದು ನೋಡಿ ಮೇಲಿನಿಂದ ಒಬ್ಬೊಬ್ಬರು ಒಂದೊಂದು ಮಾತಾಡಲು ಪ್ರಾರಂಭಿಸಿದರು. ಕೆಲವರು ಗುಂಡಿಯ ಒಂದು ಬದಿಯಲ್ಲಿರುವ ಎತ್ತರದ ಜಾಗದಲ್ಲಿ ನಿಂತುಕೊಂಡರು. ತುಕ್ರ ಮತ್ತು ಕೆಲವರು ಗುಂಡಿಯ ಬಲ ಭಾಗದಲ್ಲಿ ನಿಂತಿದ್ದರು. ಗುಂಡಿಯ ಎಡಭಾಗದ ಎತ್ತರದ ಜಾಗದಲ್ಲಿ ಇದ್ದವರು ಹುಲಿಯ ಕಡೆಗೆ ದೊಡ್ಡ ಕಲ್ಲುಗಳನ್ನು ಎತ್ತಿ ಬಿಸಾಕಲು ಪ್ರಾರಂಭಿಸಿದರು. ಗುಂಡಿಯೊಳಗಿನಿಂದ ಇದ್ದಕ್ಕಿದ್ದಂತೆ ಹುಲಿಯು ನೆಗೆಯಿತು. ಅದು ನೆಗೆದದ್ದು ಮಾತ್ರವಲ್ಲ ಎದುರು ಇದ್ದ ತುಕ್ರನ ಕುಂಡೆಯ ಮಾಂಸವನ್ನು ಪರಚಿ ಬಾಚಿದ್ದು ಒಂದೇ ಕ್ಷಣದಲ್ಲಿ ಜರುಗಿತು. ಹುಲಿ ಓಡಿಹೋಯಿತಾದರೂ ಬಿದ್ದ ತುಕ್ರನು ಗಾಬರಿಗೊಂಡಿದ್ದ. ಎಲ್ಲರೂ ಅವನನ್ನು ಎತ್ತಿಕೊಂಡು ಮರಳಿದರು. ಕಿತ್ತು ಹೋದ ಕುಂಡೆಯ ಗಾಯ ವಾಸಿಯಾಗಲೂ ಹೆಚ್ಚು ಕಡಿಮೆ ಎರಡು ತಿಂಗಳು ಬೇಕಾಯಿತು. ಅದರ ಅನಂತರ ತುಕ್ರ ಒಂದು ಕಡೆ ವಾಲಿಕೊಂಡು ನಡೆಯತೊಡಗಿದ. ಆವಾಗಿನಿಂದ ತುಕ್ರನಿಗೆ 'ಹುಲಿ ತುಕ್ರ, 'ಓರೆ ಮುಕುಳಿ ತುಕ್ರ,' "ಸೊಟ್ಟು ಕುಂಡೆ ತುಕ್ರ" ಅನ್ನುವ ಹೆಸರು ಜನಜನಿತವಾಯಿತು. ಒಂದೊಂದು ದಿನ ರಾತ್ರಿ ಮಲಗಿದವನು ಕನಸಿನಲ್ಲಿ ಹುಲಿಯನ್ನು ಕಂಡು ಹೆದರಿಕೊಂಡು ಎದ್ದು ಕುಳಿತಿರುತ್ತಿದ್ದ. ಪರಮೇಶ್ವರ ಈ ಕತೆಯನ್ನು ಆಗಾಗ ಹೇಳುತ್ತಿದ್ದನಾದರೂ ಅದರಲ್ಲಿ ಹೆಮ್ಮೆಯು ಇರುತ್ತಿತ್ತು. ತನ್ನ ತಂದೆಯ ಕುಂಡೆಗೆ ಹುಲಿಯು ಪರಚಿದೆಯೆಂದು ಹೇಳುವಾಗ ಅದನ್ನು ಬಹಳ ದೊಡ್ಡ ಪ್ರಶಸ್ತಿಯೆಂಬಂತೆ ಬಣ್ಣಿಸುತ್ತಿದ್ದ:

* * * * *

"ಹುಲಿ ಯಾವತ್ತೂ ಹುಲ್ಲು ತಿನ್ನುವುದಿಲ್ಲ"

1992
ಫೆಬ್ರವರಿ
2

ದುಗ್ಗಮ್ಮಜ್ಜಿಯ ಕಣ್ಣು ಈಗ ಮಂಜು ಮಂಜಾಗತೊಡಗಿದೆ. ಸರಿಯಾಗಿ ಕಾಣಿಸುವುದಿಲ್ಲ. ಕಿವಿಯು ಕೂಡಾ ಮಂದವಾಗಿದೆ. ಮುಖದಲ್ಲಿ ಅಸಂಖ್ಯ ಗೆರೆಗಳು. ಕಾಗದದಲ್ಲಿ ಚಿತ್ತು ಚಿತ್ತಾದ ಗೀಟುಗಳು ಒಡಮೂಡಿದಂತೆ ಅವಳ ಹಣೆ ಕಾಣಿಸುತ್ತಿದೆ. ಕಾಲು ಮತ್ತು ಕೈಗಳು ಬತ್ತಿ ಹೋಗಿದೆ. ಸೊಂಟ ಬಾಗಿದೆ. ತಲೆಗೂದಲನ್ನು ಆಗಾಗ ಭಂಡಾರಿಗೆ ಒಡ್ಡಿದ್ದರಿಂದ ಬಿಳಿಕೂದಲು ಕಡ್ಡಿಯಂತೆ; ಗರಿಕೆಯಂತೆ ಕಾಣಿಸುತ್ತದೆ. ಕೈಯಲ್ಲಿ ಬೆತ್ತವಿಲ್ಲದಿದ್ದರೆ ನಡೆಯಲಾರಳು. ಮೈಗೆ ಸುತ್ತಿಕೊಂಡಿರುವುದು ಕೈಮಗ್ಗದ ಅಂಚು ಇಲ್ಲದಿರುವ ಸೀರೆ. ಹಲ್ಲುಗಳು ಬಿದ್ದಿವೆ. ಬೊಚ್ಚು ಬಾಯಿ ಮಂಜಿನಂತೆ ಕಾಣಿಸುವ ದೃಷ್ಟಿ. ಹಾಗೆ ನೋಡುವುದಿದ್ದರೆ ಅವಳಿಗಿರುವುದು ಎರಡು ಸೀರೆ ಮಾತ್ರ. ವಿಧವೆಯಾಗಿ ತವರು ಮನೆಗೆ ಬಂದ ಕೆಲವು ವರ್ಷಗಳಲ್ಲಿ ರವಿಕೆಯನ್ನು ಹಾಕಿಕೊಳ್ಳುವುದನ್ನು ಬಿಟ್ಟಿದ್ದಾಳೆ. ಮಳೆಗಾಲ, ಚಳಿಗಾಲ, ಬೇಸಿಗೆಯೆಂಬ ಪ್ರಭೇದವಿಲ್ಲದೆ ತಣ್ಣೀರಿನಲ್ಲಿ ಬೆಳಗಿನ ಹೊತ್ತು ಸ್ನಾನ ಮಾಡುತ್ತಾಳೆ. ತುಳಸಿ ಕಟ್ಟೆಗೆ ಸುತ್ತು ಬರುತ್ತಾಳೆ. ಎದ್ದು ನಿಲ್ಲುವಾಗೆಲ್ಲಾ 'ಹರೇ ರಾಮ' ಅನ್ನುವುದು ಕುಳಿತುಕೊಳ್ಳುವಾಗ 'ಶಿವಾ' ಎನ್ನುವುದನ್ನು ರೂಢಿಸಿಕೊಂಡಿದ್ದಾಳೆ. "ರಾಮ ಮತ್ತು ಶಿವ ಬಿಟ್ರೆ ಬೇರೆಯೇನೂ ಇಲ್ವಾ?" ಅಂತ ಕೇಳಿದರೆ "ಅಯ್ಯೋ ಈ ವೈದಿಕರಲ್ಲಿ ಇನ್ನೇನು ಇರುತ್ತದೆ. ನಮ್ಮ ಗಂಡಸರು ಮದುವೆಯಾದ ಮೇಲೆ ಹೆಂಗಸರಿಗೆ ಒಂದು ಕರಿಮಣಿ, ಕಾಲುಂಗುರ ಕೊಡ್ತಾರೆ. ವಿಧವೆಯರಿಗೆ ಬಿಳಿವಸ್ತ್ರವೋ ಕೆಂಪು ವಸ್ತ್ರವೋ ಕೊಟ್ಟು ಜೊತೆಗಿರಲಿ ಅಂತ ರಾಮ ಮತ್ತು ಶಿವನನ್ನು ಕೊಡ್ತಾರೆ. ಅಲ್ಲಿಗೆ ಮುಗಿಯಿತು" ಎಂದು ನಗಾಡ್ತಾಳೆ. ಆ ನಗು ತುಂಬಾ ಸ್ವಚ್ಛ; ನಿಷ್ಕಳಂಕ.

ದುಗ್ಗಮ್ಮಜ್ಜಿಯ ಜೀವನದಲ್ಲಿ ಏನೇನು ಆಗಿದೆಯೋ ಅದರ ಬಗ್ಗೆ ಅವಳು ಯಾವತ್ತೂ ಯಾರೊಂದಿಗೂ ಹೆಚ್ಚು ಬಾಯಿ ಬಿಟ್ಟವಳಲ್ಲ. ತಾನಾಯಿತು, ತನ್ನ ಕೆಲಸವಾಯಿತು. ತನ್ನ ಕೆಲಸದ ಬಗ್ಗೆ ಮಾತ್ರ ಅವಳು ಯೋಚಿಸುತ್ತಿದ್ದಳು. 'ಸಾಯುವ ತನಕ ಯಾರಿಗೂ ಭಾರವಾಗುವುದು ಬೇಡಪ್ಪಾ' ಎಂದು ಪದೇ ಪದೇ ಹೇಳಿಕೊಳ್ಳುತ್ತಿದ್ದಳು. ದುಗ್ಗಮ್ಮಜ್ಜಿಯು ಚಾವಡಿಯಲ್ಲಿ ಹಾಸಿಕೊಂಡಿದ್ದ ಚಾಪೆ, ಪಕ್ಕದಲ್ಲಿ ಇರಿಸಿಕೊಳ್ಳುತ್ತಿದ್ದ ಕೋಲು ಮತ್ತು ದಿಂಬಿನಡಿಯಲ್ಲಿ ಇರಿಸಿದ

ತುಳಸಿ ಮಣಿಯ ಸರ ಸದಾ ಅವಳ ಸಂಗಾತಿಗಳಾಗಿದ್ದವು. ಅವಳು ಹೆಚ್ಚು ಮಾತಾಡುತ್ತಿರಲಿಲ್ಲ. ಅವಳ ಮೌನಕ್ಕೂ ಅನೇಕ ಅರ್ಥಗಳಿದ್ದವೆಂದು ಕಾಣಿಸುತ್ತದೆ. ಮನೆಗೆ ಯಾರಾದರೂ ಅತಿಥಿಗಳು ಬಂದರಷ್ಟೆ ಎಷ್ಟು ಬೇಕೋ ಅಷ್ಟು ಮಾತುಗಳು ಮಾತ್ರ. "ಏನಜ್ಜಿ ಚೆನ್ನಾಗಿದ್ದೀಯಾ?" ಎಂದು ಕೇಳಿದರೆ 'ಹೂಂ' ಅಷ್ಟೆ. ಅದಕ್ಕಿಂತ ಹೆಚ್ಚು ಮಾತುಗಳಿಲ್ಲ. ಇಂಥದ್ದೇ ಬೇಕೆಂಬ ಹಟವಿಲ್ಲ. ಬೇಡವೆಂಬ ಹಟವೂ ಇಲ್ಲ. ಯಾರಾದರೂ ಏನಾದರೂ ತಂದು ಕೊಟ್ಟರೆ ಎಷ್ಟು ಬೇಕೋ ಅಷ್ಟು ಮಾತ್ರ ಸ್ವೀಕರಿಸುವಳು. ಬೆಳಗಿನ ಉಪಹಾರವೂ ಅಷ್ಟೆ: ಒಂಚೂರು ತಿಂಡಿ, ಮಧ್ಯಾಹ್ನ ನೀರು ಮಜ್ಜಿಗೆ ಮತ್ತು ಒಂದು ತುಂಡು ಉಪ್ಪಿನಕಾಯಿ, ಇಲ್ಲವೆ ಚಿಟಿಕೆ ಉಪ್ಪು. ಮೊಸರು ಕೊಟ್ಟರೂ ಅದಕ್ಕೆ ನೀರು ಹಾಕಿ ನೀರು ಮಜ್ಜಿಗೆ ಮಾಡಿಯೇ ಊಟ. ರಾತ್ರಿ ಒಂದು ಹಿಡಿ ಅವಲಕ್ಕಿ ನೆನೆಸಿ ತಿಂದರೆ ಆಯಿತು. ಯಾರಿಗೂ ಭಾರವಾಗುವುದು ಬೇಡವೆಂಬ ಅವಳ ನಿಲುವು ಅನೇಕ ವರ್ಷಗಳ ತನಕ ಹಾಗೆಯೇ ಉಳಿಯಿತು. ತೀರಾ ಎಂದರೆ ತೀರಾ ವಯಸ್ಸಾದ ಮೇಲೆ ಅವಳಿಗೆ ದುಡಿಯುವುದು ಕಷ್ಟವೆಂದು ಅನಿಸಿದ ಮೇಲೆ ಮಾತ್ರ ಅವಳು ದುಡಿಯುವುದನ್ನು ನಿಲ್ಲಿಸಿದಳು. ಆದರೂ ಗೊತ್ತಿರುವ ಕೈ ಕಸುಬನ್ನು ಸಾಧ್ಯವಾದಷ್ಟು ಮಾಡುವ ಪ್ರಯತ್ನ ಮಾಡುವಳು. ಒಣಗಲು ಹಾಕಿದ ಹಪ್ಪಳವನ್ನು ಕಾಗೆ ಕಚ್ಚಿಕೊಂಡು ಹೋಗದಂತೆ ಕಾಯುವುದು: ತೆಂಗಿನಕಾಯಿಯನ್ನು ಬಿಸಿಲಿಗೆ ಹಾಕಿದರೆ ಅದರ ಬಳಿಯಲ್ಲಿ ಕುಳಿತಿರುವುದು ಇತ್ಯಾದಿ.

ಮಳೆಗಾಲದಲ್ಲಿಯಾದರೆ ಮನೆಯೊಳಗೆ ಕುಳಿತುಕೊಂಡು ನೂಲು ಸುತ್ತುವುದು ಬೇಸಿಗೆಯಲ್ಲಿ ಉಪ್ಪಲ್ಲಿ ನೆನಸಿಟ್ಟ ಹಲಸಿನ ತೊಳೆ, ಮಾವಿನ ಹಣ್ಣು ಮಾರುವುದು. ದುಗ್ಗಮ್ಮಜ್ಜಿಯ ಕೆಲವು ಕೆಲಸಗಳು ಲೆಕ್ಕಕ್ಕೆ ಸಿಗದಿದ್ದರೂ ಅಂಥ ಕೆಲಸಗಳನ್ನು ಅವಳು ಮಾಡುತ್ತಿದ್ದಳು. ಅವಳ ಮೌನದನಿಯ ನಿಗೂಢತೆ ಮಾತ್ರ ನಿಜವಾಗಿಯೂ ಅಚ್ಚರಿಯುಂಟು ಮಾಡುವ ವಿಷಯವಾಗಿತ್ತು. ನನ್ನ ಅಂದಾಜಿನ ಪ್ರಕಾರ, ದುಗ್ಗಮ್ಮಜ್ಜಿಯನ್ನು ನಾನು ಭೇಟಿಯಾದಾಗ ಅವಳಿಗೆ ಹೆಚ್ಚು ಕಡಿಮೆ ಎಪ್ಪತ್ತು ವರ್ಷ ದಾಟಿರಬಹುದು. ದುಗ್ಗಮ್ಮಜ್ಜಿಯು ಒಬ್ಬ ಗತಿ ಗೋತ್ರವಿಲ್ಲದ ಹೆಂಗಸಿನಂತೆ ಬಂದವಳು ಎಂಬ ಅಭಿಪ್ರಾಯ ಮಾತ್ರ ನನ್ನಲ್ಲಿತ್ತು. ದುಗ್ಗಮ್ಮಜ್ಜಿಯು ಒಂದೇ ಮನೆಯಲ್ಲಿ ಶಾಶ್ವತವಾಗಿ ನಿಂತವಳೂ ಅಲ್ಲ. ಎಲ್ಲೆಲ್ಲಿ ಹತ್ತಿರದ ಮತ್ತು ದೂರದ ನೆಂಟರ ಮನೆಯಿತ್ತೋ ಅಲ್ಲಿಗೆ ಅವಳು ಹೋಗುತ್ತಿದ್ದಳು. ಸರಿ ಬಂದರೆ ಹದಿನೈದು; ಇಪ್ಪತ್ತು ದಿನ ಇರುತ್ತಿದ್ದಳು. ಅನಂತರ ಅಲ್ಲಿಂದ ಜಾಗ ಖಾಲಿ ಮಾಡಿ ಮತ್ತೊಂದು ಮನೆಗೆ ಅವಳ ಸವಾರಿ. ದೇಹ ಗಟ್ಟಿಮುಟ್ಟಾಗಿ ಇರುವ ತನಕ ಯಾರದೇ ಮನೆಯಲ್ಲಿ ಅವಳಿರಲಿ, ಒಳಗಿನ ಕೆಲಸಕ್ಕೆ ಸಹಾಯ ಮಾಡಿಯೇ ಮಾಡುತ್ತಿದ್ದಳು.

ಅಡುಗೆಗೆ ಕಾಯಿ ತುರಿಯುವುದು, ದೋಸೆಗೆ ಹಿಟ್ಟು ರುಬ್ಬುವುದು, ನೆಲ ಒರಸುವ ಕೆಲಸಕ್ಕೆ ಸಹಾಯ ಮಾಡಿ ಋಣ ತೀರಿಸುತ್ತಿದ್ದಳು. ಅಷ್ಟೇ ಅಲ್ಲ, ನೆಲ ಒರಸುವುದು, ಬಾಣಂತಿಯರ ಸ್ನಾನ ಮಾಡಿಸುವುದು ಮುಂತಾದ ಕೆಲಸಗಳಿಂದ ಪ್ರಾರಂಭಿಸಿ ಹಲಸಿನ ಕಾಯಿ ಹಪ್ಪಳಕ್ಕೆ ಹಲಸಿನ ಕಾಯಿಯನ್ನು ತೊಳೆಯನ್ನು ಬೇಯಿಸಿ ಅದನ್ನು ನೆಲಕುಳಿಯಲ್ಲಿ ಒನಕೆಯಿಂದ ನಾದಿ ಕೊಡುವ ತನಕ ಅವಳು ಯಾವ ಕೆಲಸಕ್ಕಾದರೂ ಸೈ. ಹಲಸಿನಕಾಯಿಯ ಹಪ್ಪಳ ಮಾಡುವಾಗ ಹಲಸಿನ ಮರದಲ್ಲಿ ಒಂದು ಕಾಗೆ ಕೂಗಿದರೆ, 'ಈವತ್ತು ದುಗ್ಗಮ್ಮಕ್ಕ ಬರ್ತಾಳೇನೊ?' ಅಂತ ಹೆಂಗಸರು ಅವಳ ಹಾದಿ ಕಾಯುತ್ತಿದ್ದರು. ದುಗ್ಗಮ್ಮಕ್ಕ ಬಂದರೆ, 'ಈವತ್ತು ನೂರೋ ಇನ್ನೂರೋ ಹೆಚ್ಚು ಹಪ್ಪಳವನ್ನು ಒಣಹಾಕುವುದಕ್ಕೆ ಅಡ್ಡಿಯಿಲ್ಲ' ಅಂತ ಗಂಡಸರೂ ಹೇಳುತ್ತಿದ್ದರು.

ದುಗ್ಗಮ್ಮಕ್ಕ ಬಂದರೆ ಗಂಡಸರು ಹಲಸಿನಕಾಯಿ ಹಪ್ಪಳದ ಕೆಲಸಕ್ಕೆ ಕೈ ಜೋಡಿಸಬೇಕಾದ ಅಗತ್ಯವಿರಲಿಲ್ಲ. ಇಲ್ಲದಿದ್ದರೆ ಹೆಂಗಸರ ಚುಚ್ಚು ಮಾತನ್ನು ಅವರು ಕೇಳಬೇಕಾಗುತ್ತಿತ್ತು: 'ಹೂಂ, ಮಳೆಗಾಲದಲ್ಲಿ ಹಲಸಿನಕಾಯಿ ಹಪ್ಪಳ, ಒಂದು ಇಡೀ ತೆಂಗಿನಕಾಯಿ ತಿಂತೀರಿ, ಈಗ ಹಪ್ಪಳ ಮಾಡಲು ನಿಮಗೇನು ಕಷ್ಟ? ಹಪ್ಪಳ ತಿನ್ನುವುದಕ್ಕೆ ಮಾತ್ರ ಅಡ್ಡಿಯಿಲ್ಲ. ಮಾಡುವುದಕ್ಕೆ ಮಾತ್ರ ಸೊಂಟ ಬಗ್ಗುವುದಿಲ್ಲ' ಈ ರೀತಿಯ ಮಾತುಗಳು ಗಂಡಸರನ್ನು ತಿವಿಯುವುದು ಖಂಡಿತಾ. ಸ್ವಲ್ಪ ಹಾಸ್ಯ ಪ್ರಜ್ಞೆಯಿರುವ ಗಂಡಸರು ಮಾತ್ರ ಇಂಥ ಸಮಯದಲ್ಲಿ ಹಪ್ಪಳ ಇರುವುದೇ ಹೆಂಗಸರ ಹತ್ರ ಎಂದು ಹೇಳಿ ಜಾರಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರು. "ಹಪ್ಪಳ ಹೆಂಗಸರತ್ರ ಇರುವುದಕ್ಕೇ ನೀವಿಷ್ಟು ಬಾಯಿಬಿಡುವುದು" ಎಂದು ಹೇಳುತ್ತಾ ಅವರನ್ನು ಕೆಲಸಕ್ಕೆ ಎಳೆಯುವ ಹೆಂಗಸರೂ ಇರುತ್ತಿದ್ದರು. ದುಗ್ಗಮ್ಮನಂತೂ ಇಂಥ ಅನುಕೂಲ ಕೆಲಸಕ್ಕೆ ಯೋಗ್ಯಳಾದವಳು ಎಂದು ತಿಳಿದುಕೊಂಡವರಿರುವಂತೆ ಅವಳ ಬಗ್ಗೆ ತುಂಬಾ ಉದಾರವಾದ ಧೋರಣೆಯನ್ನು ಎಲ್ಲರೂ ತಳೆದಿದ್ದರು ಎಂದು ಹೇಳುವಂತಿಲ್ಲ.

ದುಗ್ಗಮ್ಮ ದೂರದಿಂದ ಬರುವುದನ್ನು ನೋಡಿದವರು, "ಓ, ದುಗ್ಗಮ್ಮನ ದಿಬ್ಬಣ ಬಂತು, ದುಗ್ಗಮ್ಮ ಸವಾರಿ ಬಂತು. ಇನ್ನು ಹತ್ತು ದಿನಕ್ಕೆ ಅಡ್ಡಿಯಿಲ್ಲ" ಎಂದೂ ಹಂಗಿಸುತ್ತಿದ್ದರು. ದುಗ್ಗಮ್ಮ ಬಂದಾಗ ಅಡುಗೆ ಮನೆಯಲ್ಲಿ ಚಕ್ಕುಲಿ, ಉಂಡೆಗಳ ಡಬ್ಬಿಯನ್ನು ಅಡಗಿಸಿಡುವವರಿಗೂ ಕಮ್ಮಿಯಿಲ್ಲ. ದೂರದಿಂದ ನಡೆದು ಬಂದರೂ 'ಆಸರಿಗೆ ಬೇಕಾ' ಅಂತ ಕೇಳುವವರೂ ಇರಲಿಲ್ಲ. ದುಗ್ಗಮ್ಮ ಮನೆಯ ಮೆಟ್ಟಿಲು ಹತ್ತುವಾಗಲೇ, "ಏನು ದುಗ್ಗಮ್ಮ ಯಾವಾಗ ಹೊರಡುವುದು?" ಅಂತಲೂ ಕೇಳುವವರಿದ್ದರು. ಗಂಡಸತ್ತ ಕೆಲವು ವರ್ಷ ಗಂಡನ ಮನೆಯಿಂದ ಅಶನಾರ್ಥವಾಗಿ ಬರುತ್ತಿದ್ದ ಅಕ್ಕಿಯೂ ಆ ನಂತರದ ದಿನಗಳಲ್ಲಿ ಸಿಗುತ್ತಿರಲಿಲ್ಲ.

ಜೀವದ ವ್ಯಾಮೋಹ ಕಡಿದು ಬದುಕುವ ಕಷ್ಟ ನಿಜವಾಗಿಯೂ ದೊಡ್ಡದು ಅಂತ ಅವಳಿಗೆ ಅನಿಸುತ್ತಿತ್ತು. ಬಾಯಿ ರುಚಿಯನ್ನು ಕಟ್ಟಿಹಾಕಿ ಬದುಕುವುದನ್ನು ಅಭ್ಯಾಸ ಮಾಡತೊಡಗಿದಳು. ತಾನೇ ಬೇರೆಯವರ ಮನೆಯಲ್ಲಿ ಮಾಡಿಕೊಟ್ಟ ಹಪ್ಪಳವನ್ನು ಮನೆಯವರು ತಿನ್ನುವಾಗಲೂ ಒಂದು ತುಂಡು ಹಪ್ಪಳ ತಿನ್ನುತ್ತೀಯಾ ಅಂತಲೂ ಕೇಳುತ್ತಿರಲಿಲ್ಲ. ಒಂದರ್ಥದಲ್ಲಿ ದುಗ್ಗಮ್ಮಜ್ಜಿ ಒಂದೊಂದೇ ಹೆಜ್ಜೆ ಗೆಲ್ಲತೊಡಗಿದ್ದಳು. ಗಂಡ ಜೀವಂತವಿರುವಾಗ ಅವನ ಎಂಜಲು ತಿನ್ನಲು ವಾಕರಿಕೆ ಬರುತ್ತದೆ. ಅಸಹ್ಯವೆನಿಸುತ್ತದೆಯೆಂದು ಭಾವಿಸಿಕೊಂಡಿದ್ದ ದುಗ್ಗಮ್ಮ ವಿಧವೆಯಾದ ಮೇಲೆ ಪರಾನ್ನ ತಿನ್ನುವುದು ಕೂಡಾ ಅಷ್ಟೇ ಅಸಹ್ಯವೆಂಬ ಅರಿವನ್ನು ಪಡೆದುಕೊಂಡಳು. ಗಂಡನನ್ನು ಕಳೆದುಕೊಂಡು ಅವನ ಸೂತಕ ಕಳೆಯುವ ವೇಳೆಗೆ ಮಾವ, 'ಕೂಸು ಬೇಕಿದ್ದರೆ ಅಣ್ಣನ ಮನೆಯಲ್ಲಿ ಇರಲಿ. ವರ್ಷಕ್ಕೆ ಅವಳ ಖರ್ಚಿಗೆ ಬೇಕಾದ ಅಕ್ಕಿ ಮುಡಿ ಕಳಿಸುತ್ತೇನೆ'. ಅಂದಾಗ ಮಾವ ಒಳ್ಳೆಯವರೋ ಕೆಟ್ಟವರೋ ಎಂದು ತರ್ಕಿಸುವುದು ಸಾಧ್ಯವಿರಲಿಲ್ಲ. ನೀರಿನ ಋಣ ಕಡಿಯುವುದು ಕಷ್ಟವೆಂದು ಅನಿಸಿದ್ದು ನಿಜ. ಅಣ್ಣನ ಮನೆಯ ಅಂಗೈಯಗಲದ ಜಾಗದಲ್ಲಿ ಏನು ಸುಖವಿತ್ತು? ಅಣ್ಣನಿಗೆ ಹುಲಿ ಹುಣ್ಣಿನಂತಿರುವ ಸಾಲ. ಒಂದು ಕಡೆ ಕೈ ಕಡ ತೆಗೆದುಕೊಂಡರೆ ಮತ್ತೊಂದು ಕಡೆಯಿಂದ ತೆಗೆದುಕೊಂಡು ಅದನ್ನು ಮುಚ್ಚಬೇಕು. ಅಣ್ಣನ ಮನೆಯೆಂದುಕೊಂಡು ಹಪ್ಪಳ ಮಾಡಿದಳು. ಸಂಡಿಗೆ ಮಾಡಿದಳು. ಉಪ್ಪಿನಕಾಯಿಯಲ್ಲಿ ಗೇಯಬಹುದೆಂದು ಮಿಡಿ ಉಪ್ಪಿನಕಾಯಿ, ಕೆತ್ತೆ ಉಪ್ಪಿನಕಾಯಿ, ಲಿಂಬೆ ಹುಳಿ ಉಪ್ಪಿನಕಾಯಿ ಹಾಕಿ ಊರಿಗೆ ಕೈ ರುಚಿ ತೋರಿಸಿಕೊಟ್ಟಳು. ಉಪ್ಪಿನಕಾಯಿ, ಹಪ್ಪಳ ಮಾರಿ ತಿನ್ನಬಹುದು ಎಂದು ಲೆಕ್ಕಾಚಾರ ಹಾಕಿದ್ದೂ ನಿಜ. ದುಗ್ಗಮ್ಮ ಹಾಕಿದ ಉಪ್ಪಿನಕಾಯಿಯನ್ನು ಕಾಲಾಣೆ; ಪಾವಲಿಗೆ ಕೆಲವರು ತೆಗೆದುಕೊಂಡು ಹೋದರು. ಕೆಲವರು ಉಪ್ಪಿನಕಾಯಿ ತಿಂದು ಕೈಯಾಡಿಸಿದರು. ಅಣ್ಣ ಹೇಳಿದ್ದ "ದುಗ್ಗು ಈ ಉಪ್ಪಿನಕಾಯಿ, ಸಂಡಿಗೆ ವ್ಯಾಪಾರ ನಮಗೆ ಹೇಳಿಸಿದ್ದಲ್ಲ. ಯಾರು ತೆಗೆದುಕೊಳ್ತಾರೆ ಅಂತ ಬೇಕಲ್ಲಾ? ನಾಳೆ ಅಂದೊಂದು ಮಾತು ಜಾತ್ಯಸ್ಥರ ಮನೆಯಲ್ಲಿ ಬಂದೀತು–ಉಪ್ಪಿನಕಾಯಿ ಮಾರಿ ಬದುಕಿದರು ಅಂತ" ದುಗ್ಗಮ್ಮಜ್ಜಿ ಒಂದು ದಿನ ತುಂಬಾ ಲಹರಿಯಲ್ಲಿದ್ದಾಗ ಒಂದು ಮಾತನ್ನು ನನ್ನತ್ರ ಹೇಳಿದಳು "ನಿನ್ನ ವಯಸ್ಸಿನವರಿಗೆ ನನ್ನ ಮಾತು ಅರ್ಥವಾಗುವುದಿಲ್ಲ. ಆ ದಿನಗಳಲ್ಲಿ ನಾನು ಪಟ್ಟ ಪಾಡು ಯಾರಿಗೂ ಬೇಡ. ಗಂಡನನ್ನು ಕಳೆದುಕೊಂಡ ನನಗೆ ಬಹಳ ಸುಖಗಳನ್ನು ಕಳೆದುಕೊಂಡೆಯೆಂದು ಅನಿಸಿರಲಿಲ್ಲ. ಅನಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಗಂಡು ಮತ್ತು ಹೆಣ್ಣು ಸುಖ ಅನುಭವಿಸುವುದೆಂದರೆ ಅದು ಬಯಲಾಟದಲ್ಲಿ ಮಾತ್ರ. ಗಂಡನಿಗೆ ಬೇಕೂ ಅಂದರೆ ಬೇಕು, ಬೇಡವೆಂದ್ರೆ ಬೇಡ. ಬಯಲಾಟದ ಬೇಗಡೆ ಮಾತುಗಳಲ್ಲಿ ಏನಾದರೂ ಅರ್ಥವಿದೆಯೆಂದು

ತಿಳಿದಿದ್ದಿಯಾ? ನೀನಿನ್ನು ಸಣ್ಣ ವಯಸ್ಸಿನವನು. ನಿನಗೆ ಇದೆಲ್ಲಾ ಗೊತ್ತಾಗುವುದಿಲ್ಲ ಮಾಣಿ. ನನ್ನ ಗಂಡನಿಗೆ ನನಗಿಂತ ಅವರ ತಾಯಿಯ ಮೇಲೆ ಹೆಚ್ಚು ಪ್ರೀತಿಯೆಂದು ಅನ್ನಿಸುತ್ತಿತ್ತು. ಎಲ್ಲಕ್ಕಿಂತ ಅವರ ಬಾಯಿ ಬಡಾಯಿ ನನಗೆ ಒಂಚೂರು ಇಷ್ಟವಾಗುತ್ತಿರಲಿಲ್ಲ. ಒಂದೇ ಒಂದು ದಿನ ಕೂಡಾ ಅವರು ನನ್ನತ್ರ ಪ್ರೀತಿಯಿಂದ ಮಾತಾಡಿದ ಅನುಭವ ನನಗೆ ಬಂದಿರಲಿಲ್ಲ. ಅದೆಲ್ಲಾ ಹಾಳಾಗಲಿ ಒಂದು ದಿನ ಏನಾಯಿತು ಗೊತ್ತಾ?" ದುಗ್ಗಮ್ಮಜ್ಜಿ ಕೆಲವು ಕ್ಷಣ ಮಾತಾಡುವುದನ್ನು ನಿಲ್ಲಿಸಿದಳು. ಅವಳಿಗೆ ಮುಂದೆ ಮಾತಾಡಬೇಕೋ ಬೇಡವೋ ಅಂತ ಅನಿಸಿರಬೇಕು. ನಾನೂ ಒಂದರೆ ಕ್ಷಣ ಸುಮ್ಮನಾದೆ. ದುಗ್ಗಮ್ಮಜ್ಜಿ ಹೊಟ್ಟೆಯಲ್ಲಿ ಯಾವುದೋ ಸಂಕಟವು ತೊಳಸಿಕೊಂಡು ಬರುತ್ತಿದೆಯೇನೋ ಅಂತ ಅನ್ನಿಸಿತು. "ಇಲ್ಲಾ ಮಾಣಿ, ಹೇಳುವುದಕ್ಕೇನು? ಸಾಯುವಾಗ ಕತೆಯನ್ನು ಕಟ್ಟಿಕೊಂಡು ಯಾಕೆ ಸಾಯಲಿ? ನನ್ನ ಹೆಣ ಸುಡುವುದಕ್ಕೆ ಎರಡು ಸೌದೆಯ ಕೋಲು, ಒಂದು ಮಡಲು ಸಾಕು. ನನ್ಗೆ ಒಂದು ಮಾತು ಕೊಡಬೇಕು. ನಾನು ಸತ್ತರೆ ನನ್ನ ಹೆಣವನ್ನು ಸುಡುವುದಕ್ಕೆ ಯಾರೂ ಇಲ್ಲ. ನೀನು ಹೆಣ ಸುಟ್ರೆ ಸಾಕು"

ದುಗ್ಗಮ್ಮಜ್ಜಿ ಕೈ ಚಾಚಿದಳು, ಅವಳು ಕೈ ಚಾಚಿದ ಮೇಲೆ ನಾನು ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಅವಳ ಮೇಲೆ ಕೈಯಿಟ್ಟೆ. ಆಣೆಯ ಮಾತುಗಳಲ್ಲಿ ನನಗೆ ನಂಬಿಕೆಯಿಲ್ಲದಿದ್ದರೂ ದುಗ್ಗಮ್ಮಜ್ಜಿಗೆ ಇತ್ತು. ದುಗ್ಗಮ್ಮಜ್ಜಿಯ ಕಣ್ಣಲ್ಲಿ ಸಣ್ಣನೆಯ ನೀರ ಹನಿಯಿತ್ತು. ಅದನ್ನು ಕಂದು ಬಣ್ಣಕ್ಕೆ ತಿರುಗಿದ್ದ ಅವಳ ಬಿಳಿಯ ಸೀರೆಯ ಸೆರಗಿನಲ್ಲಿ ಒರಸಿಕೊಂಡಳು. ಹಾಗೆ ನನಗೆ ಗಂಡು–ಹೆಣ್ಣಿನ ಸಂಬಂಧದ ಆಂತರಿಕ ಒಡನಾಟವಾಗಲೀ, ಸಂಬಂಧಗಳ ಘರ್ಷಣೆಯ ಅರಿವಾಗಲೀ ಸರಿಯಾಗಿ ತಿಳುವಳಿಕೆಗೆ ಬಂದಿರಲಿಲ್ಲ.

ದುಗ್ಗಮ್ಮಜ್ಜಿ "ಆ ದಿನ ಅವರು ಯಾವುದೋ ಸಿಟ್ಟಿನಲ್ಲಿದ್ದರು. ಅವರು ಅಪ್ಪನಿಗೆ ಅವರಿಗೆ ಜಗಳವಾಗಿತ್ತು. ಯಾಕೆ ಏನೂಂತ ನನಗೆ ಗೊತ್ತಿರಲಿಲ್ಲ. ಅದೇ ಸಿಟ್ಟಿನಿಂದ ರಾತ್ರಿ ನಾವು ಮಲಗುವ ಕೋಣೆಯೊಳಗೆ ಬಂದರು. ನಾನೂ ಅಡುಗೆ ಮನೆಯಲ್ಲಿ ಪಾತ್ರೆಗಳನ್ನು ತೆಗೆದಿಟ್ಟು ಹೆಪ್ಪು ಹಾಕಿ ಬಂದಿದ್ದೆ. ಅವರ ಮುಖ ಉರಿಯುತ್ತಿದೆಯೆಂದನ್ನಿಸಿತು. ಬಂದವಳು "ಏನಾಯಿತು?" ಎಂದು ಕೇಳಿದೆ. 'ನಿನಗ್ಯಾಕೆ ಅದೆಲ್ಲಾ? ನಾವು ಅಪ್ಪ–ಮಗ ಏನಾದರೂ ಮಾಡುತ್ತೇವೆ" ಎಂದರು.

ನಾನು "ಸರಿ" ಯೆಂದೆ. ನಾನು ಸರಿಯೆಂದು ಹೇಳಿದ್ದು ಅವರ ಮನಸ್ಸಿಗೆ ನಾಟಿತು ಎಂದು ಕಾಣುತ್ತದೆ. ಬಂದವರೇ ಬೆನ್ನಿಗೆ ಗುದ್ದಿದರು. ಅವರು ಕೊಟ್ಟ ಹಿಂಸೆಯಿಂದ ಆದ ನೋವು ಯಾರಿಗೂ ಬೇಡ. ಮುಖಕ್ಕೆ, ಬೆನ್ನಿಗೆ ಉಗುಳಿದರು.

ದುಗ್ಗಮ್ಮಜ್ಜಿ ಮಾತು ನಿಲ್ಲಿಸಿದರು. ದುಗ್ಗಮ್ಮಜ್ಜಿ ಜೀವನದಲ್ಲಿ ಗೆಲ್ಲಲು ಹೊರಟಿದ್ದು ಯಾವುದನ್ನು? ಸಣ್ಣ ವಯಸ್ಸಿನಲ್ಲಿ, ತುಂಬು ಯೌವನದಲ್ಲಿ ಮಡುಗಟ್ಟಿದ ಒಂದೊಂದೇ ಬಯಕೆಗಳನ್ನು ಗೆಲ್ಲುವುದರಲ್ಲಿ ಕಂಡುಕೊಂಡ ಸಾರ್ಥಕ ಕ್ಷಣಗಳು ಬೇರೆ ಬೇರೆ ನಮೂನೆಯವು ಇರಬೇಕು. ಗಂಡ ತನ್ನದೇ ಆದ ಅಧಿಕಾರವನ್ನು ಚಲಾಯಿಸಲು ಹೊರಟಾಗ ದುರ್ಗಾಪರಮೇಶ್ವರಿಯ ದೇಹದ ಮೇಲೆ ಸ್ಥಾಪಿಸಿದರೂ ಮನಸ್ಸನ್ನು ಅವನು ಗೆಲ್ಲಲಾಗುವುದಿಲ್ಲ ಎಂಬುದನ್ನು ಬೇರೆ ಬೇರೆ ರೀತಿ ಮನವರಿಕೆ ಮಾಡಿಕೊಟ್ಟಳು. ಆ ದಿನದ ಅನಂತರ ಅದನ್ನು ತಿರುಮಲ ಕಕ್ಕಾಬಿಕ್ಕಿಯಾಗುವ ಪ್ರಸಂಗಗಳು ಬಂದವು. ಆ ಪ್ರಸಂಗಗಳು ಕೂಡಾ ದುಗ್ಗಮ್ಮಜ್ಜಿಯ ಜೊತೆಗೆ ಹೊರಟು ಹೋದವು – ಯಾರಿಗೂ, ಯಾವ ಸಂದರ್ಭದಲ್ಲಿಯೂ ಹೇಳದೆ. ತಿರುಮಲ ಒಂದು ಘಟನೆಯಿಂದ ಹೆಂಡತಿಯನ್ನು ತಲೆಯೆತ್ತಿ ನೋಡುವುದಕ್ಕೆ ಹೆದರಿದ ಮತ್ತು ಸಾಧ್ಯವಾದಷ್ಟು ರಾತ್ರಿಯ ಹೊತ್ತು ತೋಟದಲ್ಲಿ ಕಾಯುವುದಕ್ಕೆ ಹೋಗಲು ಇಷ್ಟಪಟ್ಟ. ದುರ್ಗಾಪರಮೇಶ್ವರಿಯೆಂಬ ಪಿಣ್ಣಕುಟ್ಟಿ ಹೆಣ್ಣು ಅತಿ ಕಡಿಮೆ ಮಾತಿನವಳು. ತನ್ನ ಹೆಂಡತಿ ಬುದ್ಧಿಯಿಲ್ಲದ ಎಮ್ಮೆಯೆಂದು ತಿಳಿದಿದ್ದ ತಿರುಮಲನಿಗೆ ಅವನ ದೊಡ್ಡ ಧ್ವನಿ ಇಂಗಿ ಹೋಗುವ ಹಾಗೆ ಮಾಡಿದಳು. ದುರ್ಗಾಪರಮೇಶ್ವರಿಯ ಮೈಮೇಲೆ ಉಗುಳಿದ್ದ, ಬೆನ್ನಿಗೆ ಗುದ್ದಿದ್ದ. ಮುಷ್ಟಿಯಲ್ಲಿಯೇ ಕೊಬ್ಬರಿಯಿಂದ ಎಣ್ಣೆ ತೆಗೆಯುತ್ತೇನೆಂದು ಕೊಚ್ಚಿಕೊಂಡಿದ್ದ ತಿರುಮಲನ ಪುರುಷಮೃಗ ದಾರಿ ಕಾಣದೆ ಕಂಗಾಲಾಗಿ ಬಿಟ್ಟಿತು.

ರಾತ್ರಿಯ ಹೊತ್ತು: ಉಗುಳಿದ ಮಾರನೆಯ ದಿನ ತಿರುಮಲ ಹೆಂಡತಿಯ ಹಾದಿಯನ್ನು ಅವಳ ಕಾಲಿನ ಸಪ್ಪಳವನ್ನು ಕಾಯುತ್ತಾ ಕುಳಿತ. ದುರ್ಗಾಪರಮೇಶ್ವರಿ ಹಗಲಿಡೀ ಯಾವುದೋ ಒಂದು ಮೌನ ಮತ್ತು ನಿರ್ಧಾರದಲ್ಲಿರುವಂತೆ ಕಾಣಿಸಿತ್ತು. ಮಧ್ಯಾಹ್ನ ಊಟ ಮಾಡುವಾಗ ಮಾವ "ಏನು ದುಗ್ಗಮ್ಮ ತೌರುಮನೆಯ ನೆನಪು ಬಂತೋ ಹೇಗೆ?" ಎಂದು ಕೇಳಿದ್ದರು. ದುರ್ಗಾಪರಮೇಶ್ವರಿ ಉತ್ತರ ಕೊಡಲಿಲ್ಲ. ರಾತ್ರಿಯೂ ಅಷ್ಟೇ: ಚಿಮಿಣಿ ದೀಪದ ಬೆಳಕಿನಲ್ಲಿ ಅವಳ ಮುಖ ಧಗಧಗನೆ ಉರಿಯುತ್ತಿದೆಯೆಂದು ಸ್ವತಃ ತಿರುಮಲನಿಗೆ ಅನಿಸಿತು. ಅದಕ್ಕೆ ಅವನು ಅವಳ ಹಾದಿಯನ್ನು ಕಾದಿದ್ದ. ದುರ್ಗಾಪರಮೇಶ್ವರಿ ಕಾಲು ದೀಪವನ್ನು ಹಿಡಿದುಕೊಂಡು ಬಂದಳು. ಬಂದವಳು ಬಾಗಿಲಿನ ಚಿಲಕ ಹಾಕಿದಳು. ಇನ್ನೇನು ದೀಪ ಆರಿಸಬೇಕೆನ್ನುವಷ್ಟರಲ್ಲಿ ತಿರುಮಲ ಎದ್ದು ಬಂದು ದುರ್ಗಾಪರಮೇಶ್ವರಿಯ ಕೈಯನ್ನು ಹಿಡಿದುಕೊಂಡ. ಗಂಡನ ಕಣ್ಣುಗಳಲ್ಲಿ ಬಯಕೆ ಒತ್ತರಿಸಿ ಬರುತ್ತಿದೆಯೆಂದು ಅವಳಿಗೂ ಅರ್ಥವಾಯಿತು. ತಿರುಮಲ ಕಣ್ಣುಮುಚ್ಚಿ ಕಣ್ಣು ತೆರೆಯುವುದರೊಳಗಾಗಿ ದುರ್ಗಾಪರಮೇಶ್ವರಿಯು ಕಾಲು ದೀಪಕ್ಕೆ ಎದುರಾಗಿ ನಿಂತು 'ಬೇಕಾದ್ದು ಮಾಡಿ,

ಹೆಂಡತಿಗೆ ಹೊಡೆಯುವ ಅಧಿಕಾರ ನಿಮಗಿದೆ. ಹೊಡೆಯಿರಿ, ಉಗುಳಿ. ನಿಮ್ಗೆ ಗೊತ್ತಿರುವುದನ್ನು ನೀವು ಮಾಡಿ. ಬೇಕಿದ್ದರೆ ನಿಮ್ಮ ಸೂಳೆ ನಾನೂಂತ ತಿಳ್ಕೊಳ್ಳಿ,' ಎಂದಳು. ಅವಳ ಮಾತಿಗೆ ತಿರುಮಲ ಕಂಗಾಲಾಗಿಬಿಟ್ಟ. ಅವಳ ಕಣ್ಣುಗಳಲ್ಲಿ ಕಾಲುದೀಪದ ಬೆಳಕಿನ ಪ್ರತಿಫಲನವಿತ್ತು. ತಿರುಮಲ ಅಧೈರ್ಯ ಹೊಂದಿದ್ದೇ ಆವಾಗ. ಅವಳ ಮಾತು: ಅವಳ ದೇಹದಲ್ಲಿರುವ ಕಿಡಿ ಬೆಳಕು ಅವನ ಕಾಲಬುಡವನ್ನು ತಣ್ಣಗಾಗಿಸಿತು. ಅಂದಿನಿಂದ ದುರ್ಗಾಪರಮೇಶ್ವರಿಗೆ ಗಂಡನೆದುರು ಸೀರೆ ಬದಲಾಯಿಸುವುದು ನಾಚಿಕೆಯೆನಿಸಲಿಲ್ಲ. ಗಂಡನೆದುರು ಸೆರಗು ಜಾರಿದರೂ ಏನೂ ಅನಿಸಲಿಲ್ಲ. ಒಣ ಕೊರಡಿನಂತೆ ಗಂಡನ ಪಕ್ಕದಲ್ಲಿ ಮಲಗಿದರೂ ಏನೊಂದೂ ಅನಿಸದೆ, ಯಾವ ಬಯಕೆಯೂ ಇಲ್ಲದೆ ಕಳೆದಳು. ಗಂಡ ಹೇಗೆ ಇದ್ದರೂ ಅದಕ್ಕೆ ಅವಳು ಚಿಂತೆ ಮಾಡಲಿಲ್ಲ. ಮಧ್ಯಾಹ್ನದ ಹೊತ್ತು ಸ್ನಾನ ಮಾಡಿ ಬಂದು ಹಣೆಗೆ ಕುಂಕುಮ ಇಡುವುದನ್ನು ಆಕಸ್ಮಿಕವೆಂಬಂತೆ ಮರೆಯತೊಡಗಿದಳು. ಈ ಕತೆಗಳು ಮಾತ್ರ ಯಾರಿಗೂ ಗೊತ್ತಾಗಲಿಲ್ಲ! ಕತೆಗಳು ಎದೆಯಲ್ಲಿದ್ದವು. ಗಂಡ ಸತ್ತಾಗ ಅವಳು ಅತ್ತುದು ಮಾತ್ರ ಎಲ್ಲರಿಗೂ ತಿಳಿಯಿತು.

* * * * *

## 1992
## ಫೆಬ್ರವರಿ
## 8

ಊರಿನಲ್ಲಿ ನಾರಾಯಣ, ಮಹಾಬಲ, ತಿರುಮಲ, ಗಣಪತಿ, ಸುಬ್ಬಣ್ಣ ಮುಂತಾದ ಹೆಸರುಗಳು ತುಂಬಾ ಸಾಮಾನ್ಯವಾದವು. ಈ ಹೆಸರುಗಳು ಸಾಮಾನ್ಯವಾದುದರಿಂದ ಹೆಸರಿನ ಹಿಂದೆ ಅಥವಾ ಮುಂದೆ ಯಾವುದಾದರೂ ವಿಶೇಷಣಗಳು ಜೊತೆಯಲ್ಲಿ ಸೇರಿಕೊಳ್ಳುತ್ತಿದ್ದವು. ನಾರಾಯಣ ಅನ್ನುವ ಹೆಸರಿದ್ದರೆ ದೊಡ್ಡ ನಾರಾಯಣ, ಕರಿನಾರಾಯಣ, ಹೆಂಗಸರಾದರೆ ಮನೆಯ ಹೆಸರು ಸೇರಿಕೊಂಡು ಬಿಡುತ್ತಿದ್ದವು. ಸಣ್ಣಗೌರಿ: ಉದ್ದಕಾಲು ಲಕ್ಷ್ಮಿ ಇತ್ಯಾದಿ. ಇನ್ನು ಕೆಲವು ಸಂದರ್ಭಗಳಲ್ಲಿ ವ್ಯಕ್ತಿಗಳ ವಿಶಿಷ್ಟ ಚಹರೆಯೋ ಸ್ವಭಾವವೋ ಹೆಸರಿನ ಜೊತೆ ಸೇರಿಕೊಂಡು ಬಿಡುತ್ತಿದ್ದವು. ದೊಡ್ಡೊಕ್ಕಲು ನಾರಾಯಣನಿಗೆ ಮಾತಿಗೊಮ್ಮೆ "ಅದೆಂಥದ್ದು" ನಿಮ್ಗೊತ್ತಿಲ್ವಾ?" ಎಂದು ಮಾತಾಡುವ ಅಭ್ಯಾಸ. ಅದಕ್ಕೆ ಅವನಿಗೆ "ಅದೆಂಥ ನಾರಾಯಣ" ಎಂಬ ಅಡ್ಡ ಹೆಸರು ಬಂತು. ಅವನು ಎದುರುಗಡೆಯಿದ್ದರೆ ನಾರಾಯಣ ಎಂದು ಮಾತ್ರ ಹೇಳುತ್ತಿದ್ದರು. ಹಿಂದುಗಡೆಯಿಂದ "ಎಂಥ ನಾರಾಯಣ" ಎಂದು ಕರೆಯುತ್ತಿದ್ದರು. ಎಂಥ ನಾರಾಯಣನ ತಂದೆ – ತಾಯಿ ಅವನ ಸಣ್ಣ ವಯಸ್ಸಿನಲ್ಲಿಯೇ ತೀರಿಹೋಗಿದ್ದರು. ಅವನ ತಂದೆ – ತಾಯಿ ತೀರಿಹೋಗುವಾಗ ಅವನಿಗೆ ಹದಿನೇಳು ವರ್ಷ. ತಮ್ಮ – ತಂಗಿಯರು ಮತ್ತು ಅವನು ಹೀಗೆ ಮೂವರು ಮಾತ್ರ ಉಳಿದುಕೊಂಡವರು. ತಂದೆ – ತಾಯಿಯರು ತೀರಿಹೋದಾಗ ಅವನ ಕಣ್ಣಿನಲ್ಲಿ ಒಂದು ಹನಿ ನೀರುದುರಲಿಲ್ಲ. ಹೋಗಿ ಶಾಲೆಯ ಕಟ್ಟೆಯಲ್ಲಿ ಕುಳಿತು ಒಂದೆರಡು ಬೀಡಿ ಸೇದಿ ಬಂದಿದ್ದ. ಅವನ ತಂದೆಗೆ ಇದ್ದುದ್ದು ಒಂದು ಮುಳಿಹುಲ್ಲಿನ ಮನೆ. ನಾಕೇ ನಾಕು ತೆಂಗಿನ ಗಿಡಗಳು. ಸತ್ಯನಾರಾಯಣ ಪೂಜೆಯಿದ್ದರೆ ದೇವರ ಪೂಜೆಗೆ ಪ್ರಸಾದವನ್ನು ಮಾಡಿಕೊಡುವುದು, ಗಣ ಹೋಮವಿದ್ದರೆ ದರ್ಭೆಯನ್ನು ಕಟ್ಟುವುದು, ಗರಿಕೆ ತಂದು ಕೊಡುವುದು, ಶ್ರಾದ್ಧವಿದ್ದರೆ ಪಿತೃಗಳಿಗೆ ಬೇಕಾದ ಪಿಂಡ ಮಾಡಿಕೊಡುವುದು, ಬಾಳೆಲೆಯನ್ನು ಬಾಡಿಸಿ ದೊನ್ನೆ ಮಾಡುವುದು ಅದೆಂಥ ನಾರಾಯಣನ ತಂದೆ ಕಿಟ್ಟಪ್ಪನ ಕೆಲಸ. ಮಡಿ ವಿಷಯದಲ್ಲಿ ಅವನನ್ನು ಬಿಟ್ಟರೆ ಬೇರೆ ಯಾರೂ ಇಲ್ಲವೆಂದು ಸ್ವತಃ ಪುರೋಹಿತರೇ ಶಿಫಾರಸ್ಸು ಮಾಡ್ತಾರೆ. ಪುರೋಹಿತರು ಯಾವುದೇ ಕಾರ್ಯಕ್ಕೂ ದಿನ ನಿಗದಿಯಾದ ತಕ್ಷಣ ಬಂದವರಿಗೆ ಹೇಳುವುದೂ

ಇದೆ. 'ಹೋಗ್ತಾ ದಾರಿಯಲ್ಲಿ ಅವನಿಗೂ ಒಂದು ಮಾತು ಹೇಳಿ ಹೋಗಿ, ಅವನು ಬರ್‍ತಾನೆ.' ಕಿಟ್ಟಪ್ಪನ ಸಹಾಯವಿಲ್ಲದೆ ಹೋದರೆ ಪುರೋಹಿತರ ಬಾಯಿಯಿಂದ ಒಂದು ಮಂತ್ರ ಉದುರುವುದಿಲ್ಲ. ಪಿತೃಕಾರ್ಯದಲ್ಲಿ ಪಿಂಡವನ್ನು ಮುಟ್ಟಲು ಕಾಗೆಗಳು ಬರುವುದಿಲ್ಲ ಎಂಬಷ್ಟು ನಂಬಿಕೆ ಪುರೋಹಿತರಿಗೆ ಇತ್ತು. ಉತ್ತರ ಕ್ರಿಯೆಯಲ್ಲಿ ಬೇಕಿದ್ದರೆ ಕಿಟ್ಟಪ್ಪ ಪ್ರೇತ ಭಟ್ಟನ ಕೆಲಸ ನಿರ್ವಹಿಸಲು ತಯಾರು. ಪ್ರೇತ ಭಟ್ಟನಾಗಿಯೇ ಅವನ ಮುಖ ಪ್ರೇತದಂತಾಗಿದೆಯೆಂದು ಹೆಂಗಸರು ಗುಟ್ಟಾಗಿ ಮಾತಾಡಿಕೊಳ್ಳುತ್ತಿದ್ದರು. ಒಂದು ಉತ್ತರ ಕ್ರಿಯೆಯ ದಿನ ಕಿಟ್ಟಪ್ಪ ಪ್ರೇತ ಭಟ್ಟನಾಗಬೇಕಾಗಿ ಬಂತು. ಆ ದಿನ ಬೆಳಗಿನಿಂದ ಹಸಿವೆಯಲ್ಲಿ ಕಂಗಾಲಾಗಿದ್ದ. ಪ್ರೇತ ಭಟ್ಟನಾಗಿ ಒಂದು ಹೊಸ ಬಟ್ಟೆಯಲ್ಲಿ ಆ ದಿನದ ಉತ್ತರ ಕ್ರಿಯೆಗಾಗಿ ಭಕ್ಷ್ಯ ಭೋಜನವನ್ನು ಕಟ್ಟಿಕೊಂಡು ಹೊರಟಿದ್ದ. ಸತ್ತವನ ಮಗ ಪ್ರೇತ ಭಟ್ಟನನ್ನು ಸ್ವಲ್ಪ ದೂರ ಅಟ್ಟಿಸಿಕೊಂಡು ಹೋಗಿ ಮರಳಿ ಬಂದ. ಅದು ವೈದಿಕರ ಪರಂಪರೆ. ಕಿಟ್ಟಪ್ಪ ಗುಡ್ಡದ ತುತ್ತ ತುದಿಗೋ ಹೋಗಿ ಒಂದು ಗೇರು ಮರದ ಕೆಳಗೆ ನೆರಳಿನಲ್ಲಿ ಕುಳಿತುಕೊಂಡು ಹೊಸ ಬಟ್ಟೆಯಲ್ಲಿ ಕಟ್ಟಿ ತಂದಿದ್ದ ಉತ್ತರ ಕ್ರಿಯೆಯ ಹೋಳಿಗೆಯನ್ನು ಬಾಯಿಗೆ ಹಾಕಿಕೊಂಡಿದ್ದ ಅಷ್ಟೆ. ಹೆಂಗಸೊಬ್ಬಳು ಅವನನ್ನು ನೋಡಿ ಹೆದರಿಕೊಂಡು ಓಡಿಹೋದಳು. ಆ ದಿನ ಆದದ್ದು ಹೀಗೆಃ

ಕಿಟ್ಟಪ್ಪನ ಕಪ್ಪು ದೇಹ; ಅವನ ದುಂಡಗಿನ ಹೊಟ್ಟೆ; ಬೋಳು ಮಂಡೆ; ಮೈಕೈಗೆ ಮೆತ್ತಿಕೊಂಡ ಗಂಧ ಮತ್ತು ವಿಭೂತಿಯ ನಾಮಗಳು ಅವಳನ್ನು ಹೆದರಿಕೊಳ್ಳುವಂತೆ ಮಾಡಿತು. ಅವಳಿಗದು ತುಂಬಾ ಅನಿರೀಕ್ಷಿತ. ನಟ್ಟನಡು ಮಧ್ಯಾಹ್ನದಲ್ಲಿ ಅವಳು ತನ್ನ ದೇಹದ ಬಾಧೆ ತೀರಿಸಿಕೊಳ್ಳಲು ಯಾರೂ ಜನರಿಲ್ಲದ ಜಾಗಬೇಕೆಂದು ಅರಸಿಕೊಂಡು ಬಂದು ಕುಳಿತಿದ್ದಳು. ಅವಳು ಅಲ್ಲಿ ಕುಳಿತದ್ದು ಕಿಟ್ಟಪ್ಪನಿಗೆ ಗೊತ್ತಾಗಲಿಲ್ಲ. ಕಿಟ್ಟಪ್ಪ ಬಂದು ಗುಡ್ಡೆಯಲ್ಲಿ ಕುಳಿತು ತಿನ್ನುವುದು ಅವಳಿಗೆ ಗೊತ್ತಾಗಲಿಲ್ಲ. ಅವಳು ಕಿರುಚಿಕೊಂಡು ಓಡಿಹೋದ ಮೇಲೆ ಕಿಟ್ಟಪ್ಪನಿಗೆ ಗೊತ್ತಾಯಿತು. ಪ್ರೇತ ಭಟ್ಟ ಹೆಂಗಸನ್ನು ಹಿಡಿಯಲು ಹೋದನಂತೆ ಅಂತ ಒಳ ಪ್ರಚಾರವೂ ನಡೆಯಿತು. ಹಾಗೆ ನೋಡಿದರೆ ಮೂವರು ಮಕ್ಕಳೊಂದಿಗೆ ಅವನು ನೆಮ್ಮದಿಯಲ್ಲಿಯೇ ಇದ್ದ – ದಕ್ಷಿಣೆಯ ದುಡ್ಡು; ದಕ್ಷಿಣೆ ರೂಪವಾಗಿ ಕೊಟ್ಟ ತೆಂಗಿನಕಾಯಿಗಳೊಂದಿಗೆ! ಅವನಿಗೆ ಮಹತ್ವಾಕಾಂಕ್ಷೆಯೂ ಇರಲಿಲ್ಲ. ಅವನ ಹೆಂಡತಿಗೂ ಅಷ್ಟೆ – ಕಿಟ್ಟಪ್ಪ ಮನೆ ಬಿಟ್ಟು ಹೊರಟರೆ ವಾರಗಟ್ಟಲೆ ಮನೆಯಿಂದ ಹೊರಗಿರುತ್ತಿದ್ದ. ಕಿಟ್ಟಪ್ಪನ ಹೆಂಡತಿ ಬರೀ ಪಾಪದ ಹೆಂಗಸು. ಬೆಲ್ಲಕ್ಕೆ ಹಾಕಿದರೆ ಬೆಲ್ಲ, ಹುಣಸೆಗೆ ಹಾಕಿ ಹುಳಿಯೆಂದುಕೊಳ್ಳಬಹುದಾದ ಜೀವ. "ಎಂಥ

ನಾರಾಯಣ" ತಂದೆ – ತಾಯಿಯಿರುವಾಗಲೇ ಊರಿನವರು ಹೇಳುವ ಹಾಗೆ ಹಾದಿ ತಪ್ಪಿರುವ ಹುಡುಗ. ಸಂಜೆ ಶಾಲೆ ಬಿಟ್ಟರೆ ಶಾಲೆಯ ಕಟ್ಟೆಯಲ್ಲಿ ಕುಳಿತು, "ಅದೆಂಥದೋ ಮಾರಾಯ ಒಂದು ಬೀಡಿ ತಾ" ಅಂತ ಕರೆಯವುದು, ಇಸ್ಪೀಟು ಎಲೆಯಲ್ಲಿ ರಾಜ – ರಾಣಿಯಾಡುವುದು ಕಲಿತುಬಿಟ್ಟ. ಸಂಜೆ ಹೊತ್ತಿಗೋ ಮನೆ ಸೇರುವುದು ಅವನ ರೂಢಿಯಾಯಿತು.

ಒಂದೆರಡು ಸಾರಿ ಅವನನ್ನು ಕೇಳಿದ್ದಕ್ಕೆ ತಂದೆಗೆ, ತಾಯಿಗೆ ಉಲ್ಟಾ ಮಾತಾಡಿದ. ಅಂದಿನಿಂದ ಅವನ ತಾಯಿ ಅವನಿಗೆ ಹೇಳುವುದನ್ನು ಬಿಟ್ಟು ದೇವರಿಗೆ ಕೈ ಮುಗಿದು, 'ದೇವರೇ ನಿನಗೆ ಕೈಮುಗಿಯುತ್ತೇನೆ. ದೀಪ ಹಚ್ಚಿಡುತ್ತೇನೆ. ನನ್ನ ಮಗನಿಗೆ ಒಳ್ಳೆಯ ಬುದ್ಧಿಕೊಡು' ಎಂದು ಪ್ರಾರ್ಥಿಸಲು ಪ್ರಾರಂಭಿಸಿದಳು. ದೇವರಿಗೆ ದೀಪ ಹಚ್ಚಿದ್ದೇ ಬಂತು – ಏನೂ ಉಪಯೋಗವಾಗಲಿಲ್ಲ. ಕಿಟ್ಟಪ್ಪನೂ ಒಂದೆರಡೂ ಸಾರಿ ಹೇಳಿ ನೋಡಿದ: "ಅದೆಂಥ ನೀವು ಹೇಳುವುದು? ನಾನು ನನಗೆ ಬೇಕಾದ ಹಾಗೆ ಇರ್ತೇನೆ. ನಾನೇನೂ ನಿಮ್ಮ ಕೆಲಸದವನಲ್ಲ. ನಿಮಗೆ ನಿದ್ದೆ ಬಾರದಕ್ಕೆ ನನ್ನನ್ನು ಹುಟ್ಟಿಸಿದ್ದೀರಿ. ಹಾಗೆಂತ ನಾನು ನೀವು ಹೇಳಿದ ಹಾಗೆ ಕೇಳಬೇಕು ಅಂತ ಎಲ್ಲಿದೆ?" ಎಂದು ನಾರಾಯಣ ಹೇಳಿ ಕಿಟ್ಟಪ್ಪನ ಬಾಯಿ ಮುಚ್ಚಿಸಿಬಿಟ್ಟ. ಅವನ ಮಾತು ಕೇಳಿ ಕಿಟ್ಟಪ್ಪನ ತಲೆ ಧಿಂ ಅಂತು. ಅಂದಿನಿಂದ ಮಗನನ್ನು ಮಾತಾಡಿಸುವುದೆ ಬಿಟ್ಟುಬಿಟ್ಟ. ತಂದೆ – ತಾಯಿ ಇಬ್ಬರೂ ಮಾತಾಡಿಸುವುದನ್ನು ಬಿಟ್ಟಿದ್ದು ಅದೆಂಥ ನಾರಾಯಣನಿಗೆ ಅನುಕೂಲವಾಯಿತು. ಬೇಡದ್ದು ಕಲಿಯುವವನಿಗೆ ಊರೆಲ್ಲಾ ಸ್ನೇಹಿತರು! ಐದನೆಯ ತರಗತಿಯಲ್ಲಿ ನಾಲ್ಕೈದು ಸರ್ತಿ ಫೇಲಾಗಿ ಕೊನೆಗೆ ಶಾಲೆಯನ್ನು ಬಿಟ್ಟ. ಐದಾರು ಮೈಲಿ ದೂರದಲ್ಲಿರುವ ಸೂಳೆಯ ಮಗಳಿಗೆ ಕೈ ಹಾಕಲು ಹೋಗಿ ಒಂದೆರಡು ಸಾರಿ ಒದೆ ತಿಂದ. ಯಾರದೋ ತೋಟಕ್ಕೆ ನುಗ್ಗಿ ಎಳನೀರು ಕಿತ್ತು ತೋಟದವರ ಕೈಲಿ ಒದೆಸಿಕೊಂಡ. ಹದಿನಾರು ವರ್ಷ ಹೊತ್ತಿಗೆ "ಎಂಥ ನಾರಾಯಣ" ಹಾದಿಯಲ್ಲಿ ಬರ್ತಾನೆ ಅಂತ ಗೊತ್ತಾದರೆ ಹುಡುಗಿಯರು ಒಬ್ಬೊಬ್ಬರೇ ಹೋಗುವುದಕ್ಕೆ ಹೆದರಿಕೊಳ್ಳುವ ಪರಿಸ್ಥಿತಿ ಬಂತು.

ಅವನಿಗೆ ಸರಿಯಾಗಿ ಹದಿನಾರು ದಾಟಿ ಹದಿನೇಳನೆಯ ವರ್ಷ ತುಂಬುವ ಹೊತ್ತಿಗೆ ಕಿಟ್ಟಪ್ಪ ಒಂದು ರಾತ್ರಿ ಎದೆ ನೋವು ಅಂತ ಮಲಗಿದವನು ಮಧ್ಯರಾತ್ರಿಯ ಹೊತ್ತಿಗೆ ಜೀವ ಬಿಟ್ಟ. ಅವನು ಜೀವ ಬಿಡುವಾಗಲೂ 'ಎಂಥ ನಾರಾಯಣ' ಮನೆಯಲ್ಲಿ ಇರಲಿಲ್ಲ. ಅವನ ತಂಗಿಗೆ ಆಗ ವಯಸ್ಸು ಹದಿನಾಲ್ಕು. ಅವಳ ನಂತರದವನು ನಾರಾಯಣನ ತಮ್ಮ. ಅವನಿಗೆ ಹದಿಮೂರು ವರ್ಷ. ಕಿಟ್ಟಪ್ಪ ಎದೆನೋವು ತಿಂದು ಸ್ವಲ್ಪ ಹೊತ್ತು ಮುಖ ಕಿವುಚಿದ. ಅಲ್ಲಿಗೆ ಮುಗಿಯಿತು

ಅವನ ಕತೆ! ಕಿಟ್ಟಪ್ಪನ ಹೆಂಡತಿ ಮಗಳು ಅತ್ತದ್ದೇ ಅತ್ತದ್ದು. ತಂದೆಯ ಕತೆ ಮುಗಿಯಿತು ಎಂದು ಗೊತ್ತಾದ 'ಎಂಥ ನಾರಾಯಣ'ನ ತಮ್ಮ ತೆಂಗಿನ ಗರಿಯ ಸೂಟೆಯನ್ನು ತೆಗೆದುಕೊಂಡು ಅಣ್ಣನನ್ನು ಹುಡುಕಲು ಹೊರಟ. ಅಂದಾಜಿನ ಮೇಲೆ ಶಾಲೆಯ ಕಟ್ಟೆಯ ಹತ್ತಿರ ಬಂದ. ನಾರಾಯಣ ಶಾಲೆಯ ಜಗುಲಿಯಲ್ಲಿ ಮಲಗಿದ್ದಾನೆ. ಗಡಿಬಿಡಿಯಿಂದ ಅವನಿಗೆ ವಿಷಯ ತಿಳಿಸಲು ಅವನನ್ನು ಎಬ್ಬಿಸಲು ಪ್ರಯತ್ನಿಸಿದ. 'ಎಂಥ ನಾರಾಯಣ'ನ ಬಾಯಿಯಿಂದ ಸಾರಾಯಿಯ ಗಬ್ಬುನಾತ ಹೊಡೆಯುತ್ತಿತ್ತು. ವಿಷಯ ಗೊತ್ತಾದ ಮೇಲೆ ತಮ್ಮನೊಂದಿಗೆ ಅದೆಂಥ ನಾರಾಯಣನೂ ಹೊರಟ. ಅವರಿಬ್ಬರೂ ಮನೆಯ ಹತ್ತಿರ ಬರುವಾಗ ತಾಯಿಯೂ ಹೊರಟು ಹೋಗಿದ್ದಳು. ಒಂದೇ ಗಳಿಗೆಯಲ್ಲಿ ಒಂದೇ ದಿನ ಗಂಡ ಹೆಂಡಿರು ಸತ್ತು ಪುಣ್ಯ ಮಾಡಿದರು ಅಂತ ಜನ ಮಾತಾಡಿಕೊಂಡರು. ಹೆಣಗಳನ್ನು ಎತ್ತಲು ಜನರು ಬಂದು ಸೇರಿದಾಗ ನಾರಾಯಣ ಮರಳಿ ಶಾಲೆಯತ್ತ ಬಂದು ಅದರ ಗೋಡೆಯ ಸಂದಿಯಲ್ಲಿ ಅಡಗಿಸಿಟ್ಟಿದ್ದ ಎರಡು ಬೀಡಿ ಸೇದಿಯಾಗಿತ್ತು. "ಏನಿದ್ದರೂ ನಾರಾಯಣನ ಧೈರ್ಯವೇ ಧೈರ್ಯ. ತಂದೆ – ತಾಯಿಯರ ಪ್ರಾಣ ಹೋದ್ರೂ ನಾರಾಯಣನ ಕಣ್ಣಲ್ಲಿ ಒಂದು ಹನಿ ನೀರು ಬೀಳ್ಲಿಲ್ಲ ನೋಡಿ" ಎಂದು ಪುರೋಹಿತರೇ ಮೆಚ್ಚುಗೆ ಮಾತನ್ನಾಡಿದರು. ಅವರ ಸೋದರ ಮಾವ ಬಂದು ಉತ್ತರ ಕ್ರಿಯೆಯ ತನಕ ಜವಾಬ್ದಾರಿ ಪೂರೈಸಿದರು. ಒಂದು ಹಿಡಿ ಭೂಮಿಗೆ ಇಲ್ಲಿರುವುದು ಬೇಡವೆಂದು ನಾರಾಯಣನಿಗೆ ಕರೆದರು. "ಬೇಕಿದ್ದರೆ ತಮ್ಮ – ತಂಗಿಯರನ್ನು ಕರೆದುಕೊಂಡು ಹೋಗಿ, ಆದರೆ ನಾನು ಮಾತ್ರ ಜಾಗ ಖಾಲಿ ಮಾಡುವವನಲ್ಲ" ಎಂದು ನಾರಾಯಣನೆಂದ. 'ಊರಿನವರೂ ಹೋಗಲಿ ಬಿಡಿ' ಅಂದರು. ಅಲ್ಲಿಗೆ 'ಎಂಥ ನಾರಾಯಣ'ನ ಜೀವನದಲ್ಲಿ ಒಂದು ದೊಡ್ಡ ತಿರುವು ಉಂಟಾಯಿತು. ಅವನ ತಮ್ಮ – ತಂಗಿ ಸೋದರಮಾವನ ಜೊತೆಗೆ ಹೋದರು.

ಸಣ್ಣ ಮನೆಯಲ್ಲಿ ನಾರಾಯಣನದೇ ದರಬಾರು. ಅನ್ನ ಮಾಡಿಕೊಂಡರೆ ಮಾಡಿದ, ಬಿಟ್ಟರೆ ಬಿಟ್ಟ. ರಾತ್ರಿ ಎಷ್ಟು ಹೊತ್ತಿಗೆ ಬರ್ತಾನೋ ಅವನಿಗೇ ಗೊತ್ತು. ಒಂದೆರಡು ತಿಂಗಳು ಹಾಗೆಯೇ ಕಾಲವನ್ನು ತಳ್ಳಿದ. ಮತ್ತೆ ಒಂದು ದಿನ ಮೇಳದೊಂದಿಗೆ ಹೋದ. ಎರಡು ವರ್ಷ ಮೇಳದಲ್ಲಿ ಪೆಟ್ಟಿಗೆ ಹೊತ್ತ. ಮಳೆಗಾಲದಲ್ಲಿ ಒಂದಿಬ್ಬರ ಜೊತೆಗೆ ರಾತ್ರಿ ವೇಷ ಕಟ್ಟಿಕೊಂಡು ಮನೆಮನೆಗೆ ಗ್ಯಾಸ್ ಲೈಟ್ ಹಿಡಿದುಕೊಂಡು ಹೋದ. ಹಾಗೂ – ಹೀಗೂ ಜೀವನವನ್ನು ತಳ್ಳಿದ. ಒಂದೊಂದು ದಿನ ಬೆಳಿಗ್ಗೆ ಕುಡಿದು ಮಲಗಿ ಸಂಜೆ ಹೊತ್ತಿಗೆ ಏಳುತ್ತಿದ್ದ. ಯಾರಾದರೂ ಕೇಳಿದರೆ "ಎಂಥ ಮಾರಾಯ್ರೆ ಬದುಕುವುದು ಕಷ್ಟವಾ?" ಎಂದ.

"ಬದುಕಿ ಸಂಪಾದನೆ ಮಾಡಿ ಹೆಂಡತಿ ಮಕ್ಕಳು ಅಂತ ಸತ್ತರೆ ಆಯ್ತಾ? ಅದೂ ಒಂದು ಜೀವನದ ಉದ್ದೇಶವಾ?" ಅಂತ ಕೇಳಿದವರಿಗೆ ಸವಾಲು ಎಸೆದ. ಬುದ್ಧಿ ಹೇಳಲು ಯಾರಾದರೂ ಬಂದರೆ "ಎಂಥ ಮಾರಾಯರೆ ನೀವು ಹೇಳುವುದು.? ನನ್ನ ಅಪ್ಪನನ್ನು ಪ್ರೇತ ಭಟ್ಟ ಅಂತ ಮಾಡಿ ಓಡಿಸಿದ್ದು ಆಯಿತು. ನನ್ನನ್ನೂ ಹಾಗೇ ಮಾಡಬೇಕು ಅಂತ ಇದ್ದೀರಾ?" ಎಂದು ಹೇಳುತ್ತಿದ್ದ. ಊರವರು ಯಾರೂ ಅವನ ಸಹವಾಸಕ್ಕೆ ಹೋಗಲಿಲ್ಲ. ಹೋದರೆ ಏನಾದರೂ ಈ ಥರದ ಮಾತು ಕೇಳಬೇಕಲ್ಲಪ್ಪ ಎಂದು ಸುಮ್ಮನಿರತೊಡಗಿದರು. ನಾರಾಯಣನ ಮನೆಯಿಂದ ಹೆಚ್ಚು ಕಡಿಮೆ ಇಪ್ಪತ್ತು ಮೈಲು ದೂರದಲ್ಲಿರುವುದು ಕೆರೆಮಜಲು ತಿಮ್ಮಪ್ಪಯ್ಯನವರ ಮನೆ. ಅವರಿಗೆ ಆ ಕಾಲಕ್ಕೆ ಹದಿನೈದು ಎಕ್ರೆ ತೋಟ ಮತ್ತು ನಾಲ್ಕೆಕ್ರೆ ಗೇರು ಬೀಜದ ಗುಡ್ಡವಿತ್ತು. ತಿಮ್ಮಪ್ಪಯ್ಯನವರನ್ನು ಉದ್ದಕಾಲು ತಿಮ್ಮಪ್ಪಯ್ಯನೆಂದು ಕರೆಯುತ್ತಿದ್ದರು. ಅವರ ತಮ್ಮ ಕೆರೆಮಜಲು ಗಣಪಯ್ಯ, ಪಿತ್ರಾರ್ಜಿತ ಆಸ್ತಿಯ ವಿಷಯದಲ್ಲಿ ತಕರಾರು ಬಂದು ತಿಮ್ಮಪ್ಪಯ್ಯನ ವಿರುದ್ಧ ಗಣಪಯ್ಯ ಕೋರ್ಟು ಮೆಟ್ಟಿಲು ಹತ್ತಿದ್ದ. ತಕರಾರು ತುಂಬಾ ದೊಡ್ಡ ವಿಷಯಕ್ಕಲ್ಲ, ಬರೀ ಕಾಲು ಹಾದಿಯ ಜಾಗದ ಕುರಿತು. ಅಣ್ಣ ಕೊಡೆ ಅಂದರೆ ತಮ್ಮ ಬಿಡೆ ಎಂದು ಹೇಳುವ ಜಾತಿ.

ಒಂದು ಮಳೆಗಾಲ ರಾತ್ರಿ ಎಂಥ ನಾರಾಯಣ "ರಾತ್ರಿ ವೇಷ" ಕುಣಿಸಿಕೊಂಡು ಗಣಪಯ್ಯನ ಮನೆಗೆ ಹೊರಟವನು ಅಲ್ಲಿಯೇ ಉಳಿಯಬೇಕಾಯಿತು. ಸ್ತ್ರೀವೇಷದವನು ಇನ್ನು ಈವತ್ತಿನ ಮಟ್ಟಿಗೆ ಕುಣಿಯುವುದಕ್ಕೆ ಸಾಧ್ಯವಿಲ್ಲ ಎಂದು ಹೇಳಿದ್ದರಿಂದ ನಾರಾಯಣ ಮಲಗಲು ಒಂದೆರಡು ಚಾಪೆ ಕೇಳಿದ. ಆಗ ಪ್ರಾರಂಭವಾದ ಸ್ನೇಹದಿಂದ ನಾರಾಯಣ ಗಣಪಯ್ಯ ಗಳಸ್ಯ ಕಂಠಸ್ಯವಾದರು. ಗಣಪಯ್ಯನಿಗೆ ಬೇರೆ ಯಾವ ಹವ್ಯಾಸವಿಲ್ಲವಾದರೂ ಕದ್ದು ಕಡಿಯುವ ಅಭ್ಯಾಸವಿದೆ. ಇಸ್ಪೀಟು ಎಲೆಯನ್ನು ಬಿಚ್ಚಿದರೆ ರಾತ್ರಿ – ಹಗಲುಗಳ ವ್ಯತ್ಯಾಸವಿಲ್ಲ. ಪಕ್ಕದಲ್ಲಿ ಎಲೆ ತಟ್ಟೆಯಿದ್ದರೆ ಗಳಿಗೆಗೊಮ್ಮೆ ಎಲೆಯಡಿಕೆ ಹಾಕುವುದು ಅದನ್ನು ಉಗುಳುವುದು ಅವನ ಅಭ್ಯಾಸ. ಉದ್ದಕಾಲು ತಿಮ್ಮಪ್ಪಯ್ಯನಿಗೆ ಎರಡು ಹೆಣ್ಣುಮಕ್ಕಳು. ಮೊದಲನೆಯವಳನ್ನು ಕಣ್ಣು ಕಾಣಿಸದಿರುವ ಭಟ್ಟಕ್ಕೆ ಮದುವೆ ಮಾಡಿಕೊಟ್ಟರು. ಅವಳ ಮದುವೆ ನಿಶ್ಚಿತವಾದಾಗ ಹುಳುಕು ತಡೆಯದ ಗಣಪಯ್ಯ, " ನನ್ನ ಅಣ್ಣನ ಮಗಳ ಧಾರೆ ಮುಹೂರ್ತದ ದಿನವೇ ಅವಳು ಹೆರದಿದ್ದರೆ ಸಾಕು?" ಮದುಮಗನಿಗೆ ಇನ್ನು ಬೇರೆ ಕೆಲಸವಿಲ್ಲ. ಹೆಂಡತಿಯ ಬಾಣಂತನ ಮುಗಿಸಿ ಕರೆದುಕೊಂಡು ಹೋದರೆ ಆಯ್ತಪ್ಪಾ?" ಎಂದು ಹೇಳಿದ. ತಿಮ್ಮಪ್ಪಯ್ಯ ಅದಕ್ಕೆ ಪ್ರತಿಕ್ರಿಯಿಸಲಿಲ್ಲ. ಎರಡನೆಯ ಮಗಳನ್ನು ಕೂಡಾ ಒಳ್ಳೆಯ ಕಡೆ ನೋಡಿ ಮದುವೆ

ಮಾಡಿಕೊಟ್ಟ. ಅಣ್ಣನ ಎರಡನೆಯ ಮಗಳಿಗೂ ನಿಶ್ಚಯವಾದಾಗಲೂ ಗಣಪಯ್ಯ ತನ್ನ ತೈನಾತಿಗಳೊಡನೆ ಹೇಳಿದ: "ಅಣ್ಣನಿಗೆ ಮಂಡೆ ಸಮ ಇಲ್ಲ. ಇವನ ಹದಿನೈದು ಎಕ್ರೆ ಅಡಿಕೆ ತೋಟ ನೋಡಲು ಯಾರು ಬರ್ತಾರೆ?"

ಗಣಪಯ್ಯನಿಗೆ ಅಣ್ಣನ ಮೇಲಿರುವ ಹೊಟ್ಟೆಯುರಿ ಕಡಿಮೆಯಾಗದಿದ್ದರೂ ಅದಕ್ಕೆಲ್ಲಾ ತಿಮ್ಮಪ್ಪಯ್ಯ ತಲೆ ಕೆಡಿಸಿಕೊಳ್ಳಲು ಹೋಗಲಿಲ್ಲ.

ಆ ದಿನ ನಾರಾಯಣ ತನ್ನ ಮನೆಯಲ್ಲಿಯೇ ಉಳಿದಿದ್ದ. ಹಿಂದಿನ ರಾತ್ರಿ ಕುಡಿದದ್ದು ತಲೆ ಹಿಡಿದುಕೊಂಡಂತೆ ಆಗಿತ್ತು. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆಂಬ ಕ್ರಮ ಅವನಿಗೆ ಸಿದ್ಧಿಸಿತ್ತು. ಬೆಳಗಿನ ಹೊತ್ತು ತಲೆಗೆ ತುಂಬಾ ತೆಂಗಿನೆಣ್ಣೆ ಹಾಕಿಕೊಂಡು ಒಂದು ಸ್ವಲ್ಪ ಕುಡಿದುಕೊಂಡು ಪುಸ ಪುಸನೆ ಬೀಡಿ ಸೇದುತ್ತಾ ಕುಳಿತಿದ್ದ. ಎಲ್ಲಿಯೋ ಅಂತರಾಳದಲ್ಲಿ ಒಂಟಿತನ, ಬೇಸರ ಹೆಡೆಯೆತ್ತುತ್ತಿದೆಯೆ ಎಂದು ಅವನಿಗೆ ಅನಿಸಿತು. ತಂದೆ ಮತ್ತು ತಾಯಿ ಇಬ್ಬರೂ ಸತ್ತಜಾಗದಲ್ಲಿ; ಅವರ ಹೆಣಗಳನ್ನು ಮಲಗಿಸಿದಲ್ಲಿ ಈಗ ಯಾವ ಕಲೆಯೂ ಉಳಿದಿಲ್ಲವೆಂಬುದು ನಿಜ. ಆದರೆ, ಅವರ ಹೆಣಗಳನ್ನೂ ಮಲಗಿಸಿದ ದಿನ ತನ್ನ ವರ್ತನೆಗೆ ಯಾವುದಾದರೂ ಸಕಾರಣ ಹೊಳೆಯಲಿಲ್ಲ. ತನ್ನ ಹದಿನಾರನೆಯ ವಯಸ್ಸಿನಲ್ಲಿ ಬೀಡಿ ಸೇದಲು ಕಲಿತಾಗ, ಶರಾಬಿನ ರುಚಿ ನೋಡಿದಾಗ, ಇಸ್ಪೀಟಿನ ಎಲೆಯನ್ನು ಕಲಿತಾಗ, ಸೂಳೆಯ ಹತ್ತಿರ ಹೋಗಿ ಹೊರ ಬಂದಾಗ, ಮೇಳದ ಪೆಟ್ಟಿಗೆ ಹೊತ್ತಾಗ, ರಾತ್ರಿ ವೇಷ ಕುಣಿಸಿದಾಗ – ಇದ್ದುದ್ದು ತನ್ನ ಜಾತಿಯ ಬಗೆಗೆ ಇದ್ದ ದ್ವೇಷವೆ? ಹಾಗಿದ್ದರೆ ತಾನೇಕೆ ಅಪ್ಪ, ಅಮ್ಮನಿಗೆ ಅವಮಾನ ಮಾಡಿದೆ? ಯಾವುದಕ್ಕೂ ಸದ್ಯ ಉತ್ತರ ದೊರೆಯುವುದಿಲ್ಲ. ತನ್ನ ಜೀವನದ ಉದ್ದಕ್ಕೂ ಯಾವುದೇ ಉತ್ತರ ದೊರೆಯುವುದಿಲ್ಲ. ತನ್ನ ಚಿಂತೆಗಳು ಕರುಳಿನಾಳದಿಂದೆದ್ದು ಬಂದು ಭಗಭಗನೆ ಉರಿಯುತ್ತಿದೆ. ಈಗ ಮರಳಿ ಹಿಂದಕ್ಕೆ ಹೋಗಲಾಗದು. ಎಂಥ ನಾರಾಯಣನಿಗೆ ಈ ಗಳಿಗೆಯಲ್ಲಿಯೇ ತಂಗಿ – ತಮ್ಮರ ನೆನಪು ಬಂತು. ಸಾಧ್ಯವಾದರೆ ನಾಳೆ ಅವರನ್ನು ನೋಡಿ ಬರಬೇಕು. ತಂಗಿ ಥೇಟು ಅಮ್ಮನ ಹಾಗೆ ಪ್ರೀತಿಯಲ್ಲಿ, ವಾತ್ಸಲ್ಯದಲ್ಲಿ. ತಡೆಯಲಾಗದ ಉದ್ವೇಗವನ್ನು ಉಪಶಮನಗೊಳಿಸಬೇಕೆಂದುಕೊಂಡು ಪಕ್ಕದಲ್ಲಿ ಸಾರಾಯಿಯನ್ನು ಹಳೆಯ ಲೋಟಕ್ಕೆ ಹೊಯ್ದುಕೊಂಡ. ಅದಕ್ಕೆ ಒಂಚೂರು ನೀರು ಸುರಿದು ಗಟ ಗಟನೆ ಕುಡಿದ. ಬಾಯಿಗೆ ಮಾಮೂಲಿ ಶೈಲಿಯಲ್ಲಿ ಘಟ್ಟದ ಕೆಳಗಿನವರಂತೆ ಉಪ್ಪಿನ ಹರಳು ಹಾಕಿಕೊಂಡ. ಉಟ್ಟುಕೊಂಡ ಬಟ್ಟೆಯಲ್ಲಿಯೇ ಬಾಯನ್ನು ಒರೆಸಿಕೊಂಡ. ಆಗ ಬಂದವನು ಗಣಪಯ್ಯ. ಜೊತೆಗೆ ಇನ್ನೊಬ್ಬ, ಆ ಇನ್ನೊಬ್ಬನಾರೆಂದು ನಾರಾಯಣನಿಗೆ ಫಕ್ಕನೆ ಗೊತ್ತಾಗಲಿಲ್ಲ. ಕೊನೆಗೆ ಗಣಪಯ್ಯನೇ ಪರಿಚಯಿಸಿದ,

"ಇವನು ನಮ್ಮ ನೆಂಟರ ಪೈಕಿ" ನಾರಾಯಣ ಅದಕ್ಕೆ ತಲೆ ಕೆಡಿಸಿಕೊಳ್ಳದೆ "ಎಂಥ ಮಾರಾಯ್ರೆ ಬೆಳಿಗ್ಗೆ ಹೇಳದೆ ಕೇಳದೆ ಬಂದು ಬಿಟ್ರೆ?" ಅಂದ.

"ಅಯ್ಯೋ, ನಿನ್ನ ಮನೆಗೆ ಬರಲು ಏನು ಓಲೆ ಬೇಕಾ?" ಎಂದ ಗಣಪಯ್ಯ. 'ಒಂದು ಘನಕಾರ್ಯದ ಮೇಲೆ ಬಂದಿದ್ದೇನೆ. ಅದಕ್ಕೆ ಇವನನ್ನು ಕರೆದುಕೊಂಡು ಬಂದಿದ್ದೇನೆ. ಹೇಗಾದರೂ ಮಾಡಿ ಈ ಕೆಲಸ ಒಪ್ಪಿಕೊಳ್ಳಬೇಕು' ಎಂದು ಗುಟ್ಟಾಗಿ ನಾರಾಯಣನಿಗೆ ವಿಷಯ ತಿಳಿಸಿದ. ಮೊದಲು ಈ ಕೆಲಸ ಆಗುವುದಿಲ್ಲ ಎಂದ ಎಂಥ ನಾರಾಯಣನಿಗೆ ಕೆಲಸ ಮಾತ್ರ ಘನವಾದುದೇ ಆಗಿತ್ತು ಅಂತ ಒಂದು ವಾರ ಕಳೆದ ಮೇಲೆ ಗೊತ್ತಾಯಿತು.

ಒಂದು ವಾರ ನಾಪತ್ತೆಯಾದ ಎಂಥ ನಾರಾಯಣ ಮತ್ತೆ ಊರಿಗೆ ಬರುವಾಗ ಹೊಸದೊಂದು ಬಿಳಿಯ ಟೆರಲಿನ್ ಶರ್ಟು ಮತ್ತು ಬಿಳಿಯ ಬಿನ್ನಿ ಕಂಪೆನಿಯ ವೇಸ್ಟಿಯನ್ನು ಉಟ್ಟುಕೊಂಡಿದ್ದ. ಹೆಗಲಿನಲ್ಲಿ ಮೆತ್ತನೆಯ ಶಾಲು, ನಡು ಬೆರಳಿನಲ್ಲಿ ಪಚ್ಚೆಕಲ್ಲು ಇರಿಸಿದ ಉಂಗುರ. ಬಂದವನೆ ಪೇಟೆಯಲ್ಲಿ ಎರಡು ಕಟ್ಟು ಬೀಡಿ ತೆಗೆದುಕೊಂಡ. ಅಂಗಡಿಯವನಿಗೆ ಚಿಲ್ಲರೆ ಎಣಿಸಿ ಕೊಡುವ ಬದಲು ನೋಟನ್ನು ಕೊಟ್ಟ. ಅಂಗಡಿಯವನಿಗೆ ಆಶ್ಚರ್ಯವಾಯಿತು. ಅವನು ಹುಬ್ಬು ಮೇಲೇರಿಸಿದ. 'ಅದೆಂಥಾ ಮಾರಾಯ ಹಾಗೆ ನೋಡ್ತಿ? ನಾನು ನಾರಾಯಣನೇ. ಅದಕ್ಕೆ ಅನುಮಾನಬೇಡ. ಈವತ್ತಿನಿಂದ ನಾರಾಯಣನತ್ರ ಚಿಲ್ಲರೆ ದುಡ್ಡು ಇರುವುದಿಲ್ಲ. ಏನಿದ್ದರೂ ಇಡೀ ನೋಟು ಗೊತ್ತಾಯ್ತಾ?' ಅಂದ ನಾರಾಯಣ ಒಳಗಿನ ಚಡ್ಡಿ ಕಿಸೆಯಿಂದ ನೋಟಿನ ಕಟ್ಟನ್ನು ತೆಗೆದು ತೋರಿಸಿ ಇಟ್ಟುಕೊಂಡ. ನಾರಾಯಣ ಸ್ವಲ್ಪ ಕುಡಿದಿದ್ದಾನೆ ಎಂದು ಅಂಗಡಿಯವನಿಗೆ ಅರ್ಥವಾಯಿತು. ಕಣ್ಣು ಕೊಂಚ ಕೆಂಪಾಗಿತ್ತು. "ನಾರಾಯಣ ಈವತ್ತು ಬೆಳಿಗ್ಗೆ ಅಂಗಡಿಗೆ ಬಂದಾಗ ಬಿಳಿಯ ಶರ್ಟ್ ಹಾಕಿಕೊಂಡಿದ್ದ. ಅವನ ಟೆರಲಿನ್ ಶರಟಿನ ಕಿಸೆಯಲ್ಲಿ ತುಂಬಾ ನೋಟುಗಳಿದ್ದವು. ಉಂಗುರ ಬೇರೆ ಹಾಕಿಕೊಂಡಿದ್ದ. 'ಎಲ್ಲಿಂದ ಅಷ್ಟೊಂದು ದುಡ್ಡು ಬಂತೋ ಏನೋ? ಏನು ಕತೆಯೋ ಏನೋಪ್ಪಾ. ಈ ವಿಷಯ ನಾನು ಹೇಳಿದ್ದು ಅಂತ ಮಾತ್ರಾ ಯಾರಿಗೂ ಹೇಳ್ಬೇಡಿ. ಎಲ್ಲಿಯಾದರೂ ಕೊಪ್ಪರಿಗೆ ಸಿಕ್ಕಿತೋ ಏನೋ?" ಎಂದು ಬಂದವರಿಗೆಲ್ಲಾ ಅಂಗಡಿಯವನು ಹೇಳಿದ. ವಿಷಯ ಹಬ್ಬುವುದು ಎಷ್ಟು ಹೊತ್ತು? ಅದಕ್ಕೆ ಸಾವಿರ ನಾಲಿಗೆ. ಸಹಸ್ರ ಕಿವಿಗಳು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಕತೆಯನ್ನು ಮಾತಾಡಿದರು. ಕೆಲವರು ಎಂಥ ನಾರಾಯಣನಿಗೆ ಯಾರೋ ಹೂತಿಟ್ಟ ಕೊಪ್ಪರಿಗೆ ದುಡ್ಡು ಸಿಕ್ಕಿತಂತೆ ಅಂದರು. ಮತ್ತೆ ಕೆಲವರು ಅಂಗಡಿಯವನು ಉದ್ಗರಿಸಿದ 'ದೇವರಿಗೇ ಗೊತ್ತು' ಎನ್ನುವುದನ್ನು ತಪ್ಪಾಗಿ ಅರ್ಥಮಾಡಿಕೊಂಡು ದೇವರ ದುಡ್ಡು ನಾರಾಯಣನಿಗೆ

ಸಿಕ್ಕಿತಂತೆ ಅಂತ ಪ್ರಚಾರ ಮಾಡಿದರು. ಪ್ರಚಾರ ವ್ಯಾಪಕವಾಗಿ ನಡೆಯುತ್ತಿರುವಾಗ ನಾರಾಯಣ ಮನೆಯನ್ನು ಸೇರಿಕೊಂಡುಬಿಟ್ಟಿದ್ದ.

ಮರುದಿನವೂ ಪೇಟೆಯಲ್ಲಿ ಜನರು ಅದೇ ವಿಷಯದ ಕುರಿತು ಹೇಳುತ್ತಿದ್ದರು. ಕೆರೆಮಜಲು ತಿಮ್ಮಪ್ಪಯ್ಯನ ಹೆಣ ಕಾಡು ದಾರಿಯಲ್ಲಿ ಸಿಕ್ಕಿತಂತೆ ಅಂತ ಮತ್ತೊಂದು ಪ್ರಚಾರವೂ ಪೇಟೆಯನ್ನು ಹೇಗೋ ತಲುಪಿತು. ಸಂಜೆಯ ಹೊತ್ತಿಗೆ ನಾರಾಯಣನ ಕುರಿತಾದ ವಿಷಯ ತಿಳಿಯಿತು. ಕೆರೆಮಜಲು ತಿಮ್ಮಪ್ಪಯ್ಯನನ್ನು ಕಾಡುದಾರಿಯಲ್ಲಿ ಯಾರೋ ಕೊಂದು ಹಾಕಿದರಂತೆ ಅನ್ನುವ ಪ್ರಚಾರವೇ ಬಲವಾಯಿತು. ಈ ವಿಷಯವನ್ನೂ ಅಷ್ಟೆ ಜನ ಒಂದೊಂದು ರೀತಿಯಲ್ಲಿ ಮಾತಾಡಿದರು. ತಿಮ್ಮಪ್ಪಯ್ಯನ ಹೆಣ ಸಿಕ್ಕಿದ್ದು ಕೇರಳದ ಹತ್ತಿರವಂತೆ ಅಂತ ಒಬ್ಬರು ಹೇಳಿದರೆ, ಮತ್ತೊಬ್ಬರು ಕೊರಳನ್ನೇ ಕೊಯ್ದುಬಿಟ್ಟಿದ್ದಾರಂತೆ ಅಂತ ಮತ್ತೊಬ್ಬರು. ತಿಮ್ಮಪ್ಪಯ್ಯನ ಹೆಂಡತಿಗೆ ಬೇರೊಬ್ಬನೊಂದಿಗೆ ಸಂಬಂಧವಿದೆಯೆಂದು ಅವಳು ಕೊಲ್ಲಿಸಿದಳಂತೆ ಎಂದೂ ಪ್ರಚಾರವಾಯಿತು. ಅವಳಿಗೆ ಐವತ್ತು ವರ್ಷ ದಾಟಿರಬಹುದು ಅಂತ ಯಾರೂ ಯೋಚನೆ ಮಾಡಲು ಹೋಗಲಿಲ್ಲ. ಸುದ್ದಿಗಳು ಹಾರಾಡತೊಡಗಿದವು. ಮತ್ತೆ ಕೆಲವರು ತಿಮ್ಮಪ್ಪಯ್ಯನ ಹೆಣ ಕೊಳೆತು ಹೋಗಿ ವಾಸನೆ ಮೈಲುದೂರ ಬಂತು ಎಂದರು.

ಮೂರನೆಯ ದಿನಕ್ಕೆ ಸರಿಯಾಗಿ ಕೇರಳದಿಂದ ಪೊಲೀಸರು ಬಂದು ಇಳಿದರು. ಕಪ್ಪು ಶೂ, ಖಾಕಿ ಚಡ್ಡಿ, ಖಾಕಿ ಅಂಗಿ, ತಲೆಯ ಮೇಲೆ ಮುಂಡಾಸಿನ ತರದ ಟೋಪಿ ಇಟ್ಕೊಂಡು. ಪೊಲೀಸ್ ಜೀಪ್ ಬರುವುದೇ ತುಂಬಾ ಅಪರೂಪದ ಚಿತ್ರವಾಗಿರುವ ಸಂದರ್ಭದಲ್ಲಿ ಪೇಟೆಗೆ ಪೊಲೀಸರು ಬಂದ ತಕ್ಷಣ ಎಲ್ಲರೂ ತೆರೆದ ಕಣ್ಣಿನಿಂದ ಅದನ್ನು ನೋಡಿದರು.

ಮೈಸೂರು ರಾಜ್ಯ ಪೊಲೀಸರಿಗಿಂತಲೂ ಕೇರಳದ ಪೊಲೀಸರು ತುಂಬಾ ಜೋರು ಅಂತ ಲೆಕ್ಕ. ಸತ್ಯ ಹೇಳದದ್ದರೆ ಕುಂಡೆಗೆ ಮೆಣಸಿನ ಪುಡಿ ಹಾಕ್ತಾರೆ. ಬಾಯಿ ಬಿಡದಿದ್ದರೆ ಹೊಕ್ಕುಳಿನ ಹತ್ತಿರ ಕೂರ್ಬಾಯಿ ಬಿಟ್ಟು ಅದಕ್ಕೆ ಲೋಟ ಮುಚ್ಚುತ್ತಾರೆ. ಬಾಯಿಗೆ ಉಚ್ಚೆ ಹೊಯ್ತಾರೆ ಇತ್ಯಾದಿ ಪ್ರಚಾರಗಳಿಂದಾಗಿ ಕೇರಳದ ಪೊಲೀಸರ ಬಗ್ಗೆ ಅನೇಕ ದಂತಕತೆಗಳು ನಿರ್ಮಾಣವಾಗಿದ್ದುವು. ಪೊಲೀಸ್ ಜೀಪಿನಲ್ಲಿ ಎದುರು ಸೀಟಿನಲ್ಲಿ ಎಸ್.ಐ. ಕುಳಿತಿದ್ದ. ಹಿಂದುಗಡೆ ಸೀಟಿನಲ್ಲಿ ಇಬ್ಬರು ಪೊಲೀಸರು ಕುಳಿತಿದ್ದರು. ಜೀಪ್ ಅಂಗಡಿಯತ್ರ ಬಂದು ನಿಂತಾಗ ಆ ಅಂಗಡಿಯವನಿಗೆ ಮನಸ್ಸಿನಲ್ಲಿಯೇ ಹೆದರಿಕೆಯಾಯಿತು. ಪೊಲೀಸೊಬ್ಬ ಅಂಗಡಿಯತ್ರ ಬಂದು "ಇಲ್ಲಿ ನಾರಾಯಣನ ಮನೆ ಎಲ್ಲಿ?" ಎಂದು ಕೇಳಿದ. ಅದಕ್ಕೆ ಅಂಗಡಿಯವನು 'ಯಾವ ನಾರಾಯಣ?' ಎಂದ. ಪೊಲೀಸವನು 'ಕುಡುಕ ನಾರಾಯಣ – ಅದೇ ಎಂಥ ನಾರಾಯಣ' ಅಂತಾರಂತೆ ಅಂದ. ತಕ್ಷಣವೇ

ಅಂಗಡಿಯವನು ಒಬ್ಬ ಹುಡುಗನೊಂದಿಗೆ ಪೊಲೀಸರನ್ನು ಕಳಿಸಿದ. ಜೀಪ್ ಪೇಟೆಯಲ್ಲಿಯೇ ನಿಂತಿತು. ಯಾಕೆಂದರೆ, ನಾರಾಯಣನ ಮನೆಯತ್ತ ಹೋಗಲು ರಸ್ತೆಯಿರಲಿಲ್ಲ. ದಾರಿಯುದ್ದಕ್ಕೂ ಪೊಲೀಸರು ಎಂಥ ನಾರಾಯಣನಿಗೆ ಶಾಪ ಹಾಕಿದ್ದೇ ಹಾಕಿದ್ದು. "ಇವನಿಗೆ.......ಈ.......ಸೂ........ಮಗನಿಗೆ........ರೋಡ್ ಇದ್ರೆ ಜೀಪಲ್ಲಿ ಬರಬಹುದಿತ್ತು. ಇದೀಗ ಮೂರು ಮೈಲು ನಡೆಯುವ ಹಾಗಾಯಿತು" ತಮ್ಮನ್ನು ನೋಡಿದ ತಕ್ಷಣ ನಾರಾಯಣ ಓಡಿ ಹೋಗಬಹುದು ಎಂದು ಲೆಕ್ಕಾಚಾರ ಹಾಕಿಕೊಂಡೇ ಬಂದಿದ್ದರು. ಆದರೆ ನಾರಾಯಣನ ಮನೆಯ ಹತ್ತಿರ ಬರುವಾಗ ಪರಿಸ್ಥಿತಿಯೇ ಬೇರೆಯಿತ್ತು. ಅವನು ಮನೆಯ ಬಾಗಿಲು ತೆರೆದಿಟ್ಟುಕೊಂಡು ನಿದ್ದೆ ಹೋಗಿದ್ದ. ಪೊಲೀಸರು ಬಂದು ಅವನ ಹತ್ತಿರ ನಿಲ್ಲುವ ತನಕ ಎಚ್ಚರವಿರಲಿಲ್ಲ. ಎಚ್ಚರವಾದ ಮೇಲೆ ಓಡುವ ಅವಕಾಶವಿರಲಿಲ್ಲ. ಆದದ್ದು ಇಷ್ಟು: ಕೆರೆಮಜಲು ತಿಮ್ಮಪ್ಪಯ್ಯನ ದೂರದ ಸಂಬಂಧಿ ಹುಡುಗಿಯನ್ನು ನೋಡುವ ನೆವ ಹೇಳಿಕೊಂಡು ಅವನನ್ನು ಕರೆದುಕೊಂಡು ನಾರಾಯಣ ಮತ್ತು ಗಣಪಯ್ಯ ಕರೆದುಕೊಂಡು ಬಂದಿದ್ದ ವ್ಯಕ್ತಿ ಇಬ್ಬರೂ ಹೊರಟಿದ್ದರು. ಯಾವಾಗಲೂ ಬಿಳಿಯ ಟವೆಲ್ ಕೊರಳಿಗೆ ಸುತ್ತಿಕೊಂಡೇ ಓಡಾಡುವ ಅಭ್ಯಾಸ ತಿಮ್ಮಪ್ಪಯ್ಯನಿಗೆ. ಕಾಡಿನ ಹಾದಿಯಲ್ಲಿ ಹೋಗುವಾಗ ಮಧ್ಯೆ ತಿಮ್ಮಪ್ಪಯ್ಯನಿದ್ದ. ಹಿಂದುಗಡೆ 'ಎಂಥ ನಾರಾಯಣ' ಇದ್ದ. ಸರಕ್ಕನೆ ಹಿಂದಿನಿಂದ ಒಬ್ಬ ಮುಂದಿನ ಒಬ್ಬ ಟವೆಲನ್ನು ಎಳೆದರು. ಎಳೆದ ರಭಸಕ್ಕೆ ಟವೆಲ್ ಉರುಳಾಯಿತು. ಅಲ್ಲಿಯೇ ಬಿದ್ದ ತಿಮ್ಮಪ್ಪಯ್ಯನ ಹೆಣವನ್ನು ಪೊದೆಗೆ ತಳ್ಳಿ ಇಬ್ಬರೂ ಓಡಿ ಬಂದಿದ್ದರು. ನಾರಾಯಣನಿಗೆ ಬೇಕಾದಷ್ಟು ದುಡ್ಡು ಕೊಟ್ಟು, 'ನಾಲ್ಕೈದು ವರ್ಷ ಯಾರ ಕಣ್ಣಿಗೂ ಬೀಳಬೇಡ. ಘಟ್ಟದ ಕಡೆ ಹೋಗು' ಎಂದು ಗಣಪಯ್ಯ ಕಳಿಸಿದರು. ಆ ಮಾತನ್ನು ಕೇಳದೆ ಎಂಥ ನಾರಾಯಣ ಊರಿಗೆ ಬಂದಿದ್ದ. ಅನುಮಾನ ಬಿದ್ದ ಪೊಲೀಸರು ಗಣಪಯ್ಯನನ್ನು ತನಿಖೆ ಮಾಡಿದಾಗ ವಿಷಯ ತಿಳಿಯಿತು. ನಾರಾಯಣನಿಗೆ ಅವನ ಮನೆಯಲ್ಲಿ ಹೊಡೆಯದಿದ್ದರೂ ಅವನನ್ನು ಪೇಟೆಗೆ ತಂದು ನಾಕು ಜನರೆದುರು ಪೊಲೀಸರು ಹೊಡೆದದ್ದೇ ಹೊಡೆದದ್ದು. ಯಾಕೆಂದರೆ ಕೇರಳ ಪೊಲೀಸರು ಹೇಗಿರುತ್ತಾರೆಂದು ತೋರಿಸಬೇಕಾದ ಅಗತ್ಯ ಅವರಿಗಿತ್ತು. ಆದರೂ ಕೆಲವು ದಿನ ಜೈಲಿನಲ್ಲಿದ್ದು ಎಂಥ ನಾರಾಯಣ ಖುಲಾಸೆಯಾಗಿ ಒಂದೆರಡು ವರ್ಷಗಳಲ್ಲಿ ಊರಿಗೆ ಮರಳಿದ ಒಂದು ಹೊಸ ಅವತಾರದಲ್ಲಿ. ತಿಮ್ಮಪ್ಪಯ್ಯನ ಕೊಲೆಯ ನೆರಳನ್ನು ಮಾತ್ರ ಜೀವಮಾನವಿಡೀ ತಪ್ಪಿಸಲಾಗಲಿಲ್ಲಃ

* * * * *

"ವಿಧಿ ಬರೆದ ಅಕ್ಷರವನ್ನು ಅಶ್ವತ್ಥದ ಎಲೆಯಲ್ಲಿ ಅಳಿಸಿದರೂ ಒಂದೇ: ಗಂಧದ ಎಲೆಯಲ್ಲಿ ಒರೆಸಿದರೂ ಒಂದೇ. ಬೇವಿನ ಎಲೆಯಲ್ಲಿ ಒರೆಸಿದರೂ ಅಷ್ಟೇ"

## 1992
## ಫೆಬ್ರವರಿ
## 10

ಚಂದುನಾಯ್ಕನ ಕುಡಿತದ ಅವಾಂತರಗಳು ದಿನಾ ದಿನಾ ಹೆಚ್ಚಾಗುತ್ತಿತ್ತು. ಬೆಳಗ್ಗೆಯೇ ಕುಡಿದು ಒಂದೊಂದು ದಿನ ಗೇರು ಮರದ ತರಗೆಲೆಯ ಮೇಲೆ ಮಲಗಿ ಬಿಡುತ್ತಿದ್ದ. ಎಷ್ಟು ಎಬ್ಬಿಸಿದರೂ ಏಳುತ್ತಿರಲಿಲ್ಲ. ಏಳುವುದಕ್ಕೆ ಕಾರಣವೂ ಇರುತ್ತಿರಲಿಲ್ಲ. ದಿನದಿಂದ ದಿನಕ್ಕೆ ಅವನ ಶಕ್ತಿಯು ಕುಂದತೊಡಗಿತ್ತು. ಮಳೆಗಾಲ, ಬೇಸಿಗೆ, ಚಳಿಗಾಲವೆಂಬ ಯಾವ ಲೆಕ್ಕವೂ ಇರಲಿಲ್ಲ. ರುಕುಮಿಣಿಯು ನೋಡುವಷ್ಟು ನೋಡಿದಳು. ಅವನ ವಾಂತಿ ಬಾಚುವಷ್ಟು ಬಾಚಿದಳು. ಇದರಿಂದ ಪ್ರಯೋಜನವಿಲ್ಲವೆಂದಾಗ ಅವನಿಂದ ಎಷ್ಟು ಪೆಟ್ಟು ತಿನ್ನಬಹುದೋ ತಿಂದು ಕೊನೆಗೆ ಇದಕ್ಕೆ ಯಾವ ಪರಿಹಾರವೂ ಇಲ್ಲವೆಂದು ಚಂದುನಾಯ್ಕನನ್ನು ನಿರ್ಲಕ್ಷಿಸತೊಡಗಿದಳು. ಸೊಂಟದಲ್ಲಿ ತ್ರಾಣವಿರುವ ತನಕ ದುಡಿಯುವುದು ಮತ್ತೆ ಯಾವುದಾದರೂ ಕೆರೆಗೋ ಬಾವಿಗೋ ಬಿದ್ದು ಸಾಯುವುದು ಎಂದು ಯೋಚಿಸತೊಡಗಿದಳು. ಸತ್ತರೆ ಚಂದುನಾಯ್ಕನಿಗೆ ತೊಂದರೆಯಿಲ್ಲ. ಆದರೆ ಮಗನ ಕತೆಯೇನು ಅಂತಲೂ ಚಿಂತಿಸುವಳು. ರುಕುಮಿಣಿಯು ಗದ್ದೆಯ ಹುಣಿಯಲ್ಲಿ ಇದ್ದರೂ ಚಂದು ನಾಯ್ಕ" ಏಯ್ ಮುಂಡೆ ಸತ್ತಿದ್ದೀಯಾ?" ಅಂತ ಕುಡಿದ ಅಮಲಿನಲ್ಲಿ ಹೇಳುತ್ತಾ ಬಂದರೂ, ಮನೆಯ ಹಿಂದೆ ಹೋಗಿ ನಿಲ್ಲುತ್ತಿದ್ದಳು. ಅವಳಿಗೆ ಒಂದೊಂದು ದಿನ ಒಂದೊಂದು ರೀತಿಯ ಅನುಭವವಾಗುತ್ತಿತ್ತು.

ಒಂದು ದಿನ ಮೂರು ಸಂಜೆಯ ಹೊತ್ತು – ಚಂದುನಾಯ್ಕ ಕುಡಿದುಕೊಂಡು ಗದ್ದೆ ಹುಣಿಯಲ್ಲಿ ಜೋರಾಗಿ, "ಮುಂಡೆ – ನಿನ್ನನ್ನು ಕೊಲ್ಲದೆ ನಾನು ಬಿಡುವುದಿಲ್ಲ" ಎಂದು ಕಿರುಚಾಡುತ್ತಾ ಬಂದ. ಅದು ಅತ್ತ ರಾತ್ರಿಯೂ ಅಲ್ಲ, ಇತ್ತ ಹಗಲೂ ಅಲ್ಲದ ಮಧ್ಯದ ಸ್ಥಿತಿಯದು. ಕಣ್ಣು ಮಯ ಮಯ ಅನ್ನುವ ಹೊತ್ತು. ಸರಿಯಾಗಿ ಕಾಣಿಸುತ್ತಿರಲಿಲ್ಲ. ಚಂದು ಬಂದವನು ಬೆನ್ನಿಗೆ ನಾಕು ಬಿಗಿಯುತ್ತಾನೆಂದು ರುಕುಮಿಣಿಗೂ ಗೊತ್ತಾಯಿತು. ಅದಕ್ಕೆ ಅವಳು ತಪ್ಪಿಸಿಕೊಳ್ಳಲು ಒಂದು ಉಪಾಯ ಹೂಡಬೇಕೆಂದು ಹಿತ್ತಲ ಜಗುಲಿಯ ಮೇಲೆ ಇರಿಸಿದ ದೊಡ್ಡ ಉಪ್ಪಿನ ಹಂಡೆಯ ಹಿಂದೆ ಅಡಗಿಕೂತಳು. ತೂರಾಡುತ್ತಾ ಬಂದ ಚಂದುನಾಯ್ಕ, ಕಿಟ್ಟನನ್ನು ಕರೆದು "ಎಲ್ಲಿ ನಿನ್ನ ತಾಯಿ? ಅವಳ ಸೀರೆ ಬಿಚ್ಚಿಹಾಕದಿದ್ದರೆ ನಾನು ಗಂಡಸೇ ಅಲ್ಲ"

ಎಂದು ಕಿರುಚಾಡತೊಡಗಿದ. ಕಿಟ್ಟ ನನಗೆ ಗೊತ್ತಿಲ್ಲವೆಂದು ಅಂಗಳವಲ್ಲಿದ್ದ ಅಡಿಕೆಯ ಹಾಳೆಯಲ್ಲಿ ಆಟವಾಡತೊಡಗಿದ. ಕಿಟ್ಟ ಗೊತ್ತಿಲ್ಲವೆಂದು ಹೇಳಿದ್ದು ಚಂದುನಾಯ್ಕನಿಗೆ ಎದುರುತ್ತರ ಕೊಟ್ಟಹಾಗೆ ಅನಿಸಿತು. ಕಿಟ್ಟಿಯ ಹತ್ತಿರ ಬಂದು ಅವನಿಗೆ ಎಡಗಾಲಿನಲ್ಲಿ ಒದೆಯುತೊಡಗಿದ. ಅವನ ಎಡಗಾಲು ತಾಗಿದ್ದೇ; ಮೊದಲೆ ಯೋಚಿಸಿಕೊಂಡವನಂತೆ ಕಿಟ್ಟ 'ಲಬೋ ಲಬೋ' ಎಂದು ಅಳತೊಡಗಿದ. ಅವನ ಅಳು ತಾರಕಕ್ಕೇರಿದರೂ ರುಕುಮಿಣಿಯೂ ಹಂಡೆಯ ಹತ್ತಿರದಿಂದ ಎದ್ದು ಬರಲಿಲ್ಲ. ಕಿಟ್ಟಿಯನ್ನು ಬಿಟ್ಟು ಚಂದುನಾಯ್ಕ ಅಂಗಳದಲ್ಲಿದ್ದ ಬಡಿಗೆಯನ್ನು ಕೈಗೆತ್ತಿಕೊಂಡು, "ಈ ಬೋಸುಡಿಯನ್ನು ಈವತ್ತು ಕೊಲ್ಲದೆ ಬಿಡುವುದಿಲ್ಲ" ಎಂದು ಅಂಗಳದಿಂದ ಮನೆಯೊಳಗೆ ಬಂದು ಎಲ್ಲಾ ಕಡೆಗೆ ಹುಡುಕಿ ನೋಡಿದ. ಎಲ್ಲಿಯೂ ರುಕುಮಿಣಿಯೂ ಕಾಣದ್ದರಿಂದ ಉಂಟಾದ ಸಿಟ್ಟನ್ನು ತಡೆಯಲಾಗದೆ ಚಂದುನಾಯ್ಕ ಬಡಿಗೆಯನ್ನು ಎತ್ತಿ ಉಪ್ಪಿನ ಹಂಡೆಗೆ ಬಿಸಾಕಿದ. ಉಪ್ಪಿನ ಹಂಡೆಯು ಒಡೆದುಹೋಯಿತು ಮತ್ತು ಅದರ ಹಿಂದೆ ಅಡಗಿ ಕುಳಿತಿದ್ದ ರುಕುಮಿಣಿಯು ಎದ್ದುನಿಂತಳು. ಚಂದುನಾಯ್ಕನು ಮಾತ್ರ ಒಂದು ಕ್ಷಣ ದಿಗ್ಭ್ರಾಂತನಾಗಿದ್ದ. ಒಡೆದ ಹಂಡೆ ಮತ್ತು ಅದರ ಪಕ್ಕದಿಂದ ಎದ್ದು ಬಂದ ರುಕುಮಿಣಿಯನ್ನು ಕಂಡು: ಸಾಕ್ಷಾತ್ ಕಾಳಿಯನ್ನು ನೋಡಿದಂತೆ: ಕಲ್ಲುರ್ಟಿಯ ನಾಲಿಗೆಯನ್ನು ವೀಕ್ಷಿಸಿದಂತೆ ನಿಶ್ಚಲನಾದ. ಅವನ ಅಮಲು ಇಳಿಯಿತು.

ಮತ್ತೊಂದು ದಿನ ಬೇಸಿಗೆಯ ಸಮಯದಲ್ಲಿ ಚಂದು ನಾಯ್ಕ ರಾತ್ರಿ ಹತ್ತೂವರೆ – ಹನ್ನೊಂದು ಗಂಟೆಯ ಹೊತ್ತಿಗೆ ನಮ್ಮ ತೋಟದ ಬೇಲಿಯ ಪಕ್ಕದಲ್ಲಿ ನಿಂತುಕೊಂಡು ಜೋರಾಗಿ ಕಿರುಚಾಡುತ್ತಿದ್ದ. ಕುಡಿದ ಅಮಲಿನಲ್ಲಿ ಹಾದಿಯಿಂದ ದೊಡ್ಡ ದೊಡ್ಡ ಕಲ್ಲುಗಳನ್ನು ಎತ್ತಿಕೊಂಡು ತೋಟದ ಒಳಗೆ ಬಿಸಾಡುತ್ತಿದ್ದ. ಮರುದಿನ ನಮ್ಮ ಮನೆಯಲ್ಲಿ ಯಾವುದೋ ಪೂಜೆಯ ಕಾರ್ಯವಿತ್ತು. ನೆಂಟರಿಷ್ಟರು ಬಂದು ಸೇರಿದ್ದರು. ಹಣ್ಣಡಿಕೆಯಿರುವ ಸಮಯದಲ್ಲಿ ಕಳ್ಳರ ಕಾಟ ಬೇರೆ. ಅಡಿಕೆ ತೋಟದಲ್ಲಿಯೇ ಒಂದು ಮಾಳ ಹಾಕಿ ಅದರೊಳಗೆ ತೋಟಕಾಯುವವರು ಮಲಗಿಕೊಳ್ಳುವುದು ನಮ್ಮ ಊರಿನಲ್ಲಿ ರೂಢಿ. ಆಗಾಗ ಇಡೀ ತೋಟಕ್ಕೆ ಸುತ್ತು ಬಂದು ಮತ್ತೆ ಮಲಗುವುದು ಕ್ರಮ. ಯಾರೂ ತೋಟ ಕಾಯುವುದಿಲ್ಲವೆಂದು ಗೊತ್ತಾದರೆ ಆದಿನ ತೆಂಗಿನ ಕಾಯಿಯೋ. ಹಣ್ಣಡಿಕೆಯೋ ಕಳವಾಗುವುದು ಖಾತ್ರಿ – ರಾತ್ರೋರಾತ್ರಿ. ಎಷ್ಟೇ ದೊಡ್ಡ ಅಡಿಕೆ ಮರವಿದ್ದರೂ ಅದಕ್ಕೆ ಹತ್ತಿ, ಕತ್ತಲೆಯಲ್ಲಿಯೇ ಅಡಿಕೆಯನ್ನು ಬಾಯಲ್ಲಿ ಕಚ್ಚಿ ನೋಡಿ ಹಣ್ಣಡಿಕೆಯಾದರೆ ಸದ್ದು ಬರದಂತೆ ಹರಿತವಾದ ಚೂರಿಯಲ್ಲಿ ಅದನ್ನು ಕೊಯ್ದು ಕೈಲಿ ಹಿಡಿದುಕೊಂಡು ಸರ್ರನೆ ಇಳಿದು ಬರುವ ಕಡು ಕಳ್ಳರಿಗೇನೂ ಕೊರತೆಯಿರಲಿಲ್ಲ.

ಇದಕ್ಕಾಗಿ ಅಡಿಕೆ ಮರದ ಬುಡದಲ್ಲಿ ಕೆಲವರು ಒಣಗರಿಯನ್ನು ಹಾಸುತ್ತಿದ್ದರು. ರಾತ್ರಿ ಯಾರಾದರೂ ತುಳಿದರೆ ಒಣ ಗರಿ ತುಳಿದ ಸದ್ದು ಬರಲಿ ಎಂದು. ಆದರೆ ಕಳ್ಳರು ಅದರ ಬುಡಕ್ಕೆ ತುಳಿಯದೆ ಮರದಿಂದ ಮರಕ್ಕೆ ಕದ್ದು ಹಾರುತ್ತಿದ್ದರು. ಇನ್ನು ಕೆಲವರು ಅಡಿಕೆ ತೋಟದಲ್ಲಿ ಅಡಿಕೆ ಬುಡದಲ್ಲಿ ಕೊಳಕು ಮಾಡಿ ಅದಕ್ಕೆ ಸೋಗೆ ಮುಚ್ಚುತ್ತಿದ್ದರು. ಈ ಥರದ ಯಾವ ಉಪಾಯವೂ ಹೆಚ್ಚು ಫಲಿಸುತ್ತಿರಲಿಲ್ಲ ಅನ್ನುವುದು ಬೇರೆ ಮಾತು.

ಆ ದಿನ ಚಂದುನಾಯ್ಕ ತೋಟದಲ್ಲಿರುವ ಮಾಳದ ಕಡೆಗೆ ಕಲ್ಲು ಬಿಸಾಡುತ್ತಾ ಬಯ್ಯುತ್ತಿರುವಾಗ ತೋಟ ಕಾಯಲು ಹೋದವರು ಯಾರೂ ಇರಲಿಲ್ಲ. ಆದರೆ ಅವನು ಜೋರಾಗಿ ಬಯ್ಯುತ್ತಿರುವುದು ಮನೆ ತನಕ ಕೇಳಿಸತೊಡಗಿತ್ತು. ತೋಟದ ಕಡೆಗೆ ಹೋಗಿ ಬರುತ್ತೇನೆಂದು ತಂದೆಯವರೂ ತೋಟದ ಕಡೆಗೆ ಹೋದರು. ಚಂದು ನಾಯ್ಕ ಅಶ್ಲೀಲವಾಗಿ ಬಯ್ಯುತ್ತಾ ಕಲ್ಲು ಬಿಸಾಡುತ್ತಿರುವುದು ನೋಡಿ ಕತ್ತಲೆಯಲ್ಲಿಯೇ ವಾಪಸಾಗಿ ಮನೆಯಲ್ಲಿರುವ ಎಲ್ಲರಿಗೂ ವಿಷಯ ತಿಳಿಸಿದರು. ಮನೆಗೆ ಬಂದ ನೆಂಟರ ಪೈಕಿಯಲ್ಲಿ ಅತ್ಯಂತ ಗಟ್ಟಿಮುಟ್ಟಾದವರೆಂದರೆ ತಮ್ಮಣ್ಣನವರು. ಹಾಗೆ ಅವರ ಹುರಿಗಟ್ಟಿದ ಮೀಸೆ ಮತ್ತು ಅವರ ಉಬ್ಬಿದ ಹೊಟ್ಟೆಯನ್ನು ನೋಡಿ ಮಕ್ಕಳಾದ ನಾವು ತುಂಬಾ ಭಯಪಡುತ್ತಿದ್ದೆವು. ತಮ್ಮಣ್ಣ ಎತ್ತಿಕೊಂಡು ಹೋಗ್ತಾರೆ ಎಂದರೆ ಅಳುವ ಮಕ್ಕಳು ಕೂಡಾ ಅಳು ನಿಲ್ಲಿಸಿ ಸುಮ್ಮನಾಗುತ್ತಿದ್ದರು. ಹೊಳೆಯಲ್ಲಿ ಮಗುಚಿ ಈಜುವುದು, ಮುಳುಗಿ ಕೂರುವುದು ಮಾಡುವ ಅವರ ಬಗ್ಗೆ ತುಂಬಾ ಗೌರವ ಉಂಟಾಗಲು ಕಾರಣವಿತ್ತು. ಅಷ್ಟೇ ಅಲ್ಲ, ತಮ್ಮಣ್ಣನವರ ಬೆಳಗಿನಲ್ಲಿ ಮಾಡುವ ಸೂರ್ಯ ನಮಸ್ಕಾರ ಅವರನ್ನು ಗಟ್ಟಿಮುಟ್ಟು ಮಾಡಿರಿಸಿತು ಅಂತ ನಾವೆಲ್ಲರೂ ನಂಬಿದ್ದೆವು. ಬೆಳಗಿನ ಜಾವ ಸೂರ್ಯ ನಮಸ್ಕಾರ ಮಾಡಿ ಸ್ನಾನ ಮಾಡಿಕೊಂಡು ಬಂದು ಜಪಕ್ಕೆ ಕೂತರೆ ಅರ್ಧ ಗಂಟೆಯಾದರೂ ಏಳುತ್ತಿರಲಿಲ್ಲ. ಅವರಷ್ಟು ಧೈರ್ಯವು ಯಾರಿಗೂ ಇರುತ್ತಿರಲಿಲ್ಲ. ಎರಡು ಹುಬ್ಬುಗಳ ನಡುವೆ ಸದಾ ಒಂದು ಕುಂಕುಮದ ಬೊಟ್ಟು ಇಟ್ಟುಕೊಳ್ಳುತ್ತಿದ್ದರು. ತಂದೆಯವರು ಹೇಳಿದ್ದ ವಿಷಯವನ್ನು ತಿಳಿದ ಕೂಡಲೆ ತಮ್ಮಣ್ಣ ಭಟ್ಟರು, "ಅವನಿಗೆ ನಾನು ಬಿಸಿ ಮುಟ್ಟಿಸುತ್ತೇನೆ" ಎಂದು ಹೇಳುತ್ತಾ ಕೈಯಲ್ಲಿ ಒಂದು ಟಾರ್ಚು ಹಿಡಿದುಕೊಂಡು ಬಳಸು ದಾರಿಯಲ್ಲಿ ಹೋಗಿ ಚಂದುವಿನ ಬೆನ್ನ ಹಿಂದೆ ನಿಂತರು. ಚಂದುನಾಯ್ಕ ಬೈಯ್ಯುವುದರಲ್ಲಿಯೆ ಮಗ್ನನಾಗಿದ್ದ.

ಚಂದುನಾಯ್ಕ ಬಯ್ಯಲು ಕಾರಣವಿತ್ತು. ಆ ದಿನ ಮಧ್ಯಾಹ್ನ ಅವನ ದನವೊಂದು ತೋಟಕ್ಕೆ ನುಗ್ಗಿತ್ತು. ಅಮ್ಮ ಅದನ್ನು ಓಡಿಸಿದರು. ದನ ಅವಸರದಲ್ಲಿ

ಬೇಲಿ ಹಾರಲು ಹೋಗಿ ಕಾಲಿಗೆ ಗಾಯ ಮಾಡಿಕೊಂಡಿತ್ತು. ಅದರ ಕಾಲಿಗೆ ಗಾಯವಾಗಲು ನನ್ನ ಅಮ್ಮನೇ ಕಾರಣವೆಂದೋ, ದನ ತೋಟಕ್ಕೆ ನುಗ್ಗಿದರೆ ಆ ವಿಷಯ ಚಂದುವಿಗೆ ಹೇಳಬೇಕಿತ್ತು: ಅದನ್ನು ಹೊಡೆಯಲು ಹೋಗಬಾರದಿತ್ತು ಎಂದೂ ಅವನ ಬೈಗುಳದಿಂದ ತಿಳಿಯಿತು.

ಬಯ್ಯುತ್ತಾ ಕತ್ತಲೆಯಲ್ಲಿ ತೋಟಕ್ಕೆ ಕಲ್ಲು ಹೊಡೆಯುತ್ತಾ ನಿಂತಿದ್ದ ಚಂದುನಾಯ್ಕನಿಗೆ ಹಿಂದುಗಡೆಯಿಂದ ತಮ್ಮಣ್ಣ ನಿಂತಿದ್ದು ಕಾಣಿಸಲಿಲ್ಲ. ಚಂದು ಬಗ್ಗಿ ಕಲ್ಲು ಹೆಕ್ಕಬೇಕೆನ್ನುವಷ್ಟರಲ್ಲಿ ಅವನ ಕೈಯನ್ನು ಹಿಂದುಗಡೆಯಿಂದ ಬಂದು ಹಿಡಿದುಕೊಂಡ ತಮ್ಮಣ್ಣನನ್ನು ನೋಡಿ ಚಂದು ಹೆದರಿ ಅಳುಕಿ ಬಿಟ್ಟ. ತಮ್ಮಣ್ಣ ಸುಮ್ಮನಿರಲಿಲ್ಲ. ಅವನ ಬೆನ್ನಿಗೆ ಎರಡು ಗುದ್ದು ಕೊಟ್ಟರು. ಚಂದು, 'ದಮ್ಮಯ್ಯ' ಅಂದ. ತಮ್ಮಣ್ಣ ಹೆಗಲಿನಲ್ಲಿದ್ದ ಬೈರಾಸಿನಲ್ಲಿ ಅವನ ಕೈಯನ್ನು ಹಿಡಿದು ಕಟ್ಟಿಹಾಕಿ, 'ನಡಿಯೋ ಮನೆಗೆ' ಅಂದರು. ಚಂದುವಿಗೆ ಕುಡಿದ ಅಮಲು ಇಳಿದು ಹೆದರಿಕೆ ಆವರಿಸಿಕೊಂಡಿತು. ಆದರೆ ತಮ್ಮಣ್ಣ ಏನೋ ಹೇಳಿದರೂ ಬಿಡಲಿಲ್ಲ. ತಪ್ಪಿಸಿಕೊಂಡು ಓಡಿ ಹೋದರೆ ಕಷ್ಟವೆಂದು ಅರ್ಥಮಾಡಿಕೊಂಡ ಚಂದು ಅವರನ್ನು ಹಿಂಬಾಲಿಸಿದ. ಮನೆಯ ಅಂಗಳಕ್ಕೆ ಬಂದ ತಕ್ಷಣ ಅವನ ಬೆನ್ನಿಗೆ ಮತ್ತೆರಡು ಗುದ್ದುಕೊಟ್ಟು, ನನ್ನ ತಂದೆಯ ಕಾಲಿಗೆ ಬೀಳುವಂತೆ ಹೇಳಿದರು. ಅವನು ನನ್ನ ತಂದೆಯ ಕಾಲಿಗೆ ಅಡ್ಡಬಿದ್ದು, 'ತಪ್ಪಾಯಿತು ಇನ್ನು ಮುಂದೆ ಇಂಥ ತಪ್ಪನ್ನು ಮಾಡುವುದಿಲ್ಲ' ಎಂದು ಹೇಳಿದ. ತಮ್ಮಣ್ಣ ಅಷ್ಟಕ್ಕೆ ಬಿಡದೆ ಅಂಗಳದಲ್ಲಿಯೇ ಅವನ ತಲೆಗೆ ನಾಕು ಕೊಡ ತಣ್ಣೀರು ಹಾಕಿದರು. ತಣ್ಣೀರಿನಿಂದ ಚಂದು ಚಳಿಯಲ್ಲಿ ನಡುಗತೊಡಗಿದ.

ಚಂದುನಾಯ್ಕ ಕೆಲವು ತಿಂಗಳುಗಳ ತನಕ ನಮ್ಮ ತೋಟದ ಬದಿಯ ಹಾದಿಯಲ್ಲಿ ಹೆಚ್ಚು ಗಲಾಟೆ ಮಾಡದೆ ಹೋಗುತ್ತಿದ್ದ. ಆದರೆ ಮನೆಗೆ ತಲುಪಿದ ಕೂಡಲೇ ಯಥಾ ಪ್ರಕಾರ ಹೆಂಡತಿಗೆ ಹೊಡೆಯುವುದು, ಬೈಯುವುದು ಮಾಡುತ್ತಿದ್ದ. ಜೋರು ಮಳೆ ಬಂದು ಕೆರೆ ಬಾವಿಗಳು ತುಂಬಿಕೊಂಡು ಗದ್ದೆಗಳ ನಾಟಿ ಮುಗಿದಿದ್ದ ದಿನದಲ್ಲಿ ಚಂದುನಾಯ್ಕ ಮತ್ತೊಂದು ಕತೆಯನ್ನು ಸೃಷ್ಟಿಸಿದ. ಕೆರೆ ಮತ್ತು ಬಾವಿಗಳಲ್ಲಿ ನೀರು ತುಂಬಿ ಹರಿದುಹೋಗುತ್ತಿದ್ದ ಸಮಯ ಸುತ್ತ ಹಸಿರು ಕಾಣಿಸುತ್ತಿತ್ತು. ಚಂದುನಾಯ್ಕನ ಮನೆಯ ಎದುರು ಬೇಸಿಗೆಯಲ್ಲಿ ನೀರು ಹಾಯಿಸಲೆಂದು ಏತ ಮಾಡಿಕೊಂಡಿದ್ದರು. ಏತದಿಂದ ನೀರೆತ್ತಲು ಸಹಾಯವಾಗುವಂತೆ ಕೆರೆಯ ಪಕ್ಕ ಎರಡು ಈಚಲು ಮರದ ದಪ್ಪನೆಯ ತುಂಡುಗಳನ್ನು ಹಾಕಿದ್ದರು. ಮತ್ತು ಏತದಿಂದ ನೀರೆತ್ತಿ ಅದು ಹರಿದು ಹೋಗುವಂತೆ ಮಾಡಲು ಈಚಲು ಮರದಿಂದ ತಯಾರಿಸಿದ ಕಾಲುವೆಯ ಥರದ ತುಂಡನ್ನು

ಅದಕ್ಕೆ ಕಟ್ಟಿದ್ದರು. ಆ ಈಚಲು ಮರದ ದಂಡೆ(ತುಂಡು) ಮೇಲೆ ಹೋಗಿ ಚಂದುನಾಯ್ಕ ಒಂದು ದಿನ ಸಂಜೆ ಕುಳಿತಿದ್ದ. ಆ ದಿನವೂ ಅಷ್ಟೆ ಅವನು ಕುಡಿದದ್ದು ಅಷ್ಟಿಷ್ಟಲ್ಲ! ಅಲ್ಲಿಂದಲೇ ಕೂತು ಹೆಂಡತಿಯನ್ನು ಬೈಯ್ಯುತ್ತಾ "ನಾನು ಕೆರೆಗೆ ಬಿದ್ದು ಸಾಯ್ತೇನೆ. ಈ ಮುಂಡೆ ಯಾರ ಜೊತೆಗಾದರೂ ಓಡಿ ಹೋಗಲಿ ನನಗೇನು?" ಎಂದು ಜೋರಾಗಿ ಹೇಳುತ್ತಿದ್ದ. ಮಳೆಗಾಲವಾದರೂ ಮಳೆಯಿಲ್ಲದ ಹೊತ್ತಿನಲ್ಲಿ ಹೋಗಿ ಅವನು ಅದರ ಮೇಲೆ ಕುಳಿತು ಬೈಯುವುದನ್ನು ನೋಡಿದ ರುಕುಮಿಣಿಯು ಮನೆಯ ಹಿಂದಿನ ಬಾಗಿಲಿನಿಂದ ಓಡಿಕೊಂಡು ನಮ್ಮ ಮನೆಗೆ ಬಂದಳು. ಅವಳ ಜೊತೆಗೆ ಅವಳ ಬಾಲದಂತೆ ಕಿಟ್ಟಿಯೂ ಕೂಡಾ. ಬಂದವಳೇ ನನ್ನಮ್ಮನ ಕಾಲಿಗೆ ಬಿದ್ದು, "ಹೇಗಾದರೂ ನನ್ನ ಗಂಡನ ಜೀವ ಉಳಿಸಿ" ಎಂದಳು. ಅವಳ ಅಳುವಿನಿಂದ ಬೇಜಾರು ಪಟ್ಟುಕೊಂಡ ನನ್ನಮ್ಮ ಅಪ್ಪನಿಗೆ 'ಹೋಗಿ ನೋಡಿ ಬನ್ನಿ' ಎಂದರು. ಆಗ ಮೂರೋ – ನಾಲ್ಕೋ ಗಂಟೆಯಿರಬಹುದು. ಅಪ್ಪ ಹೋಗುವಾಗ ಅಪ್ಪನ ಹಿಂದೆ ನಾನು ಕೂಡಾ ಹೆದರಿಕೊಂಡು ಹೋದೆ. ಚಂದುನಾಯ್ಕ ಈಚಲು ಮರದ ದಡೆಯ ಮೇಲೆ ಕುಳಿತಿದ್ದ. ಅವನು ನೀರಿಗೆ ಬೀಳುವುದು ಖಚಿತ"! ಬರೀ ಕೌಪೀನದಲ್ಲಿದ್ದಾನೆ. ಈಚಲು ಮರದ ದಂಡೆಯನ್ನು ಹಿಡಿದುಕೊಂಡಿದ್ದಾನೆ. ಜಾರಿಬಿದ್ದರೆ ಅವನು ಸಾಯುತ್ತಾನೆ ಎನ್ನುವುದು ಎಲ್ಲರಿಗೂ ಅರ್ಥವಾಯಿತು. ರುಕುಮಿಣಿ ಅಳುತ್ತಿದ್ದಳು. ತಂದೆಯೂ, 'ಹೌದು ಚಂದು, ನೀನು ಸಾಯುವುದೇನೋ ಸರಿ. ಸಾಯುವಾಗ ಹೆಂಡತಿ – ಮಗನನ್ನು ಜೈಲಿಗೆ ಹಾಕಬೇಕೂಂತ ಇದ್ದಿಯಾ?' ಎಂದು ಕೇಳಿದರು. ಚಂದು ಅದಕ್ಕೆ, "ಹೌದು, ನಾನು ನೀರಿಗೆ ಬಿದ್ದು ಸಾಯ್ತೇನೆ. ಈ ಬೋಸುಡಿ, ರಂಡೆ ಜೈಲಿಗೆ ಹೋಗಲಿ ನನಗೇನಾಗಬೇಕಾಗಿದೆ?" ಅಂದ.

"ನಿನಗೆ ಸಾಯೋದಕ್ಕೆ ಬೇರೆ ಎಲ್ಲೂ ಜಾಗ ಇರ್ಲಿಲ್ಲವಾ?"

"ನಾನು ಸತ್ತರೆ ನಿಮಗೇನು?"

"ನನಗೇನೂ ಇಲ್ಲ, ಆದ್ರೆ ನೀರಿಗೆ ಬಿದ್ದು ಸತ್ತವರು ಪ್ರೇತವಾಗ್ತಾರೆ"

"ಪ್ರೇತವಾಗಿಯಾದರೂ ಹೆಂಡತಿ ಮಕ್ಕಳನ್ನು ಹಿಡಿಯದೆ ಬಿಡುವುದಿಲ್ಲ"

ಚಂದು ಅಷ್ಟು ಬೇಗನೆ ಮಾತಿಗೆ ಬಗ್ಗುವುದಿಲ್ಲವೆಂದು ತಿಳಿಯಿತು. ನನ್ನ ತಂದೆಯವರು ಸ್ವಲ್ಪ ಆಲೋಚಿಸಿ, "ರುಕುಮಿಣಿ, ಅವನು ಸಾಯ್ತೇನೆ ಅಂತಾನೆ ಸಾಯಲಿ, ಅಂದ ಹಾಗೆ ಆ ನಿಮ್ಮ ಕೋಳಿ ಕಟ್ಟದ ಕೋಳಿ ಏನಾಯಿತು? ಸತ್ತುಹೋಯ್ತಾ – ಅದರ ಸಾರು ಮಾಡಿ ರೊಟ್ಟಿ ತಿನ್ನಿ. ಬನ್ನಿ ಹೋಗುವಾ" ಎಂದರು. ಕೋಳಿ ಅಂಕದ ಹುಂಜ ಸತ್ತು ಹೋಯಿತು ಎನ್ನುವ ವಿಷಯ ತಿಳಿದ

ಕೂಡಲೇ ತಂದು, "ಏನು – ಕೋಳಿ ಸತ್ತು ಹೋಯ್ತಾ? ಅದರ ಸಾರು ಮಾಡಿದ್ದಾರಾ?" ಎಂದು ಕೇಳಿದ. ಕೋಳಿ ಸಾರು ಮತ್ತು ಅಕ್ಕಿಯ ರೊಟ್ಟಿ ಅಂದರೆ ಜೀವ ಬಿಡುವ ಚಂದು ಸಾಯುವ ವಿಚಾರವನ್ನು ಮರೆತ. ವಾಪಸ್ಸು ಬರಲು ಕೈ – ಕಾಲುಗಳನ್ನು ಬಳಸಿಕೊಂಡ. ಅವನು ದಡದ ಹತ್ತಿರ ಬರುವುದನ್ನು ನೋಡಿದಾಗ ಮಂಗನ ನೆನಪು ಬಂತು. ಅಂತೂ ಆ ದಿನ ಅವನ ಪ್ರಾಣ ಉಳಿಯಿತು.

ದಿನದಿಂದ ದಿನಕ್ಕೆ ಅವನು ಕುಡಿಯುವುದು ಹೆಚ್ಚಾಯಿತೇ ವಿನಾ ಕಡಿಮೆಯಂತೂ ಆಗಲೇ ಇಲ್ಲ. ಅವನು ಕುಡಿಯುವುದು ಹೆಚ್ಚಾದಂತೆ ರುಕುಮಿಣಿಯ ದುಃಖ ಕೂಡಾ ಹೆಚ್ಚಾಗತೊಡಗಿತು. ಅವಳಿಗೆ ನೆಮ್ಮದಿಯು ಭಂಗವಾಗತೊಡಗಿತು. ಅವಳು ಅಳುವುದನ್ನು ನೋಡುತ್ತಲೇ ಕಿಟ್ಟಿ ಬೆಳೆದ. ಅವನಿಗೂ ಮೀಸೆಯು ಚಿಗುರತೊಡಗಿತು. ಕೂಲಿ ಕೆಲಸಕ್ಕೆ ಹೋಗಲು ಪ್ರಾರಂಭ ಮಾಡಿದ ಮೇಲೆ ಕಿಟ್ಟಿಯನ್ನು ಬೈಯುವ ಧೈರ್ಯ ಚಂದುನಾಯ್ಕನಿಗೂ ಬರಲಿಲ್ಲ. ಮಗನು ಗಟ್ಟಿಮುಟ್ಟಾದ ಆಳಾಗಿರುವುದು ಮಾತ್ರವಲ್ಲ –ದುಡಿದುಬರುವುದು ರುಕುಮಿಣಿಗೆ ಸಂತೋಷವನ್ನುಂಟು ಮಾಡುತ್ತಿತ್ತು. ಮಗ ಮನೆಯಲ್ಲಿದ್ದರೆ ಚಂದು ನಾಯ್ಕ ಹೆಂಡತಿಗೆ ಹೊಡೆಯುವುದು ಬಡಿಯುವುದು ಮಾಡುತ್ತಿರಲಿಲ್ಲ. ಚಂದು ಏನಾದರೂ ಬೈಯಲು ಪ್ರಾರಂಭಿಸಿದರೆ ಕಿಟ್ಟ "ಹೂಂ, ಶುರುವಾಯ್ತು ನಿಮ್ಮ ಪಿರಿ ಪಿರಿ" ಎಂದು ಹೇಳುತ್ತಿದ್ದ. ಇಲ್ಲವಾದರೆ, "ಹೊ, ಗೇಯುವುದು ಅಷ್ಟರಲ್ಲಿಯೇ ಇದೆ. ಮೂಗಿನ ತುದಿಯ ತನಕ ಕುಡಿಯುವುದು ಮಾತ್ರ ಬಿಡಲಿಲ್ಲ"ವೆಂತಲೂ, "ಕುಡಿಯುವುದಕ್ಕೆ ಹೆಂಡತಿಯನ್ನು ಅಡವಿಡಲು ತಯಾರು" ಎಂತಲೋ ಹೇಳಿ ಚಂದುನಾಯ್ಕನ ಬಾಯಿ ಮುಚ್ಚಿಸುತ್ತಿದ್ದ.

ಒಂದು ದಿವಸ ಕಿಟ್ಟಿ ಕೆಲಸಕ್ಕೆ ಹೋದವನು ಮನೆಗೆ ಬರುವಾಗ ಚಂದುನಾಯ್ಕನ ಓಡ್ಡೋಲಗ ಪ್ರಾರಂಭವಾಯಿತು. ಚಂದು ರುಕುಮಿಣಿಯ ಜುಟ್ಟು ಹಿಡಿದು ಅವಳಿಗೆ ಹೊಡೆಯುತ್ತಿದ್ದ. ಅವಳು "ಹೂಂ ಕೊಲ್ಲಿ" ಎಂದು ಹೇಳುತ್ತಿದ್ದಳು. ಅವಳ ಕಣ್ಣೀರು ಬತ್ತಿಹೋಗಿತ್ತು. ಅಷ್ಟು ಹೊತ್ತಿಗೆ ಸರಿಯಾಗಿ ಕಿಟ್ಟ ಬಂದ. ಅವನು ಬಂದುದನ್ನು ನೋಡಿ ಚಂದು ಹೆಂಡತಿಯ ಜುಟ್ಟನ್ನು ಬಿಟ್ಟ. ಕಿಟ್ಟ ಮಾತ್ರ ಉಗ್ರವಾದ ಸಿಟ್ಟಿನಿಂದ ಚಂದುವಿನ ಕೈಯನ್ನು ಹಿಡಿದುಕೊಂಡು ಅವನನ್ನು ಅಪ್ಪನೆಂದು ನೋಡದೆ ದಪ ದಪನೆ ಬಾರಿಸಿದ. ಚಂದು ಅಯ್ಯೋ ಎಂದರೂ ಬಿಡದೆ ಅವನ ಮೂಗಿಗೆ ಹೊಡೆದ. ಚಂದುವನ್ನು ದರದರನೆ ಎಳೆದುಕೊಂಡು ಹೋಗಿ ಕೋಣೆಯಲ್ಲಿ ಕೂಡಿ ಹಾಕಿದ. "ಎಲ್ಲಿಯಾದರೂ ಅವನಿಗೆ ಊಟ ಹಾಕಿದ್ದು ಗೊತ್ತಾದರೆ ನಿನ್ನನ್ನು ಒದ್ದು ಹೊರಗೆ ಹಾಕ್ತೇನೆ" ಅಂತ ತಾಯಿಯನ್ನು

ಹೆದರಿಸಿದ. ರುಕುಮಿಣಿ, "ನಾನ್ಯಾಕೆ ಅವರಿಗೆ ಊಟ ಹಾಕಲಿ ಸತ್ತರೆ ಸಾಯ್ತಾರೆ" ಎಂದಳು. ಕೋಣೆಯೊಳಗೆ ಚಂದುನಾಯ್ಕ ಬೈಯುತ್ತಲೇ ಇದ್ದ. ರುಕುಮಿಣಿಯಾಗಲೀ, ಕಿಟ್ಟನಾಗಲೀ ಅದಕ್ಕೆ ಕಿವಿಗೊಡಲಿಲ್ಲ. ಒಂದು ದಿನವಿಡೀ ಕೋಣೆಯಲ್ಲಿಯೇ ಉಚ್ಚೆ – ಗಿಚ್ಚೆ ಮಾಡಿಕೊಂಡು ಹಸಿವಿನಿಂದ ಇದ್ದ ಚಂದುನಾಯ್ಕನನ್ನು ಮರುದಿನ ಊರವರು ಬಂದು ಬಿಡಿಸಿದರು. ಅವನ ಮುಖದಲ್ಲಿ ಆದ, ಗಾಯದ ಗೆರೆ ಮತ್ತು ಕಾಲಿನಲ್ಲಿ ಎದ್ದ ಬಾವು ಸುಮಾರು ದಿನಗಳ ತನಕ ಇತ್ತು. ಆ ದಿನ ಊರವರು ಪಂಚಾಯಿತಿ ಮಾಡಿ ಚಂದುನಾಯ್ಕ ಮತ್ತು ಅವನ ಹೆಂಡತಿಗೆ ಪಾಲು ಮಾಡಿದರು. ಕಿಟ್ಟ ಮತ್ತು ಅವನ ತಾಯಿ ಒಂದು ಚಿಕ್ಕ ಮನೆಯಲ್ಲಿ ವಾಸಿಸತೊಡಗಿದರು. ಚಂದುನಾಯ್ಕನಿಗೆ ಮನೆ ಬೇರೆಯಾಗಿತ್ತು. ಅನಂತರ ಚಂದುನಾಯ್ಕ ಹೆಂಡತಿ ಮತ್ತು ಮಗನನ್ನು ಮಾತಾಡಿಸುತ್ತಿರಲಿಲ್ಲ. ಸಾಲ ಮಾಡಿ ವಿಪರೀತ ಕುಡಿಯುತ್ತಿದ್ದ. ಒಂದು ದಿನ ವಾಂತಿ–ಭೇದಿ ಪ್ರಾರಂಭವಾಯಿತು. ಹಳದಿ ಕಾಮಾಲೆ ಬಂದರೂ ಅವನು ಕುಡಿಯುವುದು ಬಿಡಲಿಲ್ಲ. ಸಾಯುವ ಹೊತ್ತಿಗೆ ಕೆರೆದರೆ ಬೆರಳಿನ ತುದಿಗೆ ಅರಿಶಿನ ಹಚ್ಚಿಕೊಂಡಂತೆ ಆಗುತ್ತಿತ್ತು ಎಂದು ಅವನ ಹೆಣ ಎತ್ತಲು ಹೋದವರು ಹೇಳಿದರು. ಅವನ ಅಂತ್ಯ ಸಂಸ್ಕಾರಕ್ಕೆ ಮಾತ್ರ ರುಕುಮಿಣಿ ಹಾಗೂ ಕಿಟ್ಟ ಬರಲಿಲ್ಲ. ಅಷ್ಟು ಹೊತ್ತಿಗೆ ಕಿಟ್ಟ ಬೇರೆ ರೀತಿಯ ಜೀವನಕ್ಕೆ ಮುನ್ನುಡಿ ಬರೆದಾಗಿತ್ತು.

* * * * *

**ರುಕುಮಿಣಿಯು ಉದ್ದಕಾಲು ಲಕ್ಷ್ಮಿಯಾಗಿರಲಿಲ್ಲ. ಅವಳು ದ್ರೌಪದಿಯೂ ಅಲ್ಲ. ಚಂದುನಾಯ್ಕ ರಾಮನಲ್ಲ. ಆದರೆ ಅದೇ ರುಕುಮಿಣಿ: ಚಂದುನಾಯ್ಕರೂ ನನಗೆ ಪರೋಕ್ಷ ಪಾಠ ಹೇಳಿದವರೇ. ಚಂದುನಾಯ್ಕನಂತೆ ಕುಡಿದು ಬೈಯುವುದು: ಹಗಲು ಬೆಪ್ಪನಂತಿರುವುದು ಸಾಧ್ಯವಾಗಲೇ ಇಲ್ಲ.**

1992
ಫೆಬ್ರವರಿ
27

ಬತ್ತಲಾಗದೆ ಬಯಲು ಸಿಕ್ಕದಿಲ್ಲಿ !

"ಅಗೆದಾಗ ನಕ್ಕದ್ದು ನುಣುಪು ಕುಂಕುಮ ಭೂಮಿ
ಗುದ್ದಲಿಯ ಕೆಲಸ ಅಲ್ಲಿಗೆ ನಿಂತಿದೆ"

ಆಗ ನನ್ನ ವಯಸ್ಸು ಹದಿನೆಂಟು. ಅವಳಿಗೆ ಹದಿನಾರು. ಅವಳು ನನಗೆ ದೂರದ ಸಂಬಂಧಿ. ಎಸ್.ಎಸ್.ಎಲ್.ಸಿಯಲ್ಲಿ ಒಂದೆರಡು ವರ್ಷ ನಪಾಸಾಗಿ ಮನೆಯಲ್ಲಿದ್ದಳು. ನಾನು ಓದುತ್ತಿದ್ದೆ. ಬೆಳಿಗ್ಗೆ ಎದ್ದು ಯೋಗಾಸನ. ಸಂಜೆ ಸೂರ್ಯ ನಮಸ್ಕಾರ ಇತ್ಯಾದಿ ಮಾಡುತ್ತಿದ್ದೆ. ಮನಸ್ಸು ಕದಡಿ ಹೋಗದಂತೆ ಎಚ್ಚರವಹಿಸಿಕೊಂಡಿದ್ದ ದಿನಗಳವು. ಒಂದಾನೊಂದು ಕಾಲದ ಕಥೆಗಳನ್ನು ಕುತೂಹಲದಿಂದ ಓದುತ್ತಿದ್ದೆ. 'ಮಗಳಿಗೆ ತಂದೆಯ ಓಲೆಗಳು' ಕೃತಿಯನ್ನು ಓದಿದ್ದು ಆ ವರ್ಷದಲ್ಲಿ. ನನಗೆ ಏನಿಲ್ಲವೆಂದರೂ ಈ ಕೃತಿಯಿಂದ ಇಂದಿರಾಗಾಂಧಿಯ ಕುರಿತು ಕುತೂಹಲ ಹುಟ್ಟಿತು. ಇಂದಿರಾಗಾಂಧಿಯ ಬಗ್ಗೆ ಬೇರೆ ಕೆಲವು ವಿಷಯಗಳಲ್ಲಿ ವಿಪರೀತವಾದ ಸಿಟ್ಟಿತ್ತು. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ತುರ್ತುಪರಿಸ್ಥಿತಿಯ ಮೂಲಕ ಹೇರಿದವರು. ತಂದೆಯ ಹೆಸರನ್ನು ಅಧಿಕಾರಕ್ಕೆ ಬರಲು ಬಳಸಿಕೊಂಡವರು ಅಂತ. ಕಾಂಗ್ರೆಸಿಗೆ ಮಹಾತ್ಮಾಗಾಂಧಿಯವರ ಹೆಸರು ಬೇಕಿತ್ತು ಅವರ ತತ್ವಗಳಲ್ಲಿ ಕಾಂಗ್ರೆಸಿಗೆ ನಂಬಿಕೆಯಿರಲಿಲ್ಲ ಎಂಬುದರ ಅರಿವಿತ್ತು ಇಂದಿರಾಗಾಂಧಿಯವರು ಹೆಸರು ಕೇಳಿದರೆ ನನಗೆ ಆಗುತ್ತಿರಲಿಲ್ಲ. ಯಾರ್ಯಾರು ಇಂದಿರಾಗಾಂಧಿಯ ಬಗ್ಗೆ ತೀವ್ರವಾಗಿ ಪ್ರತಿಕ್ರಿಯಿಸುತ್ತಿದ್ದರೋ ಅವರೆಲ್ಲಾ ನನಗೆ ಪ್ರಿಯರಾಗಿದ್ದರು.

ಆಗ ಬೇಸಿಗೆಯ ರಜಾ ದಿನ. ಬಿಸಿಲ ಬೇಗೆಯು ತಡೆಯಲಾಗದಷ್ಟು ಕಠಿಣವಾಗಿತ್ತು. ಹನ್ನೆರಡು ಗಂಟೆಯು ದಾಟಿದರೆ ಧಗೆಯಲ್ಲಿ ಬೆವರಿ ಒದ್ದೆಯಾಗುತ್ತಿದ್ದ ಗಳಿಗೆ. ಬಿಸಿಲೇರುವ ದಿನಗಳಲ್ಲಿ ಒಂಥರವಿದ್ದರೆ, ಚಳಿಗಾಲದಲ್ಲಿ ಮತ್ತು ಮಳೆಗಾಲದಲ್ಲಿ ಮತ್ತೊಂದು ಥರದ ಜೀವನ ಕ್ರಮವಿತ್ತು. ಮಳೆಗಾಲದಲ್ಲಿ ಮನೆಯಿಂದ ಹೊರಗೆ ಕಾಲಿಡುವಂತಿಲ್ಲ. ಸದಾ ವಟಗುಟ್ಟುವ ಕಪ್ಪೆಗಳು. ತುಂಬಿನಿಂತ ಕೆರೆ – ಬಾವಿಗಳು, ಮಳೆಗಾಲದ ಚಿತ್ರಣವಾಗಿದ್ದರೆ ಬೇಸಿಗೆಯ ದಿನಗಳು ಅದಕ್ಕಿಂತ ಭಿನ್ನ. ಮೈಮೇಲೆ ಎಷ್ಟು ಕಡಿಮೆ ಬಟ್ಟೆಯಿದ್ದರೆ ಅಷ್ಟು ಒಳ್ಳೆಯದು ಎಂದ

ಅನಿಸುವ ದಿನಗಳು ಅವು. ಗಂಡಸರು ಸೊಂಟಕ್ಕೆ ಬಟ್ಟೆ ಧರಿಸುವುದು ಬಿಟ್ಟರೆ ಬೇರೆ ಯಾವ ಬಟ್ಟೆಯನ್ನು ಧರಿಸುತ್ತಿರಲಿಲ್ಲ. ಅದು ನಾಚಿಕೊಳ್ಳುವ ಅಥವಾ ಸಂಕೋಚಪಡುವ ವಿಷಯವಾಗಿರಲಿಲ್ಲ. ಕೆಲವರು ಪೇಟೆಗೆ ಹೋಗುವುದಿದ್ದರೂ ಹೆಗಲಿಗೆ ಒಂದು ಶಾಲು ಮಾತ್ರ ಹೊದೆದುಕೊಳ್ಳುತ್ತಿದ್ದರು.

ಬೇಸಿಗೆಯ ದಿನಗಳಲ್ಲಿ ಕೆರೆಗಳ ನೀರು ಬತ್ತಿ ಹೋಗಿರುತ್ತಿತ್ತು. ಕೆಲವರು ಕೆರೆಯಲ್ಲಿಯೇ ಮತ್ತಷ್ಟು ಗುಂಡಿ ತೆಗೆದು ಕುಡಿಯುವ ನೀರಿಗೆ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದರು. ಉಳಿದದ್ದು ದೂರದ ವಿಷಯ. ಆದರೆ ಕುಡಿಯುವ ನೀರು ಒಂದೆರಡು ಕೊಡ ಸಿಕ್ಕಿದರೂ ಸಾಕು ಅದೇ ಪುಣ್ಯ. ಗುಡ್ಡದ ತುದಿಯಲ್ಲಿ ಮನೆ ಮಾಡಿದವರು ಕುಡಿಯುವ ನೀರಿಗೆ ತತ್ವಾರ ಅನುಭವಿಸಿ ಕೆಳಗಡೆಗೆ ಇಳಿದು ಬಂದು ಯಾರಾದಾದರೂ ಬಾವಿಯಿಂದಲೋ, ಕೆರೆಯಿಂದಲೋ ತೆಗೆದುಕೊಂಡು ಹೋಗುತ್ತಿದ್ದರು. ಅಡಿಕೆಯ ತೋಟ ಮಾಡಿದವರಿಗೆ ಒಂದೋ ಎರಡೋ ಕೆರೆ – ಬಾವಿಯಿರುವುದು ಮಾಮೂಲಿ. ಒಂದು ಕೆರೆಯ ನೀರನ್ನು ಕುಡಿಯುವುದಕ್ಕೆ ಬಳಸಿದರೆ ಮತ್ತೊಂದು ಕೆರೆಯಿಂದ ಅನ್ಯ ಜಾತಿಯವರು ನೀರು ತೆಗೆದುಕೊಂಡು ಹೋಗಲು ಅವಕಾಶ ಕಲ್ಪಿಸುತ್ತಿದ್ದರು. ತೀರಾ ತೀರಾ ಕೆಳಜಾತಿಯವರು ಬಂದರೆ ಮೇಲು ಜಾತಿಯವರು ಅವರ ಕೊಡಗಳಿಗೆ ನೀರೆತ್ತಿ ಹೊಯ್ಯುತ್ತಿದ್ದರು. ನೀರಿಗಾಗಿ ಎರಡು – ಮೂರು ಮೈಲು ನಡೆಯುವುದು ಸಾಮಾನ್ಯ ದೃಶ್ಯ.

ಕೆರೆ ಮತ್ತು ಬಾವಿಗಳ ಕೆಸರೆತ್ತುವುದು ಇಂಥ ದಿನಗಳ ಮಾಮೂಲಿ ಕೆಲಸ. ಕೆರೆಗಳ ಕೆಸರೆತ್ತುವ ವಿಷಯ ತಿಳಿದರೆ ಮೀನು, ಆಮೆ, ಏಡಿ ತಿನ್ನುವವರು ಅವುಗಳಿಗಾಗಿ ಕಾಯುತ್ತಿರುವುದು ಸ್ವಾರಸ್ಯಕರ ಸಂಗತಿಯಾಗಿತ್ತು. ಆಮೆ ಸಿಕ್ಕಿದರೆ ಅದು ಚಲಿಸದ ಹಾಗೆ, ಅದು ತನ್ನ ಕೈ – ಕಾಲುಗಳನ್ನು ಹೊರಗೆ ಹಾಕದಂತೆ ಬಾಳೆಯ ನಾರಿನಿಂದ ಕಟ್ಟುತ್ತಿದ್ದರು. ಏಡಿಯಾದರೆ ಅದರ ಕೈ–ಕಾಲುಗಳನ್ನು ಮುರಿದು ಅಡಿಕೆಯ ಹಾಳೆಯಲ್ಲಿ ಹಾಕುತ್ತಿದ್ದರು. ಮೀನುಗಳಲ್ಲಿಯೂ ಬೇರೆ ಬೇರೆ ಮೀನುಗಳು ಸಿಗುತ್ತಿದ್ದವು. ಕೆಸರು ತೆಗೆಯುವುದು ಗೊತ್ತಾದರೆ ಕೆಲವು ಮೀನುಗಳು ಕಲ್ಲಿನ ಸಂದಿಯಲ್ಲಿ ಅಡಗಿರುತ್ತಿದ್ದವು. ಉದ್ದನೆಯ ಜಾತಿಯ ಈ ಮೀನುಗಳನ್ನು ಹಾವು ಮೀನು ಎಂದು ಕರೆಯುತ್ತಿದ್ದರು. ಕೆಸರನ್ನು ತೆಗೆದು ಹಾಕುತ್ತಿದ್ದಂತೆ ಅದಕ್ಕೆ ಮಾಂಸಾಹಾರಿಗಳು ಕಾಯುತ್ತಿದ್ದರು. ಒರತೆಯ ನೀರು ತುಂಬಿಕೊಳ್ಳುತ್ತಿತ್ತು.

ಆ ವರ್ಷವೂ ಅಷ್ಟೆ: ನಮ್ಮ ತೋಟದ ಕೆರೆಯ ಕೆಸರನ್ನು ತೆಗೆಯಲಾಗಿತ್ತು. ಮೂರು ಕಡೆಯಲ್ಲಿ ಒಸರುತ್ತಿದ್ದ ಒರತೆಯಿಂದಾಗಿ ಕೆರೆಯಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ಕೆರೆಯಲ್ಲಿ ನೀರು ಕುತ್ತಿಗೆಯ ತನಕ ಬಂದು ತುಂಬಿಕೊಂಡಿದ್ದರೆ,

ಎರಡು ದಿನ ತೋಟಕ್ಕೆ ನೀರು ಹಾಯಿಸಿಲ್ಲವೆಂದಾದರೆ ಎರಡಾಳು ಮುಳುಗುವಷ್ಟು ನೀರು ಕೆರೆಯಲ್ಲಿ ಭರ್ತಿಯಾಗುತ್ತಿತ್ತು. ತೋಟಕ್ಕೆ ನೀರು ಬಿಡದಿದ್ದರೂ ಅಡ್ಡಿಯಿಲ್ಲ. ಆದರೆ ಕೆರೆಯು ತುಂಬಿರಲಿ ಎಂದು ನಾನು ಹಾರೈಸುತ್ತಿದ್ದೆ. ಯಾಕೆಂದರೆ ಬೇಸಿಗೆಯಲ್ಲಿ ಕೆರೆಯಲ್ಲಿ ಈಜುವುದು ಸ್ನಾನಮಾಡುವುದೆಂದರೆ ಅದಕ್ಕಿಂತ ದೊಡ್ಡ ಸಂತೋಷ ಬೇರೆಯಿಲ್ಲ.

ನಾನು ಈಜು ಕಲಿತದ್ದು ಅದೇ ವರ್ಷ, ಅದು ಕೂಡ ಯಾರ ನೆರವೂ ಇಲ್ಲದೆ. ಎರಡು ಒಣ ತೆಂಗಿನಕಾಯಿಗಳನ್ನು ಒಂದಕ್ಕೊಂದು ಬಿಗಿದು ಅವುಗಳನ್ನು ನೀರಲ್ಲಿ ಬಿಟ್ಟರೆ ಅವು ತೇಲುತ್ತವೆ. ಅವುಗಳನ್ನು ಹಿಡಿದುಕೊಂಡು ಅಥವಾ ಎದೆಯ ಭಾಗಕ್ಕೆ ಬರುವಂತೆ ಆ ಕಡೆ – ಈ ಕಡೆ ತೇಲುವಂತೆ ಇರಿಸಿಕೊಂಡು ಈಜಲು ಕಲಿಯುವುದು ಅತ್ಯಂತ ಸುಲಭದ ಕೆಲಸ.

ಕೆಲವರು ಒಂದೆರಡು ಬಾಳೆಯ ದಿಂಡುಗಳನ್ನು ನೀರಲ್ಲಿ ಹಾಕಿ, ಅದನ್ನು ಹಿಡಿದುಕೊಂಡೇ ಈಜು ಕಲಿಯುತ್ತಿದ್ದರು. ನಾನು ಮಾತ್ರ ನೀರಿಲ್ಲದ ತೆಂಗಿನ ಕಾಯಿಯನ್ನು ಬಳಸಿಕೊಂಡು ಈಜು ಕಲಿತೆ. ಮುಳುಗಿ ಈಜುವುದು, ಮಗುಚಿಕೊಂಡು ಈಜುವುದು ಮುಂತಾದವುಗಳನ್ನು ಕಲಿತಿದ್ದರಿಂದ ಒಂದು ಆತ್ಮವಿಶ್ವಾಸ ಮೂಡಿ ಬಂತು. ಬೆಳಿಗ್ಗೆ ಹತ್ತೂವರೆ – ಹನ್ನೊಂದು ಗಂಟೆಯಿಂದ ಮಧ್ಯಾಹ್ನ ಒಂದು ಗಂಟೆಯವರೆಗೆ ನೀರಲ್ಲಿಯೇ ಇದ್ದುಕೊಂಡು ಅದರ ಸುಖ ಅನುಭವಿಸುತ್ತಿದ್ದೆ. ಕಾಲನ್ನು ಅಲುಗಾಡಿಸದೆ ತುಂಬಾ ಹೊತ್ತು ಇದ್ದರೆ ಮೀನು ಬಂದು ಕಾಲಿಗೆ ಕಚಗುಳಿಯಿಡುತ್ತಿದ್ದವು. ಇದರಿಂದ ದೊರೆಯುತ್ತಿದ್ದ ಆನಂದವಂತೂ ತುಂಬಾ ದೊಡ್ಡದು.

ನನಗೆ ರಜೆಯಾದರೂ ಅವಳಿಗೆ ರಜೆ ಮತ್ತು ಶಾಲಾ ದಿನಗಳು ಅಂತ ಪ್ರತ್ಯೇಕ ಇರಲಿಲ್ಲ. ಎಸ್.ಎಸ್.ಎಲ್.ಸಿ.ಯಲ್ಲಿ ಎರಡು ಸಾರಿ ಡುಮುಕಿ ಹೊಡೆದು ಕೊನೆಗೆ ಶಾಲೆಗೆ ನಮಸ್ಕಾರ ಹೇಳಿದ್ದಳು. ಇಡೀ ದಿನ ರಜೆಯನ್ನು ಅನುಭವಿಸುವವರು ಏನು ಮಾಡುತ್ತಾರೋ ಅದನ್ನು ಅವಳೂ ಮಾಡುತ್ತಿದ್ದಳು. ಬೆಳಿಗ್ಗೆದ್ದು ಮನೆಯ ನೆಲ ಒರಸುವುದು ಮತ್ತು ಬಟ್ಟೆ ಒಗೆಯುವುದು, ಮಧ್ಯಾಹ್ನ ನಿದ್ದೆ ಹೊಡೆಯುವುದು ಸಂಜೆ ಸಿನಿಮಾ ಪತ್ರಿಕೆ, ಜನಪ್ರಿಯ ಕಾದಂಬರಿಗಳನ್ನು ಓದುವುದು ಅವಳ ಕೆಲಸ. ಕೆಲಸ ಮಾಡಿದರೆ ಮಾಡಬಹುದು – ಬಿಟ್ಟರೆ ಬಿಡಬಹುದು. ಅದು ಅವಳ ಯೌವನ ಉರಿಯುತ್ತಿದ್ದ ಕಾಲವೂ ಹೌದು. ಕೊಂಚ ನೀಳವೆನ್ನಬಹುದಾದ ಮುಖ, ತೆಳುವಾದ ತುಟಿ, ಕೊಂಚ ಬಿಳಿಯ ಬಣ್ಣ, ತುಂಬಾ ಚಂಚಲವಾಗಿವೆಯೆಂದು ಅನಿಸಬಹುದಾದ ಕಣ್ಣು; ಕೊರಳ ನಡುವಿನಲ್ಲಿ ಒಂದು ಕಪ್ಪು ಚುಕ್ಕೆಯಂತಿರುವ ಮಚ್ಚೆ, ತಿರುಗಿ ನೋಡಬಹುದು ಎಂದನ್ನಿಸಬಹುದಾದ ರೂಪ.

ನನಗೆ ರಜೆಯಿದ್ದ ಸಮಯದಲ್ಲಿಯೇ ಅವಳು ನಮ್ಮ ಮನೆಗೆ ಬಂದಳು. ಮಾಮೂಲಿಯಾಗಿರುವ ದಿನದಲ್ಲಿ – ಮಾಮೂಲಿಯಾದ ಸಮಯದಲ್ಲಿ ಅವಳು ಮನೆಗೆ ಬಂದಳು. ನಮ್ಮ ಮನೆಯಲ್ಲಿ ಯಾರಿಗೂ, ಯಾವುದೇ ರೀತಿಯ ವಿಶೇಷವೆಂದು ಅನಿಸಲಿಲ್ಲ. ಹಾಗೆನ್ನಿಸುವುದು ಸಾಧ್ಯವಿರಲಿಲ್ಲ.

ಅವಳು ಬಂದು ನಾಲ್ಕೈದು ದಿನಕ್ಕೆ ಸರಿಯಾಗಿ ಒಂದು ಮಧ್ಯಾಹ್ನದ ಅನಂತರ ನಡೆದ ಘಟನೆಯಿದು. ಆದಿನ ಸೆಕೆಯೆಂದರೆ ವಿಪರೀತ ಸೆಕೆ. ಮೈಯ ಬೆವರು ಹರಿದು ಬಂದಿತ್ತು. ತೋಟಕ್ಕೆ ನೀರು ಬಿಡದೆ ಮೂರು – ನಾಲ್ಕು ದಿನವಾಗಿತ್ತು. ಕೆರೆಯಲ್ಲಿಯೂ ನೀರು ತುಂಬಿಕೊಂಡಿತ್ತು. ಎರಡಾಳು ಎತ್ತರಕ್ಕೆ! ಅಪ್ಪ ಆ ದಿನ ಬೆಳಿಗ್ಗೆ ಪೇಟೆಗೆ ಹೋದವರು ಬಂದಿರಲಿಲ್ಲ. ಮನೆಯಲ್ಲಿ ನಾನು ಮತ್ತು ಅವಳು ಮಾತ್ರ. ಸೆಕೆ ತಡೆಯಲಾಗುತ್ತಿಲ್ಲವೆಂದು ನಾನು ಈಜುವುದಕ್ಕಾಗಿ ಕೆರೆಯ ಹತ್ತಿರ ಹೋದೆ. ನೀನು ಈಜುವುದನ್ನು ನಾನು ನೋಡಬೇಕೆಂದು ಅವಳು ಕೆರೆಯ ಹತ್ತಿರ ಬಂದಳು. ಎಂದಿನಂತೆ ಚಡ್ಡಿಯಲ್ಲಿಯೇ ನೀರಿಗೆ ಇಳಿದೆ. ಕೆರೆಗೆ ಇಳಿಯಲು ಹಾಕಿದ್ದ ಮೆಟ್ಟಲಿನಿಂದ ನೀರಿಗೆ ಒಂದೊಂದೇ ಹೆಜ್ಜೆ ಕೆಳಗೆ ಇಳಿಯುತ್ತಾ ಬಂದೆ. ನೀರು ನನ್ನ ಕೊರಳಿನ ತನಕ ಬಂತು. ಬಿಸಿಲಿನ ಬೇಗೆಯಲ್ಲಿದ್ದ ದೇಹಕ್ಕೆ ತಣ್ಣೀರು ಸುಖ ಕೊಟ್ಟಿತು. “ಏನು ನೀನು ಈಜುವುದಿಲ್ಲವಾ?” ಎಂದು ಕೆರೆಯ ದಂಡೆಯ ಮೇಲಿದ್ದ ಅವಳು ಕೇಳಿದಳು. ಕೊಂಚ ದೂರ ಈಜಿ ಮರಳಿ ಬಂದು ಅದೇ ಮೆಟ್ಟಲಲ್ಲಿ ನಿಂತುಕೊಂಡೆ “ಕೆರೆಯಲ್ಲಿ ಹಾವು ಇದ್ದರೆ?” ಎಂದಳು. “ಹಾವಿದ್ದರೆ ಏನು ಮಾಡುವುದಿಲ್ಲ. ಕೆರೆಯ ನೀರಿನಲ್ಲಿರುವುದು ಕೇರೆ ಹಾವು, ತಪ್ಪಿದರೆ ನೀರು ಹಾವು. ಎರಡೂ ಮನುಷ್ಯನ್ನು ಕಂಡರೆ ಹೆದರಿಕೊಳ್ಳುತ್ತವೆ. ಮನುಷ್ಯರನ್ನು ಎದುರಿಸುವ ಧೈರ್ಯ ಅವಕ್ಕಿಲ್ಲ ಎಂದೆ. “ಹೌದಾ” ಆಶ್ಚರ್ಯದಿಂದ ಕೇಳಿದಳು. ನನಗೂ ಆಗ ನಾನು ಕಲಿತ ವಿದ್ಯೆಯನ್ನು ಪ್ರದರ್ಶಿಸಬೇಕೆಂಬ ಹಂಬಲವಿತ್ತು. ಅದಕ್ಕೆ ಒಮ್ಮೆ ಮುಳುಗಿ ಈಜಿದೆ. ಮತ್ತೊಮ್ಮೆ ಮೇಲ್ಮುಖ ಮಾಡಿಕೊಂಡು ಈಜಿದೆ. ಕಲಿತ ವಿದ್ಯೆಯನ್ನು ಪ್ರದರ್ಶಿಸುವ ಆಸೆ ಎಲ್ಲರಿಗೂ ಇರುವಂತೆ ನನಗೂ ಇತ್ತು. ಬಾಯಿಯಲ್ಲಿ ನೀರು ತುಂಬಿಸಿಕೊಂಡು ಅದನ್ನು ಪಿಚಕಾರಿಯಂತೆ ಹಾರಿಸುತ್ತಾ ಮತ್ತೆ ಹೇಳಿದೆ: “ಈಜುವುದಕ್ಕೆ ಎಷ್ಟು ಖುಷಿಯಾಗುತ್ತದೆ ಗೊತ್ತಾ?” ದಡದ ಮೇಲಿದ್ದವಳಿಗೆ ನನ್ನ ಸಂಭ್ರಮ ಮತ್ತು ಸಂತೋಷ ಅರ್ಥವಾಯಿತು.

“ನನಗೂ ನೀರಿಗೆ ಇಳಿಯಬೇಕು ಅಂತ ಆಸೆ. ಆದ್ರೆ ನನಗೆ ಈಜು ಬರುವುದಿಲ್ಲ”

"ಈಜು ಬರದಿದ್ದರೆ ಈ ಮೆಟ್ಟಿಲನ್ನು ಹಿಡಿದುಕೊಂಡು ಸ್ನಾನ ಮಾಡಬಹುದು. ಅಥವಾ ಮೊದಲು ಮೆಟ್ಟಿಲನ್ನು ಹಿಡಿದುಕೊಂಡು ಕಾಲು ಹೊಡೆಯುವುದನ್ನು ಅಭ್ಯಾಸ ಮಾಡಬೇಕು. ಮುಳುಗಿ ಈಜುವುದನ್ನು ಕಲಿಯಬೇಕು" ಎಂದೆ.

"ನಿನ್ನ ಅಮ್ಮ ಬೈದರೆ?" ಆಸೆಯಿಂದ ಅವಳು ಕೇಳಿದಳು.

"ಅಮ್ಮ ಬರುವುದಕ್ಕಿಂತ ಮೊದಲು ಮನೆ ಸೇರಿದರಾಯಿತು" ಎಂದವನು ಮತ್ತೊಮ್ಮೆ ಒಂದು ಸುತ್ತು ಈಜಿ ಬಂದೆ. ಅವಳು ಕೆರೆ ದಂಡೆಯ ಮೇಲಿಂದ ಒಂದೊಂದೇ ಮೆಟ್ಟಿಲು ಇಳಿಯುತ್ತಾ ಬಂದು ಕಾಲುಗಳನ್ನು ನೀರಲ್ಲಿ ಇಳಿಬಿಟ್ಟು ಕುಳಿತಳು. ಅವಳಿಗಿಂತ ಕೆಲವು ಮೆಟ್ಟಿಲ ಕೆಳಗೆ; ಕೊರಳ ತನಕದ ನೀರಲ್ಲಿ ನಾನು ಮೆಟ್ಟಿಲುಗಳ ಮೇಲೆ ನಿಂತಿದ್ದೆ.

"ನನಗೆ ಈಜು ಒಂಚೂರು ಬರುವುದಿಲ್ಲ. ಏನಾದರೂ ಆದರೆ ನೀನು ದಡ ಮುಟ್ಟಿಸುತ್ತೀಯಾ?" ಎಂದು ನೀರನ್ನು ನೋಡುತ್ತಾ ಕೇಳಿದಳು. ಮುಂದಿನ ಕ್ಷಣಗಳ ಬಗ್ಗೆ ನನಗಾಗಲೀ, ಅವಳಿಗಾಗಲೀ ಯಾವ ಕಲ್ಪನೆಯೂ ಇರಲಿಲ್ಲ. ಆ ಕಲ್ಪನೆಯಿದ್ದಿದ್ದರೆ ನಾನು ಏನೂ ಮಾತಾಡುತ್ತಿರಲಿಲ್ಲ. ಜೀವನದಲ್ಲಿ ಎಂದೂ ತಣಿಯದಿರುವ ಮತ್ತು ನಿರಂತರ ದಾಹದ ಪಕ್ಷಿಗಳ ರೆಕ್ಕೆಯಡಿಯಲ್ಲಿ ಸಿಕ್ಕಿ ಅಲೆಯುತ್ತಿರಲಿಲ್ಲ.

"ಈಜುವುದಿದ್ದರೆ ಈಜು. ನೀರಿಗೆ ಇಳಿ, ಆದರೆ ನೀನು ಬೇರೆ ಡ್ರೆಸ್ ತಂದಿದ್ದೀಯಾ?" ಅಂತ ಕೇಳಿದೆ.

"ನೀನು ಎಂಥವನೋ ಮಾರಾಯ? ನಾನು ಒಳಗಡೆ ಬೇರೊಂದು ಲಂಗ ಹಾಕಿಕೊಂಡಿದ್ದೇನೆ. ಅದನ್ನೇ ಹಾಕ್ಕೊಂಡು ಸ್ನಾನ ಮಾಡ್ತೇನೆ" ಅಂದಳು. ಕೆರೆಯ ಮೆಟ್ಟಿಲಿನ ಮೇಲೆ ಬ್ಲೌಸ್ ಮತ್ತು ಹೊರ ಲಂಗವನ್ನು ತೆಗೆದಿರಿಸಿದಳು. ಒಳಗೆ ಒಂದು ಇಡಿಯ ಬಿಳಿ ಲಂಗ ಹಾಕಿಕೊಂಡಿದ್ದಳು. ನಿಧಾನವಾಗಿ ನೀರಿಗಿಳಿದಳು. 'ಮೆಟ್ಟಿಲನ್ನು ಹಿಡಿದುಕೊಂಡು ಕಾಲು ಹೊಡೆಯುವುದನ್ನು ಅಭ್ಯಾಸ ಮಾಡುತ್ತಿರು' ಎಂದೆ. ನಾನು ಮತ್ತೆ ಈಜಲು ತೊಡಗಿದೆ. ಅವಳು ಮೆಟ್ಟಿಲು ಹಿಡಿದುಕೊಂಡು ಅಭ್ಯಾಸ ಮಾಡುತ್ತಿದ್ದವಳು ಮತ್ತೆ ಒಂದು ಕೈಯನ್ನು ಹೊಡೆಯಲು ಅಭ್ಯಾಸ ಮಾಡಿದಳು. ನನಗೆ ಸುಸ್ತಾಗಿ ಮೆಟ್ಟಿಲೇರಿ ಕುಳಿತುಕೊಂಡೆ. ಅವಳು ಮುಳುಗಿ ಏಳುವ ಅಭ್ಯಾಸ ಮಾಡತೊಡಗಿದಾಗ ಒಮ್ಮೆಲೇ ಅವಳು ಮುಳುಗುತ್ತಿರುವಂತೆ ಭಾಸವಾಯಿತು. ತಕ್ಷಣ ಅವಳನ್ನು ಹಿಡಿದುಕೊಳ್ಳಲು ಹೋದೆ. ನೀರಿನಲ್ಲಿ ಅವಳ ಲಂಗ ಮೇಲಕ್ಕೆ ಸರಿದಿತ್ತು. ಯಾಕೋ ಕಸಿವಿಸಿಯಾಯಿತು.

ಅವಳ ಕೊರಳಿನ ತನಕವಿದ್ದ ನೀರು – ನನ್ನ ಕೊರಳಿನ ತನಕವಿದ್ದ ನೀರು ಗೊತ್ತಾಗದೆ ನನ್ನ ಅಂಗಾಂಗಳನ್ನು ಮುಟ್ಟಿರಬಹುದೆ? ಅನುಮಾನ ಬಂತು. ಆದರೆ ಪುನಃ ಅವಳು ಮುಳುಗಿದವಳು ನನ್ನ ಕೈಯನ್ನು ತೆಗೆದುಕೊಂಡು ಅವಳ ಎದೆಯ ಮೇಲೆ ಇರಿಸಿಕೊಂಡಳು.

ಯಾಕೋ ಏನೋ ಆ ದಿನ ಪಾಪದ ನಡುವಿನಿಂದ ಎದ್ದು ಬರುವ ಸಂತೋಷದಲ್ಲಿದ್ದೆ, ಸುಖದಲ್ಲಿದ್ದೆ. ಅವಳ ಕಣ್ಣುಗಳಲ್ಲಿ ಯಾವುದೋ ಸುಖವೊಂದು ತೇಲಿ ಹೋದ ಅನುಭವವಿತ್ತು. ಆದರೂ ಮನೆಯಲ್ಲಿ ಅವಳನ್ನು ಏಕಾಂತದಲ್ಲಿ ಸಂಧಿಸಲು ಭಯಪಟ್ಟೆ. ಅದಕ್ಕೆ ಉದ್ದೇಶಪೂರ್ವಕ ಒಂದೆರಡು ದಿನ ಎದ್ದ ಕೂಡಲೆ ತಿಂಡಿ ತಿಂದು ಪೇಟೆಗೆ ಹೋಗುತ್ತಿದ್ದೆ. ಸಂಜೆ ಎಲ್ಲೆಲ್ಲಿಯೊ ತಿರುಗಾಡಲು ಹೋಗುತ್ತಿದ್ದೆ. ಅವಳ ಕಣ್ಣುಗಳಲ್ಲಿ ಮೊರೆದೇಳುತ್ತಿದ್ದ ಬಯಕೆಯನ್ನು ನೋಡಿಯೂ ನಾನು ನನ್ನ ದೃಷ್ಟಿಯನ್ನು ಎಲ್ಲೆಲ್ಲಿಯೊ ಇರಿಸುತ್ತಿದ್ದೆ. ಆಸೆ ಮತ್ತು ಪಾಪದ ಭಯ ಎರಡೂ ನನ್ನ ಮನಸ್ಸಿನಲ್ಲಿ ಸಂಘರ್ಷವುಂಟು ಮಾಡುತ್ತಿತ್ತು. ಒಬ್ಬನೇ ಇದ್ದರೆ ಅವಳೆದೆಯ ಚಿತ್ರ ನನ್ನ ಕಣ್ಣಿಗೆ ಕಟ್ಟುತ್ತಿತ್ತು.

* * * * *

**ಪ್ರೀತಿ, ಕಾಮ, ಪ್ರೀತಿಗಳೆಲ್ಲವೂ ವ್ಯತ್ಯಾಸವೆನಿಸದ ದಿನಗಳವು. ಹುಡುಗನು ವಯಸ್ಸಿಗೆ ಬಂದಾಗ ವಯಸ್ಸಿಗೆ ಬಂದ ಹುಡುಗಿಯನ್ನು ತಬ್ಬಿದಾಗ ಉಂಟಾಗುವ ಸಂತೋಷಕ್ಕೆ ಬೇರೆ ವ್ಯಾಖ್ಯಾನಗಳು ಬೇಕಿಲ್ಲ. ಅಪ್ಪುಗೆಯ ಬಿಸಿ; ತುಟಿಯ ನಡುವಣ ಹುಡುಕಾಟ; ಹುಡುಗಿಯೆದೆಯಣ ಸೊಕ್ಕುಗಳಿಗೆ ಮತ್ತೆ ಯಾವ ಹೆಸರಿಡಲು ಸಾಧ್ಯ?**

## 1992
## ಫೆಬ್ರವರಿ
## 2

ದುಗ್ಗಮ್ಮಜ್ಜಿ ಗಂಡನ ಮನೆಯಿಂದ ತವರು ಮನೆಗೆ ವಾಪಾಸು ಬಂದು ಸೇರಿದಾಗ ಅವಳ ವಯಸ್ಸು ಮಾಗಿರಲಿಲ್ಲ. ದುಡಿದು ತಿನ್ನಬೇಕೆಂಬ ಹಂಬಲವಿತ್ತು. ತಿರುಮಲನೆಂಬ ಪುರುಷ ಮೃಗ ತೀರಿ ಹೋದದ್ದು ಅವಳಿಗೆ ಹೆಚ್ಚು ಬೇಸರ ತಂದಿರಲಿಲ್ಲ. ಯಾಕೋ ಏನೋ ಗಂಡನ ಬಗ್ಗೆ ಅವಳಿಗೆ ಅಂಥ ಯಾವ ವ್ಯಾಮೋಹ ಇರಲಿಲ್ಲ. 'ಹೋದರೆ ಹೋಗಲಿ, ಅವನ ಹಣೆಯಲ್ಲಿ ಭಗವಂತ ಬರೆದ ಆಯುಷ್ಯ ಅಷ್ಟೆ. ಅದರಿಂದಾಚೆ ಏನೂ ಇಲ್ಲ. ಒಂದು ದಿನ ದೇವರು ಕರೆದರೆ ನಾನೂ ಹೋಗ್ತೇನೆ ಎಂದೇ ಭಾವಿಸಿಕೊಂಡಿದ್ದಳು. ಯಾರಿಗೂ ಭಾರವಾಗದ ಹಾಗೆ ಬದುಕುವುದು ಸಾಧ್ಯವಾದರೆ ಸಾಕು ಎಂದೇ ತಿಳಿದುಕೊಂಡಿದ್ದಳು. ಅವಳ ಮನಸ್ಸಿನಲ್ಲಿ ಅದಕ್ಕಿಂತ ಹೆಚ್ಚು ಆಸೆಯಿರಲಿಲ್ಲ. ವರ್ಷಕ್ಕೆರಡು ಹತ್ತಿಯ ಬಿಳಿ ಸೀರೆಯಿದ್ದರೆ ಆಯಿತು. ಮಲಗಲು ಒಂದು ಚಾಪೆ. ತಲೆದಿಂಬು ಇಲ್ಲದೆಯೂ ನಿದ್ದೆ ಬರುತ್ತದೆ. ಬಾಯಿಗೆ ರುಚಿ ರುಚಿಯಾದುದು ಹೇಗೆ ಬೇಡವೋ ಅದೇ ರೀತಿ ದೇಹಕ್ಕೂ ರುಚಿಯಿಲ್ಲ. ಅದಕ್ಕೆ ಆಸೆಯೂ ಇಲ್ಲ. ಗಂಡ ಸತ್ತ ಮೇಲೆ ಗಂಡನ ಮನೆಗೆ ಕಾಲಿಟ್ಟವಳೂ ಅಲ್ಲ. ಅಲ್ಲಿಂದ ಕೆಲ ಸಮಯ ಅಕ್ಕಿ ಮುಡಿ ಬರುತ್ತಿತ್ತು. ಮಾವ ತೀರಿ ಹೋದ ಮೇಲೆ ಅಕ್ಕಿ ಮುಡಿ ಬರುವುದು ನಿಂತಿತು. ಗಂಡನ ಮನೆಯಿಂದ ಅಕ್ಕಿ ಬರುವುದು ನಿಂತಿತೆಂದು ದುಃಖ ಪಟ್ಟುಕೊಂಡವಳಲ್ಲ. ದುಡಿದು ತಿನ್ನುವ ಶಕ್ತಿಯಿರುವಾಗ ನನಗೇಕೆ ಬೇರೆಯವರ ಹಂಗು ಎಂದು ತಿಳಿದುಕೊಂಡಿದ್ದಳು. ಅಲ್ಲಿ – ಇಲ್ಲಿ ಹಪ್ಪಳ ಮಾಡುವುದು, ಉಪ್ಪಿನಕಾಯಿ ಹಾಕುವುದು ಮಾಡಿಕೊಂಡು: ಅದನ್ನು ಮಾರಾಟ ಮಾಡಿಕೊಂಡು ಬದುಕುವ ಹಂಬಲವನ್ನು ವ್ಯಕ್ತಪಡಿಸುತ್ತಿದ್ದ ದುಗ್ಗಮ್ಮ ಅಣ್ಣನ ಮನೆಯಲ್ಲಿಯೂ ಸುಮ್ಮನೆ ಕುಳಿತು ಕಾಲ ಹರಣ ಮಾಡಿದ ಪೈಕಿಯಲ್ಲ. "ಏನೇ ಆಗಲಿ ದುಗ್ಗಮ್ಮ ನಿಯತ್ತಿನ ಹೆಂಗಸು" ಎನ್ನುವ ಹೆಸರು ಪಡೆದುಕೊಂಡು ಬಿಟ್ಟಿದ್ದಳು. ಹಾಗೆಯೇ ನಿಯತ್ತಿಲ್ಲದವಳು ಎನ್ನುವ ಹೆಸರನ್ನು ಕೂಡಾ. ಜೀವನದಲ್ಲಿ ಉಂಟಾದ ಕೆಲವು ಕಹಿ ಅನುಭವಗಳನ್ನು ಯಾರೊಂದಿಗೂ ಹಂಚಿಕೊಳ್ಳಲಿಲ್ಲ. ಅವುಗಳನ್ನು ನುಂಗಿ ಕರುಳಲ್ಲಿ ಇಟ್ಟುಕೊಂಡಿದ್ದಳು: ಯಾರಿಗೂ ಕೇಳಿಸದ ಹಾಗೆ. ಅದರ ಅರ್ಥ ಜೀವನದಲ್ಲಿ ಎಲ್ಲಾ ಕಡೆಯೂ ಎಲ್ಲಾ ಸಂದರ್ಭದಲ್ಲಿಯೂ ಕಹಿ ಅನುಭವಗಳಾಗಿವೆ; ಒಳ್ಳೆಯ ಅನುಭವಗಳಾಗಿಯೇ ಇಲ್ಲವೆಂದಲ್ಲ. ಒಳ್ಳೆಯ ಅನುಭವಗಳನ್ನು

ಜೀರ್ಣಿಸಿಕೊಂಡಾಗ ಯಾರಿಗೂ ಕಾಣಿಸದ ಹಾಗೆ ಕೊಂಚ ಕಿರುನಗೆಯನ್ನು ಬೀರಿದ್ದಾಳೆ. ಜೀವನದಲ್ಲಿ ಎಲ್ಲವನ್ನು ನುಂಗಿಕೊಳ್ಳಬೇಕು ಎನ್ನುವುದು ಅವಳ ಜೀವನ ಅವಳಿಗೆ ಕಲಿಸಿದ ಪಾಠ.

ಅಣ್ಣ ಶ್ರೀಮಂತನಲ್ಲ, ದೊಡ್ಡ ಹಿಡುವಳಿದಾರನಲ್ಲ, ಅಗತ್ಯ ಬಿದ್ದರೆ ಉಪ್ಪುಗಂಜಿಯುಂಡು ಬೆಳೆದ ಜೀವ ಅವನದು. ಅವನೂ ಅಷ್ಟೆ ಶುದ್ಧ ಅಂತರ್ಮುಖಿ. ತನ್ನ ಪಾಡಿಗೆ ತಾನು ಇರುವವನು. ಜೀವನದಲ್ಲಿ ಅವನು ತಿಂದ ನೋವುಗಳಿಗೆ ಮನುಷ್ಯ ಕುಲದಲ್ಲಿ ಬೆಲೆ ಕಟ್ಟಿದವರು ಯಾರೂ ಇಲ್ಲ. ಜಾತಿಗೆ ಜಾತಿದ್ವೇಷ, ಹಾವಿಗೆ ಹಾವು, ನಾಯಿಗೆ ನಾಯಿ ದ್ವೇಷಿಸುತ್ತದೆ. ಮನುಷ್ಯರನ್ನು ಕಂಡರೆ ಮನುಷ್ಯರಿಗೆ ಆಗುವುದಿಲ್ಲವೆಂದು ಅಣ್ಣ ಸದಾ ಹೇಳುತ್ತಿದ್ದ. ಮರ್ಯಾದೆಯಿಂದ ಬದುಕಿದರೆ ಸಾಕು. ಕಾಲನ್ನು ಹೆಚ್ಚು ಉದ್ದ ಹಾಕುವುದು ಬೇಡ. ಮುರುಟಿ ಮಲಗುವುದನ್ನು ಕಲಿಯಬೇಕು. ಇದು ಅವನ ನಂಬಿಕೆ. ಹಲಸಿನ ಕಾಯಿ ಬೆಳೆಯುತ್ತಿರುವ ದಿನಗಳಲ್ಲಿ ಹಲಸಿನಕಾಯಿಯ ಪಲ್ಯ ತಿಂದು ಹೊಟ್ಟೆ ತುಂಬಿಸಿಕೊಂಡು: ಬಾಳೆಕಾಯಿ ಇದ್ದಾಗ ಬೆಳಿಗ್ಗೆ – ರಾತ್ರಿ ಅದರ ಪಲ್ಯ ಮಾಡಿ ಅದಕ್ಕೆ ಹುಡಿ ಅವಲಕ್ಕಿ ಬೆರಸಿಕೊಂಡು ತಿನ್ನುವುದನ್ನು ದುಗ್ಗಮ್ಮನಿಗೆ ಅವನ ಹೆಂಡತಿ ಮಕ್ಕಳಿಗೆ ಹೇಳಿಕೊಟ್ಟ.

ದುಗ್ಗಮ್ಮನ ಮದುವೆಯ ಖರ್ಚಿಗೆ ಕೈಕಡ ಪಡೆದುಕೊಂಡದ್ದನ್ನು ತೀರಿಸಲು ಬಲು ಪ್ರಯಾಸಪಟ್ಟ. ಸಕ್ಕರೆ ತುಂಬಾ ತುಟ್ಟಿಯಾದ ದಿನಗಳಲ್ಲಿ ಸಕ್ಕರೆಯಿಲ್ಲದ ಚಾ; ಹಾಲಿಲ್ಲದ ಸಮಯದಲ್ಲಿ ಹಾಲು ಹಾಕದ ಚಹಾ ಕುಡಿಯುವುದನ್ನು ರೂಢಿಮಾಡಿಕೊಂಡ.

"ನನ್ನ ಅಣ್ಣ ಶಂಕರನಿಗೆ ಜೀವನದಲ್ಲಿ ತಾಳ್ಮೆಯಿತ್ತು. ಯಾರಿಗೂ ಎರಡು ಬಗೆದವನಲ್ಲ. ಅವನ ಜೀವನವೆ ನನಗೆ ಒಂದು ಪಾಠ. ತುಂಬಾ ದುಃಖವಾದರೆ ಹೀಗಾಯಿತು ಎಂದು ನನ್ನನ್ನು ಅತ್ತಿಗೆಯನ್ನು ಕೂರಿಸಿಕೊಂಡು ದುಃಖ ತೋಡಿಕೊಳ್ಳುತ್ತಿದ್ದ. ಎಲ್ಲಾ ಆ ದೇವರು ನಡೆಸಿಕೊಳ್ಳುತ್ತಾನೆ ಎನ್ನುವುದು ಅವನ ಅಭ್ಯಾಸವಾಗಿತ್ತು. ನನ್ನ ಮದುವೆಗೆ ಮಾಡಿದ ಸಾಲ ಮುಗಿಯುವುದರೊಳಗೆ ನಾನು ಹಣೆಯ ಕುಂಕುಮ ಒರಸಿಕೊಂಡು ಮತ್ತೆ ಮನೆಯ ಮೆಟ್ಟಲು ಹತ್ತುವ ಹಾಗೆ ಆಯಿತು. ಆ ದಿನ ನನ್ನನ್ನು ಮರಳಿ ಕರೆದುಕೊಂಡು ಬಂದ ದಿನ ರಾತ್ರಿ ಚಿಮಿಣಿ ದೀಪವನ್ನೂ ಆರಿಸಿ ನಾನೂ, ಅಣ್ಣ ಅತ್ತಿಗೆ ಅಂಗಳದಲ್ಲಿ ಕುಳಿತುಕೊಂಡು ಮುಂದಿನ ಕತೆಯೇನು ಅಂತ ರಾತ್ರಿಯಿಡೀ ಮಾತಾಡಿದೆವು. ಆ ಕಗ್ಗತ್ತಲೆಯಲ್ಲಿ ಒಬ್ಬರ ಮುಖ ಮತ್ತೊಬ್ಬರಿಗೆ ಕಾಣಿಸುತ್ತಿರಲಿಲ್ಲ. "ದೇವರು ಒಳ್ಳೆಯವರಿಗೆ ಕಷ್ಟಕೊಡ್ತಾನಂತೆ. ಕಷ್ಟದಲ್ಲಿ ಜನರು ದೇವರನ್ನು ನೆನಪಿಸಿಕೊಳ್ತಾರೋ ಇಲ್ಲವೋ ಅಂತ ಪರೀಕ್ಷೆ ಮಾಡ್ತಾನಂತೆ. ಪುಟ್ಟಕ್ಕ ನೀನೂ ಅಷ್ಟೆ: ಗಂಡನನ್ನು ಕಳೆದುಕೊಂಡೆ ಅಂತ ಅಳುತ್ತಾ ಕೂರಬೇಡ. ಪುರುಸೊತ್ತು ಸಿಕ್ಕಿದಾಗ ರಾಮ ಹರೇ ಅನ್ನು;

ಶಿವನನ್ನು ನೆನಪು ಮಾಡಿಕೋ" ಅಂದ. "ಕತ್ತಲೆಯಲ್ಲಿಯೇ ನನ್ನ ಅಣ್ಣ ನನಗೆ ಮೊದಲಿನಂತೆ ಪುಟ್ಟಕ್ಕಾ ಎಂದು ಕರೆದದ್ದು ಧೈರ್ಯ ತುಂಬಲು. ದೇವರ ಪ್ರಾರ್ಥನೆ ಮಾಡು ಅಂದಿದ್ದು ಕೂಡಾ ನನಗೆ ತುಂಬಾ ಧೈರ್ಯವನ್ನು ಕೊಟ್ಟಿತು. ನನ್ನ ಕಷ್ಟದ ದಿನಗಳಲ್ಲಿ ನಾನು ಅದನ್ನು ನೆನಪು ಮಾಡಿಕೊಳ್ಳುತ್ತೇನೆ. ಅಣ್ಣನ ಪ್ರೀತಿಯ ಮಾತು ಇಲ್ಲವಾಗಿದ್ದರೆ ನಾನು ಕೆರೆಯೋ ಬಾವಿಯೋ ನೋಡಬೇಕಿತ್ತು". ಅಂತ ದುಗ್ಗಮ್ಮಜ್ಜಿ ನನ್ನಲ್ಲಿ ಹೇಳಿದ್ದರು.

ದುಗ್ಗಮ್ಮ ವಿಧವೆಯಾಗಿ ಬಂದ ಒಂದೆರಡು ವರ್ಷ ಅವಳ ಅಣ್ಣನ ಹೆಂಡತಿಯೂ ಮಾತೆತ್ತಿದರೆ ಅತ್ತಿಗೆ ಅದು ಮಾಡುವ ಇದು ಮಾಡುವ ಅಂತ ಹೇಳುತ್ತಿದ್ದಳು. ನಿಧಾನವಾಗಿ ಸಂಬಂಧ ಹಳಸತೊಡಗಿತು. ಗಂಡನ ಕಷ್ಟಕ್ಕೆಲ್ಲಾ ದುಗ್ಗಮ್ಮನೇ ಕಾರಣವೆಂದು ಅತ್ತಿಗೆಗೆ ಅನಿಸತೊಡಗಿತು. ಕೈಕಡ ಪಡೆದುಕೊಂಡು ಬಂದ ಹಣವೆಲ್ಲಾ ವಾಪಾಸುಬೇಕೆಂದು ಕೆಲವರು ಮನೆಯಂಗಳಕ್ಕೆ ಬರತೊಡಗಿದಾಗ ದುಗ್ಗಮ್ಮನ ಅಣ್ಣನ ಸ್ಥಿತಿಯು ದೈನೇಸಿಯಾತೊಡಗಿತು. ಇಂಥ ಪರಿಸ್ಥಿತಿಯಿರುವಾಗಲೇ ಒಂದು ದಿನ ಬಾಳೆ ಗುಂಡಿಯಿಂದ ವಿಶ್ವನಾಥ ಶಾಸ್ತ್ರಿಗಳು ಬಂದು ಅಡುಗೆ ಕೆಲಸಕ್ಕೆ ಬೇಕೆಂದು ದುಗ್ಗಮ್ಮನನ್ನು ಕರೆದುಕೊಂಡು ಹೋದರು. ಅಲ್ಲಿಯೂ ಅಷ್ಟೆ ಎರಡೂ ವರ್ಷ ದುಗ್ಗಮ್ಮ ಅಡುಗೆ ಕೆಲಸ, ಮನೆಗೆಲಸ ಮಾಡಿಕೊಂಡಿದ್ದಳು. ಅವರ ಮನೆಯಲ್ಲಿ ಎರಡು ವರ್ಷ ಕೆಲಸ ಮಾಡಿದ್ದು ಮಾತ್ರ ಭಾಗ್ಯ – ಆದರೆ ಅನಂತರ ಆ ಸೌಭಾಗ್ಯವೂ ಇಲ್ಲವಾಯಿತು. ಮತ್ತೆ ಮನೆ ಮನೆ ಸುತ್ತುವುದು. ಮನೆಗೆಲಸಕ್ಕೆ ಸಹಾಯ ಮಾಡುವುದು ಮಾಡಿಕೊಂಡಿದ್ದ ದುಗ್ಗಮ್ಮ ಅಣ್ಣನ ಮನೆಗೆ ಕಾಲಿಡಲಿಲ್ಲ. 'ಸಂಬಂಧ ಹಳಸುವುದರ ಮೊದಲು ದೂರದಲ್ಲಿರಬೇಕು' ಎಂದು ದುಗ್ಗಮ್ಮ ಭಾವಿಸಿದಳು.

ಇದೇ ಸಂದರ್ಭದಲ್ಲಿ ಪಟೇಲರು ದುಗ್ಗಮ್ಮನ ಅಣ್ಣನಿಗೆ ದರಖಾಸ್ತು ಜಮೀನು ಕೊಡಿಸಿದ್ದು ಮತ್ತು ದುಗ್ಗಮ್ಮ ಆ ದರಖಾಸ್ತು ಜಮೀನಿನಲ್ಲಿಯೇ ಒಂದು ಸಣ್ಣ ಮನೆಯೊಂದನ್ನು ಕಟ್ಟಿಕೊಂಡದ್ದು. ಕೊನೆಯ ತನಕ ಅಂದರೆ ಸಾಯುವ ತನಕ ದುಗ್ಗಮ್ಮ ಅದೇ ಮನೆಯಲ್ಲಿದ್ದದ್ದು ರೋಮಾಂಚನದ ಕತೆಯಲ್ಲ. ವಾಸ್ತವದ ಒಂದು ಮುಖ.

* * * * *

**"ಕಾಂತನ ನಿಲಯಕೆ:**
**ತಾಯಿಯ ಗೃಹಕೆ,**
**ಗುರುವಿನ ಗೃಹಕೆ**
**ಅರುಹಬೇಕೆಂದಿಲ್ಲ"**
**(ದಕ್ಷಯಜ್ಞದಲ್ಲಿ ದಾಕ್ಷಾಯಿಣಿ ಶಿವನಿಗೆ)**

1992
ಮಾರ್ಚ್
26

ಕರಿಪರಮೇಶ್ವರಿಯ ಇಬ್ಬರು ಮಕ್ಕಳಲ್ಲಿ ಹಿರಿಯವನು ಮೂಗರಾಮ. ಎರಡನೆಯವನು ಲಿಂಗ. ಕರಿಪರಮೇಶ್ವರಿಯ ಗಂಡ ತೀರಿ ಹೋಗಿ ತುಂಬಾ ವರ್ಷಗಳಾದವು. ತಂದೆ ತೀರಿಹೋಗುವಾಗ ಲಿಂಗನಿಗೆ ಹದಿಮೂರು ವರ್ಷ. ರಾಮನಿಗೆ ಹದಿನಾಲ್ಕು ವರ್ಷ. ಕರಿಪರಮೇಶ್ವರಿ ಜೋರೆಂದರೆ ಜೋರು. ಅವಳ ಗಂಡ ಅಷ್ಟೇ ಮೆತ್ತಗಿನ ಸ್ವಭಾವದವನಂತೆ. ಘಟ್ಟಕ್ಕೆ ಹೋದವನು ವರ್ಷಕ್ಕೆ ಒಂದು ಸಾರಿಯೋ ಎರಡು ಸಾರಿಯೋ ಬಂದು ಹೋದರಾಯಿತು. ಒಂದು ಸಾರಿ ಘಟ್ಟಕ್ಕೆ ಹೋದವನು ಮಲೇರಿಯಾ ಬಂದು ತೀರಿಹೋದನೆಂದೂ, ಅವನ ಹೆಣದ ಮುಖವನ್ನು ನೋಡುವ ಸೌಭಾಗ್ಯ ತನಗಾಗಲೀ; ತನ್ನ ಮಕ್ಕಳಿಗಾಗಲೀ ಆಗಲೇ ಇಲ್ಲವೆಂದು ಕರಿಪರಮೇಶ್ವರಿಯ ಹೇಳುವುದಿತ್ತು. ಬಡ್ಡಿ ಸುಬ್ಬಣ್ಣನ ತೋಟದ ಮೂಲೆಯ ಗುಡ್ಡೆಯ ಬದಿಯಲ್ಲಿ ಅವಳಿಗೆ ಒಂದು ಸಣ್ಣ ಮನೆಯನ್ನು ಸುಬ್ಬಣ್ಣನೇ ಕಟ್ಟಿಸಿಕೊಟ್ಟಿದ್ದ. ಮನೆಯೆಂದರೆ ಮನೆ – ಗುಡಿಸಲೆಂದರೆ ಗುಡಿಸಲು. ಎರಡು ವರ್ಷಕ್ಕೆ ಒಂದು ಸಾರಿ ಅಡಿಕೆಯ ಸೋಗೆಯನ್ನು ಮನೆಗೆ ಹೊದೆಸಿಕೊಡುವ ಜವಾಬ್ದಾರಿಯನ್ನು ಬಡ್ಡಿ ಸುಬ್ಬಣ್ಣನೇ ವಹಿಸಿಕೊಂಡಿದ್ದ. ಬಡ್ಡಿ ಸುಬ್ಬಣ್ಣನದು ಎಲ್ಲಾ ಬಡ್ಡಿ ಲೆಕ್ಕಗಳೇ. ಹತ್ತುಪೈಸೆ ಆ ಕಡೆ ಕೊಟ್ಟರೆ ಇಪ್ಪತ್ತು ಪೈಸೆ ಈ ಕಡೆಗೆ ಬರಬೇಕೆಂಬ ಲೆಕ್ಕಚಾರ ಅವನದು. ಅಸಾಮಾನ್ಯ ವ್ಯಕ್ತಿ. ಅನೇಕ ಕುಖ್ಯಾತಿಯನ್ನು ಪಡೆದ ಊರಿನ ವ್ಯಕ್ತಿಗಳಲ್ಲಿ ಇವನೂ ಒಬ್ಬ. ಮೈಯ ತುಂಬಾ ಸಿಬ್ಬದ ಕಲೆ. ವರ್ಷಕ್ಕೆ ಒಂದು ಸಾರಿ ಜನಿವಾರ ಬದಲಾಯಿಸುವ ಕಟ್ಟಾ ಬ್ರಾಹ್ಮಣ. ಬೀಗದ ಕೈಯನ್ನು ಸದಾ ಜನಿವಾರದಲ್ಲಿ ಕಟ್ಟಿಕೊಂಡಿರುತ್ತಾನೆ. ಅವನ ಮನೆಯ ದೇವರ ಕೋಣೆಯ ಕಪ್ಪುಮರದ ಪೆಟ್ಟಿಗೆಯ ಬೀಗವನ್ನು ತೆರೆಯುವ ಮೊದಲು ದೇವರ ಕೋಣೆಯ ಅಗುಳಿ ಹಾಕಿಕೊಳ್ಳುತ್ತಾನೆ. ಹೀಗಾಗಿ ಅವನು ಪೆಟ್ಟಿಗೆಯಲ್ಲಿ ಏನಿದೆ ಏನಿಲ್ಲವೆಂದು ಗೊತ್ತುಪಡಿಸಿಕೊಂಡವರು ಯಾರೂ ಇಲ್ಲ. ಆಧಾರವಿಲ್ಲದೆ ಅವನು ಈ ತನಕ ಯಾರಿಗೂ ಸಾಲಕೊಟ್ಟುದೂ ಇಲ್ಲ. ಆಸ್ತಿವಂತರಾದರೆ ಠಸ್ಸೆ ಪೇಪರಿನಲ್ಲಿ ಬರೆಸಿಕೊಂಡು ಸಾಲಕೊಡುತ್ತಾನೆ. ವಾಯಿದೆ ದಾಟಿತು ಎಂದಾದರೆ ಮನೆ ಬಾಗಿಲಿಗೆ ಹಾಜರು. ಒಂದು ದಿನ ದಾಟಿದರೂ ಅವನು ಬಡ್ಡಿಗೆ ಬಡ್ಡಿಹಾಕದೆ ಬಿಡುವವನಲ್ಲ. ಆಸ್ತಿಯಿಲ್ಲದವರು ಪಾತ್ರೆ ಪಗಡಿಯನ್ನು ಅಡವಿಟ್ಟು ಸಾಲ ತಗೊಂಡು ಬರ್ತಾರೆ.

ಚಿನ್ನ ಇದ್ದವರು ಚಿನ್ನ ಅಡವಿಟ್ಟು ಅವನತ್ರ ಸಾಲ ಪಡೆದು ಅನಂತರ ತೀರಿಸಲಾಗದೆ ಒದ್ದಾಡಿದವರೂ ಇದ್ದಾರೆ. ಶೆಟ್ರ ಹೆಂಗಸೊಬ್ಬಳು ಮಗಳಿಗೆ ದುಡ್ಡುಕೊಡುವುದಕ್ಕೆಂದು ಗಂಡನಿಗೆ ಗೊತ್ತಾಗದ ಹಾಗೆ ಸೆರಗಿನಲ್ಲಿ ಗೆಜ್ಜೆಯಡ್ಡಿಕೆಯನ್ನು ಕಟ್ಟಿಕೊಂಡು ಬಂದು ಸುಬ್ಬಣ್ಣನಿಗೆ ಅಡವಿಟ್ಟಳು. ಕೊನೆಗೂ ಅದನ್ನು ಅವಳು ಬಿಡಿಸಿಕೊಳ್ಳಲಾಗಲಿಲ್ಲ. 'ಹುಂಜವನ್ನೋ – ದನವನ್ನೋ ತಪ್ಪಿದರೆ; ತೆಂಗಿನಕಾಯಿಯನ್ನೋ ಮಾರಿ ನಿಮ್ಮ ಸಾಲವನ್ನು ತೀರಿಸುತ್ತೇನೆಂದು ಆಣೆ ಭಾಷೆ ಹಾಕಿ ಗೆಜ್ಜೆಯಡಿಕೆಯನ್ನು ಬಡ್ಡಿ ಸುಬ್ಬಣ್ಣನ ಕೈಗೆ ಇಟ್ಟಿದ್ದಳು. ಇಟ್ಟಿದ್ದೇನೋ ಸೈ ಅದರಿಂದ ಸುಬ್ಬಣ್ಣನಿಗೆ ಸಹಾಯವಾಯಿತೇ ಹೊರತು ಅವಳಿಗೆ ಏನೂ ಉಪಕಾರವಾಗಲಿಲ್ಲ. ಹುಂಜವನ್ನು ಅವಳ ಗಂಡ ಕೋಳಿ ಅಂಕದಲ್ಲಿ ಕಳೆದುಕೊಂಡ. ತೆಂಗಿನಕಾಯಿ ಅಡಗಿಸಿ ಮಾರಿದ ದುಡ್ಡು ಸುಬ್ಬಣ್ಣನ ಬಡ್ಡಿಗೆ ಸರಿಯಾಗುತ್ತಾ ಹೋಯಿತು. ದನ ಬರಡಾಗಿ ಅದನ್ನು ಕೊಳ್ಳುವವರಿಲ್ಲ. ಅಲ್ಲಿಗೆ ಮುಗಿಯಿತು. ಸುಬ್ಬಣ್ಣನ ಕರಿ ಪೆಟ್ಟಿಗೆಯಿಂದ ಆ ಚಿನ್ನದ ಅಡ್ಡಿಗೆ ಸರವು ಹೊರಬೀಳಲಿಲ್ಲ. ಅವನು ಹೆಂಗಸರಿಗೆ ದುಡ್ಡುಕೊಟ್ಟದ್ದು ಹೆಚ್ಚು. ಅದರ ಬದಲಿಗೆ ಅವರಿಂದ ಚಿನ್ನದ ಸೊತ್ತು ಇರಿಸಿಕೊಂಡಿದ್ದೂ ಕೂಡಾ. "ಹೆಂಗಸರೇನು ಪೇಟೆಗೆ ಹೋಗಿ ಚಿನ್ನದ ಧಾರಣೆ ಎಷ್ಟು ಅಂತ ತಿಳಿದುಕೊಂಡವರೆ? ಅವಕ್ಕೆ ಏನೂ ಗೊತ್ತಿರುತ್ತದೆ?" ಪೇಟೆಯಲ್ಲಿ ದಿನದಿಂದ ದಿನಕ್ಕೆ ಚಿನ್ನದ ಬೆಲೆ ಹೆಚ್ಚುತ್ತದೆ ಅಂತಲೂ ಅವನಿಗೆ ಗೊತ್ತು. ಬಡ್ಡಿ ಸುಬ್ಬಣ್ಣ ಶ್ರೀಮಂತನಾದ ಗುಟ್ಟು ಇದು. ಬಡ್ಡಿಯ ಲೆಕ್ಕವೇ ಅವನ ಗಾಯತ್ರಿ ಮಂತ್ರ.

ಆವಾಗ ಒಂದು ಸಾರಿ ಬಡ್ಡಿ ಸುಬ್ಬಣ್ಣ ಬ್ಯಾರ್ತಿಯೊಬ್ಬಳಿಗೆ ಮೋಸಮಾಡಿ ಸಿಕ್ಕಿ ಹಾಕಿಕೊಂಡಿದ್ದ. ಬಡ್ಡಿ ಸುಬ್ಬಣ್ಣನ ಅಕ್ಕನೇ ಸಿಟ್ಟಲ್ಲಿ ಹೇಳಿದ್ದೂ ಇದೆ. ಅದನ್ನು ಕೇಳಿಸಿಕೊಂಡಿದ್ದ ಹರಕುಬಾಯಿಯ ಪರಮೇಶ್ವರಿ ಹತ್ತಾರು ಜನಕ್ಕೆ ಹೇಳಿದ್ದಳು. ಒಣ ಮೀನು ಮಾರುವ ಬಪ್ಪಬ್ಯಾರಿಯ ಹೆಂಡತಿ ಪಾತುಮ್ಮ. ಒಂದು ದಿವಸ ಬೆಳಿಗ್ಗೆ ಹತ್ತು ಗಂಟೆಗೆ ಮಗನನ್ನು ಕರೆದುಕೊಂಡು ಸುಬ್ಬಣ್ಣನ ಮನೆಗೆ ಬಂದವಳು ಕಿವಿಯ ಓಲೆ, ಸೊಂಟಪಟ್ಟಿ ಅಡವಿಟ್ಟು ದುಡ್ಡು ತಗೊಂಡು ಹೋಗಿದ್ದಳು. ಆಗ ಸುಬ್ಬಣ್ಣನ ಯೌವನದ ಕಾಲವೂ ಹೌದು. ಅವಳು ಓಲೆ ಮತ್ತು ಸೊಂಟ ಪಟ್ಟಿಯನ್ನು ಕೊಟ್ಟದ್ದನ್ನು ಮರುದಿನವೇ ಪುತ್ತೂರಿಗೆ ಹೋಗಿ ಸುಬ್ಬಣ್ಣ ಕರಗಿಸಿ ಗಟ್ಟಿಮಾಡಿಸಿಕೊಂಡು; ಅದೇ ಥರದ ಬೆಳ್ಳಿಯ ಓಲೆ ಮತ್ತು ಸೊಂಟ ಪಟ್ಟಿ ಮಾಡಿಸಿ ಅದಕ್ಕೆ ಬಂಗಾರದ ಒಪ್ಪವನ್ನು ಹಾಕಿಸಿದ. ಹದಿನೈದು ದಿನದಲ್ಲಿ ಬ್ಯಾರ್ತಿ ದುಡ್ಡು ವಾಪಾಸು ಮಾಡಿದಳು. ಸುಬ್ಬಣ್ಣನೂ ಅವಳ ಆಭರಣವನ್ನೂ ಕೊಟ್ಟ. ಅದನ್ನು ವಾಪಾಸು ತೆಗೆದುಕೊಂಡು ಹೋದ ಒಂದೆರಡು ತಿಂಗಳಲ್ಲಿ ಬಂಗಾರದ ಒಪ್ಪಹೋಯಿತು. ಬ್ಯಾರ್ತಿಗೆ ಮೋಸಹೋದೆ ಎಂದು ಗೊತ್ತಾಯಿತು. ಅವಳು

ಗಂಡನಿಗೆ ಹೇಳಿದಳು. ಬಪ್ಪಬ್ಯಾರಿ ಕಾದುಕುಳಿತು ಸುಬ್ಬಣ್ಣನಿಗೆ ಎರಡು ಬಿಗಿದ. ಆದರೆ ಬಂಗಾರ ವಸೂಲು ಮಾಡಲು ಆಗಲಿಲ್ಲ. 'ಈಗ ಕೊಂಚ ವಯಸ್ಸಾಗಿದೆ. ಮೊದಲಿನ ಹಾಗೆ ವ್ಯವಹಾರ ಮಾಡಲು ಆಗುವುದಿಲ್ಲ.' ಎಂದು ಸುಬ್ಬಣ್ಣ ನಿವೃತ್ತಿ ಹೊಂದಿದ. ಇಂಥವನ ಒಕ್ಕಲು ಪರಮೇಶ್ವರಿ.

ಪರಮೇಶ್ವರಿಯದು ಕಡು ಕಪ್ಪುಬಣ್ಣ. ಸದಾ ಎಲೆಯಡಿಕೆ ಜಗಿಯುವುದು ಅವಳ ಅಭ್ಯಾಸ. ಪುಗ್ಗೆ ಕೈಯ್ಯ ರವಿಕೆ ಅವಳ ಲಾಂಛನ. ಊರಿನಲ್ಲಿ ಯಾರು ಬೇಕಾದರೂ ರವಿಕೆ ಹೊಲಿಸಿಕೊಳ್ಳುವ ಕ್ರಮ ಮತ್ತು ಸೀರೆಯ ಬಣ್ಣಗಳನ್ನು ಬದಲಾಯಿಸಿರಬಹುದು. ಆದರೆ ಪರಮೇಶ್ವರಿ ಅದನ್ನು ಮಾಡಿದವಳಲ್ಲ. ಲಂಗವನ್ನು ಎತ್ತಿಸೊಂಟಕ್ಕೆ ಚುಚ್ಚಿಕೊಂಡು ಕೆಲಸ ಪ್ರಾರಂಭಿಸಿದರೆ ಅವಳ ಎದುರು ನಿಲ್ಲುವ ಕೆಲಸಗಾರರಿಲ್ಲ. ಕೆಲಸ ಮಾಡುವುದಿಲ್ಲವೆಂದು ನಿಶ್ಚಯ ಮಾಡಿಬಿಟ್ಟರೆ ಅವಳನ್ನು ಕೆಲಸಕ್ಕೆ ಬಗ್ಗಿಸುವ ತಾಕತ್ತಿರುವವರೂ ಇಲ್ಲ. ಮನೆಯ ಎದುರಿನ ಹಳೆಯ ತೆಂಗಿನಮರದಿಂದ – ಅದು ಕೂಡಾ ಮುಗಿಲು ಮುಟ್ಟುವ ಮರದಿಂದ ತೆಂಗಿನಕಾಯಿ ತೆಗೆಯಲು ಅವಳು ಯಾರಿಗೂ ಬೇಡಿದ್ದೇ ಇಲ್ಲ. ಒಂದೋ ಬಿಸಿಲು ಏರುವ ಮೊದಲು ಅಥವಾ ಬಿಸಿಲು ಇಳಿದ ಮೇಲೆ ಸರಿಯಾಗಿ ಕಚ್ಚೆ ಹಾಕಿಕೊಂಡು ಮರ ಹತ್ತಿ ಒಣ ತೆಂಗಿನಕಾಯಿ ಉದುರಿಸುವುದರಲ್ಲಿ ಹಿಂದೇಟು ಹೊಡೆದವಳಲ್ಲ. ಒಂದು ಸಂದರ್ಭದಲ್ಲಿ ಸುಬ್ಬಣ್ಣ ಪರಮೇಶ್ವರಿ ಇನ್ನು ಮುಂದೆ, 'ಈ ಮರದಿಂದ ತೆಂಗಿನಕಾಯಿ ತೆಗೆಯಬೇಡ. ಜಾಗವೂ ನನ್ನದು ತೆಂಗಿನ ಮರವೂ ನನ್ನದು' ಅಂತ ತಗಾದೆ ತೆಗೆದಿದ್ದ. ಪರಮೇಶ್ವರಿ "ಇಲ್ಲಿ ಬನ್ನಿ" ಎಂದು ಕರೆದಳು. ಸುಬ್ಬಣ್ಣ ಅವಳನ್ನು ಹಿಂಬಾಲಿಸಿದ. "ನೋಡಿ ನಾನು ಸ್ನಾನ ಮಾಡಿದ ನೀರು ಹೋಗುವುದು ತೆಂಗಿನ ಬುಡಕ್ಕೆ. ಅದಕ್ಕೆ ನೀವು ನೀರು ಹಾಕ್ತೀರಾ? ಇಲ್ವಲ್ವ?" ಹಾಗೆಂದು ಪಿಚಕ್ಕನೆ ತೆಂಗಿನ ಮರದ ಬುಡಕ್ಕೆ ಉಗುಳಿದಳು. ಧ್ವನಿಪೂರ್ಣವಾದ; ಅರ್ಥಗರ್ಭಿತ ಅವಳ ಮಾತು ಸುಬ್ಬಣ್ಣನನ್ನು ಇರಿಯಿತು. ಮತ್ತೆಂದೂ ಅವನು ಅವಳ ಮನೆಯ ಹತ್ತಿರದ ತೆಂಗಿನ ಮರದ ಸುದ್ದಿಗೆ ಹೋಗಲಿಲ್ಲ.

ಸುಬ್ಬಣ್ಣನ ಮನೆ ಕೆಲಸಕ್ಕೆ ಪರಮೇಶ್ವರಿ ಹೋದರೂ ಯಾವತ್ತು ಅವಳು ಅವನ ತೋಟದ ಕೆಲಸಕ್ಕೆ ಹೋದವಳಲ್ಲ. ಒಂದೆರಡು ಸರಿ ಸುಬ್ಬಣ್ಣ 'ತೋಟಕ್ಕೆ ಗೊಬ್ಬರ ಹಾಕಲು ಬಾ' ಎಂದು ಅವಳನ್ನು ಕರೆದರೆ ಪರಮೇಶ್ವರಿ ಗೊಬ್ಬರ ಹೊತ್ತರೆ ಸೀರೆಗೆಲ್ಲಾ ಗೊಬ್ಬರದ ನೀರು ಇಳಿಯುತ್ತದೆ. ಅದನ್ನು ನೀವು ತೊಳೆದುಕೊಡ್ತೀರಾ? ಅಂತ ಹೇಳಿದ್ದಳು. ಒಕ್ಕಲು ಹೆಣ್ಣು ಎದುರು ಮಾತಾಡಿದರೂ ಏನೂ ಮಾಡಲಾಗದ ಸ್ಥಿತಿಯಲ್ಲಿ ಸುಬ್ಬಣ್ಣನಿದ್ದ. ಯಾಕೆಂದರೆ ಅವಳನ್ನು ಹೊರತುಪಡಿಸಿ ಮನೆ ಕೆಲಸಕ್ಕೆ ಬರಲು ಯಾರೂ ಒಪ್ಪುತ್ತಿರಲಿಲ್ಲ. ಮತ್ತು ಅವಳಿಗೆ

ಕೊಡುವ ಕೂಲಿಯು ಕೂಡಾ ಅಷ್ಟಕಷ್ಟೆ. ಇದನ್ನು ಅರ್ಥಮಾಡಿಕೊಂಡಿದ್ದ ಸುಬ್ಬಣ್ಣ
ಅವಳನ್ನು ಕೆಲಸದಿಂದ ಬಿಡಿಸುವ ಗೋಜಿಗೆ ಹೋಗಲಿಲ್ಲ. ಸುಬ್ಬಣ್ಣನ ಹೆಂಡತಿ
ಉದ್ದಕಾಲು ಲಕ್ಷ್ಮಿಯೂ ಕೂಡಾ ಪರಮೇಶ್ವರಿ ಮಾಡಿದ ಕೆಲಸವೆಷ್ಟೋ ಅಷ್ಟ
ಸುಮ್ಮನಾಗುತ್ತಿದ್ದಳು. ಉದ್ದ ಾಲು ಲಕ್ಷ್ಮಿಯ ಹೆರಿಗೆಯಾದ ಸಂದರ್ಭದಲ್ಲಿ
ಬಾಣಂತಿಯ ಸ್ನಾನವನ್ನೇನೋ ಪರಮೇಶ್ವರಿ ಮಾಡಿಸುತ್ತಿದ್ದಳು. 'ಮಗುವಿನ
ಹೇಲು – ಉಚ್ಚೆಯ ಬಟ್ಟೆ ಮಾತ್ರ ನಾನು ತೊಳೆಯಲಾರೆ. ನನಗೆ ವಾಂ
ಬಂದ ಹಾಗಾಗುತ್ತದೆ'ಯೆಂದು ಪರಮೇಶ್ವರಿ ಹೇಳಿಬಿಟ್ಟಿದ್ದಳು. ಅವ
ಸ್ವಭಾವದಲ್ಲಿಯೇ ಬಂದ ಈ ಗುಣ ಅವಳನ್ನು ಉಳಿಸಿದೆಯೋ ಬಿಟ್ಟಿದೆಯೋ
ಅವಳಿಗೆ ಗೊತ್ತಿಲ್ಲ. ಗಂಡ ಘಟ್ಟಕ್ಕೆ ಹೋದವನು ವರ್ಷಕ್ಕೆ ಒಂದು ಸಾರಿಯೋ
ಎರಡು ಸಾರಿಯೋ ಬಂದು ಎರಡು ಮಕ್ಕಳನ್ನು ಕೊಟ್ಟು ಹೋದ. ಅವಳ ಕ
– ಸುಖಕ್ಕೆ ಆದವನಲ್ಲ. ಸುಬ್ಬಣ್ಣ ಕೊಟ್ಟ ಕೂಲಿಯು ತಲೆಗೆಳೆದರೆ ಕಾಲಿಗಿಲ್ಲ
ಕಾಲಿಗೆಳೆದರೆ ತಲೆಗಿಲ್ಲ. ಹಾಗೆಂದು ಕರಿಪರಮೇಶ್ವರಿಯು ದಿನ ಖರ್ಚಿಗೆ ಬೇಕಾದಷ್
ದುಡಿಯುವುದು ಇಲ್ಲದಿದ್ದರೆ ಸುಮ್ಮನಾಗುವುದು. ಊಟ ಮಾಡಿದರೆ ಆಗಬಹುದು
ಮಾಡದಿದ್ದರೂ ಆಗಬಹುದು ಎನ್ನುವ ಸ್ವಭಾವದವಳು. ಮನೆಯ ಸುತ್ತ ಅಗತ್ಯಕ್ಕಿರ
ಎಂದು ಹಾಕಿದ ಮರಗೆಣಸನ್ನು ಬೇಕಾದಾಗ ಕಿತ್ತು ಬೇಯಿಸಿ ತಿನ್ನುತ್ತಾಳೆ
ಅದರ ಪುಡಿಯನ್ನು ಮಡಿಕೆಯಲ್ಲಿ ಕೂಡಿ ಇಟ್ಟಿದ್ದಾಳೆ. ಅದರದ್ದೇ ಅಂಬ
ಮಾಡಿ ಕುಡಿದಿದ್ದಾಳೆ. ಅವರಿವರು ಕೊಟ್ಟ ಹಲಸಿನ ಕಾಯಿಯ ತೊಳೆಯನ
ಉಪ್ಪು ನೀರಲ್ಲಿ ಹಾಕಿ ಮಡಕೆಯಲ್ಲಿ ತುಂಬಿಸಿಟ್ಟಿದ್ದಾಳೆ. ಮಾವಿನ ಹಣ್ಣನು
ಕೂಡಾ ಮಳೆಗಾಲಕ್ಕೆಂದೂ ಉಪ್ಪು ನೀರಲ್ಲಿ ಹಾಕಿದ್ದಾಳೆ. ಹೀಗಾಗಿ ಮಳೆಗಾಲದ
ದಿನ ಸಾಗಿಸುವುದು ಅವಳಿಗೆ ಕಷ್ಟವಾಗಿಲ್ಲ. ಬೇಸಿಗೆಯಲ್ಲಂತೂ ವಾರಕ್ಕೆ ನಾ
ದಿನ ಕೆಲಸ ಮಾಡುವುದು; ಅದರ ಹಣ ತಂದು ಶನಿವಾರ ಪೇಟೆಗೆ ಹೋ
ಮೈದಾ ಹಿಟ್ಟು, ಗೋಧಿ ಹಿಟ್ಟು, ಒಂದು ಹೊಗೆ ಸೊಪ್ಪು ತಂದಿಟ್ಟುಕೊಂಡರಾಯಿತ
ಹಾಗೆಂತ ಕರಿಪರಮೇಶ್ವರಿ ಸುಗುಣ ಸಂಪನ್ನೆಯೆಂದು ಅವಳಿಗೆ ಅವಳೇ ಸ್ವ
ತಿಳಿದುಕೊಂಡಿಲ್ಲ. ಬಡ್ಡಿ ಸುಬ್ಬಣ್ಣ ಯಾವುದೇ ವಿಷಯಕ್ಕೂ ಪ್ರತಿಕ್ರಿಯಿಸದ ಹಾ
ತಾನು ಹೇಳಿದ್ದನ್ನು ಕೇಳಿಕೊಂಡಿರುವ ಹಾಗೆ ಒಂದು ಮದ್ದು ಇಟ್ಟುಕೊಂಡಿದ್ದಾ
ಆ ರಹಸ್ಯ ಅವಳಿಗೆ ಮತ್ತು ಬಡ್ಡಿ ಸುಬ್ಬಣ್ಣ ಇಬ್ಬರಿಗೆ ಗೊತ್ತು. ಅದು ಈವತ
ನಿನ್ನೆಯ ಕತೆಯೂ ಅಲ್ಲ. ಕರಿಪರಮೇಶ್ವರಿ ಮದುವೆಯಾದ ಎರಡು ವರ್ಷ
ಅವಳ ಗಂಡ ಘಟ್ಟಕ್ಕೆ ಹೋದ ಮೇಲೆ ಆಗಿರುವ ಘಟನೆಯಿದು: ಬಡ್ಡಿ ಸುಬ್ಬಣ್ಣ
ಹೆಂಡತಿ ಉದ್ದಕಾಲು ಲಕ್ಷ್ಮಿಯು ತಾಯಿ ಮನೆಗೆ ಹೋದಾಗ ನಡೆದದ್ದು. ಆ
ಬಡ್ಡಿ ಸುಬ್ಬಣ್ಣನ ಮನೆಯಲ್ಲಿ ಅವನನ್ನು ಹೊರತುಪಡಿಸಿ ಬೇರೆ ಯಾರೂ ಇರಲಿ
ಇದರಿಂದ ಪರಮೇಶ್ವರಿಗೂ ಹೆಚ್ಚು ಕೆಲಸವಿರಲಿಲ್ಲ. ನೆಲ ಒರೆಸಿ, ಪಾತ್ರೆ ತೊಳೆದ

ಅವಳ ಕೆಲಸ ಮುಗಿಯಿತು. ಸುಬ್ಬಣ್ಣನ ಅಡುಗೆ ಪಾತ್ರೆಯೆಂದರೆ ಮೂರು ನಾಕು ಅಷ್ಟೆ. ಬೆಳಿಗ್ಗೆ ಒಂದು ಸೌತೆಯನ್ನು ಕೊಚ್ಚಿ ಹಾಕಿ ಬೇಯಿಸಿದರೆ ಆಯಿತು. ಒಂದಿಷ್ಟು ಬೆಳಗ್ಗಿನ ಅನ್ನ ಮಧ್ಯಾಹ್ನ ರಾತ್ರಿಗೂ ತಿನ್ನುತ್ತಾನೆ. ಕಾಫಿ ಕುಡಿದರೆ ಗರ್ಮಿ, ಚಾ ಕುಡಿದರೆ ಪಿತ್ತ; ಹಾಲು ಕುಡಿದರೆ ಶೀತವೆಂದು ಹೇಳುತ್ತಲೇ ಆ ಖರ್ಚನ್ನು ಉಳಿಸುವ ಲೆಕ್ಕಾಚಾರ ಹಾಕಿಕೊಂಡಿದ್ದಾನೆ. ಅವನ ಜನ್ಮಕಾಲದಲ್ಲಿ ಮನೆಯಲ್ಲಿರುವಾಗ ಒಂದು ಚೌಕುಳಿ ಕೌಪೀನ ಮತ್ತು ತುಂಡು ಬೈರಾಸ ಬಿಟ್ಟರೆ ಬೇರೆ ವಿಟ್ಟು ಗೊತ್ತಿಲ್ಲ. ಪರಮೇಶ್ವರಿ ಒಂದು ದಿನ ಮಧ್ಯಾಹ್ನ ಕೆಲಸ ಮುಗಿಸಿ ಹೊರಟಾಗ ಸುಬ್ಬಣ್ಣ, 'ಹೌದನಾ ಪರಮೇಶ್ವರಿ ಯಾಕೋ ತುಂಬಾ ಬೆನ್ನು ನೋವು. ವಾಯು ಬಾಧೆಯಂತ ಕಾಣ್ತದೆ. ಸ್ವಲ್ಪ ಎಣ್ಣೆ ಹಾಕಿ ತಿಕ್ತಿಯಾ?' ಅಂತ ಕೇಳಿದ. ಪರಮೇಶ್ವರಿ ಮಾತಾಡದೆ ನೆಲ ಒರಸುತ್ತಾ ಹೋದಳು. ಪರಮೇಶ್ವರಿಗೆ ತಟ್ಟನೆ ಉದ್ದಕಾಲು ಲಕ್ಷ್ಮಿಯು ಹೇಳಿದ್ದ ವಿಷಯವು ನೆನಪಿಗೆ ಬಂತು. ಉದ್ದಕಾಲು ಲಕ್ಷ್ಮಿಯು ಪುರೋಹಿತ ಕುಟುಂಬಕ್ಕೆ ಸೇರಿದವಳು. ಅವಳು ಉದ್ದವೆಂದು ಅವಳಿಗೆ ಸರಿಯಾದ ಜೋಡಿಯು ಸಿಕ್ಕಿರಲಿಲ್ಲ. ಉದ್ದಕಾಲು ಲಕ್ಷ್ಮಿಯನ್ನು ನೋಡಲು ಹೋದ ಸುಬ್ಬಣ್ಣ ನೋಡಿದ ಕೂಡಲೇ ಹುಡುಗಿ ಸ್ವಲ್ಪ ಉದ್ದವೆಂದು ಕಾಣಿಸುತ್ತದೆ ಎಂದು ಅದಕ್ಕೆ ಗೋಡೆಯ ಹತ್ತಿರ ನಿಂತು ಗುರುತು ಮಾಡಿ ಅಳತೆ ತೆಗೆದ. ನಾಳೆ ನಾವು ಗಂಡ – ಹೆಂಡತಿ ಒಟ್ಟಿಗೆ ಓಡಾಡುವಾಗ ಹೆಂಡತಿ ಗಂಡನಿಗಿಂತ ಉದ್ದ ಅಂತ ಯಾರೂ ಹೇಳಬಾರದು ಅಂದಿದ್ದ. ಉದ್ದಕಾಲು ಲಕ್ಷ್ಮಿ ಬೇಕೂಂತಲೇ ಕಾಲು ದೂರ ಇಟ್ಟು ಅಳತೆ ಗುರುತಲ್ಲಿ ಗಿಡ್ಡವಾಗುವಂತೆ ಮಾಡಿದ್ದಳು. ಮದುವೆಯಾದ ಮೇಲೆ ಹೆಂಡತಿ ಉದ್ದವೆಂದು ಸುಬ್ಬಣ್ಣನಿಗೂ ತಿಳಿದಿತ್ತು. ಆದರೆ ಏನೂ ಮಾಡುವಂತಿರಲಿಲ್ಲ. ಮದುವೆಯಾದ ಎರಡು ವರ್ಷದಲ್ಲಿ ಉದ್ದಕಾಲು ಲಕ್ಷ್ಮಿಯು ಗಂಡನನ್ನು ರಾತ್ರಿ ಉಸಿರೆತ್ತದಂತೆ ಮಾಡಿದ್ದಳು. ಪರಮೇಶ್ವರಿಯ ಹತ್ರ ಕೆಲವು ವಿಷಯ ಹೇಳಿ ಕೆಲವು ವಿಷಯ ಬಿಟ್ಟಿದ್ದಳು. ಪರಮೇಶ್ವರಿ ಮೌನ ವಹಿಸಿ ನೆಲ ಒರಸುತ್ತಿದ್ದಳು. ಆಗ ಬೆನ್ನ ಹಿಂದೆ ಯಾರೋ ಬಂದು ನಿಂತಂತೆ ಆಯಿತು. ಸುಬ್ಬಣ್ಣ ಅವಳನ್ನು ಕರೆದು ದೇವರ ಕೋಣೆಗೆ ಹೋದ. ಅಲ್ಲಿಂದ ಕೆಲವು ಕ್ಷಣದಲ್ಲಿ ಹೊರಗೆಯೂ ಬಂದಿದ್ದ. ಪರಮೇಶ್ವರಿ ಸೀರೆಯನ್ನು ಸರಿಪಡಿಸಿಕೊಂಡು ಬರುವಾಗ ಸುಬ್ಬಣ್ಣ ಒದ್ದೆಯಾಗಿ ಚಾವಡಿಯಲ್ಲಿ ಕುಳಿತಿದ್ದ. ಅವಳು ಬಂದವಳು ಅವನ ಕಣ್ಣಲ್ಲಿ ಕಣ್ಣಿಟ್ಟು ಹೇಳಿದಳು: "ನಿಮ್ಮಿಂದ ಆಗುವುದು ಇಷ್ಟೆ, ಇನ್ನು ಮುಂದೆ ನೀವು ನನ್ನ ತಂಟೆಗೆ ಬಂದರೆ ನಾನಿದನ್ನು ಎಲ್ಲರಿಗೂ ಹೇಳ್ತೇನೆ. ನನಗೆ ಮರ್ಯಾದೆ ಹೋಗಲೂ ಏನೂ ಇಲ್ಲ." ಅಷ್ಟು ಹೇಳಿದವಳು ಏನೂ ಆಗದಂತೆ ಹೋಗಿದ್ದಳು. ಅಂದಿನಿಂದ ಯಾವತ್ತೂ ಸುಬ್ಬಣ್ಣ ಅವಳ ವಿಷಯದಲ್ಲಿ ಕೈ ಹಾಕಿರಲಿಲ್ಲ.

ಇಂಥಾ ಪರಮೇಶ್ವರಿಯ ಮೊದಲ ಮಗ ಮೂಗರಾಮ. ಅವನು ನಾಲ್ಕೈದು ವರ್ಷದವನಿರುವಾಗಲೇ ತನ್ನ ಮೂಗತನವನ್ನು ಪ್ರದರ್ಶಿಸಿದ್ದು ಅದರ ಮೂಲಕ ಜಗಜ್ಜಾಹೀರಾಗಿದ್ದ. ತನ್ನ ಗಂಡಸುತನವನ್ನು ಹಂಗಿಸಿದ ಪರಮೇಶ್ವರಿಗೆ ತಕ್ಕ ಮಗ ಹುಟ್ಟಿದನೆಂದು ಸುಬ್ಬಣ್ಣ ಖುಷಿ ಪಟ್ಟುಕೊಂಡುದು ಮಾತ್ರವಲ್ಲ; ಸಂದರ್ಭ ಸಿಕ್ಕಿದರೆ, 'ನಿನ್ನ ಮಗ ಹೇಗಿದ್ದಾನೆ? ಅಂತ ಕೇಳ್ತಾ ಇದ್ದ. ಪರಮೇಶ್ವರಿ ಮಾತ್ರ ಲೆಕ್ಕಿಸದೆ,' 'ಅವನಿಗೇನು? ತೊಂದರೆಯಿಲ್ಲ. ಏನಿದ್ದರೂ ಗಂಡು ಹುಡುಗ' ಅಂತ ಒತ್ತಿ ಹೇಳುತ್ತಿದ್ದಳು.

ಮೂಗರಾಮ ಒಬ್ಬನೇ ಸಿಕ್ಕಿದರೆ ಸುಬ್ಬಣ್ಣ, "ಹೌದನಾ ರಾಮ ಸ್ನಾನ ಮಾಡಿದಿಯಾ? ಅಥವಾ ಈಗಲೂ ಅಮ್ಮನೇ ಸ್ನಾನ ಮಾಡಿಸಬೇಕಾ? ರಾತ್ರಿ ಒಬ್ಬನೇ ಮಲಗ್ತಿಯಾ ಅಥವಾ ಹೆದರಿಕೆಯಾಗುತ್ತದೆಯೆಂದು ಅಮ್ಮನತ್ರ ಮಲಗ್ತಿಯಾ?" ಮುಂತಾದ ಪ್ರಶ್ನೆ ಕೇಳುತ್ತಿದ್ದ. ಆದರೆ ಮೂಗರಾಮ ಕೈಸನ್ನೆಯಲ್ಲಿ ಉತ್ತರಕೊಡುತ್ತಿದ್ದ. ಅವನ ಉತ್ತರವನ್ನು ಕೇಳಿ ಬಡ್ಡಿ ಸುಬ್ಬಣ್ಣ ಗಹಗಹಿಸಿ ನಗುತ್ತಿದ್ದ. ಬೇಕೂಂತಲೇ ಸುಬ್ಬಣ್ಣ ತನ್ನ ಮೂಗನ್ನು ಹಿಡಿದು ತೋರಿಸುತ್ತಿದ್ದ. ಅದರಿಂದ ರಾಮನಿಗೆ ಬೇಸರವಾಗಿ ಜೋರಾಗಿ ಅಳುತ್ತಿದ್ದ. ರಾಮನಿಗೆ ತನ್ನ ಮೂಕತೆಯ ಕೀಳರಿಮೆಗೆ ಕಾರಣವಾಯಿತು.

ಪರಮೇಶ್ವರಿಗೆ ರಾಮನ ಮೂಗತನವು ಒಂದು ದೊಡ್ಡ ಚಿಂತೆಯಾಗಿತ್ತು. ಅದಕ್ಕೆ ಅವಳು ಮಾಡದ ಮಂತ್ರ ತಂತ್ರಗಳಿಲ್ಲ. ಕಟ್ಟದ ತಾಯಿತಗಳಿಲ್ಲ. ಒಂದು ದಿನ ಅಳುತ್ತಾ ರುಕುಮಿಣಿಯತ್ರ ಹೇಳಿದಳು. ಮತ್ತೊಂದು ದಿನ ಅಳುತ್ತಾ ಉದ್ದಕಾಲು ಲಕ್ಷ್ಮಿಯ ಹತ್ತಿರ ಹೇಳಿದಳು. ಅವರು ತಮಗೆ ತೋಚಿದ್ದನ್ನು ಹೇಳಿದರು. ಎಲ್ಲೋ ಬ್ರಹ್ಮರಾಕ್ಷಸ ಹಿಡಿದು ಈ ಮೂಗತನ ಬಂದಿರಬೇಕೆಂದು ಮಂತ್ರಿಸಿ ಹಾಕಿದರೆ ಎಲ್ಲಾ ಸರಿಯಾಗಬಹುದೇನೊ ಎಂದು ಸಲಹೆ ಕೊಟ್ಟರು. ಮಂತ್ರಿಸಿದರೇನು, ತಾಯಿತ ಕಟ್ಟಿದರೇನೂ ಉಪಯೋಗವಾಗಿರಲಿಲ್ಲ

* * * * *

'ನಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಾವು ರೆಕ್ಕೆ ಪಡೆಯಬೇಕಾಗಿಲ್ಲ.' ನಮ್ಮ ದಾರಿಯು ನಮಗೆ ಎಂದುಕೊಂಡು ಬದುಕಿದವಳು – ಪರಮೇಶ್ವರಿ.

## 1992
## ಏಪ್ರಿಲ್
## 16

"ಅವಳು ನನ್ನನ್ನು ಸತತ ಎರಡು ವರ್ಷ ಆವರಿಸಿಕೊಂಡಿದ್ದಳು. ನಾನೂ ಅಷ್ಟೆ – ಅವಳನ್ನು ಎರಡು ವರ್ಷ ಆವರಿಸಿಕೊಂಡಿದ್ದೆ. ಆ ಎರಡೂ ವರ್ಷವೂ ಅವಳಿಗೆ ಯಾವುದೇ ನೈತಿಕ ಭಯ ಕಾಡಿದಂತಿರಲಿಲ್ಲ. ಅವಳ ಲೈಂಗಿಕ ವಾಂಛೆ ಅಸಾಧಾರಣವಾಗಿತ್ತು. ಆ ಬಯಕೆಯನ್ನು ಈಡೇರಿಸಿಕೊಳ್ಳಲು ಅವಳು ಬೇರೆ ಬೇರೆ ತಂತ್ರಗಾರಿಕೆಯನ್ನು ಬಳಸಿಕೊಳ್ಳುತ್ತಿದ್ದಳು. ಈಗ ಆ ಘಟನೆಗಳನ್ನು ನೆನಪಿಸಿಕೊಂಡರೆ ನಿಜವಾಗಿಯೂ ನನಗೆ ಅವಳ ಬಗ್ಗೆ ಆಶ್ಚರ್ಯವಾಗುತ್ತದೆ. ಅವಳ ಜೀವನದ ಕ್ರಮದ ಬಗ್ಗೆ ಕೂಡಾ! ಅವಳಿಗೆ ಯಾವುದರ ಬಗ್ಗೆಯೂ ಪಾಪ ಪ್ರಜ್ಞೆಯಿರಲಿಲ್ಲ. ಏಣಿಯ ಮೆಟ್ಟಿಲನ್ನು ಏರಿದ ಮೇಲೆ ಏಣಿಯನ್ನು ಕಿತ್ತು ಒಗೆಯುವ ಹಾಗೆ ನನ್ನನ್ನು ಪಾತಾಳಕ್ಕೆ ಒಗೆದುಬಿಟ್ಟಿದ್ದಳು. ಹಾಗೆ ಒಗೆಯುವುದಕ್ಕೆ ಬೇಕಾದಂಥ ಎಲ್ಲಾ ತಂತ್ರಗಾರಿಕೆಯನ್ನು ಬಳಸಿದ್ದಳು.

ವಾತ್ಸಾಯನನ ಭಂಗಿಗಳಲ್ಲಿ ಎಷ್ಟು ವಿಧವಿದೆಯೆಂದು ನನಗಿನ್ನೂ ತಿಳಿದಿಲ್ಲ. ಕೆಲವು ಪಾಠಗಳನ್ನು ಹೋಂವರ್ಕ್‌ನ ತರಹ ಅಭ್ಯಾಸ ಮಾಡಿಸಿದಳು.

* * * * *

ಅವಳು ಕೆರೆಯ ನೀರಿನಲ್ಲಿ ಆವರಿಸಿಕೊಂಡ ಮೇಲೆ ನನಗೊಂದು ರೀತಿಯ ಅಮಲು ಏರಿತ್ತು. ಅದು ನಿಜವಾಗಿಯೂ ಸುಖ ಮತ್ತು ಅಮೃತ ಸದೃಶವಾದ ಗಳಿಗೆ. ಅವಳದು ಕುದುರೆಯ ಕೆನೆತ. ಅವಳಿಗೆ ಲಯವಿತ್ತು. ಅವಳ ದೇಹದಲ್ಲಿಯೂ ಸುಖದ ಕಂಪನವಿತ್ತು. ಹುಡುಗಿಯ ದೇಹದ ಸುಖವನ್ನು ಅನುಭವಿಸಲು ಕೊಟ್ಟವಳು ಅವಳು. ಎಷ್ಟು ಮುಂದುವರಿಯಬೇಕು ಎಷ್ಟು ಮುಂದುವರಿಯಬಾರದು ಎಂಬುದರ ರಹಸ್ಯ ಅವಳಿಗೆ ಗೊತ್ತಿದ್ದಷ್ಟು ನನಗೆ ಗೊತ್ತಿರಲಿಲ್ಲ. ಈ ವಿಷಯದಲ್ಲಿಯೂ ಅವಳು ಗುರು.

ಒಂದು ವರ್ಷ ಬೇರೆ ಬೇರೆ ರೀತಿಯಲ್ಲಿ ಕಣ್ಣ ಮುಚ್ಚಾಲೆಯಾಡುತ್ತಿದ್ದೆವು. ಒಂದು ವರ್ಷದಲ್ಲಿ ನಿಧಾನವಾಗಿ ಅವಳಿಗೆ ನನ್ನ ಬಗ್ಗೆ ಆಸಕ್ತಿ ಕಡಿಮೆಯಾಯಿತು. ಮತ್ತು ಬೇರೆ ಯಾವುದೋ ಒಂದು ಆಸಕ್ತಿಯೂ ಅವಳನ್ನು ಸೆಳೆಯುತ್ತಿದೆಯೆಂದು ಭಾಸವಾಗತೊಡಗಿತು. ಮೊದಮೊದಲು ನಮ್ಮಿಬ್ಬರ ಏಕಾಂತಕ್ಕೆ ವಿವಿಧ ತಂತ್ರಗಳನ್ನು

ಬಳಸಿಕೊಳ್ಳುತ್ತಿದ್ದ ಅವಳು ನನಗೆ ಕೆಂಡಸಂಪಿಗೆಯ ಪರಿಮಳದ ದಾಹಕೊಟ್ಟಳು. ಅವಳು ಕೂಡಾ ಕೆಂಡ ಸಂಪಿಗೆಯ ಮಾದಕತೆಯನ್ನೇ ಒಳಗೊಂಡಿದ್ದಳು.

ಒಂದು ಸಂದರ್ಭದಲ್ಲಿ ನಾನು ಅವಳ ಮನೆಗೆ ಹೋದೆ. ಅವಳ ಮನೆಗೆ ಹೋದಾಗ ಅವಳು ಅವಳ ಸ್ನೇಹಿತೆ ಜ್ಯೋತಿ ಮಾತ್ರವೇ ಇದ್ದರು. ಜ್ಯೋತಿ ಪೈ ಅಂತ ಅವಳ ಪೂರ್ಣ ಹೆಸರು. ಜ್ಯೋತಿ ಪೈಯ ಮುಖದಲ್ಲಿ ನಾನು ಹೋದುದಕ್ಕೆ ಸಣ್ಣ ಅಸಹನೆ ಎದ್ದು ಕಾಣಿಸಿದಂತೆ ನನಗೆ ಭಾಸವಾಯಿತು. ಅದು ನನ್ನ ಊಹೆ ತಪ್ಪಾಗಿರಬಹುದೊ ಏನೋ ಅಂತ ಅನಿಸಿತು ಕೂಡಾ, ಅವಳತ್ರ ಹೇಳಿದೆ: 'ಕುಡಿಯೋದಿಕ್ಕೆ ಟೀ ಬೇಕು' ಅಂತ. ಅವಳು ಅಡುಗೆ ಮನೆಗೆ ಹೋದಳು. ಜ್ಯೋತಿಪೈಯನ್ನು ಹೊರಗೆ ಚಾವಡಿಯಲ್ಲಿ ಬಿಟ್ಟು ನಾನು ಅವಳೊಂದಿಗೆ ಅಡುಗೆ ಮನೆಯ ಕಡೆಗೆ ಹೆಜ್ಜೆ ಹಾಕಿದೆ. ಅಡುಗೆ ಮನೆಯಲ್ಲಿ ಅವಳು ಟೀ ಪಾತ್ರೆಯನ್ನು ಇರಿಸಿದಾಗ ನಾನು ಹಿಂದಿನಿಂದ ಹೋಗಿ ಅವಳನ್ನು ತಬ್ಬಿದೆ. ಅವಳು ದುರುಗುಟ್ಟಿ 'ಬೇಡಾ' ಅಂದಳು ಮತ್ತೆ ನನ್ನನ್ನು ಅಡುಗೆಯ ಮನೆಯಲ್ಲಿ ಬಿಟ್ಟು ಹೊರಗೆ ಬಂದಳು. ನಾನು ಕೂಡಾ ಕೊಂಚ ಯೋಚಿಸುವಂತಾಯಿತು.

ಆ ದಿನ ರಾತ್ರಿ ಎಲ್ಲರೂ ಮಲಗಿದ ಮೇಲೆ ಅವಳ ಕೋಣೆಗೆ ಹುಡುಕುವ ನೆವದಲ್ಲಿ ಹೋದೆ. ಸಣ್ಣನೆಯ ದೀಪ ಉರಿಯುತ್ತಿತ್ತು. ಕೋಣೆಯ ಕದ ಹಾಕಿರಲಿಲ್ಲ. ಬಾಗಿಲನ್ನು ಮಾತ್ರ ಓರೆ ಮಾಡಿದ್ದಳು. ಅವಳು ಮತ್ತು ಜ್ಯೋತಿಪೈ ಇಬ್ಬರನ್ನೂ ಇಣುಕಿ ನೋಡಿ ನಾನು ಮರಳಿ ಬಂದೆ. ತಲೆ ಧಿಮ್ಮೆಂದಿತು. ಅಸಹ್ಯವೆನಿಸಿತು ಆಗ!

ಮರುದಿನ ಬೆಳಿಗ್ಗೆ ಇದ್ಯಾವುದರ ತಿಳುವಳಿಕೆ ನನಗೆ ಬಂದೇ ಇಲ್ಲದಂತೆ ಹೊರಟು ಹೋದೆ. ಎರಡು ದಿನದಾಟಿ ಅವಳ ಮನೆಗೆ ಹೋದಾಗ, ಅವಳು ಅವಳ ಅಪ್ಪನ ಹತ್ತಿರ 'ನಾನು ಅವಳನ್ನು ಬಳಸಿಕೊಂಡೆ' ಎಂದು ದೂರು ಕೊಟ್ಟಿದ್ದಳು. ಅವಳ ತಂದೆ ನನ್ನನ್ನು ವಾಚಾಮಗೋಚರ ಬೈದರು. ಜ್ಯೋತಿಪೈ ನನ್ನ ಮುಖ ನೋಡುತ್ತಿದ್ದಳು. ಅಂದು ಅವಳ ಮನೆಯಿಂದ ಹೊರ ಬಂದವನು ಮತ್ತೆ ಎಂದೂ ಅವಳ ಮನೆಯಂಗಳಕ್ಕೆ ಕಾಲಿಟ್ಟಿಲ್ಲ. ಎರಡು ವರ್ಷದಲ್ಲಿ ಅವಳಿಗೆ ಮದುವೆಯೂ ಆಯಿತು. ಅಷ್ಟೆ! ಅನಂತರ ಎಂದೂ ಅವಳನ್ನು ನೋಡಲಿಲ್ಲ. ಎಲ್ಲಾ ಸರಿ – ಅವಳು ನನ್ನ ಬಗ್ಗೆ ಅವಳ ತಂದೆಯಲ್ಲಿ ಹೇಳಿದ್ದು; ಅವರು ಬೈದದ್ದು ನನ್ನ ಮನಸ್ಸಿನಲ್ಲಿ ಕಪ್ಪು ಕಲೆಯಾಗಿ ಉಳಿಯಿತು.

* * * * *

ಒಂದು ಸಣ್ಣನೆಯ ಅಸಹ್ಯ; ಅಪೇಕ್ಷಿತ ಲೈಂಗಿಕ ಕಾಮನೆಗಳೇ ನನ್ನ ಕ್ರಿಯಾಶೀಲತೆಯನ್ನು ಉದ್ದೀಪನಗೊಳಿಸಿದವೆ?

## 1992
## ಮೇ
## 21

ಆಗ ದುಗ್ಗಮ್ಮನಿಗೆ ಹೆಚ್ಚು ಕಡಿಮೆ ಮೂವತ್ತೋ – ಮೂವತ್ತೆರಡೋ ಪ್ರಾಯ. ಅವಳಿಗೆ ಪಟೇಲರ ಕೊಟ್ಟ ದರಖಾಸ್ತು ಜಮೀನು ಗೇರು ಬೀಜದ ಗುಡ್ಡೆ. ದುಗ್ಗಮ್ಮನಿಗೆ ಆ ಜಮೀನಿನ ಬಗ್ಗೆ ಆಸಕ್ತಿಯಾಗಲೀ ತೀವ್ರ ವ್ಯಾಮೋಹವಾಗಲೀ ಇರಲಿಲ್ಲ. ದುಗ್ಗಮ್ಮನ ಅಣ್ಣ ಎಷ್ಟು ಹೇಳಿದರೂ ಅವಳು ಕೇಳಿಸಿಕೊಳ್ಳಲೂ ಇಲ್ಲ. ವಿಶ್ವನಾಥ ಶಾಸ್ತ್ರಿಗಳ ಮನೆಗೆ ಹೋಗುವಾಗಲೂ ಬೇಡವೆಂದೇ ಹೇಳಿದ್ದ. ದುಗ್ಗಮ್ಮ ಅವನ ಮಾತಿಗೆ ಸೊಪ್ಪು ಹಾಕಲಿಲ್ಲ. ಖಡಾಖಂಡಿತವಾಗಿ ಹೇಳಿದಳು, 'ನನಗೆ ಯಾರ ಹಂಗೂ ಬೇಡ. ನನ್ನ ಕಾಲಲ್ಲಿ ನಾನು ನಿಲ್ಲುತ್ತೇನೆ' ವಿಶ್ವನಾಥ ಶಾಸ್ತ್ರಿಗಳ ಮನೆಯಿಂದ ಬರುವಾಗ ದುಡಿದ ಹಣದಲ್ಲಿ ಸ್ವಲ್ಪ ಭಾಗ ಅಣ್ಣನಿಗೆ ತಲುಪಿಸಿದಳು. ಪಟೇಲರು ದರಖಾಸ್ತು ಜಮೀನು ಕೊಡಿಸಿದಾಗ ಸರ್ಕಾರಕ್ಕೆ ಎಷ್ಟು ಕಟ್ಟಬೇಕು ಎಂದು ಕೇಳಿದ್ದಳು. ಆದರೆ ಈ ವಿಷಯದಲ್ಲಿ ಪಟೇಲರು "ಈ ಜಮೀನು ಕೊಡಿಸಿದ್ದಕ್ಕೆ ದುಡ್ಡು ತಗೊಂಡರೆ ದೇವರು ಮೆಚ್ಚುತ್ತಾನಾ?" ಎಂದು ಕೇಳಿದ್ದರು. ಅವರೇ ಖುದ್ದಾಗಿ ನಿಂತು ಬಾವಿ ತೆಗೆಸಿಕೊಟ್ಟರು. ಒಂದು ಸಣ್ಣ ಮನೆಯನ್ನು ಕಟ್ಟಿಸಿಕೊಟ್ಟರು. ಸಣ್ಣ ಮನೆಯೆಂದರೆ ತುಂಬಾ ಸಣ್ಣದು. ಮಾಡಿಗೆ ಅಡಿಕೆ ಸಲಾಕೆ; ಸೋಗೆ ತರಿಸಿ ಹಾಕಿಸಿದರು. 'ಇರುವಷ್ಟು ದಿನ ಇರ್ತೇನೆ ಅನಂತರ ಈ ಮನೆ ನಿನಗೆ' ಎಂದು ಅಣ್ಣನಿಗೆ ದುಗ್ಗಮ್ಮ ಹೇಳಿದಳು. ದುಗ್ಗಮ್ಮನ ಅಣ್ಣನಿಗೆ ಬಾಯಿಕಟ್ಟಿತು.

ಪರಿಸ್ಥಿತಿಯು ಅವನನ್ನು ಕಟ್ಟಿಹಾಕಿದೆ. ಮಾತಾಡಲಾರ, ಮಾತನ್ನು ನುಂಗಲಾರ. ಒಂದು ಸಣ್ಣನೆಯ ಟ್ರಂಕು ಹಿಡಿದುಕೊಂಡು ದುಗ್ಗಮ್ಮ ಮನೆ ಹೊಕ್ಕಳು. ಅವಳು ಮನೆ ಹೊಕ್ಕಾಗ; ಒಕ್ಕಲಾದ್ದಕ್ಕೆ ಸಾಕ್ಷಿ ಅವಳ ಅಣ್ಣ ಮತ್ತು ಪಟೇಲರು. ಮನೆಯ ಬಾಗಿಲು ಹಾಕಿ ಹೊರಟರೆ ದಿನ ಗಟ್ಟಲೆಯೇನು ತಿಂಗಳು ಗಟ್ಟಲೆ ಮನೆಗೆ ಬರುತ್ತಿರಲಿಲ್ಲ. ಬಂದರೆ ಕೆಲವು ದಿನ ಹಾಗೆಯೇ ಉಳಿಯುತ್ತಿದ್ದಳು. ಅವಳ ಜೀವನದ ಅಗತ್ಯ ಅತ್ಯಂತ ಕಡಿಮೆಯದು.

ಸಮಯ ಕಳೆಯುವುದು ಅವಳ ಸಮಸ್ಯೆಯಲ್ಲ. ಯಾವುದೂ ಇಲ್ಲವೆಂದು ಕೊರಗುವುದು ಅವಳ ಸ್ವಭಾವವಲ್ಲ. ವಿಶ್ವನಾಥ ಶಾಸ್ತ್ರಿಗಳ ಮನೆಯಲ್ಲಿ ನಡೆದ ಘಟನೆಯೊಂದು ಅವಳ ಮನಸ್ಸಿನ ಮೇಲೆ ಗಾಯ ಉಂಟುಮಾಡಿರುವುದು

ನಿಜ: ಅದಾಗಲೂ ಮುಖ್ಯ ಕಾರಣ – ವಿಶ್ವನಾಥ ಶಾಸ್ತ್ರಿಗಳ ಹೆಂಡತಿ ಮಹಾಗೌರಿ. ಅವರ ಮನೆಗೆ ಹೋದಾಗ ದುಗ್ಗಮ್ಮನಿಗೆ ಮಲಗಲು ಕೊಟ್ಟದ್ದು ಒಂದು ಚಾಪೆ ಮತ್ತು ಹೊದೆಯಲು ಒಂದು ಹಳೆಯ ಸೀರೆ. ರಾತ್ರಿ ಎಲ್ಲರ ಊಟವಾದ ಮೇಲೆ ಪಾತ್ರೆಗಳನ್ನು ತೆಗೆದಿಟ್ಟು ದುಗ್ಗಮ್ಮ ಮಲಗುವಾಗ ಕನಿಷ್ಠವೆಂದರೆ ಹನ್ನೊಂದು ಗಂಟೆ. ಬೆಳಗಿನ ಜಾವ ಐದು ಗಂಟೆಗೆ ಏಳಬೇಕು. ಮಹಾಗೌರಿಯ ತವರು ಮನೆ ಶ್ರೀಮಂತಿಕೆಯದು. ಒಬ್ಬಳೇ ಮಗಳು ಬೇರೆ. ಧಿಮಾಕು ಎಂದರೆ ಧಿಮಾಕು. ದಿನಕ್ಕೆ ಹತ್ತು ಸರ್ತಿ ನೆಲ ಒರಸುವುದು: ಗಳಿಗೆಗೊಮ್ಮೆ ಪಾತ್ರೆ ತೊಳೆಯುವುದು ಅವಳ ಗೀಳು. ಮಹಾಗೌರಿ ಒಂದು ದಿನ – ಸ್ನಾನಕ್ಕೆ ಹೋದವಳು ಬಚ್ಚಲು ಮನೆಯಲ್ಲಿ ಸರಬಿಟ್ಟು ಬಂದಳು. ಅಪವಾದ ದುಗ್ಗಮ್ಮನ ಮೇಲೆ ಬಂತು. ಮಧ್ಯಾಹ್ನ ದಣಿದು ಬಂದ ವಿಶ್ವನಾಥ ಶಾಸ್ತ್ರಿಗಳಿಗೆ ಮಹಾಗೌರಿ ಚಾಡಿ ಹೇಳಿಬಿಟ್ಟಳು. ಶಾಸ್ತ್ರಿಗಳಿಗೆ ಎಲ್ಲಿತ್ತೋ ಏನೋ ಸಿಟ್ಟು. ದುಗ್ಗಮ್ಮನನ್ನು ಚಾವಡಿಗೆ ಕರೆದು ಅವಳ ಕೆನ್ನೆಗೆ ಹೊಡೆದು ಅವಳ ಲೆಕ್ಕ ಚುಕ್ತಾಮಾಡಿ ದುಡ್ಡು ಕೊಟ್ಟು ಮನೆಯಿಂದ ಹೊರದಬ್ಬಿದರು. ಅದು ನಟ್ಟನಡು ಮಧ್ಯಾಹ್ನ. ದುಗ್ಗಮ್ಮನಿಗೆ ಹಸಿವೆಯೆಂದರೆ ವಿಪರೀತ ಹಸಿವೆ. ಕಣ್ಣು ಕತ್ತಲೆ ಬಂದ ಹಾಗಾಯಿತು. ನಿಧಾನವಾಗಿ ನಡೆಯುತ್ತಾ ಮೂಸೆ ಬ್ಯಾರಿಯ ಮನೆಯ ಹತ್ತಿರ ಬಂದವಳು ಅಲ್ಲಿ ಕೂತೇ ಬಿಟ್ಟಳು. ಮೂಸೆಬ್ಯಾರಿಯ ಹೆಂಡತಿ ಮುಖಕ್ಕೆ ನೀರು ಹಾಕಿ ಮನೆಯಂಗಳದಲ್ಲಿದ್ದ ತೆಂಗಿನ ಮರದಿಂದ ಎರಡು ಎಳನೀರು ತೆಗೆಸಿಕೊಟ್ಟಳು. ಮೂಸೆಬ್ಯಾರಿಯ ಪರಿಚಯವಾಗಿರುವುದು ಆ ದಿನ.

ಮೂಸೆ ಬ್ಯಾರಿಯ ವಯಸ್ಸು ಆಗ ನಲವತ್ತು. ಒಬ್ಬ ಕುಂಟು ಕಾಲಿನ ಮೂಸೆ, ಇನ್ನೊಬ್ಬ ಬಿಳಿ ಮೂಸೆ. ಕುಂಟು ಕಾಲಿನ ಮೂಸೆಗೆ ಇಲ್ಲದ ವ್ಯವಹಾರವಿಲ್ಲ, ಬಿಳಿ ಮೂಸೆಬ್ಯಾರಿ ಮಾತ್ರ ಅದಕ್ಕೆ ತದ್ವಿರುದ್ಧ. ನಾಕು ಜನಕ್ಕೆ ಬೇಕಾದವನು. ಬಿಳಿಮೂಸೆ ಎಮ್ಮೆ ವ್ಯಾಪಾರ; ದನ ಕರುಗಳ ವ್ಯಾಪಾರ ಮಾಡಿಕೊಂಡು ಜೀವಿಸುವವನು. ಸುಬ್ರಹ್ಮಣ್ಯದ ಜಾನುವಾರು ಜಾತ್ರೆಗೆ ಹೋಗಿ ದನಕರುಗಳನ್ನು; ಎಮ್ಮೆಗಳನ್ನು ತಂದು ಊರಿನಲ್ಲಿ ಮಾರುವುದು. ಊರಿನಲ್ಲಿರುವ ಗೊಡ್ಡು ದನಕರುಗಳನ್ನು ಕೇರಳಕ್ಕೆ ಹೊಡೆದುಕೊಂಡು ಹೋಗುವುದು ಅವನ ಉದ್ಯೋಗ. ದುಡ್ಡು ಕಾಸಿನ ವಿಷಯದಲ್ಲಿ ತುಂಬಾ ಅಚ್ಚುಕಟ್ಟು. ದನಗಳ ಮತ್ತು ಎಮ್ಮೆಗಳ ಕೆಚ್ಚಲು, ಕೊಂಬುಗಳನ್ನೇ ನೋಡಿ ಇಷ್ಟೇ ಕರು ಹಾಕಿದೆ, ಇಷ್ಟೇ ಹಾಲು ಕೊಡಬಹುದು ಎಂದು ಕರಾರುವಕ್ಕಾಗಿ ಹೇಳಬಲ್ಲವನು. ಸ್ವಲ್ಪ ದುಂಡಗಿನ ಮುಖ ಅವನದು. ಅವನಿಗೆ ಗೊತ್ತಿರುವುದು ವ್ಯಾಪಾರ ಮಾತ್ರ. ಊರಿನಲ್ಲಿ ಎಲ್ಲಾ ಬ್ಯಾರಿಗಳು ಪಟ್ಟೆ ಪಟ್ಟೆ ಲುಂಗಿಯನ್ನು; ಕಣ್ಣಿಗೆ ಹೊಡೆಯುವ ಶರಟನ್ನು ಹಾಕಿದರೆ ಬಿಳಿ

ಮೂಸೆ ಬ್ಯಾರಿ ಮಾತ್ರ ಯಾವಾಗಲೂ ಬಿಳಿ ಪಂಚೆ ಮತ್ತು ಬಿಳಿಯ ಟೆರಲೀನ್ ಶರ್ಟ್ ಹಾಕಿಕೊಳ್ಳುತ್ತಿದ್ದ. ಕುಳಿತುಕೊಳ್ಳುವಾಗ; ಗೋಡೆಗೆ ಒರಗುವಾಗ ಶರ್ಟ್‌ಗೆ ಬಣ್ಣವಾಗದಿರಲಿ ಎಂದು ತುಂಬಾ ಎಚ್ಚರಿಕೆ ವಹಿಸುತ್ತಿದ್ದ. ಹಿಂದೂ ಹೆಂಗಸರು ಯಾರೇ ಎದುರು ಸಿಕ್ಕಲಿ ಬಾಯಿ ತುಂಬಾ 'ಅಕ್ಕಾ' ಎಂದು ಕರೆಯುತ್ತಿದ್ದ. ಗಂಡಸರು ಸಿಕ್ಕಿದರೆ 'ಅಣ್ಣಾ' ಎಂದು ಹೇಳುತ್ತಿದ್ದ. ಎಮ್ಮೆ ವ್ಯಾಪಾರಕ್ಕೆ ಘಟ್ಟಕ್ಕೆ ಹೋದರೆ ಏಲಕ್ಕಿ ತಂದು ಬೇಕಾದವರಿಗೆ ಕೊಡುತ್ತಿದ್ದ. ಕೆಲವು ಬ್ರಾಹ್ಮಣ ಹೆಂಗಸರು ತಮ್ಮ ಕರಿಹಿಡಿದ ಡಬ್ಬದಲ್ಲಿ ಏಲಕ್ಕಿಯ ಮಾಲೆಯನ್ನು ಹಾಗೆಯೇ ವರ್ಷಾನುಗಟ್ಟಾಲೆ ಜೋಪಾನವಾಗಿಟ್ಟು ನಾಲ್ಕು ಏಲಕ್ಕಿಯನ್ನು ಬಿಡಿಸಿ ಪಾಯಸಕ್ಕೆ ಹಾಕುತ್ತಿದ್ದರು. ಕೇರಳದ ಕಡೆಗೆ ಹೋದರೆ ಕಾಳು ಮೆಣಸು ತಂದು ಕೊಡುತ್ತಿದ್ದ.

ಮೂಸೆಬ್ಯಾರಿಯು ದೂರದಿಂದ ಬರುವಾಗಲೇ ಎಲ್ಲರಿಗೂ ತಿಳಿಯುತ್ತಿತ್ತು. ಏಕೆಂದರೆ ಅವನು ಹಾಕುತ್ತಿದ್ದುದು ಚರ್ಮದ ಮೆಟ್ಟಿನ ಜೋಡು. ಸಮಗಾರ ಅವನಿಗಾಗಿಯೇ ವಿಶೇಷ ರೀತಿಯ ಚಪ್ಪಲಿ ಹೊಲಿದು ಅದಕ್ಕೆ ಲಾಳ ಹೊಡೆಯುತ್ತಿದ್ದ. ಮೂಸೆಬ್ಯಾರಿಯ ಹೊಸ ಮೆಟ್ಟಿನ ಜೋಡನ್ನು ಎರಡು ದಿನ ಎಳ್ಳೆಣ್ಣೆಯಲ್ಲಿ ಅದ್ದಿ ಬಿಸಿಲಿಗೆ ಇಡುತ್ತಿದ್ದ. ಎಳ್ಳೆಣ್ಣೆಯನ್ನು ಸರಿಯಾಗಿ ಹೀರಿಕೊಂಡ ಚಪ್ಪಲಿಯು ದೂರದಿಂದಲೇ ಜಿಕ್ ಜಿಕ್ ಎಂದು ಸದ್ದು ಮಾಡುತ್ತಿತ್ತು. 'ಅಲ್ಲವೋ ಮೂಸೆ, ನೀನು ಬರುವಾಗ ಒಳ್ಳೆ ಕುದುರೆ ಬಂದ ಹಾಗೆ ಶಬ್ದ ಕೇಳಿಸ್ತದಲ್ಲೋ ಮಾರಾಯ' ಅಂದರೆ, 'ನಿಮ್ಗೆ ಅದು ಗೊತ್ತಿಲ್ಲ ಮೆಟ್ಟಿನ ಜೋಡನ್ನು ಎಳ್ಳೆಣ್ಣೆಯಲ್ಲಿ ಅದ್ದಿ ಹಾಕಿಕೊಂಡರೆ ಭಾರಿ ಉಪಕಾರವಿದೆ. ಕಣ್ಣು ಉರಿಯುವುದಿಲ್ಲ ತಂಪಾಗುತ್ತದೆ. ಕಾಲು ಒಡೆಯುವುದಿಲ್ಲ. ದೂರದಿಂದ ಎಮ್ಮೆಯನ್ನೋ, ದನವನ್ನೋ ಹೊಡೆದುಕೊಂಡು ಬರುವಾಗ ಎಷ್ಟು ನಡಿಯಬೇಕು? ಇಂಥ ಮೆಟ್ಟಿನ ಜೋಡು ಬೇಗ ಹಾಳಾಗುವುದಿಲ್ಲ. ಕಾಲಿನಡಿ ತಂಪು ಇದ್ದರೆ ಕಣ್ಣು ತಂಪಾಗುತ್ತದೆ. ತಲೆಯೂ ಬಿಸಿಯಾಗುವುದಿಲ್ಲ. ಬೇಕಿದ್ದರೆ ಕಾಲಿನ ಅಡಿಗೆ ನೀವೇ ಎಳ್ಳೆಣ್ಣೆ ಹಚ್ಚಿ ನೋಡಿ – ಗರ್ಮಿ ಇಳಿಯುತ್ತದೆ' ಎಂದು ಭಾಷಣ ಹೊಡೆಯುತ್ತಿದ್ದ.

ಸುಬ್ರಹ್ಮಣ್ಯದ ಜಾನುವಾರು ಜಾತ್ರೆಯಿಂದ ಜಾನುವಾರುಗಳನ್ನು ಅಟ್ಟಿಕೊಂಡು ಬರಬೇಕಾದರೆ ವಾರಗಟ್ಟಲೆ ಬೇಕಾಗುತ್ತಿತ್ತು. ಒಮ್ಮೆ ಹೊಡೆದುಕೊಂಡು ಬಂದರೆ ಹದಿನೈದು ದಿನ ಅವನು ಸುಮ್ಮನಿರುತ್ತಿದ್ದ. ಆಮೇಲೆ ಪುನಃ ಹೊರಡುತ್ತಿದ್ದ. ಆದರೆ ಕುಂಟು ಕಾಲಿನ ಮೂಸೆಗೆ ಯಾವತ್ತೂ ಬಿಳಿ ಮೂಸೆಯನ್ನು ಕಂಡರೆ ಆಗುತ್ತಿರಲಿಲ್ಲ. ಕುಂಟುಕಾಲಿನ ಮೂಸೆಯದು ನೂರೊಂದು ವ್ಯವಹಾರ. ಒಂದೆರಡಲ್ಲ. ಅಡಿಕೆ; ಜಮೀನು, ಜಲ್ಲಿ, ಮರಳು, ಬೀಡಿ, ಮರದ ಸಾಗಾಣಿಕೆ, ಕೇರಳಕ್ಕೆ ಕದ್ದು ಅಕ್ಕಿ ಸಾಗಿಸುವುದು ಅವನ ದೊಡ್ಡ ವ್ಯಾಪಾರ. ಆ ವ್ಯಾಪಾರವನ್ನು

ಮಾತ್ರ ಸ್ವತಃ ಅವನೇ ಮಾಡುತ್ತಿದ್ದುದು ಕಡಿಮೆ. ಮರ ಮತ್ತು ಅಕ್ಕಿಯನ್ನು ಮೈಸೂರು ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಿಸಿದರೆ ಅವನಿಗೆ ಹೆಚ್ಚು ಲಾಭವಾಗುತ್ತಿತ್ತು. ಅಕ್ಕಿಯನ್ನು ವಿಟ್ಲದಿಂದಲೋ ಪುತ್ತೂರಿನಿಂದಲೋ ತೆಗೆದುಕೊಂಡು ಅದನ್ನು ತಲೆಯ ಮೇಲೆ ಹೊತ್ತುಕೊಂಡು ಕಾಡಿನ ದಾರಿಯಲ್ಲಿ ಹೋಗಲು ನಾಲ್ಕೈದು ಜನರನ್ನು ನೇಮಿಸಿಕೊಂಡಿದ್ದ. ಪೊಲೀಸರ ಕಣ್ಣು ತಪ್ಪಿಸಿ ಕಾಡಿನ ದಾರಿಯಲ್ಲಿ ಹೋಗಲು ಸಾಕಷ್ಟು ಗಟ್ಟಿಮುಟ್ಟಾದ ಜನರು ಬೇಕಿದ್ದರು. ಆ ವಿಷಯದಲ್ಲಿ ಲಿಂಗ ಮತ್ತು ಕಿಟ್ಟ ಸಮಾನ ದೋಸ್ತಿಗಳು. ಅವರಿಗೆ ಗೊತ್ತಿಲ್ಲದ ಕಾಡಿನ ದಾರಿಯಿಲ್ಲ. ಒಂದು ಮೂಟೆ ಅಕ್ಕಿಯನ್ನು ತೆಗದುಕೊಂಡು ಕೇರಳಕ್ಕೆ ತಲುಪಿಸಿದರೆ ಅವರಿಗೆ ಎರಡು ದಿನದ ಕೂಲಿ. ರಾತ್ರಿ ಕುಡಿಯುವುದಕ್ಕೆ ಮತ್ತು ತಿನ್ನುವುದಕ್ಕೆ ಬೇಕಾದಷ್ಟು. ಒಂದು ಕಿಲೋ ಅಕ್ಕಿಗೆ ಮೈಸೂರು ರಾಜ್ಯಕ್ಕಿಂತ ಇಮ್ಮಡಿ ಬೆಲೆ ಕೇರಳದಲ್ಲಿತ್ತು: ಮರವೂ ಅಷ್ಟೆ !

ರಾತ್ರಿ ಲಿಂಗ ಮತ್ತು ಕಿಟ್ಟ ಗರಗಸ ಹಿಡಿದುಕೊಂಡು ಹೊರಟರು ಎಂದರೆ ಆ ದಿನ ಯಾವುದಾದರೂ ಒಂದು ಮರ ಉರುಳಿ ಬಿತ್ತು ಎಂದೇ ಅರ್ಥ. ಅದನ್ನು ರಾತ್ರೋ ರಾತ್ರಿ ಕೇರಳಕ್ಕೆ ಸಾಗಿಸುತ್ತಿದ್ದರು. ಕಿಟ್ಟ ಮತ್ತು ಲಿಂಗ ಈ ವಿದ್ಯೆಯಿಂದ ಬೇಗ ಶ್ರೀಮಂತರಾಗಬಹುದು ಎಂದು ಕನಸು ಕಾಣುತ್ತಿದ್ದರು. ಕುಂಟು ಕಾಲಿನ ಮೂಸೆಯು ಅವರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಆದರೆ ಈ ವಿಷಯದಲ್ಲಿ ಬಿಳಿಮೂಸೆಯು ಒಂದೆರಡು ಸರ್ತಿ ಅವರಿಗೆ ಬುದ್ಧಿ ಹೇಳಿದ. ಅವನ ಬುದ್ಧಿ ಮಾತನ್ನು ಕೇಳುವ ಸ್ಥಿತಿಯಲ್ಲಿ ಕುಂಟು ಕಾಲಿನ ಮೂಸೆಯಿರಲಿಲ್ಲ. ಕಿಟ್ಟನೂ ಕೂಡಾ ಯಾರ ಮಾತನ್ನೂ ಕೇಳುವ ಕಿವಿಯಿಟ್ಟು ಕೊಂಡವನಲ್ಲ.

ಬಿಳಿ ಮೂಸೆಯು ಪುರುಸೊತ್ತು ಇದ್ದಾಗ ದುಗ್ಗಮ್ಮನ ಮನೆಗೆ ಹೋಗಿ ಬೆಲ್ಲ ತಿಂದು ನೀರು ಕುಡಿದು ಸುಖ ದುಃಖ ಮಾತಾಡಿ ಹೋಗುತ್ತಿದ್ದ. ಮೂಸೆಯು ತನ್ನ ಕಷ್ಟ ಸುಖಕ್ಕೆ ಆಗುವವನು ಎಂಬ ನಂಬಿಕೆಯು ದುಗ್ಗಮ್ಮನಿಗೂ ಇತ್ತು. "ಏನಾದರೂ ಬೇಕಿದ್ದರೆ ಹೇಳಿಯಕ್ಕ ಪೇಟೆಯ ಕಡೆಗೆ ಹೋದರೆ ತೆಗೆದುಕೊಂಡು ಬರ್ತೇನೆ" ಎಂದು ಮೂಸೆಯು ಹೇಳುತ್ತಿದ್ದ. ಅವನತ್ರ ಯಾವುದಾದರೂ ಸಾಮಾನು ತರಿಸುವುದಕ್ಕೆ ದುಗ್ಗಮ್ಮನು ಸಂಕೋಚಪಟ್ಟುಕೊಳ್ಳುತ್ತಿರಲಿಲ್ಲ. "ಯಾವ ಜನ್ಮದಲ್ಲಿ ನಾವಿಬ್ಬರೂ ಅಣ್ಣ – ತಂಗಿಯರಾಗಿದ್ದೆವೋ ಗೊತ್ತಿಲ್ಲ" ಎಂದು ದುಗ್ಗಮ್ಮ ಆಗಾಗ ಹೇಳುತ್ತಿದ್ದಳು. ಆದರೆ ಆ ಮಾತು ಹೆಚ್ಚು ದಿನ ಉಳಿಯಲಿಲ್ಲ.

ಬಡ್ಡಿ ಸುಬ್ಬಣ್ಣ ದುಗ್ಗಮ್ಮನ ಮನೆಗೆ ಬಂದು ಹೋಗಿ ಮಾಡುತ್ತಿದ್ದ ಮೂಸೆಬ್ಯಾರಿಯನ್ನು ನೋಡಿ ದುಗ್ಗಮ್ಮನಿಗೂ ಮೂಸೆಬ್ಯಾರಿಗೂ ಸಂಬಂಧವಿದೆಯೆಂದು ಪ್ರಚಾರ ಮಾಡಿದ. ಶ್ರೀಮಠಕ್ಕೆ ಅನಾಮಧೇಯ ಪತ್ರವನ್ನು

ಬರೆಸಿ ಹಾಕಿಸಿದ. ಈ ಸುದ್ದಿಯಿಂದ ದುಗ್ಗಮ್ಮ ವಿಚಲಿತವಾಗಲಿಲ್ಲ. ಒಂದು ದಿನ ನೇರವಾಗಿ ಸುಬ್ಬಣ್ಣನ ಮನೆಗೆ ಹೋಗಿ ಕೇಳಿಯೇಬಿಟ್ಟಳು. "ಹೌದಾ ಸುಬ್ಬಣ್ಣ. ನನ್ನನ್ನು ನೀನು ಏನೂಂತ ತಿಳಿದುಕೊಂಡೆ. ನೀನು ಯಾರ ಜೊತೆಗಾದರೂ ಮಲಗ್ತಿಯಂತಾ ಎಲ್ಲರೂ ಕದ್ದು ಬಸಿರಾಗ್ತಾರೆ ಅಂತ ಯಾಕೆ ತಿಳಿದುಕೊಳ್ತಿಯಾ? ನನ್ನ ಸುದ್ದಿಗೆ ಬಂದ್ರೆ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ" ಎಂದಳು. ಅಷ್ಟು ಹೊತ್ತಿಗೆ ಉದ್ದಕಾಲು ಲಕ್ಷ್ಮಿಯು ಬಂದು, "ಹೋಗ್ಲಿ ಬಿಡು ದುಗ್ಗಕ್ಕ" ಅಂತ ಸಮಾಧಾನ ಮಾಡಿದಳು. ಆ ದಿನ ಸುಬ್ಬಣ್ಣನ ಮುಖ ಲಿಂಬೆಹಣ್ಣನ್ನು ಹಿಚುಕಿದಂತೆ ಆಗಿತ್ತು. ದುಗ್ಗಮ್ಮನ ಜೀವನದ ಪುಟಗಳೂ ಬದಲಾದವು.

ದುಗ್ಗಮ್ಮ ಸುಬ್ಬಣ್ಣನ ಮನೆಗೆ ಹೋಗಿ ಅವನಿಗೆ ಬೈದದ್ದು ಅವಳಿಗೆ ಆತ್ಮ ತೃಪ್ತಿಯಾಯಿತು. ಕೊನೆಯ ಪಕ್ಷ ಸುಬ್ಬಣ್ಣನಿಗೆ ಬೇಕಾದ್ದು ಹೇಳಿದೆಯೆಂಬ ಖುಶಿ. ಬಡವರನ್ನು ಅಪಮಾನಿಸುವುದು, ಪಾಪದವರಿಗೆ ಬಡ್ಡಿಗೆ ಸಾಲಕೊಟ್ಟು ಅವರ ರಕ್ತ ಹೀರುವುದು ಇನ್ನಾದರೂ ನಿಲ್ಲಬಹುದು ಎಂದು ಅವಳು ಯೋಚಿಸಿದಳು. ಉದ್ದಕಾಲು ಲಕ್ಷ್ಮಿಯು ಪರಮ ಸಾತ್ವಿಕಳಂತೆ, ಹೋಗ್ಲಿ ಬಿಡು ದುಗ್ಗಕ್ಕ ಎಂದು ಸಮಾಧಾನ ಹೇಳಿದ್ದು ಬೆಣ್ಣೆಯಲ್ಲಿನ ಕೂದಲು ತೆಗೆದಂತೆ ಅತ್ಯಂತ ನಾಜೂಕು ಕೆಲಸವೆಂದು ದುಗ್ಗಕ್ಕನಿಗೆ ಅನಿಸಿತು. ಇದು ಸ್ವತಃ ಲಕ್ಷ್ಮಿಗೆ ಗೊತ್ತಿತ್ತು. ಎಂಕಟ ಬಂದು ಹೋದ ಮೇಲೆ ಉದ್ದಕಾಲು ಲಕ್ಷ್ಮಿಯು ಗಂಡನನ್ನು ಬಹಳ ಸಮರ್ಥಿಸುತ್ತಿದ್ದಳು. ತಾನು ಹಾದಿತಪ್ಪಿದ್ದರಿಂದ ಗಂಡನನ್ನು ಬೆಂಬಲಿಸುವ ಮತ್ತು ಆ ಮೂಲಕ ಗಂಡನನ್ನು ಓಲೈಸಬೇಕಾದ ಪರಿಸ್ಥಿತಿಯುಂಟಾದ್ದನ್ನು ಅನುಭವಿಸುತ್ತಿದ್ದಳು. ಲಕ್ಷ್ಮಿಯ ಮಟ್ಟಿಗೆ ಒಂದು ವಿಶಿಷ್ಟ ಪ್ರಸಂಗವಾಗಿತ್ತು. ದುಗ್ಗಮ್ಮ ಬಂದು ಸುಬ್ಬಣ್ಣನನ್ನು ಬೈದಾಗಲೂ ಲಕ್ಷ್ಮಿಗೆ ಗಂಡನದು ಸರಿಯಾದ ಕೆಲಸವೆಂದೂ ಅನಿಸಿತ್ತು. ಗಂಡ ಸತ್ತವಳು ಹೇಗಿದ್ದಾಳೋ ಎಂದು ಅವಳಿಗೆ ಅನಿಸಿದ್ದು ಅಷ್ಟೇ ಸತ್ಯ. ಗಂಡನಿದ್ದೂ ತಾನು ಎಂಕಟನನ್ನು ಇಷ್ಟಪಟ್ಟಿದ್ದು, ಅವನನ್ನು ಕೂಡಿದ್ದು, ಲಕ್ಷ್ಮಿಗೆ ಉಳಿದ ಹೆಂಗಸರ ವಿಷಯದಲ್ಲಿ ಅದೇ ಧೋರಣೆಯು ಹುಟ್ಟಲು ಕಾರಣವಾಗಿತ್ತು. ಸುಬ್ಬಣ್ಣ ಶ್ರೀಮಠಕ್ಕೆ ಮೂಗರ್ಜಿ ಬರೆಸಿದ್ದರಿಂದ ಮಠವು ದುಗ್ಗಮ್ಮನಿಗೆ ಬಹಿಷ್ಕಾರ ಹಾಕಬಹುದು ಎಂದು ಯೋಚನೆಯು ಲಕ್ಷ್ಮಿಗೂ ಬಂದಿತ್ತು.

ದುಗ್ಗಮ್ಮನಿಗೆ ಮಾತ್ರ ಈ ಪ್ರಸಂಗವು ಮತ್ತೊಂದು ನೀರ ಸುಳಿಗೆ ಬೀಳುವಂಥ ಪರಿಸ್ಥಿತಿಯನ್ನು ತಂದೊಡ್ಡಿತು. ಅದಕ್ಕೂ ಕಾರ್ಯ - ಕಾರಣ ಸಂಬಂಧವುಂಟು ಅಂತಲೇ ದುಗ್ಗಮ್ಮನ ಅನಿಸಿಕೆ. ಗಂಡ ತಿರುಮಲ ಇಹಲೋಕ ತ್ಯಜಿಸಿದ್ದಾನೆ. ಗಂಡ ಇದ್ದಾಗ ಒಂದು ಪರಿಸ್ಥಿತಿ. ಕಾಡುಹಂದಿಯ ರೀತಿಯಲ್ಲಿ ನುಗ್ಗಿದವನಿಗೆ ಜೀವನದಲ್ಲಿ ದಾಂಪತ್ಯ ಬೇಕಾದ್ದು ಹಾಗಲ್ಲವೆಂದು ಒಂದು ರಾತ್ರಿ ಕಲಿಸಿದ್ದು

ಕೂಡಾ ಅಷ್ಟೇ ಸ್ಪಷ್ಟ. ಯಾರೊಂದಿಗೂ ಅದನ್ನು ಹೇಳಲಿಲ್ಲ. ಹೇಳಿಲ್ಲವೆಂದ ಮಾತ್ರಕ್ಕೆ ಅದು ನಿಜವಲ್ಲವೆಂದು ಹೇಳುವುದು ಹೇಗೆ? ಅದರ ಅನಂತರ ಅಣ್ಣನ ಮನೆಗೆ ಹೋದರೆ ಕುಂಬಳಕಾಯಿಯೇ ಭಾರವಾಯಿತು ಎನ್ನುವ ಪರಿಸ್ಥಿತಿ. ಕಷ್ಟಗಳು ಬಂದರೆ ಒಟ್ಟಿಗೆ ಬೆನ್ನಟ್ಟಿಕೊಂಡು ಬರುತ್ತವೆ. ಅಪವಾದಗಳೂ ಅಷ್ಟೇ – ಸಾಂಕ್ರಾಮಿಕ ಕಾಯಿಲೆಯಂತೆ ಹರಡುತ್ತದೆ. ಅವೆರಡೂ ವಿಧಿ ವಿಲಾಸ. ಬೇಡವೆಂದರೂ ಬರುವ; ದಾರಿಯಲ್ಲಿ ಅಡ್ಡಬಂದು ನಿಲ್ಲುವ ಸಂಗತಿಗಳನ್ನು ಎಡಗಾಲಿಂದ ಒದ್ದು ಮುಂದಕ್ಕೆ ನಡೆಯುವ ಛಾತಿಯು ಇಲ್ಲವಾದರೆ ಕಷ್ಟವೆಂದು ದುಗ್ಗಮ್ಮ ಭಾವಿಸಿಕೊಂಡಿದ್ದಾಳೆ. ಸುಬ್ಬಣ್ಣ ಹಬ್ಬಿಸಿದ ಸುಳ್ಳುಸುದ್ದಿಯು ಮಾತ್ರ ಅವಳ ಎದೆಯನ್ನು ಕುಗ್ಗಿಸಿತ್ತು. ಸುಬ್ಬಣ್ಣನಿಗೆ ಬೈದುಬಂದ ಮೇಲೆ ಒಂದು ತೃಪ್ತಿ ಮತ್ತು ಸಮಾಧಾನ ಕಾಣಿಸಿಕೊಂಡಿತ್ತು. ದುಗ್ಗಮ್ಮ ಮನೆಗೆ ಬಂದವಳು ಅಶುದ್ಧವಾದುದನ್ನು ಮುಟ್ಟಿದಂತೆ ಬಚ್ಚಲು ಮನೆಗೆ ಹೋಗಿ ತಲೆಯ ಮೇಲೆ ತಣ್ಣೀರು ಹೊಯ್ದುಕೊಳ್ಳಬೇಕೆಂದುಕೊಂಡಳು. ಬಿಳಿಯ ಮಡಿಸೀರೆಯನ್ನು ಬಚ್ಚಲ ಮನೆಯ ಬಿದಿರಗಳಕ್ಕೆ ನೇತುಹಾಕಿಕೊಂಡು ಸ್ನಾನಕ್ಕೆ ಇಳಿದಳು. ಕತ್ತಲೆಯ ಗೂಡು ಅದು. ಹಗಲಿನಲ್ಲಿಯೂ ಕತ್ತಲೆಯ ರಾಶಿ ಬಿದ್ದಿದೆ. ಮೈಮೇಲೆ ಒಂದೆರಡು ಚೆಂಬುನೀರು ಸುರಿದುಕೊಂಡು ತೆಂಗಿನ ಕರಟದಲ್ಲಿ ತುಂಬಿಸಿಕೊಂಡಿದ್ದ ನೊರೆಕಾಯಿ ಪುಡಿಯನ್ನು ಮೈಮೇಲೆ ತಿಕ್ಕಕ್ಕೆ ಯೋಚಿಸಿದಳು. ಗಂಡ ತಿರುಮಲನದು ಅವಸರ. ಅವನಿಗೆ ದೇಹದಲ್ಲಿ ಬೇರೆ ಯಾವುದೂ ಬೇಕಿರಲಿಲ್ಲ. ಅವನಿಗೆ ತಾಳ್ಮೆ ಇರಲಿಲ್ಲ. ಅವಸರದಲ್ಲಿ ಉಣ್ಣುವವನ ವಿಚಿತ್ರ ಸ್ವಭಾವ ನೆನಪಾಯಿತು. ದುಗ್ಗಮ್ಮನಿಗೆ ಮನಸ್ಸು ತುಂಬಾ ಚಂಚಲವಾಗುತ್ತಿದೆಯೆಂದೆನ್ನಿಸಿತು. ಯಾಕೆ ಈವತ್ತು ಹೀಗಾಗುತ್ತಿದೆ? ಸುಬ್ಬಣ್ಣನ ಮನೆಗೆ ಹೋಗಿ ಅವನನ್ನು ಬೈದು ಬಂದ ಮೇಲೆ ಹೀಗನ್ನಿಸುತ್ತಿದೆಯಲ್ಲ ಎಂದುಕೊಂಡು ಮನಸ್ಸನ್ನು ತಹಬಂದಿಗೆ ತರಲು ಯತ್ನಿಸಿದರೂ ತನಗೂ ಮೂಸೆಬ್ಯಾರಿಗೂ ಯಾಕೆ ಸಂಬಂಧ ಕಲ್ಪಿಸಿದರು? ಮೂಸೆಬ್ಯಾರಿ ಒಳ್ಳೆಯವನು. ಸುಬ್ಬಣ್ಣ ಕೊಳಕು ಮಂಡಲ. ಮೂಸೆ ಬ್ಯಾರಿ ಸುಬ್ಬಣ್ಣ ಇಬ್ಬರನ್ನು ತೂಕ ಹಾಕಿದರೆ ಮೂಸೆ ಬ್ಯಾರಿಯೇ ಒಳ್ಳೆಯವನು ಎಂದು ಅನಿಸಿತು. ಮತ್ತೆ ದುಗ್ಗಮ್ಮ ಯಥಾಪ್ರಕಾರ "ಓಂ ನಮಃ ಶಿವಾಯ" ಎಂದು ಹೇಳುತ್ತಾ ಸ್ನಾನ ಮುಗಿಸಿದಳು.

ಸುಬ್ಬಣ್ಣ ಕೊಳಕುಮಂಡಲ ಬುದ್ಧಿಯನ್ನು ತೋರಿಸಿಯೇ ಬಿಟ್ಟ. ದುಗ್ಗಮ್ಮ ಬೈದು ಹೋದ ಮೇಲೆ, 'ಒಬ್ಬಳು ಹೆಂಗಸಿಗೆ ಇಷ್ಟು ಪೊಗರು ಇದ್ದರೆ ತನಗೆಷ್ಟಿರಬೇಕು' ಎಂದು ತನ್ನ ಹಲ್ಲಿನೆಡೆಗೆ ಮಡಲ ಕಡ್ಡಿಯನ್ನು ಹಾಕಿಕೊಳ್ಳುತ್ತಾ ಯೋಚಿಸಿದ. ಮನಸ್ಸಿನ ತುಂಬಾ ಹರಡಿಕೊಂಡ ಎರೆ ಹುಳದಂತೆ ಹೊರಳಾಡುವ ಆಲೋಚನೆಗಳಿಂದ ಇಡೀ ದಿನ ಕಳೆದ. ಅವನು ಯೋಚಿಸ್ತಾನೆ ಅಂತ ಉದ್ದಕಾಲು

ಲಕ್ಷ್ಮಿಗೂ ಗೊತ್ತಾಯಿತು. ಊಟವಾದ ಮೇಲೆ ಸುಬ್ಬಣ್ಣ ಎಲೆಯಡಿಕೆ ಹಾಕಿಕೊಳ್ಳುವ ಹೊತ್ತಿನಲ್ಲಿ ಲಕ್ಷ್ಮಿಯು ಬಂದು ಗೋಡೆಗೊರಗಿ ಕುಕ್ಕುರುಗಾಲಲ್ಲಿ ಕುಳಿತಳು. ಸುಬ್ಬಣ್ಣ ತನ್ನ ಬಲಕುಂಡೆಯನ್ನು ಓರೆಮಾಡಿ ಗಟ್ಟಿಯಾಗಿ ಒಂದು ಹುರಿಕೆಯನ್ನು ಬಿಟ್ಟ; ಡರ, ಡಕ, ಪುಂಯಿ, ಪುಂಯಿ, ಲಕ್ಷ್ಮಿಗೆ ಅದು ಅಸಹನೀಯವೆಂದು ಅನಿಸಲಿಲ್ಲ. ಅವನ ಹುರಿಕೆಯನ್ನು ಕೇಳಿಕೇಳಿ ಅದು ಕೇಳದಿದ್ದರೆ ಮಾತ್ರ ಗಂಡನಿಗೆ ಊಟ ಸರಿಯಾಗಿಲ್ಲವೆಂದು ತಿಳಿದುಕೊಳ್ಳುತ್ತಿದ್ದಳು.

ಲಕ್ಷ್ಮೀ: ಆಯ್ತಾ?

ಸುಬ್ಬಣ್ಣ: ಏನು?

ಲಕ್ಷ್ಮಿ: ಮುಖಕ್ಕೆ ಮಂಗಳಾರತಿ.

ಸುಬ್ಬಣ್ಣ: ದುಗ್ಗಮ್ಮನದೋ

ಲಕ್ಷ್ಮಿ: ಹೌದು

ಸುಬ್ಬಣ್ಣ: ಹೋಗಲಿಬಿಡು

ಲಕ್ಷ್ಮಿ: ಅವಳು ಹಾಗೆ ಮಾಡಬಹುದಂತೆ. ನೀವು ಮಾತ್ರ ಹೇಳಬಾರದು.

ಸುಬ್ಬಣ್ಣನು ಕಡೆ ಬಾಯಲ್ಲಿ ಇಟ್ಟುಕೊಂಡಿದ್ದ ಎಲೆಯಡಿಕೆಯನ್ನು ಉಗುಳಿ ಬಂದ. ಅವನು ಬರುವಷ್ಟರಲ್ಲಿ ಲಕ್ಷ್ಮಿಯು ತನ್ನ ಉದ್ದಕಾಲುಗಳನ್ನು ಬಿಡಿಸಿಕೊಂಡು ಕುಳಿತಳು. 'ಲಕ್ಷ್ಮಿ ನೀರುತಾ' ಎಂದು ಅಂಗಳದಿಂದಲೆ ಕರೆದ ಲಕ್ಷ್ಮಿಯು ಕುಳಿತಲ್ಲಿಂದಲೇ, 'ಆ ತೊಂಡೆ ಚಪ್ಪರದಡಿಯ ಟಾಂಕಿಯಲ್ಲಿದೆ. ತೆಗೆದುಕೊಳ್ಳಿ' ಎಂದಳು. ಸುಬ್ಬಣ್ಣ ಅಲ್ಲಿಯೇ ಬಾಯಿ ಮುಕ್ಕುಳಿಸಿಕೊಂಡು ಬಂದ. ಲಕ್ಷ್ಮಿಯು ಮೂಗುತಿಯ ತಿರುಪನ್ನು ಸರಿಪಡಿಸುತ್ತಾ ಕುಳಿತಿದ್ದಳು. ಅವಳು ಹಾಗೆಯೇ ಕುಳಿತುಕೊಂಡದ್ದಕ್ಕೋ ಅಥವಾ ಹೆಂಡತಿಯನ್ನು ಕಂಡಾಗಲೆಲ್ಲಾ ಒಂದು ಕೆಲಸ ಹೇಳಿ ತನ್ನ ಅಧಿಕಾರ ಮೆರೆಸಬೇಕು ಎಂಬ ಕಾರಣಕ್ಕೋ ಅಂತು, 'ಲಕ್ಷ್ಮಿ – ಒಂದು ಲೋಟ ನೀರು ತೆಗೆದುಕೊಂಡು ಬಾ' ಎಂದು ಉಸ್ಸಪ್ಪಾ ಎಂದುಕೊಂಡು ಕುಳಿತ. ಲಕ್ಷ್ಮಿಯು 'ಒಂದು ಗಳಿಗೆ ಕೂತುಕೊಳ್ಳುವುದಕ್ಕೆ ಬಿಡುವುದಿಲ್ಲಪ್ಪಾ ನೀವು' ಎಂದು ಗೊಣಗುತ್ತಾ ಹೋಗಿ ನೀರು ತೆಗೆದುಕೊಂಡು ಬಂದಳು. ಸುಬ್ಬಣ್ಣ ನೀರು ಕುಡಿದು ಮತ್ತೊಮ್ಮೆ ಹುರಿಕೆಯನ್ನು ಬಿಟ್ಟು, 'ಇದೊಂದು ಗ್ರಹಚಾರ. ಈ ವಾಯು ಬಾಧೆ ಮುಗಿಯುವ ಹಾಗೆ ಕಾಣಿಸುವುದಿಲ್ಲ' ಎಂದು ತನ್ನ ಪಾಡಿಗೆ ಎಂಬಂತೆ ಹೇಳಿಕೊಂಡ. 'ಕಷಾಯ ಕುಡೀರಿ' ಅಂದ್ರೆ ನೀವು ಕೇಳುವುದಿಲ್ಲ' ಎಂದು ಹೇಳುತ್ತಾ ಯಥಾಪ್ರಕಾರ ಲಕ್ಷ್ಮಿಯು ಕಾಲು ನೀಡಿಕೊಂಡು ಕುಳಿತಳು.

‘ಆ ದೀಪದ ಬತ್ತಿ ಸಣ್ಣ ಮಾಡುವುದಕ್ಕೆ ಆಗುವುದಿಲ್ಲವಾ? ಸುಮ್ಮನೆ ಎಣ್ಣೆ ಖರ್ಚು’ ಎಂದ ಸುಬ್ಬಣ್ಣ ದೀಪವನ್ನು ಸಣ್ಣದು ಮಾಡಿದ. ಮತ್ತೆ ಗಂಡ ಹೆಂಡಿರ ಮಾತುಕತೆ ಮುಂದುವರಿಯಿತು.

‘ಆ ದುಗ್ಗಮ್ಮನಿಗೆ ಏನು ಅಹಂಕಾರ ನೋಡಿ. ಗಂಡಸರು ಅಂತ ಇಲ್ಲ; ಹೆಂಗಸರು ಅಂತ ಇಲ್ಲ ಅವಳಿಗೆ’ ಎಂದು ಲಕ್ಷ್ಮಿಯು ಒಗ್ಗರಣೆ ಹಾಕಿದಳು.

‘ಹಾಳಾಗಿ ಹೋಗ್ಲಿ’

‘ಅದೇ ದುಗ್ಗಮ್ಮ’

‘ಅವಳ ಅಹಂಕಾರ ಇಳಿಸಬೇಕು’

‘ನೀವು ಎಂಥಾ ಗಂಡಸರೋ ಏನೋ, ಅವಳ ಅಹಂಕಾರ ಇಳಿಸಲಾಗುವುದಿಲ್ಲ.’

ಸುಬ್ಬಣ್ಣ ‘ಹೋಗ್ಲಿ ಬಿಡು. ಅವಳಿಗೆ ಏನು ಮಾಡಬೇಕೋ ಅದನ್ನೇ ಮಾಡುತ್ತೇನೆ’ ಎನ್ನುತ್ತಾ ಆಕಳಿಸಿಕೊಂಡ: ಹ್ಞೂಂ ಹೋಗಿ ಚಾಪೆ ಹಾಕು. ಅಂತಂದು ಅಂಗಳದ ಕಡೆಗೆ ಹೆಜ್ಜೆಹಾಕಿದ.

* * * * *

ಮರುದಿನ ಬೆಳಿಗ್ಗೆ ಶ್ರೀಮಠಕ್ಕೆ ಹೋಗಿ ಪಾರುಪತ್ಯೇಗಾರರನ್ನು ಕಂಡು ದುಗ್ಗಮ್ಮ ಮತ್ತು ಮೂಸೆಬ್ಯಾರಿಗೆ ಅನೈತಿಕ ಸಂಬಂಧವಿದೆಯೆಂದೂ ಅವಳಿಗೆ ಬಹಿಷ್ಕಾರ ಹಾಕಬೇಕೆಂದು ಸುಬ್ಬಣ್ಣ ವಿನಂತಿಸಿಕೊಂಡ. ಶ್ರೀಮಠದ ಪಾರುಪತ್ಯಗಾರರು ಅದನ್ನು ಒಪ್ಪಿಕೊಂಡರು. ವಿಧವೆಯೊಬ್ಬಳು ಧರ್ಮಬಾಹಿರ ಕೆಲಸ ಮಾಡಿದರೆ ಅದು ಶ್ರೀಮಠದ ಘನತೆಗೆ ತಕ್ಕುದಲ್ಲದ ಕೆಲಸವೆಂದೂ, ಧರ್ಮಬಾಹಿರ ಕೆಲಸಕ್ಕೆ ಬಹಿಷ್ಕಾರವೇ ನಿಜವಾದ ಪರಿಹಾರವೆಂದು ಪಾರುಪತ್ಯಗಾರರಿಗೆ ಅನಿಸಿತು. ಅದಕ್ಕಿಂತ ಹೆಚ್ಚು – ಪಾರುಪತ್ಯಗಾರರಿಗೆ ಶ್ರೀಮಂತನಾದ ಸುಬ್ಬಣ್ಣನನ್ನು ಎದುರುಹಾಕಿಕೊಳ್ಳುವುದು ಬೇಕಿರಲಿಲ್ಲ. ಅದರಂತೆ ಶ್ರೀಮಠದ ಶಿಷ್ಯವೃಂದದ ಮೂಲಕ ಒಂದು ಆದೇಶವನ್ನು ತಯಾರಿಸಿ ಇನ್ನು ಮುಂದೆ ದುಗ್ಗಮ್ಮನೊಂದಿಗೆ ಜಾತ್ಯಸ್ಥರು ಯಾವುದೇ ವ್ಯವಹಾರ ಇಟ್ಟುಕೊಳ್ಳಬಾರದೆಂದು ಸೂಚಿಸಲಾಯಿತು. ಈ ಆದೇಶವನ್ನು ಇಟ್ಟುಕೊಂಡು ಸುಬ್ಬಣ್ಣ ಊರಿಗೆ ಮರಳುವಾಗ ರಾತ್ರಿಯಾಗಿತ್ತು. ನಡೆದ ಘಟನೆಯನ್ನು ಸಾದ್ಯಂತವಾಗಿ ಹೆಂಡತಿಯೊಂದಿಗೆ ವಿವರಿಸಿ ಸುಬ್ಬಣ್ಣ ದುಗ್ಗಮ್ಮನ ಮೇಲೆ ಸೇಡು ತೀರಿಸಿಕೊಂಡ ಸಂತೋಷ ಅನುಭವಿಸಿದ. ಉದ್ದಕಾಲು ಲಕ್ಷ್ಮಿಯು ತನ್ನ ಗಂಡನ

ಪರಾಕ್ರಮ ಮೆಚ್ಚಿಕೊಂಡು ಅತೀವ ಸಂತೋಷವನ್ನು ಅನುಭವಿಸಿದಳು. ದುಗ್ಗಮ್ಮನ ಕಿವಿಗೂ ಗಾಳಿಸುದ್ದಿಯು ತಲುಪಿತು. ಸುದ್ದಿಯನ್ನು ಒಂದಿಷ್ಟು ರಂಗು ಸೇರಿಸಿ ಹೇಳಿದ್ದು ಕರಿಪರಮೇಶ್ವರಿ. ಪರಮೇಶ್ವರಿಯ ಎಲೆಯಡಿಕೆ ಹಾಕಿಕೊಂಡ ಕೆಂಪುರಂಗಿನ ತುಟಿಯೆಡೆಯಿಂದ ರಂಗು ರಂಗಿನ ಮಾತು ಹೊರಬಿತ್ತು.

'ನಿಮಗೆ ಬಹಿಷ್ಕಾರ ಹಾಕ್ತಾರಂತೆ'

'ಯಾರು ಹೇಳಿದ್ದು'

'ಏನೋಪ್ಪಾ, ಈವತ್ತು ಲಕ್ಷ್ಮಿಯಮ್ಮ ಹೇಳುತ್ತಿದ್ದರು'

'ಹಾಕಲಿಬಿಡು, ಯಾಕಂತೆ?'

'ಅದೇ ನಿಮಗೂ ಮೂಸೆಬ್ಯಾರಿಗೂ ಸಂಬಂಧವಿದೆಯಂತೆ'

'ಇದೆಯೆಂದು ಎಲುಬಿಲ್ಲದ ನಾಲಿಗೆ ಹೇಳುತ್ತದೆ'

'ಆದರೂ ಗಂಟಲು ಕಟ್ಟುವುದು ಕಷ್ಟ'

'ಪರಮೇಶ್ವರಿ, ಒಂದು ವೇಳೆ ಬಹಿಷ್ಕಾರ ಹಾಕಿದರು ಅಂತ ಇಟ್ಟುಕೋ' ಅದಕ್ಕೆ ನಾನೇನು ಮಾಡಬಹುದು?

'ದುಗ್ಗಕ್ಕ ನೀನು ಹೆಂಗಸು. ಒಂಟಿ ಜೀವ. ಈ ಕಷ್ಟಕಾಲದಲ್ಲಿ ನೀನು ಒಂಟಿಯಾದರೆ ಮತ್ತೂ ಕಷ್ಟ.'

'ಆದದ್ದು ಆಗಲಿ ಎದುರಿಸುತ್ತೇನೆ; ಯಾರು ಏನೋ ಅಂದರು ಅಂತ ಸಾಯುವುದಕ್ಕೆ ಆಗುವುದಿಲ್ಲ'

'ಅದು ನಿಜ'

ಪರಮೇಶ್ವರಿ ಎಲೆಯಡಿಕೆ ಹಾಕಿಕೊಂಡಳು. ಎದುರಾದ ಸನ್ನಿವೇಶವನ್ನು ಬಗ್ಗುಬಡಿಯುವುದು ಮಾತ್ರ ಅವಳ ಮಟ್ಟಿಗೆ ಕಷ್ಟಕರವಾಗಿತ್ತು. ಅದೇ ದಿನ ರಾತ್ರಿ ಎಲ್ಲರೂ ತನ್ನನ್ನು ಬಿಟ್ಟು ಬಿಟ್ಟಿದ್ದಾರೆಂದು ದುಗ್ಗಮ್ಮನಿಗೆ ಅನಿಸಿದ ಕ್ಷಣ – ಒಂಟಿ ಮನೆಯಲ್ಲಿ ಸುದೀರ್ಘವಾಗಿ ಅಳುತ್ತಾ ಕುಳಿತಿದ್ದಳು. 'ಮುಂದೇನು ಗತಿ ದೇವರೇ' ದುಗ್ಗಮ್ಮ ಅಳುತ್ತಿರುವಾಗಲೇ ಮೂಸೆಬ್ಯಾರಿ ಬಂದ. ದುಗ್ಗಮ್ಮ ಎಲ್ಲಾ ಕತೆಯನ್ನು ವಿವರಿಸಿ ಹೇಳಿದಳು. ಹೋಗಲಿ ಬಿಡಿಯಮ್ಮನೆಂದ ಮೂಸೆ.ದ'ು ಗ'್ಗ ವ'್ಮ ಜ್ಜಿ ಅಂದಿನಿಂದ ಪೂರ್ತಿ ಬದಲಾದಳು.: ಆದರೆ ತನ್ನ ಸಣ್ಣ ಮನೆಯನ್ನು ಬಿಡಲಿಲ್ಲ. ಅವಳ ಬಿಳಿಯ ವಸ್ತ್ರ ಕೊನೆಯ ತನಕ ಹಾಗೆಯೇ ಇತ್ತು. 'ರಾಮನಾಮ' ಮತ್ತು

‘ನಮಃ ಶಿವಾಯ’ ಬಿಡಲಾಗಲಿಲ್ಲ. ದುಗ್ಗಮ್ಮನೆಂಬ ಹೆಸರು ಕೂಡಾ ಮಾಯವಾಗಲಿಲ್ಲ. ಆವತ್ತು ದುಗ್ಗಮ್ಮ ತಲೆ ಬೋಳಿಸಲು ಬಾಳು ಭಂಡಾರಿಯನ್ನು ಬರ ಹೇಳಿದಳು. ಬಾಳು ಭಂಡಾರಿ ಅವಳ ತಲೆಗೆ ಆವತ್ತು ಬಾಳು ಮುಟ್ಟಿಸಿದ. ಅವಳಿಗೆ ಮೂಸೆ ಬ್ಯಾರಿಯು ಕೊಟ್ಟ ಬೆಂಬಲವು ಸಣ್ಣದಲ್ಲ.

* * * * *

**“ನೀತಿ–ಅನೀತಿಯ ನಡುವಣ ಗೆರೆ ತುಂಬಾ**
**ಸಣ್ಣದು. ಲಕ್ಷ್ಮಣರೇಖೆಯನ್ನು ದಾಟಿದರೆ**
**ಅನೀತಿ. ಅದರೊಳಗೆ ನಿಂತು ಭಿಕ್ಷ ನೀಡಿದರೆ**
**ನೀತಿ” [ಒಬ್ಬ ತತ್ವಜ್ಞಾನಿಯ ಮಾತಿದು]**

1992
ಮೇ
25

ಕುಳ್ಳ ಮಾಚನ ಮನೆಯಿರುವುದು ಮೂಡಡ್ಕದಲ್ಲಿ. ಒಂದು ಕಾಲಕ್ಕೆ ಈ ಮೂಡಡ್ಕದ ಜಮೀನನ್ನು ಕೊಳ್ಳುವವರಿರಲಿಲ್ಲ. ಕಲ್ಲು ಎಂದರೆ ಕಲ್ಲು. ಮುರಕಲ್ಲಿನ ಬಯಲು. ಒಂದು ದೊಡ್ಡ ಅಡ್ಕದಂತೆ ಇತ್ತು ಅದನ್ನು ಕೃಷಿಗೆ ಯೋಗ್ಯವಾದ ಜಮೀನು ಅಂತ ಯಾರೂ ಭಾವಿಸಿರಲಿಲ್ಲ. ಗುಡ್ಡದ ತುದಿಯಲ್ಲಿರುವ ಈ ಅಡ್ಕವನ್ನು ಯಾರೂ ಕೊಂಡುಕೊಳ್ಳದಿರುವುದಕ್ಕೆ ಮುಖ್ಯ ಕಾರಣ ಅದರ ಕಲ್ಲುಗಳು. ಅವು ಬಂಡೆ ಕಲ್ಲುಗಳೂ ಅಲ್ಲ – ಮುರ ಕಲ್ಲುಗಳು. ಹೆಚ್ಚು ಕೆಲಸವನ್ನು ನಿರೀಕ್ಷೆ ಮಾಡುತ್ತವೆ. ಉಳಿದ ಕಡೆ ಅಡಿಕೆ ಸಸಿ ನೆಡಲು ಎರಡಡಿ ಗುಂಡಿಯಿದ್ದರೆ ಈ ತರದ ಜಮೀನಿನಲ್ಲಿ ಮೂರು – ಮೂರುವರೆ ಅಡಿ ಗುಂಡಿ ಬೇಕು. ನೀರು ಹೆಚ್ಚು ಬೇಕು. ಯಾರಿಗೂ ಬೇಡವಾದ ಈ ಜಮೀನು ಹೀಗೆಯೇ ಖಾಲಿಬಿದ್ದಿತು. ಯಾರೋ ಇದರಲ್ಲಿ ಕೃಷಿ ಮಾಡಲು ಹೋಗಿ ಅದನ್ನು ಮಾಡಲಾಗದೆ ಸೋತು ಹೋಗಿರುವುದಕ್ಕೆ ಕುರುಹಾಗಿ ಅಡ್ಕದ ಸುತ್ತ ಹಾಕಿರುವ ಕಳ್ಳಿಗಿಡಗಳು ಮತ್ತು ಅಡ್ಕದ ನಡುವಿನಲ್ಲಿ ಒಂದು ದೊಡ್ಡ ಆಳವಾದ ಗುಂಡಿಯು ಸಾಕ್ಷಿಯಾಗಿದೆ. ಗುಂಡಿಯಲ್ಲಿ ಕಡು ಬೇಸಿಗೆಯಲ್ಲಿಯೂ ಒಂದು ಸ್ವಲ್ಪ ನೀರು ಇರುತ್ತದೆಯೆನ್ನುವುದು ನಿಜ. ಪಾಂಡವರ ವನವಾಸದ ಸಂದರ್ಭದಲ್ಲಿ ನಡೆಯಲಾಗದೆ ಸೋತು ದ್ರೌಪದಿಯು ಭೀಮನ ಹೆಗಲ ಮೇಲೆ ಕುಳಿತುಕೊಂಡು ಭೀಮನತ್ರ, 'ನನಗೆ ನೀರು ಬೇಕು' ಎಂದಳಂತೆ. ಅದಕ್ಕೆ ಭೀಮ ಕೈಯಲ್ಲಿ ಗುದ್ದಿ ಕೆರೆಯನ್ನು ತೆಗೆದನಂತೆ. ಹಾಗಾಗಿ ಈ ಬಾವಿಗೆ ದ್ರೌಪದಿಬಾವಿಯೆಂಬ ಹೆಸರು ಬಂತು ಅಂತ ಹೇಳುತ್ತಾರೆ. ಎಲ್ಲರೂ ಉಪಯೋಗಕ್ಕೆ ಬಾರದ ಜಮೀನು ಅಂತ ಬೀಳು ಬಿಟ್ಟಿದ್ದನ್ನು ಬಡ್ಡಿ ಸುಬ್ಬಣ್ಣ ಕುಳ್ಳ ಮಾಚನಿಗೆ ಐನೂರು ರೂಪಾಯಿಗೆ ಮಾರಿದ್ದ. ಕುಳ್ಳ ಮಾಚ ಬಂದುದು ಪುತ್ತೂರು ಸೀಮೆಯಿಂದ. ಬೊಳುವಾರಿನ ಹತ್ತಿರವಿದ್ದ ಅವನ ಹಿರೀಕರ ಜಾಗವನ್ನು ಮಾರಿ ಅದರಲ್ಲಿ ಸಿಕ್ಕಿದ ದುಡ್ಡನ್ನು ಬಡ್ಡಿ ಸುಬ್ಬಣ್ಣನ ಕೈಗೆ ಹಾಕಿ ಜಮೀನನ್ನು ತನ್ನ ಹೆಸರಿಗೆ ಮಾಡಿಕೊಂಡ. ಲೆಕ್ಕ ತೆಗೆದರೆ ಕುಳ್ಳ ಮಾಚ ಎತ್ತರ ಒಟ್ಟು ನಾಲ್ಕಡಿ. ತುಂಬಾ ಸಪೂರ ಜೀವ. ಎತ್ತರಕ್ಕೆ ತಕ್ಕಂತೆಯೆ ಮೈ ಬಗ್ಗಿಸಿಕೊಂಡು ನಡೆಯುವುದು ಅವನ ರೂಢಿ. ಕೈ – ಕಾಲುಗಳು ಕೂಡಾ ಸಪೂರ. ಕಾಲಿನಲ್ಲಿ ಬೆಳ್ಳಿಯ ಬಳೆ ಬೇರೆಯಿದೆ. ಅವನ ಹೆಂಡತಿಯ ಹೆಸರು ಕೂಡಾ ದ್ರೌಪದಿಯೇ.

ದೋಪಿಯಂತ ಅವಳನ್ನು ಕರೆಯುತ್ತಿದ್ದರು. ದೋಪಿ ಮಾತ್ರ ತುಂಬಾ ದಪ್ಪ ಎತ್ತರ ಮತ್ತು ದುಂಡಗಿನವಳು. ಆಕಾರಕ್ಕೆ ತಕ್ಕದಾದ ಸ್ವರವಾಗಲೀ ಧೈರ್ಯವಾಗಲೀ ಅವಳಿಗಿರಲಿಲ್ಲ. ಒಂದು ಜಿರಳೆ; ಒಂದು ಇಲಿ; ಒಂದು ಹಾವು ಹೀಗೆ ಏನೂ ಕಂಡರೂ ಹೆದರುವ ಸ್ವಭಾವ ಅವಳದು. ಮಾಚನ ಸೋದರಮಾವನ ಮಗಳು ಮಾಚನ ಸೋದರ ಮಾವ ಸಾಯುವಾಗ ದೋಪಿಯನ್ನು ಮದುವೆಯಾಗುವಂತೆ ಅವನಿಗೆ ಹೇಳಿ ಕಣ್ಣು ಮುಚ್ಚಿದ. ಹಾಗೆಯೇ ಅವರಿಬ್ಬರಿಗೆ ತುಂಬಾ ಒಳ್ಳೆಯ ಹೊಂದಾಣಿಕೆಯಿತ್ತು ಎನ್ನುವುದಕ್ಕೆ ಹುಟ್ಟಿದ ಒಂಬತ್ತು ಮಕ್ಕಳು ಸಾಕ್ಷಿ. ಊರು ಬಿಟ್ಟು ಇನ್ನೊಂದು ಊರಿಗೆ ಹೋಗಿ ನೆಲೆಸುವವರಿಗೆ; ಅದೂ ಹೊಸದಾಗಿ ಕೃಷಿ ಕೈಗೊಳ್ಳುವವರಿಗೆ ಉಂಟಾಗುವ ಕಷ್ಟಗಳು ಮಾಚನಿಗೂ ಉಂಟಾಯಿತು. ಬೇಲಿಯ ಕೆಲಸ; ಬಾವಿಯ ಕೆಲಸ; ಮನೆಕೆಲಸ; ಅಡಿಕೆ ನೆಡುವ ಕೆಲಸ ಹೀಗೆ ಒಂದೊಂದೇ ಕೆಲಸ ಮಾಡಿಸುತ್ತಾ ಬಂದ. ಅವನು ಮಾಡಿಸುವ ಭರ್ಜರಿ ಕೆಲಸ ನೋಡಿ ಅವನಿಗೆ ಬಡ್ಡಿ ಸುಬ್ಬಣ್ಣನೂ ಆಪ್ತೇಷ್ಟರಲ್ಲಿ ಒಬ್ಬನಾದ. ಬಡ್ಡಿ ಸುಬ್ಬಣ್ಣ ಸಂಜೆ ಹೊತ್ತಿಗೆ ಮಾಚನ ಮನೆಗೆ ಹೋಗುವುದು ತಪ್ಪಿದರೆ ಮಾಚನು ಬಡ್ಡಿ ಸುಬ್ಬಣ್ಣನ ಮನೆಗೆ ಹೋಗುವುದು ನಡೆಯಿತು. ತಮ್ಮ ತಮ್ಮ ಗಂಡಂದಿರು ಅಷ್ಟು ಆತ್ಮೀಯವಾಗಿರುವಾಗ ನಾವೂ ಪರಸ್ಪರ ಆತ್ಮೀಯರಾಗಬೇಕಲ್ಲವೆ ಎಂದುಕೊಂಡು ಉದ್ದಕಾಲು ಲಕ್ಷ್ಮಿ ಮತ್ತು ದೋಪಿಯರೂ ಪರಸ್ಪರ ಆತ್ಮೀಯರಾದರು. 'ನನ್ನ ಬುಗುಡಿಯನ್ನು ನೀನು ಹಾಕಿಕೋ ಲಕ್ಷ್ಮಿ' ಎಂದು ದೋಪಿಯು ಹೇಳಿದರೆ 'ನನ್ನ ಒಂದೆಳೆ ಸರದ ಪದಕ ಬೇಕಿದ್ದರೆ ಮದುವೆಗೆ ನೀನು ಹಾಕಿಕೊಂಡು ಹೋಗು' ಎಂದು ಲಕ್ಷ್ಮಿಯು ಹೇಳುತ್ತಿದ್ದಳು. ಸುಬ್ಬಣ್ಣ ಕಾಸಿಗೆ ಕಾಸು ಗಂಟು ಹಾಕಿದರೆ, ಮಾಚನದು ಧಾರಾಳ ಕೈ. ಲೆಕ್ಕಚಾರದಲ್ಲಿ ಎಷ್ಟು ಉಳಿಸಿ, ಎಷ್ಟು ಖರ್ಚು ಮಾಡಬಹುದು ಎಂದು ಲೆಕ್ಕಚಾರ ಹಾಕದೆ ಸುಬ್ಬಣ್ಣ ಯಾವುದೇ ಕೆಲಸಕ್ಕೆ ಕೈಯಿಡುವವನಲ್ಲ. ಮಾತೆತ್ತಿದರೆ, "ಈ ಊರಿನಲ್ಲಿ ನಮ್ಮ ಮಾಚಣ್ಣನಂಥವರನ್ನು ಕಂಡಿಲ್ಲ. ಇಂಥವರ ನೆರಳಿದ್ದರೆ 'ಮಳೆ ಬೆಳೆಯಾಗುತ್ತದೆ'ಯೆಂದು ಸುಬ್ಬಣ್ಣ ಬಾಯಿತುಂಬಿ ಹೊಗಳುತ್ತಿದ್ದ: ಪ್ರತಿ ಎರಡು – ಮೂರು ದಿನಕ್ಕೊಮ್ಮೆ ಸುಬ್ಬಣ್ಣ ಮಾಚನ ಮನೆಗೆ ಮಧ್ಯಾಹ್ನದ ಹೊತ್ತಿಗೆ ಹೋಗುವುದು. ಕೂಳು ಕತ್ತರಿಸುವುದು, ಸಂಜೆ ಕಾಫಿ ಕುಡಿದು ವಾಪಾಸು ಬರುವುದು. ಹೀಗೆ ವ್ಯವಹಾರ ಪ್ರಾರಂಭಿಸಿದ. ಇಂಥ ಸಂದರ್ಭದಲ್ಲಿ ಮಾಚ ಮತ್ತು ಸುಬ್ಬಣ್ಣ ಜೊತೆಯಾಗಿ ಮನೆಗೆ ದಿನಸಿ ಸಾಮಾನುಗಳನ್ನು ಮಂಗಳೂರಿನಿಂದ ಲಾರಿ ಮೂಲಕ ತರಿಸಲು ಪ್ರಾರಂಭಿಸಿದರು. ಲಾರಿಯ ಹೆಸರು 'ಭಾರತ್' ದೂರದಿಂದಲೇ ಹಾರ್ನ್ ಹಾಕಿಕೊಂಡು ವಿಕಾರವಾದ ಸದ್ದು ಹೊರಡಿಸುತ್ತಾ ಬರುವ ಲಾರಿಯ ಸದ್ದು ಕೇಳಿ ಊರಿನವರಿಗೆ ಮಾಚನ ಶ್ರೀಮಂತಿಕೆಯ ಬಗ್ಗೆ

ಯಾವ ಅನುಮಾನವೂ ಇರಲಿಲ್ಲ. ಮಳೆಗಾಲದಲ್ಲಿ ಭಾರತ್ ಲಾರಿ ಬಂದು ಕೆಸರಿನ ಮಧ್ಯೆ ಹೂತು ಹೋದರೆ ಅದನ್ನು ಎತ್ತಲು ಊರಿನವರು ಸೇರಿಕೊಳ್ಳುತ್ತಿದ್ದರು. ಓಲೆಯ ಮೂಟೆಯಲ್ಲಿದ್ದ ದೊಡ್ಡ ದೊಡ್ಡ ಉಂಡೆ ಬೆಲ್ಲ ಮತ್ತು ಪಾನಕದ ಆಸೆಯಿಂದ ಜನರು ಲಾರಿಯನ್ನು ಸ್ವಲ್ಪ ದೂಡುವುದು ಮತ್ತೆ ಆಯಾಸವಾದಂತೆ ನಟಿಸುವುದು ಮಾಡುತ್ತಿದ್ದರು. ಮಾಚನ ಮಗ ಅಣ್ಣಿಗೆ ಆಗ ನೀರು ಕೊಡುವ ಕೆಲಸ. ಓಲೆಯ ಮೂಟೆಯಲ್ಲಿದ್ದ ಅರ್ಧಕ್ಕರ್ಧ ಬೆಲ್ಲ ಹೀಗೆಯೇ ಖಾಲಿಯಾಗುತ್ತಿತ್ತು.

ಊರಿನ ಜನರಲ್ಲಿ ಮಾಚನೆಂದರೆ ಗಟ್ಟಿಕುಳವೆಂಬ ಅಭಿಪ್ರಾಯವು ಮೂಡಿಬಂತು. ಮತ್ತೆ ಸುಬ್ಬಣ್ಣ ಅವನಿಗೆ ತಿದಿಯೊತ್ತಿದ್ದ. “ಮಾಚಣ್ಣ ಏನಿದ್ದರೂ ನಿನ್ನಂಥವರು ಒಂದು ಕಾರು ತೆಗೆದುಕೊಳ್ಳಬೇಕಪ್ಪಾ”. ಮಾಚನಿಗೂ ಅವನು ಹೇಳಿದ್ದು ಸರಿಯೆನಿಸಿತು.

ಒಂದು ದಿನ ಬೆಳಗಿನ ಜಾವವೇ ಸುಬ್ಬಣ್ಣ ಮತ್ತು ಮಾಚ ಮಂಗಳೂರಿಗೆ ಹೋಗಿ ಒಂದೆರಡು ದಿನವಿದ್ದು ಒಂದು ಒಳ್ಳೆಯ ಕಪ್ಪು ಸೆಕೆಂಡ್ ಹ್ಯಾಂಡ್ ಕಾರು ಕೂಡಾ ತಂದರು. ಅಣ್ಣಿ ಆ ದಿನ ಕಾರಿನ ಹಾರ್ನ್ ಹೊಡೆದಿದ್ದೇ ಹೊಡೆದದ್ದು – ಇಡೀ ಊರಿಗೆ ಕೇಳಿಸುವವ ಹಾಗೆ! ಮರುದಿನ ಬೆಳಿಗ್ಗೆ ಕಾರು ಸ್ಟಾರ್ಟಾಗಲಿಲ್ಲ ಎನ್ನುವುದು ಬೇರೆ ಮಾತು!

ಒಂದೇ ಒಂದು ದಿನವೂ ತೋಟಕ್ಕೆ ಇಳಿಯದ ಮಾಚನಿಗೆ ಒಕ್ಕಲಾಗಿ ಬಂದವನು ಕೃಷ್ಣಪ್ಪ. ಕೃಷ್ಣಪ್ಪ ಒಂದು ವರ್ಷ, ಎರಡು ವರ್ಷ ತೋಟದಲ್ಲಿ ಕೆಲಸ ಮಾಡುತ್ತಾ ಒಂದು ದಿವಸ, “ಧಣಿಗಳೇ ತೋಟದ ಮೂಲೆಯಲ್ಲಿ ಒಂದು ಗುಡಿಸಲು ಹಾಕಿಕೊಳ್ತೇನೆ” ಎಂದು ಹೇಳಿದ. ಮಾಚ ಅದಕ್ಕೆ ಒಪ್ಪಿಗೆಯನ್ನು ಕೊಟ್ಟ.

ಮಾಚನ ಬುಡ ಅಲ್ಲಾಡುತ್ತಾ ಬಂತು. ಒಂದು ದಿನ ಸುಬ್ಬಣ್ಣನತ್ರ; ‘ಸುಬ್ಬಣ್ಣ ಒಂದೆರಡು ಸಾವಿರ ಸಾಲಬೇಕಿತ್ತು. ಕೊಟ್ರೆ ಅಡಿಕೆ ಫಸಲಿನ ಸಮಯದಲ್ಲಿ ವಾಪಾಸು ಮಾಡ್ತೇನೆ’ ಎಂದ.

ಸುಬ್ಬಣ್ಣ “ನಿನಗಲ್ಲದೆ ಇನ್ಯಾರಿಗೆ ಕೊಡಲಿ? ಮನುಷ್ಯರು ಅಂದ್ರೆ ಒಬ್ಬರಿಗೊಬ್ಬರು ಆಗಬೇಕು. ಇಲ್ಲದಿದ್ದರೆ ನಾವು ಹೆಣಕ್ಕೆ ಸಮ. ನಾನು ಜೀವನದಲ್ಲಿ ನಂಬಿದ್ದು ಅದನ್ನು. ನನ್ನನ್ನು ಕಂಡರೆ ಆಗದಿದ್ದವರು ಒಂದಕ್ಕೊಂದು ಹೇಳ್ತಾರೆ” ಎಂದ.

“ನಿನ್ನ ಉಪಕಾರವನ್ನು ನಾನು ಜನ್ಮಕಾಲದಲ್ಲಿ ಮರೆಯುವುದಿಲ್ಲ” ಎಂದ ಮಾಚ ಸುಬ್ಬಣ್ಣನ ಎದುರಿನ ಎಲೆ ತಟ್ಟೆಗೆ ಕೈ ಹಾಕಿದ. ಸುಬ್ಬಣ್ಣ “ಆದರೂ

ಮಾಚಣ್ಣ ವ್ಯವಹಾರ ಬೇರೆ: ವೈಯಕ್ತಿಕ ಸಂಬಂಧಗಳು ಬೇರೆ, ಏನಂತಿಯಾ?" ಅಂದ.

ಸುಬ್ಬಣ್ಣನ ಮಾತಿಗೆ ಅಲ್ಲವೆಂದು ಹೇಳಲು ಸಾಧ್ಯವಾಗದೆ, "ಹೂಂ, ಹೌದು ಮತ್ತೆ" ಅಂದ. ಸುಬ್ಬಣ್ಣ ಮನೆಯೊಳಗೆ ಹೋಗಿ ಖಾಲಿ ಠಸ್ಸೆಪೇಪರ್; ಶಾಯಿ ಎಲ್ಲಾ ತೆಗೆದುಕೊಂಡು ಬಂದು ಮಾಚನತ್ರ ಎಲ್ಲೆಲ್ಲಿ ಬೇಕೋ ಅಲ್ಲೆಲ್ಲಾ ಎಡಗೈ ಹೆಬ್ಬೆಟ್ಟಿನ ರುಜು ಹಾಕಿಸಿ; ಅದರ ಪಕ್ಕದಲ್ಲಿ ಅವನ ರುಜುವನ್ನು ಹಾಕಿಸಿಕೊಂಡ ಆಮೇಲೆಯೇ ಸುಬ್ಬಣ್ಣ ದುಡ್ಡನ್ನು ಮಾಚನಿಗೆ ಕೊಟ್ಟದ್ದು. ಮಾಚನಿಗೆ ಸಾಲ ವಾಪಾಸು ಮಾಡಲಾಗಲಿಲ್ಲ. ಬಡ್ಡಿಗೆ ಬಡ್ಡಿ ಬೆಳೆಯಿತು. ಸುಬ್ಬಣ್ಣನದು ಓಡುವ ಕುದುರೆಯಂಥ ಬಡ್ಡಿ ವ್ಯಾಪಾರ. ಚಕ್ರ ಬಡ್ಡಿಯ ಲೆಕ್ಕ. ಅವನತ್ರ ಸಾಲ ತೆಗೆದುಕೊಂಡವರು ಅಸಲು ಕಟ್ಟಲಾಗುವುದಿಲ್ಲ. ಬಡ್ಡಿ ಕಟ್ಟುವುದೇ ಆಗಿ ಹೋಯಿತು. ಅದರಾಚೆಗೆ ಅವರ ಕೈಯಲ್ಲಿ ಏನೂ ಉಳಿಯುವುದಿಲ್ಲ. ಸುಬ್ಬಣ್ಣನತ್ರ ಸಾಲ ಮಾಡಿದವರು ಮನೆ ಮಠ ಮಾರುವುದೇ ಸೈ ಎನ್ನುವ ಮಾತು ಮಾಚನ ವಿಷಯದಲ್ಲಿ ಸತ್ಯವಾಯಿತು. ದೋಪಿಯ ಚಕ್ರ ಸರ ಹೋಯಿತು. ಕಿವಿಯ ಬುಗುಡಿ ಹೋಯಿತು. ಕರಿಮಣಿ ಹೊರತು ಕೊನೆಗೆ ಯಾವುದೂ ಉಳಿಯಲಿಲ್ಲ.

ಸುಬ್ಬಣ್ಣ ಎರಡು ವರ್ಷ ಕಾದು ಕೋರ್ಟು ಮೂಲಕ ಮಾಚನಿಗೆ ನೋಟಿಸು ಕಳಿಸಿಕೊಟ್ಟ. ಮಾಚನಿಗೆ ಒಕ್ಕಲಾಗಿದ್ದ ಕೃಷ್ಣಪ್ಪನೂ ಸಾಲ ಕೊಟ್ಟು ಮಾಚನ ಅರ್ಧ ಜಾಗ ವಶಪಡಿಸಿಕೊಂಡ. ದಾರಿಯಿಲ್ಲದೆ ಮಾಚ ಕೋರ್ಟಿಗೆ ದಿವಾಳಿ ಅರ್ಜಿಯನ್ನು ಕೊಡಬೇಕಾಯಿತು. ಅಲ್ಲಿಗೆ ಅವನ ಕತೆ ಮುಗಿಯಿತು.

ಮಾಚ ವಾಸ್ತವವಾಗಿ ಊರಿಗೆ ಬರುವಾಗ ಅವನ ಪಿತ್ರಾರ್ಜಿತ ಆಸ್ತಿ ಮಾರಿ ಕೊಂಡು ಬಂದ.ಊರಿಗೆ ಬಂದ ಮೇಲೆ ದಿವಾಳಿಯಾದ.ಈ ದಿವಾಳಿಯೆಂಬ ಪದ ತಿಳಿದದ್ದು ಎಷ್ಟೋ ವರ್ಷಗಳ ನಂತರ. ಕೊನೆ ಕೊನೆಗೆ ಸಾಲಗಾರರ ಕಾಟ ತಪ್ಪಿಸಲು ಕೆಲವು ದಿನ ಓಡಿ ಹೋದ. ಅವನ ತೋಟದ ಹಣ್ಣಡಿಕೆ ಅಂಗಳಕ್ಕೆ ಬಂದು ಬಿದ್ದಾಗ ಬಡ್ಡಿ ಸುಬ್ಬಣ್ಣ ಅದನ್ನೂ ಬಿಡಲಿಲ್ಲ. ಮಾಚನ ಮನೆಯ ಅಂಗಳಕ್ಕೆ ಹಣ್ಣಡಿಕೆ ಬಂದು ಬೀಳಬೇಕಾದ ಮೊದಲೇ ಸುಬ್ಬಣ್ಣ ಹೋಗಿ ಕೂತವನು ಅವುಗಳನ್ನು ಎಣಿಸಿ ಗೋಣಿಚೀಲಕ್ಕೆ ತುಂಬಿಸಿದ. ಅಡಿಕೆ ಎಣಿಸಿ ಚೀಲಕ್ಕೆ ತುಂಬಿಸಿ ಮಾರಾಟ ಮಾಡುವ ಹೊಸ ಪರಂಪರೆಗೆ ಎಳ್ಳೆಣ್ಣೆಯ ದೀಪ ಉರಿಸಿಟ್ಟ. ಅಂಥ ಮನೆಯಿಂದ ಅಡಿಕೆ ತೆಗೆದುಕೊಳ್ಳುವುದಿಲ್ಲವೆಂದು ಬಿಳಿ ಮೂಸೆ ಹಠ ಹಿಡಿದರೆ, ಕುಂಟ ಮೂಸೆ ಅದನ್ನೇ ತೆಗೆದುಕೊಂಡ. ಮಾಚನ ಬಗೆಗೆ ನಾನು ಯಾವತ್ತೂ ಚಿಂತಿಸಿದವನಲ್ಲ ಊರಿನಲ್ಲಿ ಅಂತಹ ಕತೆ ನಡೆಯುತ್ತದೆಯೆಂದು ನನಗೆ ಗೊತ್ತಿರಲು ಸಾಧ್ಯವಿರಲಿಲ್ಲ. ಮಾಚನ ಮಗಳು ಶಂಕರಿ ನನ್ನ ಕ್ಲಾಸ್

ಮೇಟ್. ಮಾಚಣ್ಣನಿಗೆ ಬೆನ್ನು ಬೆನ್ನು ಐದು ಹುಡುಗಿಯರು. ಅನಂತ್ರ ನಾಲ್ಕು ಹುಡುಗರು. ಹುಡುಗಿಯರಿಗೆ ಒಂದೊಂದು ವರ್ಷದ ಅಂತರ. ಹಿರಿಯ ಮಗಳು ಮದುವೆಯ ವಯಸ್ಸಿಗೆ ಬಂದಾಗ ದೋಪಿ ಕೊನೆಯ ಮಗನನ್ನು ಹೆರಲು ತಯಾರಾಗಿದ್ದಳು. ಬೀಜ ಬಿತ್ತುವುದು ಗಂಡಿನ ಕೆಲಸ, ಹೆರುವುದು ಹೆಂಗಸಿನ ಕೆಲಸವೆಂದು ತಿಳಿದುಕೊಂಡ ಕಾಲವದು. 'ಹೆತ್ತು ಹೆತ್ತು ಸಾಕಾಗಿ ಹೋಯಿತು' ಅಂತ ದೋಪಿ ಹೇಳುತ್ತಿದ್ದಳು. ಮಾಚಣ್ಣ ಮಾತ್ರ 'ಎಷ್ಟಿದ್ದರೂ ಹೆಣ್ಣು ಮಕ್ಕಳು ಗಂಡನ ಮನೆಗೆ ಹೋಗುವವರು. ಅವರೇನು ಅಪ್ಪನ ಮನೆಯಲ್ಲಿ ಗೂಟ ಬಡಿದುಕೊಂಡು ಇರುತ್ತಾರಾ?' ಎಂದು ಹೇಳುತ್ತಾ ತನ್ನ ಕಾಯಕ ನಿಷ್ಠೆ ತೋರಿಸುತ್ತಿದ್ದ. ಶಂಕರಿ  ಮೂರನೆಯವಳು. ಶಂಕರಿ ನನಗೆ ವಿಷಯ ಹೇಳಿ ನನ್ನನ್ನು ಯಾವತ್ತೂ ಇಲ್ಲದ ಹಾಗೆ ನಡುಗಿಸಿ ಬಿಟ್ಟಳು. ಬಹುಶಃ ನನ್ನ ಬಾಲ್ಯದಲ್ಲಿ ನನಗೆ ಊಹಿಸಲಾಗದ ಸಂಗತಿಯನ್ನು ಅವಳು ಹೇಳುತ್ತಾಳೆಂದು ತಿಳಿದಿರಲೂ ಇಲ್ಲ. ಅವಳು ಒಂದನೆಯ ಕ್ಲಾಸಿನಿಂದ ಹೈಸ್ಕೂಲಿನವರೆಗೆ ನನ್ನ ಹತ್ತಿರವೇ ಕುಳಿತುಕೊಳ್ಳುತ್ತಿದ್ದಳು. ಸುಟ್ಟು ಹಾಕಿದ ಹಲಸಿನ ಬೀಜ; ಹುರಿದ ಹುಣಿಸೆ ಬೀಜ; ಕಾಟು ಮಾವಿನ ಹಣ್ಣು; ಅಂಬಟೆ ಹಣ್ಣುಗಳನ್ನು ನನಗೆ ಕೊಟ್ಟರೆ ನಾನು ಅವಳಿಗೆ ಜಿಬಿಲಿಕಾಯಿ; ಚೆನ್ನೆ ಕಾಯಿ; ನೆಲ್ಲಿ ಕಾಯಿಗಳನ್ನು ಕೊಡುತ್ತಿದ್ದೆ. ಅವಳಿಗೆ ಕಾಡು ನೆಲ್ಲಿಕಾಯಿ ಎಂದರೆ ಬಹಳ ಇಷ್ಟ. ಒಂದು ದಿವಸ ಅವಳಿಗಾಗಿ ನೆಲ್ಲಿಕಾಯಿ ಮರ ಹತ್ತಿ ಜಾರಿ ಬಿದ್ದು ತೊಡೆಯಲ್ಲಿ ಗಾಯ ಮಾಡಿಕೊಂಡಿದ್ದೆ. ಆ ಗಾಯದ ಗುರುತು ನನ್ನನ್ನು ಅವಳನ್ನು ಹತ್ತಿರ ಮಾಡಿದ್ದು ನಿಜ. ಆವತ್ತು ಶನಿವಾರ. ನಾನೂ ಅವಳು ನೆಲ್ಲಿಕಾಯಿ ಕೊಯ್ಯಲು ಹೋಗಿದ್ದೆವು. 'ಏಯ್ ಆ ಮರದಲ್ಲಿ ತುಂಬಾ ನೆಲ್ಲಿಕಾಯಿ'ಯಿದೆಯೆಂದು ತೋರಿಸಿದವಳು ಮರ ಹತ್ತುವಂತೆ ಗಾಳಿ ಹಾಕಿದಳು. ನನಗೆ, 'ಮರ ಹತ್ತಲಾಗದ ಹುಡುಗ ನೀನು, ನಾನು ಹುಡುಗನಾಗಿದ್ದರೆ ಮರ ಹತ್ತುತ್ತಿದ್ದೆ' ಎಂದೂ ತಮಾಷೆ ಮಾಡಿದಳು. ನೆಲ್ಲಿ ಕಾಯಿಯ ಮರ ದೊಡ್ಡದಲ್ಲ. ಹತ್ತಿದೆ.ಹತ್ತಿ ಇನ್ನೇನು ನೆಲ್ಲಿಕಾಯಿ ತುಂಬಾ ಇರುವ ಗೊಂಚಲಿಗೆ ಕೈ ಹಾಕಿದೆನಷ್ಟೆ – ಜಾರಿ ಬಿದ್ದೆ. ತೊಡೆಯಲ್ಲಿ ಗಾಯವಾಯಿತು. ಆದರೆ ಅದನ್ನು ಮುಚ್ಚಿ ಹಾಕಲು, ನಾನು ಅಳದಿರುವಂತೆ ಮಾಡಲು ನನಗೆ ಆದಿನ ಅವಳು ಮಾಡದ ಪ್ರಯತ್ನವಿಲ್ಲ. ಆದರೂ ಆ ಗಾಯದ ಕಲೆಯು ಉಳಿಯಿತು. ಅವಳ ನೆನಪೂ ಹಾಗೆಯೇ ದಾಖಲಾಯಿತು. ನಾವು ಮಕ್ಕಳೆಲ್ಲಾ ಬೇಸಿಗೆಯ ರಜೆಯಲ್ಲಿ ಮದುವೆಯ ಆಟ ಆಡುತ್ತಿದ್ದೆವು. ನಾನು ಯಾವಾಗಲು ಮದುಮಗ. ನನಗೆ ಅವಳು ಮದುಮಗಳು. ನಾನು ಮದುಮಗನಲ್ಲವಾದರೆ ಅವಳು ಮದುಮಗಳ ವೇಷ ಒಪ್ಪುತ್ತಿರಲಿಲ್ಲ. ದೊಡ್ಡ ಚಾಪೆಯನ್ನು ಸುತ್ತು ಹಾಕಿ ಇಟ್ಟುಕೊಂಡರೆ ದೇವರ ಕೋಣೆ. ಶಂಕರಿಯು ಗಂಡನಿಗೆ ಬಡಿಸಲು ತರುತ್ತಿದ್ದುದು ಹುಣಿಸೆಕಾಯಿಯನ್ನು.

ನಾನು,' 'ಯಾವಾಗ ನೋಡಿದರೂ ಇದೇ ಪದಾರ್ಥ ಮಾಡುತ್ತೀಯಾ? ಇದನ್ನು ತಿನ್ನುವುದು ಹೇಗೆ?' ಎಂದು ಬೈದಂತೆ ನಟಿಸುತ್ತಿದ್ದೆ. ಅವಳು ಅತ್ತಂತೆ ನಟಿಸುತ್ತಿದ್ದಳು. ನಾನು ಊಟವಾದಂತೆ ನಟಿಸಿದ ಮೇಲೆ ಅವಳು ನನ್ನ ಎಂಜಲೆಲೆಯಲ್ಲಿ ಊಟ ಮಾಡಿದಂತೆ ನಟಿಸುತ್ತಿದ್ದಳು. ಆಟ ಆಡುವಷ್ಟು ಹೊತ್ತು ನನಗೆ ಬಹುವಚನ ಪ್ರಯೋಗ ಮಾಡುತ್ತಿದ್ದಳು. ಶಂಕರಿ ಡುಮ್ಮ ಡುಮ್ಮಕೆ ಇರುತ್ತಿದ್ದಳು. ಅವಳು ಬಿದ್ದರೆ 'ಓ ಹಲಸಿನ ಕಾಯಿ ಬಿತ್ತು' ಎಂದು ಕ್ಲಾಸಿನ ಹುಡುಗರು ತಮಾಷೆ ಮಾಡಿದರೆ ಅದರ ಇತ್ಯರ್ಥಕ್ಕೆ ಹೋಗುತ್ತಿದ್ದವನು ನಾನು. ನನ್ನನ್ನು ಆಗ 'ಶಂಕರಿ ಗಂಡ ಬಂದ' 'ಹಲಸಿನಕಾಯಿಗೆ  ಕಾಟು ಮಾವಿನ ಹಣ್ಣು ಜೋಡಿ' ಎಂದು ಹೇಳುತ್ತಿದ್ದರು. ಹೈಸ್ಕೂಲಿಗೆ ಬಂದ ಮೇಲೆ ಅವಳು ನಾನು ಭೇಟಿಯಾಗಲು ಕಷ್ಟ ಪಡುತ್ತಿದ್ದೆವು. ಹೇಗೋ ಅವಳನ್ನು ಕಾಣಲು ಹೋಗುತ್ತಿದ್ದೆ. ನನತ್ರ "ಈವತ್ತು ನಿನ್ನನ್ನು ಮುಟ್ಟುವ ಹಾಗಿಲ್ಲ," ಎಂದಳು. ಎಂದದ್ದಾದರೆ ಆ ದಿವಸ ಅವಳು ಮುಟ್ಟಾಗಿದ್ದಾಳೆ ಎಂದು ತಿಳಿದುಕೊಳ್ಳುತ್ತಿದ್ದೆ.

ಶಂಕರಿ ಮೂರು ದಿನ ಶಾಲೆಗೆ ಬಂದಿರಲಿಲ್ಲ. ಯಾಕೆಂದು ತಿಳಿಯಲಿಲ್ಲ. ಶಂಕರಿ ಶಾಲೆಗೆ ಬಂದ ದಿನ ಯಾವತ್ತಿನಂತೆ ಇರಲಿಲ್ಲ. ಸಂಜೆ ಶಾಲೆ ಬಿಟ್ಟ ಮೇಲೆ ಮನೆಗೆ ಹೋಗುವಾಗ., 'ಎಂತಾಯಿತು ಮಾರಾಯಿತಿ?' ಎಂದು ಕೇಳಿದ್ದೆ ತಡ ದಾರಿಯಲ್ಲಿಯೇ ಅಳುವುದಕ್ಕೆ ಶುರು ಮಾಡಿದಳು. ನನಗೆ ಗಾಬರಿ ಆಯಿತು. ಆವತ್ತು ಅವಳು ಅಳುವಾಗ ಏನು ಮಾಡಬೇಕೆಂದು ತಿಳಿಯಲಿಲ್ಲ. ನನ್ನ ಚೀಲದಲ್ಲಿದ್ದ ನೆಲ್ಲಿ ಕಾಯಿ ಕೊಟ್ಟು, 'ಮೊದಲು ತಿನ್ನು' ಎಂದೆ. ಅವಳು 'ನನಗೆ ನೆಲ್ಲಿಕಾಯಿಯೂ ಬೇಡ, ಏನೂ ಬೇಡ, ನೀನು ಹೋಗು – ನಾನು ಬರುವುದಿಲ್ಲ. ನಾನು ಕೆರೆಗೆ ಹಾರಿ ಸಾಯುತ್ತೇನೆ" ಎಂದು ಇದ್ದಕ್ಕಿದ್ದಂತೆ ಅಡ್ಕದ ಮೇಲಿನ ಕಪ್ಪು ಪಾರೆಯ ಮೇಲೆ ಕುಳಿತುಕೊಂಡಳು. ಏನು ಮಾಡಿದರೂ ಬಾಯಿ ಬಿಡಲಿಲ್ಲ. ನನಗೆ ಅವಳನ್ನು ಬಿಟ್ಟು ಹೋಗಲು ಧೈರ್ಯ ಬರಲಿಲ್ಲ. ನಾನೂ ಸುಮ್ಮನೇ ಕೂತೆ. ಸ್ವಲ್ಪ ಹೊತ್ತಿನಲ್ಲಿ ಉದ್ದದ ಲಂಗದಲ್ಲಿ ಕಣ್ಣೀರು ಒರಸಿಕೊಂಡಳು.

"ನಿಶಿತ, ಯಾರಿಗೂ ಹೇಳಬೇಡ. ನನ್ನ ತಲೆಯ ಮೇಲೆ ಆಣೆಯಿಟ್ಟು ಹೇಳು"'

'ಅದಕ್ಕೆ ಆಣೆ ಎಂತದಕ್ಕೆ?'

'ನನ್ನ ತಲೆಯ ಮೇಲೆ ಆಣೆಯಿಡು"

ನಾನು ಶಂಕರಿಯ ತಲೆಯ ಮೇಲೆ ನನ್ನ ಕೈಯಿಟ್ಟೆ. ಅವಳು ಮತ್ತೆ ಜೋರಾಗಿ ಅತ್ತಳು. ಎಲ್ಲಾ ಪ್ರವಾಹ ಮುಗಿದ ಮೇಲಿನ ನದಿಯಂತೆ ಅವಳು ಮತ್ತೆ ಎಲ್ಲೋ ನೋಡಿದಳು.

'ನಿಶಿತ, ನಾನು ತಪ್ಪು ಮಾಡಿದೆ'

'ಏನು ಅಂತ ಬೇಡವಾ?'

'ನಾನು ಹುಟ್ಟಲೇ ಬಾರದಿತ್ತು'

'ಯಾಕೆ? ಏನೋನೋ ಮಾತಾಡುತ್ತಿಯಲ್ಲ?'

'ನಿಶಿತ, ನಾನು ಹೆಣ್ಣಾದಕ್ಕೇ ಇದನ್ನು ಅನುಭವಿಸಬೇಕು"

"ಅಂಥಾದ್ದು ಅದೇ ತಲೆ ಹೋಗುವಂಥಾದ್ದು ಏನಾಯಿತು?'

'ಆ ಸುಬ್ಬಣ್ಣ ಮಾವ ಮೊನ್ನೆ ನಾನು ಕೆಳಗಿನ ತೋಟದಲ್ಲಿದ್ದಾಗ ಬಂದರು."

'ಅದರಲ್ಲಿ ಏನಾಯಿತು?'

'ಅದನ್ನು ನಾನು ಏನು ಅಂತ ಹೇಗೆ ವಿವರಿಸುವುದು?"

'ಮಾವ ಬಂದು, ನನ್ನ ಕೈಹಿಡಿದು, ಎಳೆದರು. ಮತ್ತೆ, ಬೇಡದ್ದು ಮಾಡಿದರು. ಎಂಜಲು ಮಾಡಿ ಹಾಕಿ, ಇತ್ಲಾಗಿ ಬಾ. ಏನೂ ಆಗುವುದಿಲ್ಲ. ಎಂದು ಎಲ್ಲೆಲ್ಲೊ ಏನೇನೋ ಮಾಡಿದರು. ನಾನು ಅತ್ತದ್ದಕ್ಕೆ 'ಬಾಯಿಮುಚ್ಚಿದರೆ ಸರಿ' ಎಂದು ಹೆದರಿಸಿದರು. ನಿನ್ನಪ್ಪನಿಗೆ ಆಗಲೀ ಬೇರೆ ಯಾರಿಗೆ ಆಗಲಿ ಹೇಳಿದರೆ ನಾನು ಏನು ಮಾಡುತ್ತೇನೆ ಅಂತಿಲ್ಲ ಎಂದರು. ನಾನು ತಪ್ಪಿಸಿಕೊಂಡು ಓಡಿದೆ. ಮನೆಯಲ್ಲಿ ಮುಟ್ಟಾಗಿದ್ದೇನೆ ಎಂದು ಸುಳ್ಳು ಹೇಳಿ ಕುಳಿತೆ. ಈಗಲೂ ಮೈಯಿಡೀ ಅವರ ಕೊಳಕು ಹಲ್ಲಿನ ವಾಸನೆ ಬಂದ ಹಾಗೆ ಆಗುತ್ತದೆ. ಯಾರಿಗೂ ಹೇಳಬೇಡ. ನನ್ನ ಅಪ್ಪ ಅವರಿಗೆ ಹೆದರುತ್ತಾರೆ. ನನಗೆ ಸಾಯಬೇಕು ಅಂತ ಆಗುತ್ತದೆ.' ಮತ್ತೆ ಶಂಕರಿ ಅತ್ತಳು. ನನಗೂ ಆಗ ಎಲ್ಲಾ ವಿಷಯ ಗೊತ್ತಿರಲಿಲ್ಲ. ಶಂಕರಿಯು ನನಗೆ ಹೇಳಿದ್ದು ಮಾತ್ರ ನನ್ನನ್ನು ಅಲುಗಾಡಿಸಿದೆ. ನನಗೆ ತಿಳಿಯಲಾಗದ ಅನುಭವವೊಂದು ಅವಳಿಗೆ ಆಗಿದೆಯೆಂದು ಅನಿಸಿದ್ದು ಮತ್ತೆ ನನ್ನ ನೆರಳಾಗಿ ಬಂತು. ಅವಳು ಹೇಳಿದ್ದು ಈವತ್ತಿನವರೆಗೆ ಕಾಡಿದೆ. ಅನೂಹ್ಯವಾದ ಹೆಣ್ಣಿನ ತೊಳಲಾಟವನ್ನು ಆ ಘಟನೆ ನನಗೆ ತೋರಿಸಿದೆ. ಅದರಿಂದ ಪಾರಾಗಲು ಆಗಲಿಲ್ಲ. ಒಮ್ಮೊಮ್ಮೆ ಹುಡುಗಿಯರನ್ನು ನೋಡುವಾಗಲೂ ಶಂಕರಿ ನೆನಪಿಗೆ ಬಂದು ಬಿಡುತ್ತಾಳೆ. ಹುಡುಗಿಯರನ್ನು ಕಂಡಾಗ, ಅವರೆದೆಯನ್ನು ಮಾತ್ರ ನೋಡಬಾರದು, ಅದರಿಂದ ಅವರು ಡಿಸ್ಟರ್ಬ್ ಆಗುತ್ತಾರೆ ಎಂದು ಕಲಿಸಿದ ಶಂಕರಿಯ ಅಪೂರ್ವ ಪ್ರೀತಿ ನನ್ನನ್ನು ತೋಯಿಸಿದೆ. ಯಾರಾದರೂ ನನಗೆ ಬೈದರೆ ಬೇಸರವೆನಿಸುವುದಿಲ್ಲ. ಪ್ರೀತಿ ತೋರಿಸಿದಾಗ ನಾನು ಕರಗಿ ಹೋಗುತ್ತೇನೆ – ಮೇಣದ ಬತ್ತಿಯಂತೆ.

ನನ್ನದೇ ವಯಸ್ಸಿನ ಶಂಕರಿ ಹೆರಿಗೆಯ ಸಮಯದಲ್ಲಿ ತೀರಿ ಹೋದಳೆಂದು ತಿಳಿದ ದಿನ ನಾನು ಇದೇ ಜೆಸಿಂತಾ ಬಾಯಿಯ ಕಂಪೌಂಡಿನಲ್ಲಿ ಕುಡಿಯುತ್ತಾ ಕೂತಿದ್ದೆ. ಜೆಸಿಂತಾ ಬಾಯಿ ನನಗೆ ವರ್ಷಾಂತಿಕ ಕಾರ್ಡ್ ತಂದುಕೊಟ್ಟರು. ಅದರಲ್ಲಿ ಹೀಗಿತ್ತು "ನನ್ನ ಸೌಭಾಗ್ಯವತಿ ಶಂಕರಿಯ ವರ್ಷಾಂತಿಕ. ನೀವು ತಪ್ಪದೆ ಬಂದು ಅವಳಿಗೆ ಸದ್ಗತಿ ಕೋರಬೇಕೆಂದು ನನ್ನ ಮತ್ತು ನಮ್ಮಿಬ್ಬರ ಮಕ್ಕಳ ಪರವಾಗಿ ವಿನಂತಿಸುತ್ತೇನೆ." ಕೆಳಗೆ ಅವಳ ಗಂಡನ ಸಹಿಯಿತ್ತು. ಯಾಕೋ ಅವಳ ತಂದೆ ಆಗ ದಿವಾಳಿ ಅರ್ಜಿ ಕೊಟ್ಟು ದೇಶಾಂತರ ಹೋದದ್ದು; ಮತ್ತೆ ಶಂಕರಿ ನಾನು ಹೆಣ್ಣಾಗಿ ಹುಟ್ಟಬಾರದಿತ್ತು ಎಂದು ಹೇಳಿದ್ದು ನೆನಪಿಗೆ ಬಂದು ಹೋಗಿ ಸ್ನಾನಕ್ಕೆ ಇಳಿದೆ. ತೊಡೆಯಲ್ಲಿ ಹಳೆಯ ಗಾಯದ ಗುರುತು! 'ವಿನಾ ಕಾರಣ ನಾನೀಗ ಅತ್ತಿಲ್ಲವೇ?' ಪ್ರಶ್ನಿಸಿಕೊಂಡೆ. ಶಂಕರಿಯೂ ಹೆಣ್ಣು. ನಾನು ಹೆಣ್ಣನ್ನು ಹೇಗೆ ನೋಡಬೇಕೆಂದು ಕಲಿಸಿದವಳು. ನನಗಿಂತ ಮೊದಲೇ ಹೋದಳು. ಆ ದಿನ ಜೆಸಿಂತಾ ಬಾಯಿ ಕೇಳಿದ್ದರು "ಯಾಕೆ ಈಗ ಸ್ನಾನ?"

ನಾನು ಹೇಳಿದ್ದೆ "ನನ್ನ ಬಾಲ್ಯಕಾಲದಿಂದ ತಿಳಿದಿದ್ದ ಶಂಕರಿ ಹೆರಿಗೆಯಲ್ಲಿ ಹೋದಳಂತೆ".

"ನೋಡಿ ಹೆಂಗಸರಿಗೆ ಬಸುರಿಯರು ಆದ್ಮೇಲೆ ಬದುಕಿ ಉಳಿಯುತ್ತೇವೊ, ಇಲ್ಲವೋ ಅಂತ ತಿಳಿದಿರುವುದಿಲ್ಲ. ಹೆಂಗಸರಿಗೇ ಈ ಕಷ್ಟ."

ನನಗೆ ಮಾತಾದರೂ ಎಲ್ಲಿತ್ತು?

* * * * *

**ಹೆರಿಗೆಯೆಂದರೆ ಲೋಕಕ್ಕೆ ಮಗುವನ್ನು ಕೊಡುವುದು. ಆದರೆ ಗಂಡಸರು ಬಸುರಿಯರಾಗುವುದಿಲ್ಲ. ಆದುದರಿಂದ ಗಂಡಸರಿಗೆ ಹೆರಿಗೆಯ ಸಂಕಟ ಗೊತ್ತಿರುವುದಿಲ್ಲ.**

1992
ಜೂನ್
3

ನನಗೆ ಗೊತ್ತಿದ್ದದ್ದು ಅಷ್ಟೆ: ಇಂದಿರಾ ಗಾಂಧಿ ಸರ್ವಾಧಿಕಾರಿ. ಆಕೆ ನಮ್ಮ ಸ್ವಾತಂತ್ರ್ಯ ಕಸಿದುಕೊಂಡಿದ್ದಾರೆ. ಈಗ ಸಾರ್ವಜನಿಕ ಸಭೆಯಲ್ಲಿ ನಾವು ಮಾತಾಡುವಂತಿಲ್ಲ. ಸರಕಾರವನ್ನು ವಿರೋಧಿಸುವಂತಿಲ್ಲ. ಒಂದು ರೀತಿಯಿಂದ ಇದು ಭಯಭೀತವಾದ ವಾತಾವರಣ. ಯಾರಿಗೆ ಎಷ್ಟು ಹೊತ್ತಿಗೆ ಏನಾಗುತ್ತದೆಯೆಂದು ಗೊತ್ತಿಲ್ಲ. ದಿನಕ್ಕೆ ಒಂದೊಂದು ರೀತಿಯ ಸುದ್ದಿ; ಒಂದೊಂದು ರೀತಿಯ ಕತೆಗಳು ಬಂದು ನಮ್ಮ ಕಿವಿಗೆ ಅಪ್ಪಳಿಸುತ್ತಿದ್ದವು – ಕಡಲಿನ ಅಲೆಗಳಂತೆ; ಮಳೆಗಾಲದಲ್ಲಿ ಪರ್ರನೆ ಬಂದು ಹೋಗುವ ಮಳೆಯಂತೆ, ಸಾರ್ವಜನಿಕವಾಗಿ ಯಾರಾದರೂ ಇಂದಿರಾಗಾಂಧಿಯವರನ್ನು; ಸಂಜಯಗಾಂಧಿಯವರನ್ನು ಬೈದರೆಂದರೆ ಮುಗಿದು ಹೋಯಿತು – ಅವರನ್ನು ಪೊಲೀಸರು ಏನು ಮಾಡುತ್ತಿದ್ದರು ಎಂದು ಹೇಳಲು ಬರುವುದಿಲ್ಲ. ಚೆರಿಯಕಾನದ ನಾರಾಯಣ ಮಣಿಯಾಣಿ ಆಗಿನ ಅತ್ಯಂತ ಕ್ರೂರಿಯಾದ ಪೊಲೀಸ್ ಇನ್ಸ್‌ಪೆಕ್ಟರ್. ನಾರಾಯಣ ಮಣಿಯಾಣಿಯ ಮನೆಮಾತು ಮಲೆಯಾಳಂ. ಮೂಲತಃ ಇಂದಿರಾಗಾಂಧಿಯವರ ಆರಾಧಕ. ಅವನ ಆರಾಧನೆಯೂ ಕೂಡಾ ಸಾಮಾನ್ಯವಾದುದಲ್ಲ. ಮನೆಯಲ್ಲಿ ಬಾಬ್ ಕಟ್ ಮಾಡಿಸಿಕೊಂಡು ನಗುತ್ತಿರುವ ಇಂದಿರಾಗಾಂಧಿಯವರ ಫೋಟೋ ನೇತುಹಾಕಿದ್ದ. ಡ್ಯೂಟಿಗೆ ಹೊರಡುವ ಮೊದಲು ಆ ಫೋಟೋಕ್ಕೆ ಊದುಕಡ್ಡಿ ಹಚ್ಚಿ ಕೈಯ ಮುಗಿದು ಹೊರಡುತ್ತಿದ್ದ. ನಾರಾಯಣ ಮಣಿಯಾಣಿಯ ಹುರಿಗಟ್ಟಿದ ಮೀಸೆ ಮತ್ತು ಅವನ ಸದಾ ಕುಡಿದಿರುವವನಂತೆ ಕಾಣಿಸುವ ಕೆಂಪು ಕಣ್ಣು, ಎಡಗೈಯಲ್ಲಿ ಸದಾ ಹೊಗೆಯಾಡುತ್ತಿರುವ ಚಾರ್ ಮಿನಾರ್ ಸಿಗರೇಟು ಅವನ ಲಾಂಛನವಾಗಿತ್ತು.

ನಾರಾಯಣ ಮಣಿಯಾಣಿಗೆ ಸದಾ ಮುಸ್ಲಿಮರ ಬಗೆಗೆ ದ್ವೇಷವಿತ್ತು. ಅವನು ಮಾತೆತ್ತಿದರೆ ಈ ಮುಸ್ಲಿಮರು ಡಜನ್ ಗಟ್ಟಲೆ ಮಕ್ಕಳು ಮಾಡ್ತಾರೆ. ಅದಕ್ಕೆ ಈ ದೇಶ ಹೀಗಾಗಿರುವುದು ಎಂದು ಹೇಳುತ್ತಿದ್ದ. 'ಕುಟುಂಬ ಯೋಜನೆಯನ್ನು ಮೊದಲು ಜಾರಿಗೆ ತರಬೇಕಾದ್ದು ಮುಸ್ಲಿಮರಿಗೆ' ಎಂದು ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಹೇಳುತ್ತಿದ್ದ. "ಇಂದಿರಾಗಾಂಧಿಯವರು ಭಾರತ ಕಂಡ ಉಕ್ಕಿನ ಮಹಿಳೆ. ಯಾವ ಗಂಡಸರಿಗೆ ಈ ರೀತಿಯ ಗಟ್ಸ್ ಇರುವುದಕ್ಕೆ ಸಾಧ್ಯ? ಜಯಪ್ರಕಾಶ

ನಾರಾಯಣ ಅವರ ಕಿಡ್ನಿ ಸರಿಯಾಗಿ ಕೆಲಸ ಮಾಡುವುದಿಲ್ಲ"ವೆಂದು ತಲೆಯನ್ನು ಮುಟ್ಟಿಕೊಂಡು ಹೇಳುತ್ತಿದ್ದ. ದೇಶ ಭಕ್ತಿಯಲ್ಲಿ ತನಗಿಂತ ಮೀರಿದವರು ಯಾರು ಇಲ್ಲವೆಂಬ ಭಾವನೆಯನ್ನು ಸಾಕ್ಷಿ ಮತ್ತು ಆಧಾರ ಸಮೇತವಾಗಿ ತೋರಿಸಲು ಬಹಳ ಶ್ರಮಪಡುತ್ತಿದ್ದ. ಯಜ್ಡಿ ಬೈಕ್‌ನಲ್ಲಿ ಒಂದು ಸುತ್ತು ಹೊರಟರೆ ಸಾಕು, ಯಾರನ್ನಾದರೂ ಬಲಿ ಹಾಕುತ್ತಾನೆಂದು ಪ್ರಚಲಿತವಿತ್ತು. ನಾರಾಯಣ ಮಣಿಯಾಣಿ ರಾತ್ರಿ ಹನ್ನೊಂದು ಗಂಟೆಯ ಮೇಲೆ ಯಾರೇ ಸಿಕ್ಕಿದರೂ ಅವರಿಗೆ ನಾಕು ಬಿಗಿದು ಪೊಲೀಸ್ ಸ್ಟೇಷನಿಗೆ ಎಳೆದುಕೊಂಡು ಹೋಗಿಬಿಡುತ್ತಿದ್ದ. ಆಗ ನಾನಿನ್ನೂ ಬಿ.ಎ. ಮೊದಲ ವರ್ಷದ ವಿದ್ಯಾರ್ಥಿ. ಶಾಂಭವಿ ಜೂನಿಯರ್ ಕಾಲೇಜಿನ ಎಸ್.ಎಸ್.ಎಲ್.ಸಿಯಲ್ಲಿ ಓದುತ್ತಿದ್ದಳು.

ಸೈಂಟ್ ಲಾರೆನ್ಸ್ ಕಾಲೇಜಿನಲ್ಲಿ ಆಗ ಎಲ್ಲಾ ಬಗೆಯ ವಿಚಾರ ಧಾರೆಯುಳ್ಳ ಉಪನ್ಯಾಸಕರಿದ್ದರು. ರಾಜ್ಯಶಾಸ್ತ್ರದ ಉಪನ್ಯಾಸಕರಾದ ಕೇರಳ ಮೂಲದ ಮಾಧವನ್ ನಂಬೂದಿರಿಯವರಿಗೆ, 'ಇಂದಿರಾಗಾಂಧಿಯವರು ತುರ್ತುಪರಿಸ್ಥಿತಿಯನ್ನು ಹೇರಿ ಭಾರತದ ಜನರಿಗೆ ಒಳ್ಳೆಯದನ್ನು ಮಾಡಿದ್ದಾರೆ. ಭಾರತದವರಿಗೆ ಆಳಿಸಿಕೊಂಡು ಗೊತ್ತೇ ಹೊರತು ಬೇರೇನೂ ಗೊತ್ತಿಲ್ಲ' ಎನ್ನುತ್ತಿದ್ದರು.

ಜೋಸೆಫ್. ಡಿಸೋಜ – ಇಂಗ್ಲಿಷ್ ಮೇಷ್ಟ್ರು. ಅವರಿಗೆ ಫ್ರಾಯ್ಡನ ಹುಚ್ಚು. ಅವರ ಇಂಗ್ಲಿಷ್ ನಮಗೆ ಅರ್ಥವಾಗುತ್ತಿರಲಿಲ್ಲ. ಮಾತೆತ್ತಿದರೆ ಕಾಮ; ಲೈಂಗಿಕ ಪ್ರಜ್ಞೆ. ಮುಂತಾದವುಗಳನ್ನು ಮಾತಾಡಿ ನಮ್ಮನ್ನು ಹದಗೆಡಿಸಿ ಬಿಡುತ್ತಿದ್ದರು.

ಅರ್ಥಶಾಸ್ತ್ರದ ತರಗತಿಯಲ್ಲಿ ಪೂರ್ತಿಯಾಗಿ ಮಾಲ್ತಸ್ ಥಿಯರಿ ಮತ್ತು ಮಸಾಲೆ ದೋಸೆಯದ್ದೇ ಸುದ್ದಿ: ಮೊದಲ ಮಸಾಲೆದೋಸೆ ಹೆಚ್ಚು ರುಚಿ – ತಿನ್ನುತ್ತಾ ಬಂದಂತೆ ದೋಸೆ ಬಗ್ಗೆ ಆಸಕ್ತಿ ಕಡಿಮೆಯಾಗುತ್ತದೆ.

ಚರ್ಚ್‌ನ ಕಾಲೇಜಿನಲ್ಲಿ ಇರಬೇಕಾದ ಎಲ್ಲಾ ಶಿಸ್ತುಗಳನ್ನು ಮುರಿದು, ದೂರದ ಮೇ ಫ್ಲವರ್ ಗಿಡದ ಕೆಳಗೆ ನಿಂತುಕೊಂಡು ಸಿಗರೇಟ್ ಸೇದುತ್ತಾ; ವಿದ್ಯಾರ್ಥಿಗಳ ಹೆಗಲ ಮೇಲೆ ಕೈ ಹಾಕಿಕೊಂಡು ಮಾತಾಡುತ್ತಿದ್ದ ಹಿಮಚಂದ್ರ ಅವರು ನಮಗೆ ಇತಿಹಾಸ ಪ್ರಾಧ್ಯಾಪಕರು. ಇವರೊಬ್ಬರ ಕ್ಲಾಸ್ ಬಿಟ್ಟು ಮತ್ತೆ ಉಳಿದ ಯಾವ ತರಗತಿಗಳು ನನಗೆ ಇಷ್ಟವಾಗುತ್ತಿರಲಿಲ್ಲ. ಕೊನೆಯ ಬೆಂಚಿನಲ್ಲಿ ಕೂತಿರುತ್ತಿದ್ದೆ – ಕತೆಯೋ, ಕಾದಂಬರಿಯೋ ಓದಿಕೊಂಡು ಅಥವಾ ತಪ್ಪಿದರೆ ಹುಡುಗಿಯರ ಬಗ್ಗೆ ಪಕ್ಕದ ಹುಡುಗರ ಜೊತೆ ಏನಾದರೂ ಕಾಮೆಂಟ್ ಮಾಡುತ್ತಾ!

ಒಂದು ದಿನ ಡಿಸೋಜರ ಇಂಗ್ಲಿಷ್ ಕ್ಲಾಸ್ ನಡೆಯುತ್ತಿತ್ತು. ನಾನು ನನ್ನ ಪಕ್ಕದಲ್ಲಿ ಪುರುಷೋತ್ತಮ; ಅವನ ಪಕ್ಕ ಕಾಮತ್ ಕೂತಿದ್ದೆವು. ಇನ್ನೊಂದು

ಸಾಲಿನ ಕೊನೆಯಲ್ಲಿ ನಮ್ಮ ತರಗತಿಯ ಕ್ರೀಡಾಪಟು ಶಾಲಿನಿ ಕುಳಿತಿದ್ದಳು. ಶಾಲಿನಿ ತುಂಬಾ ಎತ್ತರ ಮತ್ತು ದಪ್ಪ. ಅವಳಿಗೂ ಇಂಗ್ಲೀಷ್ ಪಾಠ ತಲೆ ಬುಡ ಅರ್ಥವಾಗುತ್ತಿರಲಿಲ್ಲವೆಂದು ಕಾಣುತ್ತದೆ. ಅದಕ್ಕೆ ಕೈಯೆರಡನ್ನು ತಲೆಗೊತ್ತಿಕೊಂಡು ಕುಳಿತಿದ್ದಳು. ಕಾಮತ್ ತಕ್ಷಣ ಒಂದು ಚೀಟಿಯನ್ನು ಪುರುಷೋತ್ತಮನ ಕೈಗೆ ಕೊಟ್ಟ. ಪುರುಷೋತ್ತಮ ಅದನ್ನು ನನಗೆ ಕೊಟ್ಟ: "ಪಿ.ಡಿ.ಯವರಿಗೆ ಮೋಸವಿಲ್ಲ". ನಾನು ಬಗ್ಗಿ ನೋಡಿದವನು ಗಹಗಹಿಸಿ ನಗಾಡಿದೆ. ಪುರುಷೋತ್ತಮನಿಗೂ ನಗೆ ಬಂತು. ಸೋಜ ಮೇಷ್ಟ್ರಿಗೆ ಸಿಟ್ಟು ಬಂತು. ನಮ್ಮ ಮೂವರನ್ನು ಕ್ಲಾಸಿನಿಂದ ಹೊರಗೆ ಕಳಿಸಿದರು.

ಮತ್ತೊಂದು ದಿನ ಕಾಮತ್ ರಾಜ್ಯಶಾಸ್ತ್ರದ ತರಗತಿಯಲ್ಲಿ ಒಂದು ಚೀಟಿ ಕಳಿಸಿದ. ಲೈಂಗಿಕ ಅರ್ಥ ಬರುವಂತೆ, ಏನೋ ಬರೆದ. ಇದರ ಲೈಂಗಿಕ ಅರ್ಥ ಹೊಳೆದು ಪುರುಷೋತ್ತಮ ನಗಾಡಿದ. ಆ ದಿನವೂ ಅಷ್ಟೆ – ಮೇಷ್ಟ್ರು ನಮ್ಮನ್ನು ತರಗತಿಯಿಂದ ಹೊರಹಾಕಿದರು. ಯುದ್ಧ ವೀರರಂತೆ ಹೊರಗೆ ಬಂದೆವು.

ಏನೇ ನಡೆದರೂ ನಾವು ಹಿಮಚಂದ್ರರಲ್ಲಿ ಮಾತ್ರ ವಿಷಯ ತಿಳಿಸುತ್ತಿದ್ದೆವು. ಅವರು ನಗಾಡುತ್ತಿದ್ದರು.

ಈಗ – ಈ ನನ್ನ ಬೆಳ್ಳಿಗೂದಲ ಮೇಲೆ ಕೈಯಾಡಿಸಿಕೊಂಡು ಆ ಸಮಯ ಹಚ್ಚ ಹಸಿರು ನೆನಪನ್ನು ಈ ಧ್ಯಾನಿಸಿಕೊಳ್ಳುತ್ತೇನೆ.

ನನ್ನ ತರಗತಿಯ ಮೃಣಾಲಿನಿ; 'ನಿನ್ನ ಕೈಗೆ ರಾಖಿ ಕಟ್ಟೇನೆ; ನೀನು ನನ್ನ ಅಣ್ಣನ ಹಾಗೆ' ಅಂದಳು. ತಕ್ಷಣ ಅಂದೆ: 'ನೀನು ನನ್ನ ಸೋದರತ್ತೆಯ ಮಗಳ ಹಾಗೆ." ಆದರೂ ಹುಡುಗಿಯರನ್ನು ನಂಬಬಾರದು. ಅವರು ಮುಖವಾಡದಲ್ಲಿರುತ್ತಾರೆಂಬ ಧೋರಣೆಯಲ್ಲಿಯೇ ಇದ್ದೆ.

ಹುಡುಗಿಯರು ಸಹಾನುಭೂತಿಯನ್ನು ಕೂಡಾ ಬೇಕು ಬೇಕಾದ ಹಾಗೆ ಬಳಸಿಕೊಳ್ಳುತ್ತಾರೆ ಎಂದು ಯೋಚಿಸುತ್ತಿದ್ದೆ. ಈ ಅಭಿಪ್ರಾಯವನ್ನು ಬದಲಿಸಿಕೊಳ್ಳುವುದಕ್ಕೆ ತುಂಬಾ ದಿನಗಳು ಬೇಕಾದವು. ವರ್ಷಗಳು ಬೇಕಾದವು. ಬಾಲ್ಯ ಕಾಲದ ಅನುಭವವನ್ನು ಒರಸಿ ಹಾಕುವುದು ತುಂಬಾ ಕಷ್ಟ. ಅವು ಕೆಲವು ಅಭಿಪ್ರಾಯಗಳನ್ನು ನಮ್ಮಲ್ಲಿ ರೂಪಿಸುತ್ತವೆ.

ಆ ದಿನ ಸಂಜೆಯೇ ನಾನು ಗೇರು ಗುಡ್ಡವನ್ನು ಇಳಿದು ಬಂದದ್ದು. ಗುಡ್ಡವನ್ನು ಇಳಿಯುವಾಗ ಮತ್ತೊಮ್ಮೆ ಅವಳನ್ನು ನೋಡಲೇಬೇಕು ಎಂದೆನ್ನಿಸತೊಡಗಿತ್ತು. ತೀವ್ರವಾಗಿ, ಮನಸ್ಸಿನ ತುಂಬಾ ಹರಡಿಕೊಂಡ ಅವಳ ದೇಹದ ಚಿತ್ರ; ಅವಳು ಮತ್ತು ಜ್ಯೋತಿ ಪೈ ಜೊತೆಗಿದ್ದದ್ದು ದುಗುಡವೆನಿಸತೊಡಗಿತು.

ಒಂದು ದಿನ ಹಿಮಚಂದ್ರ ಅವರ ಕ್ಲಾಸ್ ನಡೀತಿತ್ತು. ಆಗ ಯಾರೋ ಪರಿಚಯವಿಲ್ಲದವರು ಬಂದು ನನ್ನನ್ನು ಕರೆದರು. ಹಿಮಚಂದ್ರ ಅವರು ನನ್ನನ್ನು ತರಗತಿಯಿಂದ ಹೊರ ಕಳಿಸಿದರು. ಕಾಲೇಜು ಕಟ್ಟಡದ ಮೆಟ್ಟಿಲು ಇಳಿಯುವಾಗ ಕೇಳಿದೆ. "ನೀವು ಯಾರು? ನಿಮ್ಮ ಪರಿಚಯ ನಮಗೆ ಸರಿಯಾಗಿ ಇಲ್ಲ?"

"ನಾನು ಸುರೇಂದ್ರ ಶೆಣೈ"

"ನನ್ನನ್ನು ಯಾಕೆ ಕರೆದಿರಿ?"

ನನಗೆ ಅವರು ಕರೆದುದರ ಬಗ್ಗೆ ಗೊಂದಲವಿತ್ತು. ಶೆಣೈ ನನ್ನನ್ನು ಯಾಕೆ ಕರೆದಿರಬಹುದು? ಎಂಬ ಅನುಮಾನ ಬಂತು.

"ಹೆದರಬೇಡಿ, ನಿಮ್ಮಿಂದ ಒಂದು ಸಹಾಯವಾಗಬೇಕಾಗಿದೆ"

"ಏನು" ಎಂದ.

"ಬನ್ನಿ ಅಲ್ಲಿ ನಮ್ಮ ಲೀಡರ್ ಇದ್ದಾರೆ. ಅವರೆದುರು ಮಾತಾಡುವಾ" ಎಂದ ಶೆಣೈಯ ಮುಖವನ್ನು ನೋಡಿದ. ಅದರಲ್ಲಿ ಯಾವುದಾದರೂ ಭಾವವಿದೆಯೋ ಎಂದು ಪರೀಕ್ಷಿಸಲು ಪ್ರಯತ್ನಿಸಿದೆ. ಅವರ ಮುಖದಲ್ಲಿ ಸರಳ ಭಾವವಿತ್ತು.

ಮೇ ಪ್ಲವರ್ ಮರದ ಕೆಳಗೆ ನಿಂತಿದ್ದವರು ಕೃಷ್ಣಮೂರ್ತಿ. ಅವರ ಹೆಸರು ಅದೆಂದು ಪರಿಚಯಿಸಿಕೊಂಡರಾದರೂ ವಾಸ್ತವವಾಗಿ ಆ ಹೆಸರು ಅವರದಲ್ಲವೆಂದು ನನಗೆ ಸಂಶಯವಿತ್ತು. ಪರಿಚಯಿಸಿಕೊಂಡ ತಕ್ಷಣವೇ ಅವರೆದುರು "ನೀವು ಒಂದು ಕೆಲಸ ಮಾಡಬೇಕು. ನಾವು ಇಂದಿರಾಗಾಂಧಿಯವರ ವಿರುದ್ಧ ಭೂಗತ ಚಳುವಳಿ ಮಾಡ್ತಾ ಇದ್ದೇವೆ. ಇಂದಿರಾಗಾಂಧಿಯವರ ಸರ್ವಾಧಿಕಾರಿ ಧೋರಣೆಯ ಬಗ್ಗೆ ನಾವೆಲ್ಲಾ ಈಗ ವಿರೋಧಿಸಲೇಬೇಕಾಗಿದೆ. ಪತ್ರಿಕೆಗಳಲ್ಲಿ ಬರುವ ಸುದ್ದಿಗಳೇ ಅಷ್ಟೆ. ನಮ್ಮ ಸಂವಿಧಾನ ದತ್ತವಾದ ವಾಕ್ ಸ್ವಾತಂತ್ರ್ಯವನ್ನು ಇಂದಿರಾಗಾಂಧಿಯವರು ದಮನಗೊಳಿಸಲು ಯತ್ನಿಸುತ್ತಿದ್ದಾರೆ. ಕೊಯಮತ್ತೂರು ಜೈಲಿನಲ್ಲಿ ಪೊಲೀಸರ ಹಿಂಸೆ ಮಿತಿಮೀರಿ ಹೋಗಿದೆ. ಹೊಕ್ಕುಳಲ್ಲಿ ಕೂರ್ಬಾಯಿ(ದುಂಬಿ) ಬಿಟ್ಟು ಅದಕ್ಕೆ ಲೋಟ ಮುಚ್ಚಿ ಹಿಂಸೆ ಕೊಡ್ತಾರೆ. ಗುದದ್ವಾರಕ್ಕೆ ಮೆಣಸಿನ ಪುಡಿ ಹಾಕ್ತಾರೆ. ಕುಡಿಯೋದಕ್ಕೆ ಉಚ್ಚೆ ಕೊಡ್ತಾರೆ. 'ಏರೋಪ್ಲೇನ್ ಶಿಕ್ಷೆ ಕೊಟ್ಟು ಇಬ್ಬರನ್ನು ಕೊಂದಿದ್ದಾರೆ. ನಾವು ಜನರ ಪರ ಏನಾದರೂ ಮಾಡಲೇಬೇಕು." ಅವರ ಅತ್ಯಂತ ಚಿಕ್ಕ ಚೊಕ್ಕ ಮಾತುಗಳಿಂದ ನನಗೂ ಉತ್ಸಾಹ ಬಂತು. "ನಾನು ಏನು ಮಾಡಬೇಕು ಹೇಳಿ? ಎಂದೆ. ತಕ್ಷಣ ಶೆಣೈ ಅಂದರು –"ನಮ್ಮ

ಭೂಗತ ಚಳುವಳಿಯ ಪತ್ರಿಕೆಯನ್ನು ನೀವು ಹಂಚಬೇಕು. ಆದರೆ ನೀವು ಹಂಚಿದ್ದು ಯಾರಿಗೂ ಗೊತ್ತಾಗಬಾರದು"

"ಅಂದರೆ"

"ಅಂದರೆ ಇಷ್ಟೆ: ಪತ್ರಿಕೆಗಳನ್ನು ತರಗತಿಗಳ ಡೆಸ್ಕ್ ನಲ್ಲಿ ಎಲ್ಲರೂ ಬರುವ ಮೊದಲು ಇಟ್ಟು ಬಿಡಿ. ನಿಮ್ಮ ಸಮಾನ ಆಸಕ್ತ ಸ್ನೇಹಿತರನ್ನು ಸೇರಿಸಿಕೊಂಡು ಈ ಕೆಲಸ ಮಾಡಿ. ಆದ್ರೆ ಯಾರಿಗೂ ಗೊತ್ತಾಗಲೇಬಾರದು"

"ಸರಿ"ಯೆಂದು ಬಂದೆ. ನನಗೆ ಉಮೇದು ಇತ್ತು – ಅದು ಸ್ವಾತಂತ್ರ್ಯ ಹೋರಾಟ ಎಂಬ ಕಲ್ಪನೆಯಿತ್ತು. ಅವರು ಕಟ್ಟಿಕೊಟ್ಟ ಪತ್ರಿಕೆಗಳ ಪ್ರತಿಗಳನ್ನು ಹಳೆಯ ಪೇಪರ್‌ನಲ್ಲಿ ಸುತ್ತಿಟ್ಟುಕೊಂಡು ಹೊರಟೆ. ನನಗೆ ಮರಳಿ ಕ್ಲಾಸ್‌ಗೆ ಹಾಜರಾಗಬೇಕೆಂದು ಅನಿಸಲಿಲ್ಲ. ನನಗೆ ಎರಡೂ ಮುಖಗಳು ಬಂದಿವೆಯೆಂದು ಅನಿಸಿತು. ಒಂದು ಅವಳಿಂದ, ಅವಳ ಅಪ್ಪನಿಂದ, ಜ್ಯೋತಿಪೈಯಿಂದ ಆದ ಅವಮಾನದ ಮುಖ, ಮತ್ತೊಂದು –ಇದ್ದಕ್ಕಿದ್ದಂತೆ ಸರ್ವಾಧಿಕಾರಿ ಧೋರಣೆಯ ವಿರುದ್ಧ ನಿಂತಿರುವ ರಾಜಕೀಯ ಸ್ವಾಭಿಮಾನದ ಮುಖ. ಆ ದಿವಸ ಅವಳ ಮನೆಯಿಂದ ನಾನು ತಲೆತಗ್ಗಿಸಿ ಹೊರ ಬಂದಿದ್ದೆ – ಕಜ್ಜಿ ನಾಯನ್ನು ನೋಡುವಂತೆ ಅವರು ನನ್ನನ್ನು ನೋಡಿದ್ದರು. ಈ ದಿನ ಶೆಣೈ ಮತ್ತು ಕೃಷ್ಣಮೂರ್ತಿ ನನ್ನನ್ನು ಅಭಿಮಾನದಿಂದ ನೋಡಿದ್ದರು – ಒಂದು ಮೊಳಕೆಯೇಳುತ್ತಿರುವ ಗಿಡವನ್ನು ನೋಡುವಂತೆ.

ನಿಜ ಹೇಳ್ತೇನೆ: ಆ ದಿನ ನಿಜವಾಗಿಯೂ ನಾನು ಶೆಣೈ ಮತ್ತು ಕೃಷ್ಣಮೂರ್ತಿಯವರು ಹೇಳಿರುವ ಮಾತುಗಳ ಕುರಿತು ಹೆಚ್ಚು ಆಲೋಚನೆಯನ್ನು ಮಾಡಿರಲಿಲ್ಲ. ಆದರೆ, ಕಣ್ಣು ಉರಿಯುತ್ತಿತ್ತು. ಆ ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ವಿಪರೀತ ತಲೆ ನೋಯುತ್ತಿದೆಯೆಂದು ಅನಿಸತೊಡಗಿತು. ಕೆಲವು ಕ್ಷಣ ಯಾರ ಜೊತೆಯಲ್ಲೂ ಮಾತಾಡಬೇಕೆಂದು ಅನಿಸಲಿಲ್ಲ. ಒಬ್ಬಂಟಿಯಾಗಿ ಎಲ್ಲಿಯಾದರೂ ಹೋಗಿಬಿಡೋಣವೆಂದೆನ್ನಿಸಿ ಒಬ್ಬನೇ ಕಾಲೇಜಿನ ಹಿಂದಿರುವ ಗುಡ್ಡದ ಕಡೆಗೆ ಹೆಜ್ಜೆ ಹಾಕಿದೆ! ದೊಡ್ಡ ಮಾವಿನ ಮರಗಳು, ಗೇರು ಮರಗಳು, ಹೊಂಗೆ ಮತ್ತು ಆಲದ ಮರಗಳಿರುವ ಗುಡ್ಡವದು. ಅದರ ನಡುವಿನ ಹಾದಿಯಿಂದ ಕೊಂಚ ದೂರ ನಡೆದರೆ ಈಶ್ವರ ದೇವಸ್ಥಾನದ ಗುಡಿ.

ಸಂಜೆಯವರೆಗೂ ಗೇರು ಮರದ ತರಗಲೆಯ ಮೇಲೆ ಕುಳಿತು ಯೋಚಿಸತೊಡಗಿದೆ.

ಮರುದಿನ ಹುಡುಗರು ಮತ್ತು ಹುಡುಗಿಯರ ಡೆಸ್ಕಿನಲ್ಲಿ ಪತ್ರಿಕೆಗಳನ್ನು ಇಟ್ಟು ತರಗತಿಯಲ್ಲಿ ಕುಳಿತೆ: ಯಾರಿಗೂ ಯಾವುದೇ ಅರಿವು ಬಾರದ ಹಾಗೆ. ಇಷ್ಟಾದರೂ ತುಂಬಾ ಪತ್ರಿಕೆಗಳು ಉಳಿದಿದ್ದವು. ಕೆಲವನ್ನು ಲೇಡೀಸ್ ರೂಮಿನೊಳಗೆ ಹಾಕಿ ಬಂದೆ. ಕೆಲವು ಪ್ರತಿಗಳನ್ನು ನನ್ನ ನೋಟ್ಸ್ ಪುಸ್ತಕದೊಳಗೆ ಇಟ್ಟುಕೊಂಡೆ. ಮೊದಲ ಗಂಟೆಯೇ ಮಾಧವನ್ ನಂಬೂದಿರಿಯವರದು. ಬಂದವರು ಹಾಜರಿ ಕರೆದು ಇದ್ದಕ್ಕಿದ್ದಂತೆಯೇ ನೋಟ್ಸ್ ಕೊಡಲು ಪ್ರಾರಂಭಿಸಿದರು. ಅವರು ನೋಟ್ಸ್ ಕೊಡುವುದೆಂದರೆ ಅಷ್ಟೆ: ಹೇಳುತ್ತಾ ಹೋಗುವುದು. ಮಧ್ಯ ನಿಲ್ಲಿಸಿ ವಿವರಿಸುವುದು; ಮುಂದುವರಿಸುವುದು. ಹೀಗೆ ಹೇಳುತ್ತಾ ಹೇಳುತ್ತಾ ನನ್ನ ನೋಟ್ಸ್ ಪುಸ್ತಕವನ್ನು ಕೈಗೆತ್ತಿಕೊಂಡರು. ಪಟ್ಟನೆ ಪತ್ರಿಕೆಗಳ ಪ್ರತಿಗಳು ಬಿದ್ದವು. ನನ್ನ ಕತೆ ಮುಗಿಯಿತು ಎಂದು ಭಾವಿಸಿದೆ. ಆದರೆ ಅವರು ಆ ಪತ್ರಿಕೆಗಳನ್ನು ಮಡಿಸಿ ನನ್ನ ಕೈಯಲ್ಲಿ ಕೊಟ್ಟು ಏನೂ ಆಗದವರಂತೆ ನೋಟ್ಸ್ ಹೇಳಲು ತೊಡಗಿದರು. ಆಗ ಪೋಸ್ಟ್ ಮ್ಯಾನ್ ಬಂದು ನನಗೆ ಒಂದು ಪತ್ರವನ್ನು ಕೊಟ್ಟ. ಅದು ಶಾಂಭವಿಯದು. ಶಾಂಭವಿ ಯಥಾ ಪ್ರಕಾರ, "ನಿನ್ನನ್ನು ನೋಡಬೇಕೆಂದು ಅನಿಸುತ್ತಿದೆ. ನೀನು ತುಂಬಾ ಓದಿ ಕೆಲಸಕ್ಕೆ ಸೇರು. ಮುಂದೊಂದು ದಿನ ನೀನು ನನ್ನ ಗಂಡನಾಗ್ತೀಯಾ ನಾನು ನಿನಗೆ ಹೆಂಡ್ತಿಯಾಗ್ತೇನೆ. ನೀನು ಆಫೀಸು ಮುಗಿಸಿ ಬರುವಾಗ ಗೇಟ್‌ನಲ್ಲಿ ನಿನಗಾಗಿ ಕಾಯ್ತಿರ್ತೇನೆ. ಈ ಕಲ್ಪನೆಯು ಎಷ್ಟೊಂದು ಮಜಾ ಅಲ್ವಾ?" ಮುಂತಾಗಿ ಬರೆದಿದ್ದಳು. ಶಾಂಭವಿ ನನಗೆ ತುಂಬಾ ಮುಗ್ಧವಾದ ಪ್ರೀತಿಯನ್ನು ನೀಡುತ್ತಿದ್ದಾಳೆಂದು ಅನಿಸಿತು. ಮತ್ತೆ ಆ ದಿನ ಕ್ಲಾಸಿಗೆ ಹೋಗಲಿಲ್ಲ.

ಅದೇ ಸಮಯಕ್ಕೆ ನಾರಾಯಣ ಮಣಿಯಾಣಿಯು ಕೆಲವರನ್ನು ಏರೋಪ್ಲೇನ್ ಹಾಕಿ ಹಿಂಸಿಸಿದ್ದನೆಂದು ಸುದ್ದಿ ಬಂತು. ಒಂದು ಪ್ರೇಮ ಮತ್ತೊಂದು ಹಿಂಸೆಯ ಸುದ್ಧಿ! ಪ್ರೇಮಕ್ಕೂ ಹಿಂಸೆಯ ಮತ್ತೊಂದು ಮುಖವಿದೆಯೆಂದು ಆಗ ತಿಳಿಯಲಿಲ್ಲ.

ಮರುದಿನ ಸರಿಯಾಗಿ ಹತ್ತು ಗಂಟೆ ಹತ್ತು ನಿಮಿಷಕ್ಕೆ ಕಾಲೇಜಿನ ಧ್ವಜಸ್ತಂಭದ ಕೆಳಗೆ ನಾನು ಭಾಷಣ ಮಾಡಿ ಮುಗಿಸಿದ ಹೊತ್ತು ಅರೆಸ್ಟಾಗಿ ಬಿಟ್ಟೆ. ನಾನು ಜೈಲು ಸೇರಬಹುದೆಂಬ ಊಹೆ ಇತ್ತಾದರೂ ಹತ್ತು ಗಂಟೆಗೆ ಇಡೀ ಕಾಲೇಜಿನ ಬಹಿಷ್ಕಾರ ಕಾರ್ಯಕ್ರಮ. ಮೆರವಣಿಗೆ ಮತ್ತು ಗೋಲಿಬಾರಿನಲ್ಲಿ ಸತ್ತ ಸ್ವಾತಂತ್ರ್ಯವೀರರ ಬಗೆಗಿನ ಶ್ರದ್ಧಾಂಜಲಿಯಲ್ಲಿ ಮುಕ್ತಾಯದ ಸಮಾರಂಭ. ಇದು ಮುಗಿದ ಮೇಲೆ ಜೈಲುಭರೊ ಕಾರ್ಯಕ್ರಮ ನಡೆಸುವುದೆಂದು ನಿಶ್ಚಯಿಸಿದ್ದೆವು. ನಾನು, ಪುರುಷೋತ್ತಮ, ಕಾಮತ್ ಮೂವರು ಈ ಹೋರಾಟಕ್ಕೆ ನಾಯಕರಾಗಿದ್ದೆವು. ನಾವು ಅರೆಸ್ಟಾದದ್ದು ಬುಧವಾರ. ಆ ದಿನ ನನಗೆ ಸರಿಯಾಗಿ ನೆನಪಿದೆ. ಮಂಗಳವಾರ ಸಂಜೆ

ಪ್ರತಿಯೊಂದು ತರಗತಿಗೂ ಹೋಗಿ ನಮ್ಮ ಬಳಗಕ್ಕೆ ಸರಿ ಹೊಂದಬಹುದು ಎಂದೆನ್ನಿಸಿದ ಹುಡುಗರನ್ನು ಕರೆದು ಕಾಲೇಜಿನ ಹಿಂದಿರುವ ಗೇರು ಗುಡ್ಡದ ಹತ್ತಿರ ಬರಲೂ ವಿನಂತಿಸಿದೆವು. ಯಾರೂ ಈ ವಿಷಯದ ಕುರಿತು ಯಾರಿಗೂ ಬಾಯಿ ಬಿಡಬಾರದೆಂದು ಎಂದು ಹೇಳಿದೆವು. ಆ ದಿನ ಸಂಜೆ ಆರು ಗಂಟೆಗೆ ಎಲ್ಲರನ್ನು ಗೇರುಮರದ ಕೆಳಗೆ ಕೂರಿಸಿ ವಿಷಯ ತಿಳಿಸಿದ್ದೆ ನಾಳೆ ಬೆಳಗ್ಗೆ ಸರಿಯಾಗಿ ಹತ್ತು ಗಂಟೆಗೆ ಬೆಲ್ ಆದ ಕ್ಷಣ ಪ್ರತಿಯೊಂದು ಕ್ಲಾಸಿನಿಂದಲೂ ವಿದ್ಯಾರ್ಥಿಗಳು ಹೊರಗೆ ಬರಬೇಕು. ಈ ವಿಷಯ ಯಾರಿಗೂ ತಿಳಿಯಬಾರದು. ಇದನ್ನು ಎಷ್ಟು ಸಹಜವಾಗಿ ಮತ್ತು ನಿರುದ್ವೇಗದಲ್ಲಿ ಹೇಳಲು ಸಾಧ್ಯವೋ ಹಾಗೆ ಹೇಳಿದ್ದೆ.

ಬುಧವಾರ ಬೆಳಗ್ಗೆ ನಾನು ಕಾಲೇಜಿಗೆ ಹೋಗುವಾಗಲೇ ಎಲ್ಲರೂ ನನ್ನನ್ನೂ ನೋಡುತ್ತಿದ್ದಾರೆ ಎಂದು ಅನಿಸಿತು. ಕಾರಿಡಾರಿನಲ್ಲಿ ಎದುರುಗಡೆಯಿಂದ ಬರುತ್ತಿದ್ದ ಡಿ.ಸೋಜ ಅವರು, 'ಏನಯ್ಯ ಹೀರೋ' ಅಂದರು. 'ವಿಲನ್ ಯಾರು ಸಾರ್? ಹೀರೋಯಿನ್ ಯಾರು?' ಅಂದೆ. ನಗಾಡುತ್ತಾ ಅವರು, 'ತಡಿ ವಿಲನ್ ಮತ್ತು ಹೀರೋಯಿನ್ ಬರುತ್ತಾರೆ.' ಅಂದರಾದರೂ ಅವರ ಮಾತುಗಳಲ್ಲಿ ಯಾವುದೋ ಒಂದು ವ್ಯಂಗ್ಯ ಕುದಿಯುತ್ತಿದೆಯೆಂದು ಮನಸ್ಸಿಗೆ ಅನಿಸುತ್ತಿತ್ತು. ಈವತ್ತು ಯಾವುದೂ ಸಸೂತ್ರವಾಗಿ ನಡೆಯವುದಿಲ್ಲ. ಹೊರಟಾಗಿದೆ. ಹಿಂದೆ ಬರುವುದಿಲ್ಲ. ನೀರಲ್ಲಿ ಮುಳುಗಿದವನಿಗೆ ಚಳಿಯ ಚಿಂತೆ ಯಾಕೆ? ಹಿಂದಿನಿಂದ ಪುರುಷೋತ್ತಮ ಬಂದು ನನ್ನ ಜೊತೆ ಸೇರಿಕೊಂಡ. 'ಎಲ್ಲಾ ತಯಾರಾಗಿದೆ' ಅಂದ. ನಮ್ಮ ಸೀನಿಯರ್ ಬ್ಯಾಚಿನ ಶೋಭಾ ಕಾಮತ್ ಕೂಡಾ ಬಂದವರು "ಕೇರ್‌ಫುಲ್ ಶೋಭಾ ಕಾಮತ್ ಅಂದರು. ಆ ದಿನಗಳಲ್ಲಿ ಶೋಭ ನನ್ನೊಂದಿಗೆ ಯಾವತ್ತೂ ಆರಾಮವಾಗಿ ಇರುತ್ತಿದ್ದರು. ಒಂದೊಂದು ದಿನ, 'ಬಾ ಕಾಫಿ ಕುಡಿಸ್ತೇನೆ' ಅನ್ನುತ್ತಿದ್ದರು ಕಾಲೇಜು ದಿನಗಳಲ್ಲಿ ಯಾರು ಯಾವುದೇ ಫ್ಯಾಶನ್ ಮಾಡಿಕೊಂಡು ಬರಲಿ ಶೋಭ ಮಾತ್ರ ಉದ್ದ ಲಂಗ ಎರಡು ಹುಬ್ಬು ನಡುವೆ ಒಂದು ಕುಂಕುಮದ ಬೊಟ್ಟು ಕೈತುಂಬಾ ಬಳೆಯಿಟ್ಟುಕೊಂಡು ಬರುತ್ತಿದ್ದರು. ಅವರ ಸರಳತೆ ಇಷ್ಟವಾಗುತ್ತಿತ್ತು.

ಮುಂದೆ ಡಿಗ್ರಿ ಮುಗಿಸಿದ ತಕ್ಷಣ ಕಾರ್ಪೋರೇಶನ್ ಬ್ಯಾಂಕ್ ಸೇರಿಕೊಂಡರು. ಅವರಿಗೆ ನನ್ನನ್ನು 'ತಮ್ಮ' ಎಂದು ಕರೆಯಲು ಅನುಮತಿ ಕೊಟ್ಟಿದ್ದೆ. ಆ ದಿನ ಏನೂ ತಿಳಿಯದವರಂತೆ ತರಗತಿಗೆ ಹೋಗಿ ಕುಳಿತೆವು. ನಮ್ಮ ಲೆಕ್ಕ ಪ್ರಕಾರ ಬೆಲ್ ಹೊಡೆದ ತಕ್ಷಣ ನಾವೆಲ್ಲರೂ ತರಗತಿಯಿಂದ ಹೊರಬಂದು ಮುಷ್ಕರ ಹೂಡಲು ತಯಾರಾಗುವುದೆಂದು ಕೂಡಾ ನಿಶ್ಚಯಿಸಿದ್ದೆವು.

ಬೆಲ್ಲಾಯಿತು ನಾನು, ಪುರುಷೋತ್ತಮ, ಕಾಮತ್ ಮೇಷ್ಟ್ರು ಕ್ಲಾಸಿನೊಳಗೆ ಬರುವುದಕ್ಕಿಂತ ಮುಂಚೆ "ಎಲ್ಲರೂ ಮುಷ್ಕರಕ್ಕೆ ಬನ್ನಿ" ಎಂದು ವಿನಂತಿಸಿದೆವು.

ಹುಡುಗಿಯರು ತರಗತಿಯಿಂದ ಹೊರಬರಲು ಇಷ್ಟ ಪಟ್ಟ ಹಾಗೆ ಕಾಣಿಸಲಿಲ್ಲ. ಹುಡುಗರೆಲ್ಲರೂ ಇಂದಿರಾಗಾಂಧಿಯವರ ವಿರುದ್ಧ ಘೋಷಣೆ ಕೂಗುತ್ತಾ ಹೊರ ಬಂದರು. ವಿದ್ಯಾರ್ಥಿಗಳು ಹೊರಬರುವುದಕ್ಕೂ ಪೊಲೀಸರ ವ್ಯಾನು ಬರುವುದಕ್ಕೂ ಸರಿಯಾಯಿತು. ನಾನು ಧ್ವಜಸ್ತಂಭದ ಕಟ್ಟೆಯ ಮೇಲೆ ನಿಂತು ಭಾಷಣ ಪ್ರಾರಂಭಿಸಿದೆ ಅಷ್ಟು ಪೊತ್ತಿಗೆ ನಾರಾಯಣ ಮಣಿಯಾಣು 'ನಿಮ್ಮನ್ನು ಅರೆಸ್ಟ್ ಮಾಡ್ತಾ ಇದ್ದೇನೆ ಬನ್ನಿ' ನಮ್ಮಲ್ಲಿನ ಹದಿನೈದು ಜನರನ್ನು ಮಾತ್ರ ಎಳಕೊಂಡು ವ್ಯಾನಿಗೆ ತುಂಬಿದ. ನಮ್ಮನ್ನು ಕರೆದುಕೊಂಡು ವ್ಯಾನಿನಲ್ಲಿ ಸ್ಟೇಶನಿಗೆ ಕರೆದೊಯ್ದ. ಆ ದಿನ ಒಂಚೂರು ತಿಂಡಿಯಿಲ್ಲ ಕಾಫಿಯಿಲ್ಲ, ಪೊಲೀಸ್‌ಸ್ಟೇಶನ್ ನಮ್ಮ ಕಲರವದಿಂದ ತುಂಬಿಹೋಗಿತ್ತು. ಆದರೆ ನಾರಾಯಣ ಮಣಿಯಾಣಿ ಯಾರಿಗೂ ಏನೂ ಮಾಡಲಿಲ್ಲ. ನಾರಾಯಣನ ಮನಸ್ಸಿನಲ್ಲಿ ಆ ದಿನ ನಮ್ಮನ್ನು ಮಂಗಳೂರು ಜೈಲಿಗೆ ಕಳಿಸಬೇಕೂಂತಲೇ ಇದ್ದ. ಆದರೆ ಅಲ್ಲಿನ ಜೈಲು ತುಂಬಿದ್ದರಿಂದ ಆ ಅವಕಾಶ ಅವನಿಗೆ ಒದಗಲಿಲ್ಲ.

ಒಂದು ವಾರ ಕಳೆದ ಮೇಲೆ ವಿಷಯ ತಿಳಿಯಿತು: ಆ ದಿನ ನಮ್ಮ ಮುಷ್ಕರ ನಡೆದಿರುವುದು ಶಾಲಿನಿಗೆ ಗೊತ್ತಾಗಿತ್ತು. ಶಾಲಿನಿ ಅದನ್ನು ಪಿ.ಡಿ. ಹೇಳಿದ್ದಳು ಪಿ.ಡಿ. ಪ್ರಿನ್ಸಿಪಾಲರಿಗೆ, ಪ್ರಿನ್ಸಿಪಾಲರಿಂದ ಪೊಲೀಸ್ ಸ್ಟೇಶನಿಗೆ ಸುದ್ದಿ ಹೋಗಿತ್ತು.

ನಾವು ಅರೆಸ್ಟಾದ ದಿನ ರಾತ್ರಿ ಹನ್ನೆರಡು ಗಂಟೆಗೆ ನಾರಾಯಣ ಮಣಿಯಾಣಿ ನಮ್ಮನ್ನು ಬಿಟ್ಟ. ಇಡೀ ರಾತ್ರಿ ವಾಹನವಿಲ್ಲ. ಪೊಲೀಸ್ ಸ್ಟೇಶನ್ ಹೊಕ್ಕವರು ಹೊರಗೆ ಬರುವಾಗ ನಮ್ಮ ಜೇಬು ಕೂಡಾ ಖಾಲಿ ಇಂದಿರಾಗಾಂಧಿಯನ್ನು ಹೇರಿದ ತುರ್ತುಪರಿಸ್ಥಿತಿಯನ್ನು ವಿರೋಧಿಸಿದ ಹೆಮ್ಮೆ ನಮ್ಮ ಹೃದಯದಲ್ಲಿತ್ತು. ಬೆಳಗ್ಗಿನಿಂದ ರಾತ್ರಿಯವರೆಗೆ ತಿಂಡಿ ತಿನ್ನದೆ ಇದ್ದುದರಿಂದ ಹಸಿವೆಯೂ ಕೂಡಾ ಅಷ್ಟೇ ತೀವ್ರವಾಗಿತ್ತು. ಎಲ್ಲರೂ ರಸ್ತೆಬದಿಯಲ್ಲಿ ನಿಂತುಕೊಂಡ ಹೊತ್ತು ದೂರದಿಂದ ಚೆಂಡೆಯ ಶಬ್ದ ಕೇಳಿಸಿತು. ನಾವು ಆ ಕಡೆಗೆ ಹೆಜ್ಜೆ ಹಾಕಿದೆವು. ಪುರುಷೋತ್ತಮ ಮಹಾನ್ ಕಿಲಾಡಿ. ಯಕ್ಷಗಾನದ ಹತ್ತಿರವಿದ್ದ ಚುರುಮುರಿ ಅಂಗಡಿಯತ್ತ ಹೋದ. ಪುರುಷೋತ್ತಮ ಆ ಜನರ ಗಡಿಬಿಡಿಯಲ್ಲಿಯೇ ಅಂಗಡಿಯವನಿಗೆ ಮಾತಾಡಿ, ಮಂಡಕ್ಕಿ, ವಡೆ, ಟೀ ವಸೂಲಿ ಮಾಡಿದ. ಅಷ್ಟು ಹೊತ್ತಿಗೆ ಒಂದೂವರೆ ಆಯಿತು. ನಾವೆಲ್ಲಾ ಯಕ್ಷಗಾನದ ಟೆಂಟನ್ನು ನುಸುಳಿ ಯಕ್ಷಗಾನ ನೋಡಿದೆವು.

ಎರಡು ದಿನ ಬಿಟ್ಟು ನಾನು ಕಾಲೇಜಿಗೆ ಹೋದೆ. ಕಾಲೇಜಿನ ಮೆಟ್ಟಲು ಹತ್ತುತ್ತಿರುವಾಗ ನನ್ನ ಜೂನಿಯರ್ ತರಗತಿಯಲ್ಲಿ ಓದುತ್ತಿದ್ದ ನಿಶಾ ಕೆಳಗಿನ ಮನೆ ಸಿಕ್ಕಿದಳು. ಅವಳೇ ಅಂದಳು. "ನಾನು ನಿಶಾ ಕೆಳಗಿನಮನೆ

ಪಂಜಸೀಮೆಯವಳು." ಅಪ್ಪಟ ಗೌಡರ ಹುಡುಗಿ. "ಮೊನ್ನೆಯ ನಿಮ್ಮ ಧೈರ್ಯ ನೋಡಿ ಖುಷಿಯಾಯಿತು. ಬರಲಾ?"

ಮುಂದೊಂದು ದಿನ ಅದೇ ನಿಶಾ ಕೆಳಗಿನಮನೆ ತನ್ನ ಹೊಳೆಯುವ ಕಣ್ಣುಗಳ ತುಂಬಾ ನೀರು ತುಂಬಿಕೊಂಡು ನನ್ನ ಅಂಗೈಯಲ್ಲಿ ತನ್ನ ಮುಖ ಹುದುಗಿಸಿ ಅಳಬಹುದು ಎಂದು ಊಹಿಸಿರಲಿಲ್ಲ. ಇಂದಿನ ದೊಡ್ಡ ಪತ್ರಕರ್ತೆ; ಬೆಂಗಳೂರೆಂಬ ಮಹಾನಗರದಲ್ಲಿ ತನ್ನದೇ ಚಹರೆಯನ್ನು ರೂಪಿಸಲಿದ್ದಾಳೆ ಎಂದೂ ಗೊತ್ತಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನಿಶಾ ಕೆಳಗಿನಮನೆ ನನ್ನ ಜೊತೆಗಿನ ಸ್ನೇಹಕ್ಕೆ ಒಂದು ಮುನ್ನುಡಿಯ ವಾಕ್ಯ ಬರೆಯಲಿದ್ದಾಳೆಂದು ಅರಿವಿರಲಿಲ್ಲ. ಆದರೂ ಅವಳನ್ನು ಭೇಟಿಯಾದದ್ದು ಶನಿವಾರ. ಅವಳು ನನ್ನನ್ನು ಭೇಟಿಯಾದ ಗಳಿಗೆ ಬೆಳಗ್ಗೆ ಹತ್ತು ಗಂಟೆ. ಕಾಲೇಜಿನ ಮೆಟ್ಟಿಲಲ್ಲಿ ಅವಳು ಇಳಿದು ಬರುತ್ತಿದ್ದಳು – ನಾನು ಮೆಟ್ಟಿಲೇರುತ್ತಿದ್ದೆ, ಅವಳು ಉದ್ದಲಂಗ ಹಾಕಿಕೊಂಡು ಉದ್ದ ತೋಳಿನ ಬ್ಲೌಸ್ ಹಾಕೊಂಡಿದ್ದಳು. ಅವಳಿಗೆ ಆಗ ಎರಡು ಜಡೆ ಕೊರಳಲ್ಲಿ ಒಂದೆಳೆಯ ಸರವಿತ್ತು. ಅವಳು ಕಪ್ಪಿದ್ದಳು – ಕಣ್ಣಲ್ಲಿ ಹೊಳಪಿತ್ತು. ಈಚೆಗೆ ಅವಳು ಬಂದಾಗ ಬಿಗಿಯಾದ ಪ್ಯಾಂಟ್; ಬಿಗಿಯಾದ ಟೀ ಶರ್ಟ್ ಹಾಕೊಂಡಿದ್ದಳು ಮತ್ತು ಬಾಬ್ ಕಟ್ ಮಾಡಿಸಿಕೊಂಡಿದ್ದಳು. ಮತ್ತು ಈಚೆಗೆ ಅವಳನ್ನು ಭೇಟಿಯಾದದ್ದು ಕೂಡಾ ಶನಿವಾರ. ನಾನು ಮೆಟ್ಟಿಲು ಇಳಿಯುತ್ತಿದ್ದೆ

ಅವಳು ಮೆಟ್ಟಿಲು ಏರುತ್ತಿದ್ದಳು. ಆಗ ಸಂಜೆಯ ಬೀದಿ ದೀಪಗಳು ಉರಿಯತೊಡಗಿದ್ದವು. ಬಾರ್‌ನ ಮೆಟ್ಟಿಲುಗಳವು.

* * * * *

**ಎಮರ್ಜೆನ್ಸಿ ವಾಕ್ ಸ್ವಾತಂತ್ರ್ಯವನ್ನೇ ನಾಶ ಮಾಡಿತ್ತು.**

## 1992
## ಜೂನ್
## 14

ಇದ್ದಕ್ಕಿದ್ದಂತೆ ತಲೆಯ ಬಲಭಾಗದಲ್ಲಿ ನರಗಳು ಸಿಡಿದು ಹೋಗುತ್ತವೆ. ಇನ್ನೂ ಒಂದು ಕ್ಷಣವೂ ತಲೆಯೆತ್ತಿ ಕುಳಿತುಕೊಳ್ಳಲಾಗುವುದಿಲ್ಲ. ಸುತ್ತಿಗೆಯನ್ನು ಹಿಡಿದುಕೊಂಡು ಯಾರೋ ತಲೆಗೆ ಹೊಡೆಯುತ್ತಿದ್ದಾರೆಂದು ಅನಿಸಿ ಒದ್ದೆಯಾದ ತಣ್ಣೀರಲ್ಲಿ ಅದ್ದಿದ ಬಟ್ಟೆಯನ್ನು ಬಿಗಿಯಾಗಿ ತಲೆಗೆ ಕಟ್ಟಿಕೊಂಡಳು. ಕಣ್ಣುಗಳು ಭಾರವಾಗುತ್ತಿವೆ. ಮೈಯ್ಯ ಸಂದಿ ಸಂದಿಗಳಲ್ಲಿ ವಿಪರೀತವಾದ ನೋವು. ಕೊಂಚ ಬಿಸಿ ಕಾಫಿ ಕುಡಿಯಬಹುದಿತ್ತು. ಈ ಮಧ್ಯರಾತ್ರಿ ಎದ್ದು ಸ್ಟೌವ್ ಉರಿಸಿ ಕಾಫಿ ಮಾಡಿಕೊಂಡು ಕುಡಿಯುವ ಉತ್ಸಾಹವಿಲ್ಲ. ನಿಲುವುಗನ್ನಡಿಯ ಪಕ್ಕದಲ್ಲಿ ಇರಿಸಿದ ವ್ಯಾನಿಟಿ ಬ್ಯಾಗಿನಲ್ಲಿಯೂ ಯಾವುದೇ ಮಾತ್ರೆಗಳಿಲ್ಲ. ನಿದ್ದೆಯ ವಿಷಯ ದೂರ ಉಳಿಯಿತು. ಎದ್ದು ಕೂರುವಂತಿಲ್ಲ. ಮಲಗುವಂತಿಲ್ಲ. ಇದು ಹೀಗೆಯೇ – ಅಕಸ್ಮಾತ್ ಹೆಗಲೇರಿ ಕುಳಿತುಕೊಂಡು ತಲೆಗೆ ಸದಾ ಮೊಟಕುವ ಶನಿ. ತಲೆನೋವು ಕಡಿಮೆಯಾಗಬಹುದೇನೋ ಎಂಬ ಆಸೆಯಿಂದ ಬಲಭಾಗದ ಹಣೆಗೆ ಗಟ್ಟಿಯಾಗಿ ಒತ್ತುವಂತೆ  ದಿಂಬು ಇರಿಸಿಕೊಂಡು ಮೊಣಕಾಲ ಮೇಲೆ ಸರಿದ ನೈಟಿಯನ್ನು ಸಾಧ್ಯವಾದಷ್ಟು ಕಾಲುಬುಡಕ್ಕೆ ಎಳೆಯಲು ಸಾಧ್ಯವೋ ಎಂಬಂತೆ ಪ್ರಯತ್ನಿಸಿ ಮುದುಡಿ ಮಲಗಿದಳು ನಿಖಿತಾ. ಈಗ ನಿಖಿತಾಳ ವಯಸ್ಸು ಇಪ್ಪತ್ತೆರಡು ದಾಟಿ ಹದಿನೈದು ದಿನ. ಈ ರಾತ್ರಿಯ ಹೊತ್ತಿಗೆ ಈ ಹದಿನೈದು ದಿನದ ಕೊನೆಯ ಗಂಟೆ. ನಾಳೆ ಬೆಳಗ್ಗೆಯಾದರೆ ಹದಿನಾರನೆಯ ದಿನ. ವಿಪರೀತವಾಗಿ ಕಾಣಿಸುವ ಮತ್ತು ಇದ್ದಕ್ಕಿದ್ದಂತೆ ದಿಕ್ಕು ತಪ್ಪಿಸುವಂತೆ ಬರುವ ಅವಳ ತಲೆನೋವಿಗೆ ಒಬ್ಬೊಬ್ಬ ತಜ್ಞ ವೈದ್ಯರು ಒಂದೊಂದು ಸಲಹೆಯನ್ನು ಕೊಟ್ಟಿದ್ದಾರೆ. ಇದು ವಿಪರೀತವಾದ ಉದ್ವೇಗದಿಂದ  ಕಾಣಿಸಿಕೊಳ್ಳುವ ತಲೆನೋವು. ಇದಕ್ಕೆ ಯೋಗಮಾಡಿ ಅಂದರು. ಮತ್ತೊಬ್ಬರು ಮತ್ತೊಂದು ಅಂದರು. ನಿಖಿತಾ ಯಾವ ತಂಟೆಗೂ ಹೋಗಲಿಲ್ಲ. ನಿದ್ದೆ ಬಂದಿಲ್ಲವೆಂದರೆ ಮನೆಯ ಬಾಲ್ಕನಿಯಲ್ಲಿ ಒಂದು ಕುರ್ಚಿಯಿಟ್ಟುಕೊಂಡು ಮಿನುಗುವ ಬೀದಿದೀಪಗಳನ್ನು ನೋಡುವುದು ಇಲ್ಲವೇ, ಆಕಾಶವನ್ನು ದಿಟ್ಟಿಸುತ್ತಾ ಕೂರುವುದು. ಮತ್ತು ಪದೇ ಪದೇ ನಿಟ್ಟುಸಿರು ಬಿಡುವುದು. ಮನೆಯೆಂದರೆ ಮನೆ. ರೂಮೆಂದರೆ ರೂಮು ಎಂದು ಅನ್ವಯಿಸಬಹುದಾದ ಮಾಡಿನಡಿಯಲ್ಲಿ. ಆದರೆ ಅಲ್ಲಿರುವುದು ರಾತ್ರಿಯ ಹೊತ್ತುಗಳಲ್ಲಿ ಮಾತ್ರ. ಅದೂ ರಾತ್ರಿಯ ವೇಳೆ

ತಲೆನೋವು ಬಂದರೆ ದೇವರೇ ಗತಿ ಶಿವರಾತ್ರಿ! ಮಧ್ಯಾಹ್ನದವರೆಗೆ ಈ ತಲೆನೋವು ಉಳಿದುಕೊಂಡರೆ ಅದು ನರಕಯಾತನೆ. ಹೊಟ್ಟೆಯಿಡೀ ತೊಳಸಿ ಬಂದಂತಾಗುತ್ತದೆ. ಕಣ್ಣು ಉರಿಯುತ್ತಿರುತ್ತದೆ. ಸಂಜೆ ಆಫೀಸು ಬಿಟ್ಟು ಮನೆಗೆ ತಲುಪುವುದು ಒಮ್ಮೊಮ್ಮೆ ಎಂಟು ಗಂಟೆಗೆ. ಮತ್ತೆ ಕೆಲವೊಮ್ಮೆ ಎಂಟೂವರೆ ದಾಟಿದರೆ ಮೇಲೆ. ಬೀದಿಯಲ್ಲಿನ ಬಂಗಾರ ಬೆಳಕು ಚೆಲ್ಲುವ ದೀಪಗಳ ಕೆಳಗೆ ನಿಧಾನವಾಗಿ ಹೆಜ್ಜೆ ಹಾಕುತ್ತಾ ನಡೆಯುವುದು ಮತ್ತು ಯೋಚಿಸುತ್ತಿರುವುದು ಎಂದರೆ ನಿಖಿತಾಗೆ ತುಂಬಾ ಅಚ್ಚುಮೆಚ್ಚು.

ನಿಖಿತಾ ಮತ್ತೆ ಹೊರಳಿ ಮಲಗಿದಳು. ತನ್ನ ಮನೆಯ ಹತ್ತಿರದ ತೋಡಿನಲ್ಲಿ ಮಳೆಗಾಲದ ವೇಳೆ ಒಡಲು ತುಂಬಾ ಕೆಂಪು ತುಂಬಿಕೊಂಡು; ಮೇಲೆ ತೆಂಗಿನ ಕಾಯಿಯನ್ನೇ ಮರದ ತುಂಡನ್ನೇ ತೇಲಿಸುತ್ತಾ ಬರುವ ನೀರನ್ನು ಎಷ್ಟೊಂದು ಹೊತ್ತು ನೋಡುತ್ತಾ ನಿಲ್ಲುತ್ತಿದ್ದೆ? ಎಲ್ಲಿಯೂ ನಿಲ್ಲದೆ ಸಾಗುತ್ತಿದ್ದ ತೆಂಗಿನ ಕಾಯಿಯನ್ನು ಕಂಡಾಗ ಮುಂದೊಂದು ದಿನ ತನ್ನ ಬದುಕು ಹಾಗಾಗಬಹುದು ಎಂಬ ಯೋಚನೆ ಬಂದಿರಲಿಲ್ಲ.

ಮತ್ತೆ ಕುಳಿತು ತಣ್ಣೀರು ಪಟ್ಟಿಯನ್ನು ಮುಟ್ಟಿ ನೋಡಿ ಬಿಸಿಯಾಗಿದೆಯೆಂದುಕೊಂಡು ಮತ್ತೆ ತಣ್ಣೀರಲ್ಲಿ ಅದ್ದಿ ಬಿಗಿಯಾಗಿ ಕಟ್ಟಿದಳು. ಆಗ ಅನಿಸಿತು – ಒಂದು ವೇಳೆ ಅಮ್ಮ ಬೇಗ ಸಾಯದೇ ಹೋಗಿದ್ದರೆ; ಅಪ್ಪ ಬೇರೊಂದು ಮದುವೆಯಾಗದೇ ಇದ್ದಿದ್ದರೆ; ಚಿಕ್ಕಮ್ಮನಿಗೆ ಮಕ್ಕಳು ಹುಟ್ಟಿಲ್ಲದಿದ್ದರೆ; ಎಲ್ಲಾ ಬಿಟ್ಟು ಅವಲೋಕಿತ ನನ್ನನ್ನು ನಡುನೀರಲ್ಲಿ ಕೈ ಬಿಡದಿದ್ದರೆ.......ಆದರೆ ಎಲ್ಲವೂ ಆಗಿಹೋಗಿದೆ. ಅದು ನನ್ನ ಇಚ್ಛೆಯಲ್ಲ ಎಂದುಕೊಂಡಳು. ನಿಖಿತಾಗೆ ಹನ್ನೆರಡನೆಯ ವಯಸ್ಸು ತಾಯಿಯದು ಮೂವತ್ತೈದೋ ಮೂವತ್ತಾರೋ ಇರಬಹುದು. ಪ್ರಾಯಶಃ ತಂದೆಗೆ ಆಗ ನಲುವತ್ತೆರಡು ನಲುವತ್ತು ಮೂರು ಇರಬಹುದು.

ತಾಯಿ ತೀರಿ ಹೋದ ದಿನವನ್ನು ಮರೆಯಾಗುತ್ತಿಲ್ಲ. ಅಮ್ಮನನ್ನು ವಿಪರೀತ ಹಚ್ಚಿಕೊಂಡವಳಿಗೆ ಅಮ್ಮನ ಸಾವು ಮನಸ್ಸಿನ ಮೇಲೆ ಎಳೆದ ಅಳಿಸಲಾಗದ ಗೆರೆ. ಅಮ್ಮನ ತೊಡೆಯಲ್ಲಿ ಮಲಗಿ ನಿದ್ದೆ ಹೋಗುವುದು. ಅಮ್ಮನ ಹಳೆಯ ಸೀರೆಯನ್ನು ಹೊದ್ದುಕೊಂಡು ಮಲಗುವುದು; ಅಮ್ಮನ ತಲೆ ಬಾಚುವುದು ಹೆಣ್ಣಾದ ತನ್ನ ಜೀವನದ ಅಪೂರ್ವಗಳಿಗೆಗಳು ಎಂದು ನಿಖಿತಾ ಭಾವಿಸಿಕೊಂಡಿದ್ದಳು. ಅಮ್ಮನ ಬೆರಳುಗಳು ತಲೆಗೂದಲಲ್ಲಿ ಓಡಾಡುತ್ತಿದ್ದ ಹೊತ್ತು – ಜೀವನವು ಎಷ್ಟು ಚೆನ್ನಾಗಿದೆಯಲ್ಲಾ ಎಂದು ಅನಿಸುತ್ತಿತ್ತು. ಅಮ್ಮನ ಮೇಲೆ ಅಪ್ಪ ರೇಗಾಡುತ್ತಿದ್ದ ರೀತಿ ನೋಡಿದಾಗ ಅಮ್ಮನಿಗೆ ಅಪ್ಪನ ಮೇಲೆ ಯಾಕೆ ಸಿಟ್ಟು ಬರುವುದಿಲ್ಲ

ಎಂದು ಅನಿಸುತ್ತಿತ್ತು. ರಾತ್ರಿಯ ವೇಳೆ ಅಪ್ಪ ಮನೆಗೆ ಬಂದಾಗ ಯಾಕಾದರೋ ಈ ರಾತ್ರಿ ಬರುತ್ತದೆಯೆಂದು ಅನಿಸುತ್ತಿದ್ದುದು ಕೂಡಾ ಅಷ್ಟೇ ನಿಜ. ಏಕಾಂತದಲ್ಲಿ ಅಮ್ಮ ಅಳುತ್ತಿದ್ದರು. ಸೆರಗಿನಲ್ಲಿ ಕಣ್ಣೀರು ಒರೆಸಿಕೊಳ್ಳುತ್ತಿದ್ದರು. ಅಮ್ಮನಿರುವ ಜಾಗದಲ್ಲಿ ನಾನು ಇದ್ದರೆ ಅಪ್ಪನಿಗೆ ಬಿಗಿದು ಕಟ್ಟಿ ಹಾಕಿ ಬಿಡುತ್ತಿದ್ದೆ. ಅಮ್ಮ ಯಾಕೆ ಪ್ರತಿಭಟಿಸುವುದಿಲ್ಲ? ಮನಸ್ಸಿನ ತುಂಬಾ ಆಗ ಇದ್ದದ್ದು ಅಪ್ಪನ ಮೇಲೆ ಒಂದು ಬಗೆಯ ಸಿಟ್ಟು. ಅಪ್ಪನಿಗೆ ಬೇರೆ ಬೇರೆ ಚಟಗಳಿದ್ದವು ಎಂದು ಅರ್ಥವಾದ್ದು ಬೆಳೆದ ಮೇಲೆ. ಅಲ್ಲಿಯವರೆಗೆ ತನಗೆ ಆ ವಿಷಯಗಳು  ಗೊತ್ತಿರಲಿಲ್ಲ. ಅಪ್ಪ ಜೂಜು ಆಡುತ್ತಿದ್ದ; ಅಪ್ಪನಿಗೆ ಕುಡಿಯುವ ಪ್ರವೃತ್ತಿ. ಎಲ್ಲಕ್ಕಿಂತ ಹೆಚ್ಚಾಗಿ ಅತ್ಯಂತ ವಿಕಾರವಾದ ವಿಕೃತವಾದ ಮನಸ್ಸು ಇತ್ತು. ಆ ವಿಕೃತಿಗಳು ಮೊದಮೊದಲು ಗೊತ್ತಿರಲಿಲ್ಲ. ಅಮ್ಮ ಬಲಿಯಾಗುವವರೆಗೆ ಅಮ್ಮ ಅಪ್ಪನಿಂದ ಅಪಾರವಾದ ಹಿಂಸೆಯನ್ನು ಅನುಭವಿಸಿದ್ದಳು. ಅವಳಿಗೆ ಮಾನಸಿಕ ಹಿಂಸೆಯಿತ್ತು. ದೈಹಿಕ ಹಿಂಸೆಯಿತ್ತು. ಅಪ್ಪ ಹಿಂಸಿಸುತ್ತಿರುವಾಗ ಯಾರೂ ಬರಲಿಲ್ಲ. ಊರಿಗೇ ಊರೇ ಅಪ್ಪನು ಅಮ್ಮನ ಮೇಲೆ ನಡೆಸುತ್ತಿರುವ ದಬ್ಬಾಳಿಕೆಗೆ ಬೆಂಬಲಿಸುತ್ತಿದೆಯೆಂದು ಅನಿಸತೊಡಗಿದ್ದು ಸುಳ್ಳಲ್ಲ. ಒಂದು ದಿನ ರಾತ್ರಿ ಅಪ್ಪ ಕುಡಿದು ಬಂದು ಅಮ್ಮನಿಗೆ ಬಿಸಿನೀರು ಒಲೆಗೆ ಹಾಕುವ ಸೌದೆಯಿಂದ ಹೊಡೆದ. ಸೌದೆಯ ಚೂರು ಕಣ್ಣಿನ ಪಕ್ಕಕ್ಕೆ ತಗುಲಿ ಅಮ್ಮ ಜೋರಾಗಿ ಚೀರಿದಳು. ಅವಳ ತಲೆಗೂದಲು ಬಿಚ್ಚಿಹೋಗಿತ್ತು: 'ದಮ್ಮಯ್ಯ ನನಗೆ ಹೊಡೆಯಬೇಡಿ ಈ ನರಕ ಸಾಕು! ಬೇಕಿದ್ದರೆ ನನ್ನನ್ನು ಕೊಂದು ಬಿಡಿ' ಅಂದಳು. ಅಪ್ಪ ಮತ್ತೆರಡು ಏಟು ಕೊಟ್ಟ. ಅಮ್ಮನಿಗೆ ಹೊಡೆದ ಅಮ್ಮನ ಕಣ್ಣ ಕರೆಯಲ್ಲಿ ಚುಚ್ಚಿದ್ದ ಸೌದೆಯ ಚೂರನ್ನು ತೆಗೆದಾಗ ಅವಳ ಗಲ್ಲಕ್ಕೆ ರಕ್ತ ಸುರಿಯುತ್ತಿತ್ತು. ನೀರಲ್ಲಿ ಅದನ್ನು ತೊಳೆದು ಅಡುಗೆ ಮನೆಯಿಂದ ಕಾಫಿಪುಡಿ ತಂದು ಅಮ್ಮನ ಗಾಯಕ್ಕೆ ಹಾಕಿದ್ದೆ. ಅಪ್ಪ ಅಮ್ಮನಿಗೆ ಹಿಂಸೆಕೊಡುತ್ತಿದ್ದುದಕ್ಕೆ ಒಂದು ನಿರ್ದಿಷ್ಟ ಕಾರಣ ಬೇಕಿರಲಿಲ್ಲ.

ನಿಖಿತಾ ಹೊರಳಿ ಮಲಗಿದಳು ತಲೆನೋವು ಮತ್ತಷ್ಟು ಹೆಚ್ಚಾಗುತ್ತಿದೆಯೆಂದೆನ್ನಿಸಿತು. ತಲೆನೋವು ಮಾಯವಾಗುವ ಲಕ್ಷಣ ಕಾಣದೆ ಎದ್ದು ಕುಳಿತು ತಲೆಯನ್ನು ತಣ್ಣೀರಿಗಾದರೂ ಒಡ್ಡಿ ಕುಳಿತುಕೊಳ್ಳುತ್ತೇನೆಂದು ಕೊಂಡಳು. ಅದೊಂದು ಸಂಗತಿ ಬಿಟ್ಟರೆ ಈ ರಾತ್ರಿ ಬೇರೆ ಯಾವ ಪರಿಹಾರವೂ ಅವಳ ಬಳಿಯಿರಲಿಲ್ಲ. ಲೈಟು ಹಾಕಿ ಬಚ್ಚಲಮನೆಗೆ ಹೋಗಿ ಆ ನಡು ರಾತ್ರಿಯ ಏಕಾಂತದಲ್ಲಿಯೂ ಬಾಗಿಲು ಹಾಕಿಕೊಂಡಳು. ಬಚ್ಚಲು ಮನೆಯ ಏಕಾಂತದ ವೇಳೆಯಲ್ಲಿಯೂ ಬಾಗಿಲು ಹಾಕಿಕೊಳ್ಳುವುದು ಅವಳಿಗೆ ಬಂದು ಸಹಜ ಅಭ್ಯಾಸ. ಹಾಗೆಯೇ ಬಾಗಿಲಿನ ಬೋಲ್ಟ್ ಹಾಕಿಕೊಂಡಿದೆಯಾ ಎಂದು ನೋಡಿಕೊಳ್ಳುವುದು.

ನಿಖಿತಾಗೆ ಆಗ ಹದಿನಾಲ್ಕು ವರ್ಷ. ಒಂದು ರಾತ್ರಿ ಬಚ್ಚಲು ಮನೆಗೆ ಹೋಗಿ ಸ್ನಾನಕ್ಕೆಂದು ಇಳಿದಿದ್ದಳು. ಬಚ್ಚಲು ಮನೆಯ ಚಿಲುಕ ಹಾಕಿಕೊಳ್ಳುವುದು ಮರೆತು ಹೋಗಿತ್ತು. ಜಗುಲಿಯಲ್ಲಿ ಅಪ್ಪ ಕುಡಿತದ ಅಮಲಿನಲ್ಲಿದ್ದರು. ಕೆಲಸದಾಳು – ಆಗ ಅವನಿಗೆ ವಯಸ್ಸು ಇಪ್ಪತ್ತನಾಲ್ಕು ದಾಟಿರಬಹುದು – ಮೆಲ್ಲನೆ ಬಚ್ಚಲು ಮನೆಗೆ ಬಂದ. ಅವನು ಬಚ್ಚಲು ಮನೆಗೆ ಬಂದುದು ಗೊತ್ತಾಗಿರಲಿಲ್ಲ. ಮುಖಕ್ಕೆ ಸೋಪು ಹಚ್ಚಿಕೊಂಡವಳು ಅಂದಾಜಿನ ಮೇಲೆ ಚೆಂಬು ಹಿಡಿದುಕೊಂಡು ಮುಖಕ್ಕೆ ನೀರು ಹಾಕಿಕೊಳ್ಳುತ್ತಿದ್ದಳು. ಕಣ್ಣು ತೆರೆದಾಗ ಚಿಮಿಣಿ ದೀಪ ಆರಿಹೋಗಿದೆ. ಯಾರದೋ ಒಂದು ಕೈ ತನ್ನ ಬಾಯನ್ನು ಮುಚ್ಚಿದೆ. ಮತ್ತೊಂದು ಕೈ ತನ್ನ ದೇಹದ ಮೇಲೆ ಚಲಿಸುತ್ತಿದೆ. ನಿಖಿತಾ ತುಂಬಾ ಹೆದರಿಕೊಂಡಳು. ಅವನು ಕೆಲಸದಾಳು ಅನ್ನುವುದು ಗೊತ್ತಾದರೂ ಆ ಘಟನೆಯನ್ನು ಯಾರ ಹತ್ತಿರವೂ ಹೇಳಲು ಆಗಲೇ ಇಲ್ಲ. ಅನೇಕ ಸಾರಿ ಅವನು ತೊಂದರೆ ಕೊಟ್ಟಿದ್ದ. ಇದು ನಡೆದದ್ದು ಅಮ್ಮ ಆತ್ಮಹತ್ಯೆ ಮಾಡಿಕೊಂಡು ಎರಡು ವರ್ಷ ದಾಟಿದ ಮೇಲೆ. ಕೊನೆಯ ಸಾರಿ ಅವನು ತನ್ನ ಮೈ ಮುಟ್ಟಲು ಬಂದುದು ಮಧ್ಯಾಹ್ನ ಹೊತ್ತಿನಲ್ಲಿ. ಆಗಲೂ ಮನೆಯಲ್ಲಿ ಯಾರೂ ಇರಲಿಲ್ಲ. ಎಲ್ಲಿತ್ತೋ ಆ ಯಮಧೈರ್ಯ – ನಿಖಿತಾ ತನ್ನ ಲಂಗಕ್ಕೆ ಹಾಕಿಕೊಂಡಿದ್ದ ಸೇಫ್ಟಿಪಿನ್ ತೆಗೆದು ಅವನ ಕೈ ಬೆರಳಿಗೆ ಚುಚ್ಚಿ ಅವನ ಕಾಲಿನ ಮೈಮೇಲೆಲ್ಲ ಅದರಿಂದ ಗೆರೆಯೆಳೆದಿದ್ದಳು; ಅವನ ಕೈ ಬೆರಳುಗಳಿಂದ; ಕಾಲಿನಿಂದ ವಿಪರೀತ ರಕ್ತಧಾರೆ! ಅಂದಿನಿಂದ ಅವನು ತಂಟೆಗೆ ಬರುವುದು ನಿಂತಿತು. ಅಂತೂ ಒಂದು ದಿನ ಹೋದ. ಆ ದಿನವೇ ನಿಖಿತಾ ಅಂದುಕೊಂಡದ್ದು; ಹೆಣ್ಣಾಗಿ ನಾನು ನನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕು. ತಲೆಗೆ ತಣ್ಣೀರು ಹಾಕಿಕೊಳ್ಳಲೆಂದು ಹೋದವಳು ಬಚ್ಚಲು ಮನೆಯ ಬಾಗಿಲು ಬಿಗಿಯಾಗಿ ಹಾಕಿಕೊಳ್ಳಲು ಕಾರಣವಿದು. ಹೆಚ್ಚು ಸದ್ದು ಬಂದರೆ ಕೆಳಗಿನ ಮನೆಯವರು ಏನು ಯೋಚಿಸುತ್ತಾರೋ ಎಂದುಕೊಂಡು ನಿಖಿತಾ ನಲ್ಲಿಯ ನೀರನ್ನು ನಿಧಾನವಾಗಿ ಬಿಟ್ಟು ಅದಕ್ಕೆ ತಲೆಯೊಡ್ಡಿದ್ದಳು. ಮೊದಲು ಕೆಲವು ಕ್ಷಣ ಚಳಿಯಾದಂತೆ ಅನಿಸಿತಾದರೂ ತಲೆಯ ಮೇಲೆ ಬೀಳುವ ನೀರಿನಿಂದ ಮನಸ್ಸಿಗೆ ಹಾಯೆನಿಸಿತು. ಕುಕ್ಕುರುಗಾಲಲ್ಲಿ ಕುಳಿತು ನಲ್ಲಿನೀರಿಗೆ ತಲೆಯೊಡ್ಡಿದವಳು ತಲೆಗೂದಲ ನಡುವಿಂದ ನೀರು ಕೆಳಗೆ ಬೀಳುವುದರೊಂದಿಗೆ ನಿಧಾನವಾಗಿ ಬೆನ್ನ ಮೇಲೆಯೂ ನೀರು ಬೀಳತೊಡಗಿತು. ಹಾಕಿಕೊಂಡಿದ್ದ ನೈಟಿಯೂ ಒದ್ದೆಯಾಗತೊಡಗಿತು: ತಟ್ಟನೆ ನೆನಪಿಗೆ ಬಂದುದು ಅವಲೋಕಿತ!

ಅವಲೋಕಿತ ನನಗೆ ವಿಚ್ಛೇದನ ಕೊಡದಿದ್ದರೆ ಈಗ ತಾನು ಹೇಗಿರುತ್ತಿದ್ದೆ? ಅವನ ಹೆಂಡತಿಯಾಗಿ ಅವನನ್ನು ಸುಖವಾಗಿರಿಸುವುದೇ ತನ್ನ ಜೀವನದ ಆದರ್ಶವೆಂದು ತಿಳಿದುಕೊಂಡಿರುತ್ತಿದ್ದೆನೋ ಏನೋ? ತಾನೊಪ್ಪಿಗೆ ನೀಡಿದ ಎರಡು

ದಿನಗಳಲ್ಲಿಯೇ ಸುಂದರ ಮುಖದ ಅವಲೋಕಿತನ ಮನಸ್ಸಿನಲ್ಲಿ ಒಂದು ಪಿಶಾಚಿಯಿತ್ತು ಎಂದು ಗೊತ್ತಾಗಿ ಬಿಟ್ಟಿತ್ತು. ಅಪ್ಪನಿಗೆ ತುಂಬಾ ಚೆಂದನೆಯ ದುಂಡು ಮುಖವಿದೆ. ಅಪ್ಪನಿಗೂ ಮನಸ್ಸಿನ ಆಳದಲ್ಲಿ ಒಂದು ವಿಕಾರ ಮುಖವಿದೆ. ಅಪ್ಪನದು ದುಂಡು ಮುಖವಾದರೆ ಅವಲೋಕಿತನದೂ ದುಂಡು ಮುಖ. ಆದರೆ ಅಪ್ಪನ ಮೈ ಬಣ್ಣ ನೋಡಿ ಬಂಗಾರದ ಬಣ್ಣ ಬೇಡವೆಂದು ಕೊಂಚ ಕಪ್ಪು ಬಣ್ಣದ ಅವಲೋಕಿತನನ್ನು ತಾನೇ ಆಯ್ಕೆ ಮಾಡಿಕೊಂಡದ್ದು. ಅವಲೋಕಿತನನ್ನು ಮದುವೆಯಾಗುವ ಮೂಲಕ ಸಂಪ್ರದಾಯ ಮುರಿದೆನೆಂದು ಭಾವಿಸಿಕೊಂಡಿದ್ದು ಸತ್ಯ. ಅವಲೋಕಿತ ಲಿಂಗಾಯತರ ಹುಡುಗ. ಅವನ ನಿಜವಾದ ಹೆಸರು ಅವಲೋಕಿತೇಶ್ವರ. ಆಗಾಗ ಕವನ ಬರೆಯುವ ಅವನ ಕಾವ್ಯನಾಮ ಅವಲೋಕಿತ. ಕಾಲೇಜಿನಲ್ಲಿ ಒಂದು ವರ್ಷ ಸೀನಿಯರ್. ಕಾಲೇಜಿನಲ್ಲಿರುವಾಗಲೇ ಅನ್ನುತ್ತಿದ್ದ – "ಯಾವತ್ತೂ ಮುಪ್ಪು ಬಾರದ ಯಯಾತಿ ನಾನು." ಅವಲೋಕಿತನಿಗೆ ಸಿಟ್ಟು, ದ್ವೇಷ, ಅಸೂಯೆ, ಮಾನಸಿಕ ಕ್ಷುದ್ರತೆಯಲ್ಲವೂ ಇತ್ತು. ಆದರೆ ಆಗ ಯಾವುದೂ ತನ್ನ ಪ್ರೇಮದ ಗಮಗಮದ ಪರಿಮಳಕ್ಕೆ ಅರ್ಥವಾಗಿರಲಿಲ್ಲ. ಬೇಕಾದಾಗ ಬೇಕಾದ್ದು ಮಾತಾಡಬಹುದಾದ; ಬಣ್ಣ ಬಣ್ಣದ ಮಾತುಗಾರ. ನಿಖಿತಾಗೆ ಅದಿನ್ನು ಹಸಿಹಸಿಯಾಗಿ ನೆನಪಿದೆ. ಕಾಲೇಜು ಬಿಟ್ಟು ಮನೆಗೆ ಹೊರಡುವ ವೇಳೆ ಅವಲೋಕಿತ ಅಂದ: 'ನಾನು ನಿಮ್ಮನ್ನು ಪ್ರೀತಿಸುತ್ತೇನೆ.' ಎರಡು ಮೂರು ದಿನ ಯೋಚಿಸಿ ಅಪ್ಪ ಚಿಕ್ಕಮ್ಮಂದಿರ ಮೇಲಿನ ಸಿಟ್ಟಿಗೆ ನಿಖಿತಾ ಒಪ್ಪಿಗೆ ಕೊಟ್ಟಳು. ನಿಖಿತಾ ಒಪ್ಪಿಗೆ ಕೊಟ್ಟ ದಿನ ಸಂಜೆ ಅವಲೋಕಿತ ಅವಳನ್ನು ಕರೆದುಕೊಂಡು ಹೋದದ್ದು ಸಿನಿಮಾಕ್ಕೆ. ಆಗ ಅಲ್ಲಿ ಅವನ ಕೈಬೆರಳುಗಳು ಹಿಂಡಿ ಹಿಪ್ಪೆ ಮಾಡಿದ್ದವು. ನೋವು ತಡೆಯಲಾಗದೆ ಅವನ ಕೈಯನ್ನು ದೂಡಿ ತಲೆಬಗ್ಗಿಸಿ ಅಳುತ್ತಾ ಕೂತ್ತಿದ್ದಳು ಡಿಗ್ರಿ ಮುಗಿದ ಕೂಡಲೇ ಅವಲೋಕಿತ ಬ್ಯಾಂಕ್ ಸೇರಿದ. ತನ್ನನ್ನು ರಿಜಿಸ್ಟರ್ ಮದುವೆಯಾದ. ಮದುವೆಯ ದಿನ ರಾತ್ರಿ ಅವಲೋಕಿತ ವಿಪರೀತ ಪೀಡಿಸಿದ: ಒಂದಿಷ್ಟು ಕರುಣೆಯಿಲ್ಲದವನಂತೆ. ಅವನೂ ಅವನ ಸ್ನೇಹಿತರೂ ಕೂತು ಕುಡಿಯುತ್ತಿದ್ದರೆ ತಾನು ಅವರಿಗೆ ಬಿಸಿಬಿಸಿಯಾದ ಚಪಾತಿ ಪಲ್ಯ ಮಾಡಿಕೊಡಬೇಕು. ಒಂದು ದಿನ ಸುಸ್ತಾಗಿ ಮಲಗಿದ್ದಕ್ಕೆ ರಾತ್ರಿ ಬಂದವನು ಸಿಗರೇಟು ಸೇದುತ್ತಾ, 'ನಿನ್ನಿಂದ ನನಗೆ ಸುಖವಿಲ್ಲ ನಿನ್ನನ್ನು ಕೊಂದು ಹಾಕುತ್ತೇನೆ' ಅಂದ. ಸಾರ್ವಜನಿಕವಾಗಿ ಅವನು ಕವಿ. ಒಳ್ಳೆಯ ಲೇಖಕ ಆದರೆ ಅವನ ಖಾಸಗಿ ಜೀವನದ ಭಾಗವಾದ ತನಗೆ ದೊರೆತದ್ದು ಒಂದು ನರಕ ಹಿಂಸೆ. ದಿನಾ ಕಚೇರಿಗೆ ಹೋಗುವಾಗ ಮನೆಯ ಹೊರಗಿನ ಬೀಗಹಾಕಿ ಹೋಗುತ್ತಿದ್ದ. ಒಂದು ದಿನ ತಡೆಯಲಾಗದೆ ಕೇಳಿದ್ದಕ್ಕೆ ಡೈವೋರ್ಸ್ ಕೊಟ್ಟು 'ಸತ್ತು ಹೋಗು' ಅಂದ. ಅಂತೂ ಅವನಿಂದ ಬಿಡುಗಡೆಯಾಯಿತು.

ಊರಿಗೆ ಮರಳಿ ಹೋಗಲು ಇಷ್ಟವಿಲ್ಲದ ನಿಖಿತಾ ಒಂದು ಕೆಲಸವನ್ನು ಅಂತೂ ಇಂತೂ ಗಿಟ್ಟಿಸಿಕೊಂಡಳು. ನಿಖಿತಾಳ ತಂದೆಯ ಹೆಸರು 'ಎಂಥಾ ನಾರಾಯಣ' ತಾಯಿ ಸುಶೀಲ. ನಾರಾಯಣ ಎರಡನೆಯ ಮದುವೆ ಮಾಡಿಕೊಂಡಾಗ ಅವನ ಎರಡನೆಯ ಹೆಂಡತಿ ಭಾಗ್ಯಮ್ಮನ ವಯಸ್ಸು ಇಪ್ಪತ್ತಾರು. ಅವಳು ಗಟ್ಟಿಗಿತ್ತಿ. 'ಎಂಥ ನಾರಾಯಣ'ನ ದರಖಾಸ್ತು ಜಮೀನು ಮಾರಿಸಿ ಗಂಡನನ್ನು ಕರೆದುಕೊಂಡು ತವರು ಮನೆ ಸೇರಿದಳು. ಮೊದಲ ಹೆಂಡತಿಯ ಮಕ್ಕಳ ಲೆಕ್ಕವನ್ನು ನಾರಾಯಣನೇನೋ ಚುಕ್ತಾ ಮಾಡಿದ. ಆಲೋಚಿಸಿ ಸಾಕಾಗಿ ಹೋದ ನಿಖಿತಾ ಬಾತ್ ರೂಮಿಂದ ವಾಪಾಸು ಬರುವಾಗ ಬೆಳಗಿನ ಜಾವ ಮೂರು ಗಂಟೆ.  ನಿದ್ದೆಯ ಆವರಿಸುತ್ತಿದೆ ಅವಳಿಗನ್ನಿಸಿ ತಲೆಗೂದಲಿಗೆ ಬಟ್ಟೆಸುತ್ತಿಕೊಂಡು ಒರಗಿದಳು. ನಿಖಿತ ಮತ್ತೆ  ಕಚೇರಿಗೆ ಹೋಗಬೇಕಿತ್ತು.

* * * * *

**"ಕರುಣಾಳು ರಾಘವನಲಿ ತಪ್ಪಿಲ್ಲ**
**ಪೆಣ್ಣಾಗಿ ಪುಟ್ಟಿದೆನ್ನಯ ದೋಷಂ"**

## 1992
## ಜೂನ್
## 25

ನಿಶಾ ಕೆಳಗಿನಮನೆ ಅವಳ ಕಾವ್ಯನಾಮ. ಈಗಲೂ ಅದೇ ಹೆಸರಿನಲ್ಲಿ ಬರೆಯುತ್ತಿದ್ದಾಳೆ. ನನ್ನ ಮತ್ತು ಅವಳ ಸ್ನೇಹಕ್ಕೆ ಹೆಚ್ಚು ಕಡಿಮೆ ಇಪ್ಪತ್ತೈದು ವರ್ಷ ದಾಟಿದೆ. ಈಗ ನಮ್ಮ ಜೀವನದಲ್ಲಿ ನಮ್ಮ ಆಯ್ಕೆಗಳು ಮತ್ತು ಆದ್ಯತೆಗಳು ಬೇರೆಯಾಗಿದೆ. ಯಾವಾಗ ಒಂದೆರಡು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಭೇಟಿಯಾದೆವೋ ಅನಂತರ ಹದಿನೈದು ಇಪ್ಪತ್ತು ದಿನಗಳಿಗೆ ಒಮ್ಮೆ ಬಿಡುವಾದಾಗ ಫೋನ್ ಮಾಡುತ್ತಾಳೆ. ಜೋರಾಗಿ ಫೋನ್‌ನಲ್ಲಿ ನಗಾಡ್ತಾಳೆ. ಸ್ವಲ್ಪ ದಪ್ಪ ಆಗಿದ್ದಾಳೆ. ಬಾಬ್ ಕಟ್ ಮಾಡಿಸಿಕೊಂಡಿದ್ದಾಳೆ. ನಮ್ಮ ನಡುವೆ ಅನೇಕ ಮಳೆಗಾಲದ ಮಳೆ ಬಿದ್ದಿದೆ. ಚಳಿಗಾಲದ ಚಳಿ ಸುಳಿದು ಹೋಗಿದೆ. ಕಾಲವು ಹರಿದುಹೋಗಿರುವ ಗೆರೆಗಳು ನಮ್ಮ ಮುಖದಲ್ಲಿ ಸಾಕ್ಷಿಗಳನ್ನು ಬಿಟ್ಟುಹೋಗಿವೆ.

ನಿಶಾ ನಿಜವಾಗಿಯೂ ಆಗ ತುಂಬಾ ಮುಗ್ಧೆಯಾಗಿದ್ದಳು. ಕಾಲೇಜು ದಿನಗಳಲ್ಲಿ ತುಂಬಾ ಲವಲವಿಕೆಯಿಂದ ಇದ್ದ ಹುಡುಗಿಯವಳು. ನಮ್ಮ ಊರಿನವರ ಮಾತಿನಲ್ಲಿ ಹೇಳಬೇಕೆಂದರೆ ಆಗ ಸುಳ್ಯ ಸೀಮೆಯೆಂದರೆ ಇಂಬಳಗಳ ಊರು. ಮಲೇರಿಯಾ ಪೀಡಿತ ಪ್ರದೇಶ. ನಿಶಾ ನನಗೆ ಪರಿಚಯವಾದುದು ಮುಷ್ಕರದ ಅನಂತರ. ಪೊಲೀಸ್ ಸ್ಟೇಶನಿನಲ್ಲಿ ನಾನು ಕಳೆದು ಬಂದ ಮೇಲೆ ನನ್ನ ಬಗ್ಗೆ ಕಾಲೇಜಿನಲ್ಲಿ ಬೇರೆ ಬೇರೆ ಅಭಿಪ್ರಾಯಗಳು ಬಂದಿದ್ದವು. ಕೆಲವರಂತೂ ನನ್ನನ್ನು ಖಳನಾಯಕನಂತೆ ನೋಡಿದ್ದರು. ಲೇಡಿಸ್ ವೆಯಿಟಿಂಗ್ ರೂಮಿನಲ್ಲಿ ನನ್ನ ಬಗೆಗೆ ವಿಶೇಷ ಚರ್ಚೆಗಳು ನಡೆಯುತ್ತಿದ್ದವು ಎಂದು ಅನಂತರ ಕೆಲವು ದಿನಗಳು ದಾಟಿದ ಮೇಲೆ ನಿಶಾ ಹೇಳಿದ್ದಳು. ಮಡಿಕೇರಿ ಮತ್ತು ಸೋಮವಾರ ಪೇಟೆಯಿಂದ ಬಂದ ತುಂಬಾ ಆಧುನಿಕರೆಂದು ಹಣೆಪಟ್ಟಿಕೊಂಡಿದ್ದ ಕೆಲವು ಹುಡುಗಿಯರು ಮತ್ತು ಅವರ ಬಗ್ಗೆ ವಿಪರೀತ ವ್ಯಾಮೋಹ ಬೆಳೆಸಿಕೊಂಡಿದ್ದ ಕೆಲವು ಹುಡುಗರದ್ದೇ ಒಂದು ಗುಂಪು. ಅವರು ಕ್ಲಾಸಿಗೆ ಬಂದರೆ ಬಂದರು; ಇಲ್ಲದಿದ್ದರೆ ಇಲ್ಲ. ಅವರ ಬಗ್ಗೆ ಯಾರು ತುಂಬಾ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಒಳ್ಳೆಯ ಸ್ನೇಹಿತರಂತೆಯೇ ಇದ್ದರು. ನಮಗೆ ಮೇಲುನೋಟಕ್ಕೆ ಬೇರೆ ಏನೂ ತಿಳಿಯುತ್ತಿರಲಿಲ್ಲ. ಸೋಮವಾರ ಪೇಟೆಯಿಂದ ಬಂದ ಬೋಪಯ್ಯ; ಮಡಿಕೇರಿಯಿಂದ ಬಂದ ನಯನಾ ಅವರದ್ದು ಒಂದು ಜೋಡಿ. ಅವರು ಯಾರನ್ನೂ ಕ್ಯಾರೇ ಮಾಡುತ್ತಿರಲಿಲ್ಲ. ಯಾವ

ಉಪನ್ಯಾಸಕರಿಗೂ ಅವರ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲವೆಂದು ಕಾಣುತ್ತದೆ. ಅವರಿಬ್ಬರು ನಮ್ಮ ಕಾಲೇಜನ್ನು ರಾಜ್ಯಮಟ್ಟದ ವಾಲಿಬಾಲ್; ಖೋ ಖೋ ಸ್ಪರ್ಧೆಯಲ್ಲಿ ಪ್ರತಿನಿಧಿಸುತ್ತಿರುವುದರಿಂದ ಅವರಿಬ್ಬರನ್ನು ಕಾಲೇಜಿನಿಂದ ಡಿಬಾರ್ ಮಾಡಲು ಪ್ರಿನ್ಸಿಪಾಲರು ಯೋಚನೆ ಮಾಡಿರಲಿಲ್ಲ. ಬೋಪಯ್ಯ ಒಬ್ಬನನ್ನು ಬಿಟ್ಟರೆ ಮತ್ತೆ ಯಾರ ಜೊತೆಗೂ ನಯನಾ ಓಡಾಡುತ್ತಿರಲಿಲ್ಲ. ಕಾಲೇಜಿಗೆ ಬರುವಾಗ ಮತ್ತು ಹೋಗುವಾಗಲೂ ಒಬ್ಬಳೇ ಇರುತ್ತಿದ್ದಳು. ಕಾಲೇಜಿನ ಇಳಿವಯಸ್ಸಿನ ಸಂಸ್ಕೃತದ ಮೇಷ್ಟ್ರು ಒಂದು ದಿನ ನಯನಳನ್ನು ಕರೆದು, 'ಏನಮ್ಮ ಇದು? ನಿನ್ನ ಬಗ್ಗೆ ಏನೇನೋ ಸುದ್ದಿಯಾಗಿದೆ. ಮುಂದೆ ಮದುವೆಯಾಗಲಿರುವ ಹುಡುಗಿ ನೀನು ಯಾಕಮ್ಮ ಹೆಸರು ಕೆಡಿಸಿಕೊಳ್ತಿಯಾ?' ಎಂದು ಕೇಳಿದರಂತೆ. ನಯನ ಹಿಂದೆ ಮುಂದೆ ಯೋಚಿಸದೆ, 'ಸಾರ್ ನಿಮ್ಮ ವಯಸ್ಸೆಷ್ಟು?' ಎಂದು ಕೇಳಿದಳು. ಸಂಸ್ಕೃತದ ಮೇಷ್ಟ್ರು ತಬ್ಬಿಬ್ಬಾದರು. 'ನೀವೂ ನಿಮ್ಮ ಸಣ್ಣ ವಯಸ್ಸಿನಲ್ಲಿ ಹೀಗೆ ಮಾಡಿಬಂದವರು. ಎಲ್ಲಕ್ಕಿಂತ ಹೆಚ್ಚಾಗಿ ಇದು ನನ್ನ ವೈಯಕ್ತಿಕ ವಿಷಯ. ನೀವೇ ನನ್ನನ್ನು ಮದುವೆಯಾಗ್ತೀರಾ?' ಎಂದವಳು ತಿರುಗಿ ನೋಡದೆಯೇ ಬಂದು ಬಿಟ್ಟಳಂತೆ. ಒಂದು ದಿನ ನಾನು ಕ್ಲಾಸ್ ಬಿಟ್ಟು ಪುರುಷೋತ್ತಮನ ಜೊತೆಗೆ ಕಾಲೇಜಿನ ಮೆಟ್ಟಿಲು ಇಳಿಯುತ್ತಿದ್ದೆ. ಆಗ ನಿಶಾ ಕೆಳಗಿನಮನೆ ಮತ್ತು ನಯನಾ ಇಬ್ಬರ ಜೊತೆಯಲ್ಲಿ ಬಂದರು. ನಿಶಾಳನ್ನು ನೋಡಿ ಮುಗುಳ್ನಕ್ಕೆ. ಅವಳು ನಗಾಡಿದಳು. ನಯನ 'ನಾನು ನಯನ' ಎಂದಳು. ನಾನು ಗೊತ್ತು ಎಂಬಂತೆ ತಲೆಯಾಡಿಸಿದೆ. ಪುರುಷೋತ್ತಮನೂ 'ಗೊತ್ತು' ಅಂದ.

ನಿಶಾ, 'ಇವರಿಗೆ ನಿಮ್ಮೊಂದಿಗೆ ಮಾತಾಡಬೇಕಂತೆ' ಅಂದಳು. ನಾನು ಕೊಂಚ ಹುಬ್ಬನ್ನು ಮೇಲೇರಿಸಿ ಏನು ಎಂಬಂತೆ ನೋಡಿದೆ. ನಯನಾ ಅದಕ್ಕೆ 'ಇಲ್ಲಿ ಬೇಡ ಕ್ಯಾಂಟೀನಿನಲ್ಲಿ ಮಾತಾಡೋಣ' ಅಂದಳು. ನಿಶಾ 'ಬೋಪಯ್ಯ ಕೂಡಾ ಅಲ್ಲಿಗೆ ಬರ್‍ತಾರೆ,' ಎಂದಳು. ನಾನೂ ಪುರುಷೋತ್ತಮ ಹೊರಟೆವು–ನಮ್ಮ ಹಿಂದೆ ನಿಶಾ ಮತ್ತು ನಯನಾ. ಕ್ಯಾಂಟೀನಿನ ಮೂಲೆಯಲ್ಲಿ ಕುಳಿತು ಮತ್ತೆ ಮಾತು ಪ್ರಾರಂಭಿಸಬೇಕೆಂದು ನಾನೇ 'ನಿಶಾ ಹೇಗಿದ್ದೀರಿ?' ಎಂದು ಕೇಳಿದೆ. ನಿಶಾ 'ಚೆನ್ನಾಗಿದ್ದೇನೆ' ಎಂದು ನಕ್ಕಳು. 'ಸುಳ್ಯ ಪಂಜ ಗುತ್ತಿಗಾರು ಸುಬ್ರಹ್ಮಣ್ಯ ಕಡೆಯವರಿಗೆ ಈ ಕಡೆ ಬಂದರೆ ಸಮಸ್ಯೆಗಳಿರುವುದಿಲ್ಲ. ನಿಮಗೆ ಇಲ್ಲಿ ಕಾಡು; ಇಂಬಳ; ಮಲೇರಿಯಾ ಮೂರೂ ಇಲ್ಲವೆಂದೆ. ನಿಶಾ ಅದಕ್ಕೆ, 'ಕಾಡು, ಇಂಬಳ, ಮಲೇರಿಯಾ ಮೂರು ಇರುವುದರಿಂದ ಗಟ್ಟಿಯಾಗಿದ್ದೇವೆ' ಅಂದಳು. ನಯನಾ ಕೊಂಚ ಗಂಭೀರವಾಗಿದ್ದಾಳೆ ಎಂದು ಅನಿಸಿತು. ಅವಳು ಹಗುರವಾಗಲಿ ಎಂದುಕೊಂಡು ಪುರುಷೋತ್ತಮ, "ಕೊಡಗಿನವರು ಬೇಟೆಯಲ್ಲಿ ಬಹಳ

ಎಕ್ಸ್‌ಪರ್ಟ್‌ಗಳು. ಸುಳ್ಯ ಕಡೆಯವರು ಕಾಡಿನನಡುವೆ ಬದುಕುವುದಕ್ಕೆ ಎಕ್ಸಪರ್ಟ್‌ಗಳು. ಆದರೆ ನಮಗೆಲ್ಲಾ ಇಲ್ಲಿ ಕಾಡು ಇಲ್ಲ ಅದಕ್ಕೆ ನಾವು ಹೀಗಾಗಿದ್ದೇವೆ" ಅಂದ. ತಕ್ಷಣ ನಿಶಾ, ನನ್ನ ಕಡೆಗೆ ಮುಖಮಾಡಿ, "ಓ ಇವರ ಹಾಗಾ?" ಅಂದಳು. 'ಅಂದರೆ?' ನಾನು ಪ್ರಶ್ನಿಸಿದೆ. 'ಅಂದರೆ ಏನೂ ಇಲ್ಲ – ದೇವಲೋಕದ ಕಾಮಧೇನು ಇದ್ದಹಾಗೆ! ಅದು ಊಟ ಮಾಡುವುದಿಲ್ಲವಂತೆ, ನೀವೂ ಹಾಗೆ – ನನ್ನ ಭಾಷೆಯಲ್ಲಿ ಹೇಳಬೇಕಾದರೆ ನೀವು ಚ್ಯೊಂಟು. ಕಡ್ಡಿ ಪೈಲ್ವಾನ. ನೀವೆಲ್ಲಾ ಭಾಷಣ ಮಾಡೋಕೆ, ಯಾವುದಾದರೂ ಹುಡುಗಿಯರ ಕುರಿತು ಕವನ ಬರೀಯೋಕ್ಕೆ ಸರಿ. ಯಾವುದಾದರೂ ಹುಡುಗಿಯರ ಬೆನ್ನು ನೋಡುವುದು – ಕವನ ಬರಿಯೋದು. ಅದು ಬಿಟ್ಟು ಬೇರೆ ಏನೂ ಇಲ್ಲ' ಅಂದಳು. ಅವಳ ಮಾತು ಕೇಳಿ ಪುರುಷೋತ್ತಮ ಗಹಗಹಿಸಿ ನಕ್ಕ. ನಯನಾ ಕೂಡಾ ನಕ್ಕಳು. ನಾನು ತುಂಬಾ ಗಂಭೀರವಾಗಿ ಹೇಳಿದೆ – "ನಾವು ಹುಡುಗಿಯರ ಬೆನ್ನು ನೋಡಿ ಕವಿತೆ ಬರೀತೇವೆ ಅಂತ ನಿಮಗೆ ಹೇಗೆ ಗೊತ್ತು? ಹುಡುಗಿಯರ ಎದುರು ನೋಡಿಯೂ ಬೇಕಿದ್ದರೆ ಬರೆಯುತ್ತೇವೆ." ತಕ್ಷಣ ನಿಶಾ ಕೈ ಮುಗಿದು, 'ಇನ್ನು ತುರ್ತು ಪರಿಸ್ಥಿತಿ ಪೂರ್ತಿ ತೆಗೆದಿಲ್ಲ ಮಾರಾಯ, ಆದ್ರಿಂದ ವಾಕ್ ಸ್ವಾತಂತ್ರ್ಯವಿಲ್ಲ' ಎಂದಳು. "ಇಂದಿರಾಗಾಂಧಿಗಿಂತಲೂ ನೀವು ಜೋರು. ನಮ್ಮ ವಾಕ್ ಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತೀರಿ" ಎಂದೆ. 'ಅರ್ಹರಾದವರಿಗೆ ಮಾತ್ರ ವಾಕ್ ಸ್ವಾತಂತ್ರ್ಯ ಎಲ್ಲರಿಗೂ ಅಲ್ಲ. ವಾಕ್ ಸ್ವಾತಂತ್ರ್ಯದಲ್ಲಿಯೂ 'ಎ' 'ಬಿ' 'ಸಿ'ಯಿದೆ' ಎಂದಳು ನಿಶಾ. 'ಎ' ಮಲೆಯಾಳಿಗಳದ್ದು. ನನ್ನದು ಮಾತ್ರ ಹಗಲು ಸಿನಿಮಾ" ಎಂದೆ. ನಿಶಾ ಕೆಳಗಿನಮನೆಯ ಹಾವಭಾವ ನೋಡಿ ನಯನಾ ಜೋರಾಗಿ ನಗಾಡಿದಳು. ನನಗೂ ನಿಶಾಳ ಮಾತಿನ ಕ್ರಮ ಇಷ್ಟವಾಯಿತು. ನನಗೂ ಅವಳಿಗೂ ಉಂಟಾದ ಸ್ನೇಹದ ಮೊದಲ ಗಳಿಗೆಯು ಯಾವತ್ತೋ ಬಂದು ಹೋಗಿದ್ದರೂ ಆ ದಿನ ಅವಳು ಮುಕ್ತವಾಗಿ ಮಾತಾಡಿದ್ದಳು. ಆಗ ಅಲ್ಲಿಗೆ ಬೋಪಯ್ಯ ಬಂದ. ತಕ್ಷಣ ಎಲ್ಲರೂ ನಗು ನಿಲ್ಲಿಸಿದರು. ಬೋಪಯ್ಯ ನನ್ನ ಪಕ್ಕದ ಕುರ್ಚಿಯಲ್ಲಿ ಕುಳಿತುಕೊಂಡ.

ನಯನಾ ಹೇಳಿದಳು, 'ನೋಡಿ ನನಗೆ ಒಂದು ಸಮಸ್ಯೆಯಿದೆ'.

ಪುರುಷೋತ್ತಮ: 'ಹೇಳಿ'

ಬೋಪಯ್ಯ : 'ಯಾರಿಗೂ ಹೇಳುವಂತಿಲ್ಲ.'

ನಾನು: 'ಸರಿ'

ನಯನಾ "ನನ್ನ ಕ್ಲಾಸ್ ರೂಂ ನನ್ನ ಡೆಸ್ಕಿನಲ್ಲಿ ಯಾರೋ ದಿನಾ ಒಂದಲ್ಲ ಒಂದು ಲೆಟರ್ ಇಡ್ತಾರೆ. ಏನೋನೋ ಇಡ್ತಾರೆ. ಇದನ್ನೂ ಯಾರಿಗೂ

ಹೇಳುವಂತಿಲ್ಲ. ಯಾರೋ ನಮ್ಮ ಮನೆಗೂ ಲೆಟರ್ ಬರ್‍ದಿದಾರಂತೆ. ನನ್ನ ಅಪ್ಪ ಒಂದೇ ಸಮನೆ ಕೂಗಾಡ್ತಾ ಇದ್ದಾರೆ. ಕಾಲೇಜಿಂದ ಬಿಡಿಸ್ತೇನೆ ಅಂತಿದ್ದಾರೆ. ಏನು ಮಾಡಲಿ ಅಂತ ಗೊತ್ತಾಗ್ತಾ ಇಲ್ಲ." ಇಂಥ ವಿಷಯಗಳು ಬಂದರೆ ಪುರುಷೋತ್ತಮ ಕೆಲವು ಸುಲಭ ಪರಿಹಾರ ಕೊಡುತ್ತಾನೆ. ಅವನು ಹೇಳಿದ 'ಈ ಥರಾ ಲೆಟರ್‌ಗಳು ಬಂದ್ರೆ ಅವುಗಳನ್ನು ಹರ್ದು ಬಿಸಾಕಿ. ಅದಕ್ಕೆ ಯಾಕೆ ಯೋಚನೆ ಮಾಡ್ತೀರಿ?' ನಾನು ಹೇಳಿದೆ, 'ಇಲ್ಲ ಇದು ಯಾರ ಕೆಲಸ ಅಂತ ಪತ್ತೆ ಮಾಡ್ಬೇಕು' ಪುರುಷೋತ್ತಮ ಹೇಳಿದ, 'ಪತ್ತೆ ಮಾಡಿ ಮಾಡುವುದಾದರೂ ಏನು?' ನಯನ ತಕ್ಷಣ ಅಂದಳು 'ಅದು ಯಾರೂಂತ ಪತ್ತೆಯಾದ್ರೆ ನಾನೇ ನೋಡಿಕೊಳ್ತೇನೆ' ಬೋಪಯ್ಯನನ್ನು ತೋರಿಸಿ 'ಇವರು ಹೆದ್ರಿಕೊಳ್ತಾರಷ್ಟೆ'. ನಿಶಾ, 'ಏನು ಮಾಡಬಹುದು?' ಎಂದು ಕೇಳಿದಳು.

ಅದಕ್ಕೆ ನಾನು ಮತ್ತು ಪುರುಷೋತ್ತಮ, 'ಈ ರೀತಿಯ ಪತ್ರಗಳು ಬಂದರೆ ನಮಗೆ ಕೊಡಿ' ಎಂದೆವು. ಅದಕ್ಕೆ ನಯನ ಮತ್ತು ಬೋಪಯ್ಯ ಇಬ್ಬರು ಒಪ್ಪಿದರು. ಅಲ್ಲಿಂದ ನಾವು ಹೊರಟೆವು. ಆದರೆ ಮುಂದೆ ನಾವು ಪತ್ತೇದಾರಿ ಕೆಲಸ ಪ್ರಾರಂಭಿಸಬೇಕಿತ್ತು.

ಪುರುಷೋತ್ತಮ ಕಿಲಾಡಿ. ಪೋಕ್ರಿ ಕೆಲಸ ಹಿಡಿದರೆ ಬಿಡುವವನಲ್ಲ. ತುಂಬಾ ಧೈರ್ಯಸ್ಥ ಮತ್ತು ಅಗತ್ಯವಿದ್ದರೆ ಎದುರು ಇರುವವರು ನಂಬುವ ಹಾಗೆ ಸುಳ್ಳಹೇಳಬಲ್ಲವನು. ಅವನು ಪತ್ತೇದಾರಿ ಕೆಲಸ ಪ್ರಾರಂಭಿಸಿದ. ಪುರುಷೋತ್ತಮನ ಪತ್ತೇದಾರಿ ಕೆಲಸಕ್ಕೆ ಆಗ ಇದ್ದ ಪ್ರೇರಣೆಯೆಂದರೆ ಎನ್. ನರಸಿಂಹಯ್ಯನವರ 'ಪುರುಷೋತ್ತಮನ ಸಾಹಸಗಳು' ಎಂಬ ಕಾದಂಬರಿಗಳು. ವಾಸ್ತವವಾಗಿ ನನಗೆ ನಯನ ಹೇಳಿದ ವಿಷಯವನ್ನು ಕೇಳಿ, 'ಆ ಕೆಲಸ ಅಂಥ ಆಸಕ್ತಿದಾಯವಲ್ಲ' ಎಂದು ಅನಿಸಿತು. ಕಾಲೇಜಿನಲ್ಲಿದ್ದ ಅನೇಕರಿಗೆ ಇದ್ದಂತೆ ನನಗೂ ಅವಳ ಬಗ್ಗೆ ಸದಭಿಪ್ರಾಯವಿರಲಿಲ್ಲ 'ಮಹಾನ್ ಬಜಾರಿ'ಯೆಂದು ನನ್ನ ಅಭಿಪ್ರಾಯವಾಗಿತ್ತು. ನನ್ನ ಅಭಿಪ್ರಾಯಕ್ಕಿಂತ ಭಿನ್ನ ಅಭಿಪ್ರಾಯವಿದ್ದುದು ಪುರುಷೋತ್ತಮನಿಗೆ. ಪುರುಷೋತ್ತಮನನ್ನು ಕಾಲೇಜಿನಲ್ಲಿ ಯಾವ ಹುಡುಗಿಯರೂ ಮಾತಾಡಿಸುತ್ತಿರಲಿಲ್ಲ, ಅವನು ಮಾತಾಡಿಸಿದರೂ ಹುಡುಗಿಯರು ಮುಖ ತಿರುಗಿಸಿಕೊಂಡು ಹೋಗುತ್ತಿದ್ದರು. ಕ್ಲಾಸಿಗೆ ಚಕ್ಕರ್ ಹೊಡೆದು ಸಿನಿಮಾ ನೋಡುವವರು, ಮಧ್ಯಾಹ್ನ ಕೋಳಿ ತಿನ್ನುವವರು; ಕ್ಲಾಸ್ ಇಲ್ಲದ ಸಮಯದಲ್ಲಿ ಕಾಲೇಜಿನ ಹಿಂದೆ ಇರುವ ಗೇರುಗುಡ್ಡಕ್ಕೆ ಹೋಗಿ ಗಣೇಶಬೀಡಿ ಸೇದುವವರನ್ನು ಕಂಡರೆ ನಮ್ಮ ಕಾಲೇಜಿನಲ್ಲಿರುವ ಅನೇಕರಿಗೆ ಆಗುತ್ತಿರಲಿಲ್ಲ. ಅದರಲ್ಲಿಯೂ ತಲೆಗೆ ಒಂದೂವರೆ ಲೀಟರ್ ತೆಂಗಿನೆಣ್ಣೆ ಮೆತ್ತಿಕೊಂಡು ಜಡೆಗೆ ದಾಸವಾಳ ಹೂಮುಡಿದುಕೊಂಡು,

ಹಾಫ್ ಸಾರಿ ಉಟ್ಟುಕೊಂಡು ಬರುತ್ತಿದ್ದ ಬ್ರಾಹ್ಮಣ ಹುಡುಗಿಯರು ಅಂಥವರನ್ನು ಮಹಾನ್ ಪೋಲಿಗಳೆಂದು ತೀರ್ಪಿಗೆ ಬರುತ್ತಿದ್ದರು. ತಲೆಗೆ ಎಣ್ಣೆ ಹಚ್ಚಿಕೊಂಡು ತುಂಬಾ ನೀಟಾಗಿ ಕ್ರಾಪ್ ಮಾಡಿಕೊಂಡು ಬರುವವರು, ಬ್ರಾಹ್ಮಣ ಹುಡುಗಿಯರ ಪ್ರಕಾರ 'ಸಭ್ಯರು'. ಬ್ರಾಹ್ಮಣ ಹುಡುಗಿಯರನ್ನು ಮೆಚ್ಚಿಸಿಕೊಳ್ಳಲೇಬೇಕೆಂದು ಹಟ ತೊಟ್ಟು; ಅವರಿಗಾಗಿ ಬಕ ಪಕ್ಷಿಗಳಂತೆ ಕಾದು ಕುಳಿತ ಹುಡುಗರು ಹರಳೆಣ್ಣೆಯನ್ನು ತಲೆಗೆ ಹಾಕಿ ಅದಕ್ಕೆ ತಣ್ಣೀರು ಚಿಮುಕಿಸಿ ತಲೆಬಾಚಿಕೊಂಡು ಬರುತ್ತಿದ್ದರು. ಹುಡುಗಿಯರು ಹಾಸ್ಟೆಲಿನಿಂದ ಹೊರಡುವ ಸಮಯಕ್ಕೆ ಕಾದು ಅವರನ್ನು ಹಿಂಬಾಲಿಸುತ್ತಿದ್ದರು. ಪುರುಷೋತ್ತಮ ಕೆಲವು ದಿನ ಇಂಥ ಪ್ರಯತ್ನ ಮಾಡಿ ಸೋತವನು. ನಮ್ಮ ಕ್ಲಾಸಿನಲ್ಲಿದ್ದ ಗೌರಿ ಭಟ್ಟ ಎಂಬ ಹುಡುಗಿಯನ್ನು ಒಲಿಸಿಕೊಳ್ಳಲು ಆತ ಮಾಡದಿರುವ ಪ್ರಯತ್ನವಿಲ್ಲ. ಅವಳ ಹಿಂದೆಯೇ ಕುಳಿತು ಜೋಕ್ ಹೇಳುವುದು, ಅವಳ ಡೆಸ್ಕಿನಲ್ಲಿ ಗುಲಾಬಿ ಹೂ ಇಡುವುದು, ಅವಳನ್ನು ಒಲಿಸಿಕೊಳ್ಳಲು ಸಾಧ್ಯವಾದಷ್ಟು ಪ್ರಯತ್ನಿಸುವುದು, ಎಲ್ಲಾ ಮಾಡಿ ನೋಡಿದ. ಗೌರಿ ಭಟ್ಟ ಅದಕ್ಕೆ ತಲೆಬಾಗಲಿಲ್ಲ. ಅವಳಿಗೆ ಇದೆಲ್ಲಾ ಪುರುಷೋತ್ತಮನ ಸಾಹಸದ ಹಾಗೆ ಕಾಣಿಸುತ್ತಿತ್ತೇ ವಿನಾ ಅದರಿಂದಾಚೆಗೆ ಅವಳು ಯೋಚಿಸಲೂ ಹೋಗಲಿಲ್ಲ. ಅವಳ ತಂದೆ ಆ ಕಾಲಕ್ಕೆ ದೊಡ್ಡ ಬಟ್ಟೆ ವ್ಯಾಪಾರಿ. ಸಾಮಾನ್ಯವಾಗಿ ಬ್ರಾಹ್ಮಣರು ಅಡಿಕೆ ತೋಟಕ್ಕೆ ಕೈ ಹಾಕಿದರೆ ಅವಳ ತಂದೆ ಬಟ್ಟೆ ವ್ಯಾಪಾರಕ್ಕೆ ಕೈಹಾಕಿದ್ದರು. ಅವಳು ಡೆಸ್ಕಿನ ಮೇಲಿದ್ದ ಗುಲಾಬಿ ಹೂವನ್ನು ಕಿತ್ತು ಬಿಸಾಕಿ ಅವಳ ಚಪ್ಪಲಿಯಲ್ಲಿ ಅದನ್ನು ಒರಸಿ ಹಾಕಿದ್ದರಿಂದ ಪುರುಷೋತ್ತಮನಿಗೆ ಅವಳು ಒಲಿಯುವ ಪೈಕಿಯಲ್ಲ ಎಂದು ಗೊತ್ತಾಯಿತು. ಆ ದಿವಸ ಸಂಜೆ, ನನ್ನತ್ರ, 'ಗೌರಿ ಭಟ್ಟ ನನ್ನನ್ನು ಲವ್ ಮಾಡದಿದ್ದರೇನು? ಅವಳಿಲ್ಲದಿದ್ದರೆ ಅವಳಜ್ಜಿ ಮತ್ತೊಬ್ಬಳು ಸಿಗ್ತಾಳೆ' ಎಂದು ಸಪ್ಪೆ ಮೋರೆಮಾಡಿಕೊಂಡು ಪುಸಪುಸನೆ  ಬೀಡಿ ಸೇದಿದ್ದ. "ಅವಳ ಅಜ್ಜಿಗೆ ವಯಸ್ಸು ಹೆಚ್ಚಾಗಿರಬಹುದು ಸ್ವಲ್ಪ ಜೋಪಾನ ಪುರುಷೋತ್ತಮ" ಅಂದಿದ್ದೆ. 'ನಿನಗೆ ಎಲ್ಲವೂ ಜೋಕ್. ನನ್ನ ಪರಿಸ್ಥಿತಿ ಅರ್ಥವಾಗುವುದಿಲ್ಲ. ಈ ಹುಡುಗಿಯರು ಯಾವುದಕ್ಕೆ ಗಂಟುಬೀಳ್ತಾರೆ ಅಂತಾನೇ ಗೊತ್ತಾಗುವುದಿಲ್ಲ.' ಎಂದ ಪುರುಷೋತ್ತಮನಿಗೆ ನಾನೆಂದೆ, 'ಗೊತ್ತಾಗಿದ್ದಿದ್ದರೆ ನೀನ್ಯಾಕೆ ಹೀಗಿರುತ್ತಿದ್ದೆ?' ಎಲ್ಲಾ ಪ್ರಯ್ನತಗಳು ವಿಫಲವಾದ ಮೇಲೆ ಪುರುಷೋತ್ತಮ, "ಕೆಲವು ದಿನ ಪತ್ತೇದಾರಿ ಕಾದಂಬರಿಗಳನ್ನು ಓದುವುದನ್ನು ನಿಲ್ಲಿಸಿ ಅತ್ಯಂತ ನಿಷ್ಠೆಯಿಂದ 'ಹುಡುಗಿಯರನ್ನು ಒಲಿಸುವುದು ಹೇಗೆ?', ಪುಸ್ತಕ ಓದಿದ್ದನ್ನು ತೋರಿಸಿದ. 'ಹುಡುಗಿಯರ ತುಂಬಾ ಗಟ್ಟಿಮುಟ್ಟಾದ, ಎದೆಯ ಮೇಲೆ ತುಂಬಾ ರೋಮಗಳಿರುವ ಹುಡುಗರನ್ನು ಇಷ್ಟಪಡುತ್ತಾರೆ ಎಂದಿತ್ತು. ಅದನ್ನು ಓದಿದ ಪುರುಷೋತ್ತಮ ಭಾರ ಎತ್ತುವುದು ಮತ್ತು ತನ್ನ ಮಾಂಸಖಂಡಗಳು ಎಷ್ಟು ಉಬ್ಬಿವೆ ಎಂದು ಕನ್ನಡಿ ನೋಡುವುದು

ಮಾಡತೊಡಗಿದ. ಎದೆಯ ಮೇಲೆ ಬಂದಿದ ಸಣ್ಣ ಕೂದಲುಗಳನ್ನು ದಿನಾ ರೇಜರಿನಿಂದ ತೆಗೆಯ ತೊಡಗಿದ. ಇದರಿಂದ ಹೆಚ್ಚು ಕೂದಲು ಎದೆಯ ಮೇಲೆ ಬರಬಹುದು ಎಂದು ಪ್ರಖರವಾಗಿ ನಂಬಿದ್ದ. ಬೆಳಗ್ಗೆಯೆದ್ದು ವ್ಯಾಯಾಮ ಮುಗಿಸಿ ಮೂಗು ಒತ್ತಿ ಹಿಡಿದುಕೊಂಡು ಹಸಿಮೊಟ್ಟೆಯನ್ನು ಎರಡೆರಡು ಕುಡಿಯಲು ಪ್ರಯತ್ನಿಸಿದ. ಖಾಲಿ ಹೊಟ್ಟೆಗೆ ಎರಡು ಮೂರು ಹಸಿ ಮೊಟ್ಟೆಯನ್ನು ಕುಡಿದಿದ್ದರಿಂದ ಇದ್ದಕ್ಕಿದ್ದಂತೆ ಅವನಿಗೆ ಜುಲಾಬು ಶುರುವಾಯಿತು. ಅವನಿಗೆ ಕೋಳಿ ತಿಂದು ರೂಢಿಯಿದ್ದರೂ ಮೊಟ್ಟೆ ತಿಂದು ರೂಢಿಯಾಗಿರದಿದ್ದರಿಂದ ಹಾಗಾಯಿತೋ ಅಥವಾ ಬೇರೆ ಯಾವುದಾದರೂ ಕಾರಣವಿದೆಯೋ ಅವನಿಗೆ ಗೊತ್ತಾಗಲಿಲ್ಲ. ಮೊಟ್ಟೆ ತಿಂದು ಆ ದಿನ ಪೂರಿ ಬೇರೆ ತಿಂದಿದ್ದ – ಅನಂತರ ಹಾಲು ಕುಡಿದಿದ್ದ. ಅವನ ಲೆಕ್ಕಾಚಾರವೆಂದರೆ ಆದಷ್ಟು ಬೇಗ ತಾನು ಗಟ್ಟಿಮುಟ್ಟಾದ ಮನುಷ್ಯನಾಗಬೇಕು. ಆ ದಿನ ಮೊದಲ ಗಂಟೆಯಾದ ಕೂಡಲೇ ಬೇಧಿ ಪ್ರಾರಂಭವಾಗಿ ಪ್ಯಾಂಟು ಹಿಡಿದುಕೊಂಡು ಸೀದಾ ಹಾಸ್ಟೆಲಿಗೆ ಓಡಿದ್ದ.

ಪುರುಷೋತ್ತಮ ಇಂಥಾ ಭಯಂಕರ ಪ್ರಯತ್ನ ಮಾಡುತ್ತಿರುವಾಗ ನಮ್ಮ ಕ್ಲಾಸಿನ ಗೌರಿಭಟ್ಟ ನಮ್ಮ ಸೀನಿಯರ್ ಬ್ಯಾಚಿನ ವೇದಪ್ರಕಾಶನ ಜೊತೆಗೆ ಓಡಾಡತೊಡಗಿದಳು. ನಮ್ಮ ಪ್ರಕಾರ ವೇದಪ್ರಕಾಶ ಥೇಟು ಚ್ಯವನ ಮಹರ್ಷಿ. ಯಾರಾದರೂ ನೋಡಿದರೆ ಅವನು ಸರಿಯಾಗಿ ಊಟ ಮಾಡಿದ್ದಾನೆಯೇ ಇಲ್ಲವೇ ಎಂದು ಸಂಶಯ ಪಡಬೇಕು. ಭುಜ ಒಂಚೂರು ಎದುರು ಬಾಗಿ ಅವನು ಬಗ್ಗಿ ನಡೆಯುತ್ತಾನೆಂದು ಭಾಸವಾಗಬೇಕು. ಅವನ ಕಾಲಗಂಟುಗಳು ಒಂದಕ್ಕೊಂದು ತಾಗುತ್ತಿದ್ದವು. ಸಾಕಷ್ಟು ಉದ್ದ ಇದ್ದ ಹಾಗೆಯೇ ಅವನ ಮುಖವೂ ತುಂಬಾ ಉದ್ದ. ಕಾಲೇಜಿನ ವಾಲ್‌ಮ್ಯಾಗಸಿನ್‌ಗೆ (ಗೋಡೆ ಪತ್ರಿಕೆಗೆ) ಅವನೇ ಸಂಪಾದಕ. ಇಂಗ್ಲೀಷ್ ಬೇರೆ ಚೆನ್ನಾಗಿತ್ತು. ಕೊಕ್ಕರೆ ನಡೆಯುವ ಹಾಗೆ ಅವನು ನಡೆಯುತ್ತಿದ್ದರಿಂದ ಅವನಿಗೆ 'ಕೊಕ್ಕರೆ ಪ್ರಕಾಶ' ಎಂದು ನಾವು ಕರೆಯುತ್ತಿದ್ದೆವು. ಕಾಲೇಜಿನ ಆಡಳಿತ ಮಂಡಳಿಗೆ; ಪ್ರಿನ್ಸಿಪಾಲರಿಗೆ ಬೇಕಾದ ಹಾಗೆ ವರ್ತಿಸುವಂತೆ ಮಾಡುವುದು ಅವನಿಗೆ ಕರಗತವಾಗಿತ್ತು. ಏನಿಲ್ಲವೆಂದರೂ ಪ್ರತಿವಾರವೂ ಒಂದು ಕನ್ನಡದಲ್ಲಿ; ಮತ್ತೊಂದು ಇಂಗ್ಲಿಷ್‌ನಲ್ಲಿ ಅವನ ಕವನ ಪ್ರಕಟವಾಗುತ್ತಿತ್ತು. ನಾನು ಪುರುಷೋತ್ತಮ ಮುಂತಾದವರು ಅವನ ಇಂಗ್ಲೀಷ್ ಕವನ ಓದುವ ಗೋಜಿಗೆ ಹೋಗುತ್ತಿರಲಿಲ್ಲ. ಇಂಗ್ಲೀಷ್‌ನ ವಿಷಯದಲ್ಲಿ ನಮ್ಮ ಪಾಂಡಿತ್ಯ ಥರ್ಡ ಕ್ಲಾಸ್‌ಗೆ ಸೇರಿದ್ದು ಎಂದು ಚೆನ್ನಾಗಿ ತಿಳಿದಿತ್ತು. ಅವನ ಕನ್ನಡ ಕವನವೂ ಅಷ್ಟೇ: ಓದಿದರೆ ನಮಗೆ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಅವನು ಆಗ ಬರೆದಿದ್ದ ಕವಿತೆಯೊಂದರ ಸಾಲುಗಳನ್ನು ನಾನು ಪುರುಷೋತ್ತಮ ಎರಡು ಮೂರು ಸಾರಿ ಓದಿದ್ದೆವು. ಯಾಕೆಂದರೆ ಆ ಕವನ ಬಹಳ ಚೆನ್ನಾಗಿದೆಯೆಂದು ಇಂಗ್ಲೀಷ್ ಮೇಷ್ಟ್ರು; ಪ್ರಿನ್ಸಿಪಾಲರು ಹೊಗಳಿದ್ದರು.

ನಾನು ಪುರುಷೋತ್ತಮ ಓದುತ್ತಿರುವಾಗಲೇ ಅಲ್ಲಿಗೆ ನಿಶಾ, ಶೋಭಕ್ಕ ಎಲ್ಲಾ ಬಂದಿದ್ದರು. ಈಗಲೂ ಆ ಕವಿತೆಯ ಸಾಲುಗಳೂ ಅರ್ಥಂಬರ್ಥ ನೆನಪಲ್ಲಿ ಇದೆ:

"ಹಾವು ಇದೆ ಕಾಯುತ್ತಾ,
ಬಿಲದಿಂದ ಹೊರಬರಲು.
ಗಿಡುಗ ಕಾಯುತ್ತಾ ಇದೆ–
ಹೊರಬರುವ ಹಾವಿಗೆ"

ನಮಗಾರಿಗೂ ಇದರ ಅರ್ಥ ತಿಳಿಯಲಿಲ್ಲ. ಅಷ್ಟು ಹೊತ್ತಿಗೆ ಅಲ್ಲಿಗೆ ವೇದಪ್ರಕಾಶ ಬಂದ. ನಾವೆಲ್ಲಾ ಏನಿದರ ಅರ್ಥ ಎಂದು ಕೇಳಿದೆವು. ಹಾವು, ಬಿಲ, ಗಿಡುಗ ಎಂದರೆ ಸಂಕೇತವೆಂದ. ಅವನು ಒಂದರ್ಧ ಗಂಟೆ ವಿವರಿಸಿದರೂ ನಮಗೆ ಸರಿಯಾಗಿ ತಿಳಿಯಲಿಲ್ಲ. ಕೊನೆಗೆ ಪುರುಷೋತ್ತಮನೆಂದ, 'ಪ್ರಕಾಶ ಹಾವು, ಹುತ್ತ, ಗಿಡುಗ ಈ ಯಾವುದರ ಸಹವಾಸವೂ ನಮಗೆ ಬೇಡಪ್ಪಾ, ಇಷ್ಟೆಲ್ಲಾ ಯಾಕೆ ಬರೀಬೇಕು? ಹುಡುಗಿ ಕಾಯುತ್ತಾಳೆ ಹುಡುಗ ಕಾಯುತ್ತಾನೆಂದು ಬರೆದರೆ ಸಾಕಪ್ಪಾ.' ಹಾವು ಬಿಲವೆಂದು ಬರೆದರೆ ಈ ತೆಂಗಿನೆಣ್ಣೆ ಹುಡುಗಿಯರಿಗೆ ಎಲ್ಲಿ ಅರ್ಥವಾಗುತ್ತದೆಯೋ ಮಾರಾಯ? ನಮಗೆ ಗೊತ್ತಿದ್ದ ಸಂಕೇತಗಳು ಬೇರೆ. ಹುಡುಗಿಯರ ಬ್ರಾದ ಬಳ್ಳಿ ಕಾಣಿಸಿದರೆ ಅವಳ ಇಂದಿರಾಗಾಂಧಿ ನೋಡು ಅಂತ ಹೇಳುತ್ತಿದ್ದೆವು. ಯಾರಾದರೂ ಹುಡುಗಿಯರು ಎದುರು ಬಂದರೆ ಕ್ಯಾಪಿನ ಮೇಲೆ ಬೆರಳಾಡಿಸಿಕೊಂಡರೆ 'ಐ ಲವ್ ಯು' ಅಂತ ಅರ್ಥ. ನಮಗೆ ಗೊತ್ತಿದ್ದ ಸಂಕೇತಗಳು ಅಷ್ಟೆ: ಬಿಲವೆಂದರೆ ತಿಳಿಯುತ್ತಿರಲಿಲ್ಲ. ನನ್ನ ಹಣೆಯ ಮೇಲೆ ಬೀಳುತ್ತಿದ್ದ ಕ್ಯಾಪ್ ಸರಿಮಾಡಿ ಒಂದಿನ ಒಬ್ಬಳು ಹುಡುಗಿಯಿಂದ ಬೈಸಿಕೊಂಡಿದ್ದೆ.

ಆದರೂ ಕಾಲೇಜಿನಲ್ಲಿ ವೇದಪ್ರಕಾಶನಿಗೆ ಬೆಲೆಯಿತ್ತು. ಸ್ಟ್ರೈಕ್‌ಗೆ ಪ್ರಾಂಶುಪಾಲರು ವಿರೋಧವಿದ್ದರೆ ಅವನೂ ವಿರೋಧಿಯಾಗಿರುತ್ತಿದ್ದ. ಅವನ ತಂದೆ ತಾಯಿ ಲಯನ್ಸ್‌ಕ್ಲಬ್, ರೋಟರಿಕ್ಲಬ್ ಹೀಗೆ ಯಾವುದಕ್ಕೋ ಅಧ್ಯಕ್ಷರೋ ಕೋಶಾಧಿಕಾರಿಗಳೋ ಏನೋ ಒಂದು ಆಗಿರುತ್ತಿದ್ದರು. ಆ ಸಂಸ್ಥೆಗಳ ಚರ್ಚಾ ಸ್ಪರ್ಧೆ; ಭಾಷಣ ಸ್ಪರ್ಧೆಯಿದ್ದರೆ ಅವನಿಗೆ ಪ್ರಥಮ ಬಹುಮಾನ ಕಟ್ಟಿಟ್ಟದ್ದು. ಇಂಥವನೊಂದಿಗೆ ಗೌರಿಭಟ್ಟ ಓಡಾಡುವುದು ನೋಡಿ ಪುರುಷೋತ್ತಮ ತುಂಬಾ ಭ್ರಮನಿರಸನ ಹೊಂದಿದ್ದ. ಆದುದರಿಂದಲೇ ನಯನಾ ಹೇಳಿದ ಪತ್ತೇದಾರಿ ಕೆಲಸವನ್ನು ಅವನು ಒಪ್ಪಿಕೊಂಡದ್ದು. ಇದರಿಂದ ಕಾಲೇಜಿನಲ್ಲಿ ಅವನು ನಯನಾ; ನಿಶಾ ಬೋಪಯ್ಯನ ದೃಷ್ಟಿಯಲ್ಲಿ ತಾನು ನಾಯಕನಾಗಬಹುದು ಎಂದು ಭಾವಿಸಿದ್ದ. ಅದಕ್ಕಾಗಿ ಪುರುಷೋತ್ತಮ ಕೆಲಸ ಶುರು ಹಚ್ಚಿಕೊಂಡ. ಅವನು ಪರೀಕ್ಷೆಗೂ

ಅಷ್ಟೊಂದು ತಯಾರಿ ಮಾಡಿರಲಿಲ್ಲ, ಆದರೆ ಈ ಕೆಲಸಕ್ಕೆ ತಯಾರಿ ಮಾಡಿಕೊಂಡ. ಎನ್. ನರಸಿಂಹಯ್ಯನವರು ಬರೆದ ಎಲ್ಲಾ ಪತ್ತೆದಾರಿ ಕಾದಂಬರಿಗಳನ್ನು ಓದಿ ನೋಟ್ಸ್ ಬರೆದುಕೊಂಡು ಸಿದ್ಧತೆ ನಡೆಸಿದ. ತಲೆ ಓಡುವುದಿಲ್ಲವೆಂದು ಬೆಳಗಿನ ಹೊತ್ತು ಆಗಷ್ಟೇ ತೆಗೆದ ಕಳ್ಳುಕುಡಿದ. ಬೆಳಗಿನ ಹೊತ್ತು ಕಳ್ಳು ಕುಡಿದರೆ ಮುಖವು ಕೆಂಪು ಕೆಂಪಾಗುತ್ತದೆ. ತಲೆಯೂ ಹೆಚ್ಚು ಓಡುತ್ತದೆಯೆಂದು ಅವನ ಲೆಕ್ಕಾಚಾರ. ಒಂದೆರಡು ದಿವಸ ಮಧ್ಯಾಹ್ನದ ಹೊತ್ತು ಕಳ್ಳುಕುಡಿದು ಬಂದು ಡೆಸ್ಕಿಗೆ ತಲೆಯೊಡ್ಡಿದ್ದ. ಇದರಿಂದ ಉಪಯೋಗ ಮಾತ್ರ ಏನೂ ಆಗಲಿಲ್ಲ. ಒಂದು ದಿನ ನಿಶಾ ವಿಚಾರಿಸಿದಳು: 'ಎಲ್ಲಿಯ ತನಕ ಮುಟ್ಟಿತು?' ಅದಕ್ಕೆ ಪುರುಷೋತ್ತಮನೆಂದ' 'ಎಲ್ಲಿಗೆ ಮುಟ್ಟುವುದು? ನಾವೇ ಯಾರನ್ನಾದರೂ ಮುಟ್ಟಬೇಕು. ಆದರೆ ಯಾರೂ ನಮ್ಮಿಂದ ಮುಟ್ಟಿಸಿಕೊಳ್ಳುವುದಿಲ್ಲ'ವೆಂದು ಹೇಳುತ್ತಾರೆ.'

ಎರಡು ಮೂರು ದಿನಗಳಲ್ಲಿ ನಯನಾಗೆ ಒಂದು ಲೆಟರ್ ಬಂತು. ಅದು ಇನ್‌ಲ್ಯಾಂಡಿನಲ್ಲಿ ಬರೆದ ಪತ್ರ. ಅದನ್ನು ಒಡೆಯದೆ ತಂದು ಪತ್ತೇದಾರ ಪುರುಷೋತ್ತಮ ಕೈಗೆ ಒಪ್ಪಿಸಿದಳು. ಪುರುಷೋತ್ತಮ ಅದನ್ನು ತೆಗೆದುಕೊಂಡು ಭಾರೀ ಕುತೂಹಲದಿಂದ ಗೇರುಗುಡ್ಡದ ಕಡೆಗೆ ಹೋದ. ಅಲ್ಲಿ ಗೇರು ಮರದ ಕೆಳಗೆ ಸುತ್ತಲೂ ಯಾರೂ ಇಲ್ಲವೆಂಬುದನ್ನು ಪರೀಕ್ಷಿಸಿ ಪತ್ರವನ್ನು ಒಡೆದ. 'ಮೊಮ್ಮಗಳು ನಯನಾಗೆ ಅಜ್ಜಿಯು ಮಾಡುವ ಅಶೀರ್ವಾದ. ಹೇಗಿದ್ದಿಯೆ? ನಿನ್ನ ಕಾಲೇಜು ಹೇಗಿದೆ? ನಿನ್ನಜ್ಜನ ಕಾಲುನೋವು ಕಡಿಮೆಯಾಗುತ್ತಾ ಬಂದಿದೆ. ಪಿಂಕಿಯು ನಿನ್ನನ್ನು ನೆನಪಿಸಿಕೊಂಡು ಆಳುತ್ತಿರುತ್ತದೆ. ನನ್ನ ಸೊಂಟ ನೋವು ಕಡಿಮೆಯಾಗಿಲ್ಲ. ಇತ್ಯಾದಿ' ಪುರುಷೋತ್ತಮ ಥತ್‌ತೇರಿ ಈ ಅಜ್ಜಿಗೆ ಈ ಪ್ರಾಯದಲ್ಲಿ ಎಂಥ ಸೊಂಟನೋವು? ಎಂದು ಆ ಕಾಗದವನ್ನು ಮಡಿಸಿ ಜೇಬಲ್ಲಿಟ್ಟುಕೊಂಡು ನಯನಾಗೆ ಪತ್ರವನ್ನು ವಾಪಾಸುಕೊಟ್ಟ. ಅವನು ನಿರಾಶೆ ಹೊಂದಿದ್ದು ಮಾತ್ರ ಸ್ಪಷ್ಟವಾಗಿ ಗೊತ್ತಾಗುತ್ತಿತ್ತು.

ಅದರ ಮರುದಿನವೇ ನಯನಾಗೆ ನಿರೀಕ್ಷಿಸಿದ್ದಂತೆ ಪತ್ರ ಬಂತು. ಆ ಪತ್ರದ ಒಕ್ಕಣೆಯು ತುಂಬಾ ಅಶ್ಲೀಲವಾಗಿತ್ತು. 'ನೀನು ಬೋಪಯ್ಯನ ಸೂಳೆ. ನೀನು ಬೋಪಯ್ಯನಿಗೆ ಬಿಡುವುದಾದರೆ ನನಗೆ ಯಾಕೆ ಬಿಡುವುದಿಲ್ಲ. ನಿಮ್ಮಿಬ್ಬರ ಸಂಬಂಧ ಇಡೀ ಕಾಲೇಜಿಗೆ ಗೊತ್ತು. ನಿನ್ನ ಮಾನ ಮರ್ಯಾದೆ ಹರಾಜು ಮಾಡದೆ ಬಿಡುವುದಿಲ್ಲ' ಇತ್ಯಾದಿ. ಆ ಲೆಟರನ್ನು ನೋಡಿ, 'ಪುರುಷೋತ್ತಮ ಯಾವ ಪೋಸ್ಟ್ ಆಫೀಸ್‌ನ ಅಂಚೆ ಪೆಟ್ಟಿಗೆಯಲ್ಲಿ ಅವನ್ನು ಪೋಸ್ಟ್ ಮಾಡಿರಬಹುದು' ಎಂದು ತಲಾಶ್ ಮಾಡಲು ಯತ್ನಿಸಿದ. ಅದನ್ನು ಪತ್ತೆ ಹಚ್ಚಿದರೂ ಆ ಲೆಟರ್ ಯಾರು ಪೋಸ್ಟ್ ಮಾಡಿದ್ದಾರೆ ಎಂದು ತಿಳಿಯಲು ಅವನಿಗೆ ಸಾಧ್ಯವಾಗಲಿಲ್ಲ.

ಪುರುಷೋತ್ತಮ ಬೇರೆ ಬೇರೆ ವಿಧದಲ್ಲಿ ಪ್ರಯತ್ನದ ಹಾದಿಯಲ್ಲಿ ಹೋಗುತ್ತಿರುವಾಗಲೇ ಒಂದು ದಿನ ಒಬ್ಬಂಟಿಯಾಗಿ ಹೋಗುತ್ತಿದ್ದ ನಯನಾಳನ್ನು ಕೆಲವು ಪೋಲಿ ಹುಡುಗರು ಅಡ್ಡಹಾಕಿದರು. ಅದರಲ್ಲಿರುವ ಒಬ್ಬ ಹುಡುಗ ಪತ್ರಗಳಲ್ಲಿ ಯಾವ ಒಕ್ಕಣೆಯಿರುತ್ತಿತ್ತೋ ಅದನ್ನೇ ಹೇಳಿದ್ದ. ಆ ದಿನ ಸಂಜೆಯೇ ನಮ್ಮ ಕಾಲೇಜಿನಲ್ಲಿನ ಹುಡುಗರಿಗೆ ಇದೆಲ್ಲಾ ತಿಳಿದು ರಾತ್ರೋ ರಾತ್ರಿಯೇ ಆ ಹುಡುಗನಿಗೆ ಚಚ್ಚಿಹಾಕಿದರು. ಆ ಹೊಡೆದಾಟದಲ್ಲಿ ಪುರುಷೋತ್ತಮನಿರಲಿಲ್ಲವೆಂಬುದು ಬೇರೆ ಮಾತು. ಇದರಿಂದಾಗಿ ಕೆಳಗಿನಮನೆ ನಿಶಾ ನಮಗೆ ಆತ್ಮೀಯಳಾದುದು ಅಷ್ಟೇ ನಿಜ!

ಇದರಿಂದ ಅತ್ಯುತ್ತಮ ಸಂದರ್ಭವೊಂದು ತನ್ನನ್ನು ಹುಡುಕಿಕೊಂಡು ಬಂತೆಂದು ಪುರುಷೋತ್ತಮ ಭಾವಿಸಿಕೊಂಡ.

ಆ ಗಲಾಟೆಯಾದ ಮರುದಿನವೇ ನಯನಾಳ ತಂದೆ ಬಂದು ಲಗೇಜು ಸಮೇತ ಅವಳನ್ನು ಕರೆದುಕೊಂಡು ಹೋದರು. 'ನೀನು ಓದಿ ಉದ್ಧಾರ ಮಾಡುವುದು ಅಷ್ಟರಲ್ಲಿಯೇ ಇದೆಯೆಂದು ಅವಳನ್ನು ಅವಳ ತಂದೆ ಬೈದರೆಂದು, ನಯನಾಳ ಶೀಲವೇ ಸರಿಯಿರಲಿಲ್ಲವೆಂದು ಶಾಲಿನಿಯು ಮಹಾನ್ ಪತಿವ್ರತೆಯಂತೆ ಎಲ್ಲರಿಗೂ ಹೇಳಿಕೊಂಡು ಬಂದಳು. 'ನಯನಾ ಯಾವಾಗಲೂ ಹಾಸ್ಟೆಲ್‌ನಲ್ಲಿ ಬರೀ ಲಂಗ ಮತ್ತು ಅಂಗಿ ಮಾತ್ರ ಹಾಕಿಕೊಳ್ಳುತ್ತಿದ್ದಳು. ಅವಳು ಬಿಯರ್ ಕೂಡಾ ಕುಡಿತಿದ್ದಳು. ಅವಳು ಅಬಾರ್ಷನ್ ಮಾಡಿಸಿಕೊಂಡಿದ್ದಳು' – ಹೀಗೆ ಅಸಂಖ್ಯವಾದ ವಿಚಾರವನ್ನು ಅವಳು ಹೇಳಲು ಪ್ರಾರಂಭಿಸಿದ್ದಳು'. ಪ್ರತಿಯೊಬ್ಬರಲ್ಲಿಯೂ ಈ ವಿಷಯವನ್ನು ಹೇಳಿ, 'ನನಗೇ ಹೇಳುವುದಕ್ಕೆ ನಾಚಿಕೆಯಾಗುತ್ತದೆಯಪ್ಪಾ ಅವಳ ವಿಷಯ' ಎಂದು ಶಾಲಿನಿ ಪ್ರವರ ಒಪ್ಪಿಸಿದ್ದಳು. ಪುರುಷೋತ್ತಮ 'ಸಮಯ ಕಾದು ಅವಳಿಗೆ ಚಳ್ಳೆ ಹಣ್ಣು ತಿನ್ನಿಸಬೇಕು' ಎಂದ. ಶಾಲಿನಿ ಬೆನ್ನ ಹಿಂದೆ ಚಾಕು ಹಾಕಿದ್ದು, ನಯನಾಳ ಬಗೆಗಿನ ಅವಳ ಅಸೂಯೆ. ಅವಳು ನಯನಾ ಬಗ್ಗೆ ಅಪಪ್ರಚಾರ ಮಾಡಿದ್ದು ಪುರುಷೋತ್ತಮನ ಮಟ್ಟಿಗೆ ಘೋರ ಅಪರಾಧಗಳಾಗಿದ್ದವು. 'ಶಾಲಿನಿ ಮಹಾನ್ ಗರತಿಯಂತೆ ಮಾತಾಡ್ತಾಳೆ. ಆದ್ರೆ ಅವಳಿಗೆ ತುಂಬಾ ಸೆಕೆ. ಅದಕ್ಕೆ ಒಮ್ಮೊಮ್ಮೆ ಸಂಜೆ ಪಿ.ಡಿ. ರೂಂನಲ್ಲಿಗೆ ಬಟನ್ ಬಿಚ್ಚಿಕಂಡು ನಿಲ್ತಾಳೆ. ಅವಳ ಧಿಮಾಕು ಇಳಿಸದಿದ್ದರೆ ನಾನು ಪುರುಷೋತ್ತಮನೇ ಅಲ್ಲ?' ಎಂದು ನನ್ನತ್ರ ಗೊಣಗಿದ. 'ಹೋಗ್ಲಿ ಬಿಡೋ ಮಾರಾಯ ಯಾಕೆ ಸುಮ್ನೇ' ಎಂದರೆ ನನಗೆ ಬೈಯ್ಯತೊಡಗಿದೆ.. ಕೊನೆಗೆ ನಾನೇ, 'ಸರಿ ಏನಾದರೂ ಮಾಡಿಕೋ' ಎಂದುಬಿಟ್ಟೆ. ಶಾಲಿನಿ ಮತ್ತು ಪಿ.ಡಿ.ಯವರ ಸಂಬಂಧ ಸರಿಯೇ ತಪ್ಪೇ ಎಂಬುದರ ಕುರಿತಂತೆ ನನಗೆ ಚಿಂತೆಯಿರಲಿಲ್ಲ.

ನಾನು ಗಂಭೀರವಾಗಿ ಅದನ್ನು ಯೋಚಿಸಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನನಗೆ ಸಂಬಂಧಿಸಿದ ಪ್ರಮುಖ ವಿಷಯವು ಅದಾಗಿರಲಿಲ್ಲ. ನಾನದನ್ನು ತಲೆಕೆಡಿಸಿಕೊಂಡಿರಲಿಲ್ಲವಾದರೂ ನಾನು ಒಂದು ದಿನವಿಡೀ ಸ್ಟೇಶನ್‌ನಲ್ಲಿ ಕೊಳೆಯುವಂತೆ ಮಾಡಿದ್ದು ಮಾತ್ರ ನನಗೆ ಶಾಲಿನಿ ಬಗ್ಗೆ ತಿರಸ್ಕಾರ ಮೂಡುವುದಕ್ಕೆ ಕಾರಣವಾಗಿತ್ತು. ಪುರುಷೋತ್ತಮ ಸುಮ್ಮನಿರಲಿಲ್ಲ. ಅವನು ಶಾಲಿನಿಯ ಬಗ್ಗೆ ಮೊದಲು ಸಾಕಷ್ಟು ವ್ಯಾಪಕವಾದ ಮತ್ತು ವ್ಯವಸ್ಥಿತವಾದ ಅಪಪ್ರಚಾರ ಮಾಡಬೇಕೆಂದು ನಿರ್ಧರಿಸಿದಂತಿತ್ತು. ಪುರುಷೋತ್ತಮ ಅದಕ್ಕೆ ಯಾವ ತಂತ್ರವನ್ನು ಬಳಸುತ್ತಾನೆಂದು ನನಗೆ ಗೊತ್ತಿರಲಿಲ್ಲ. ಶಾಲಿನಿ ಮುಂದೆ ಎಂದೂ ತಲೆಯೆತ್ತಬಾರದು ಎಂಬಂಥ ಏಟು ಕೊಡಬೇಕೆಂದು ಪುರುಷೋತ್ತಮ ಮಾಡಿದ ತಂತ್ರಗಾರಿಕೆಯು ಮಾತ್ರ ಫಲಪ್ರದವಾಯಿತು.

ಒಂದು ಶನಿವಾರ: ಮಧ್ಯಾಹ್ನದ ಅನಂತರ ಮೂರು ಗಂಟೆಗೆ ಇಡೀ ಕಾಲೇಜು ಬಿಟ್ಟ ಮೇಲೆ ಒಂದು ಘಟನೆ ನಡೆಯಿತು. ಪುರುಷೋತ್ತಮನಿಗೆ ಪ್ರಿನ್ಸಿಪಾಲರ ಕಚೇರಿ ಸಿಬ್ಬಂದಿಯನ್ನು ಹೊರತುಪಡಿಸಿದೆ ಯಾರೂ ಇರುವುದಿಲ್ಲವೆಂದು ಎಲ್ಲರಿಗೂ ಗೊತ್ತಿತ್ತು. ಶಿವರಾತ್ರಿಯ ದಿನವದು. ಎಲ್ಲರೂ ಮನೆಗೆ ಹೋಗಿದ್ದರು. ಶನಿವಾರ ಹಾಸ್ಟೆಲಿನಲ್ಲಿರುವ ಕೆಲವು ಹುಡುಗಿಯರು ಬ್ಯಾಗ್ ನೇತುಹಾಕಿಕೊಂಡು ಬಸ್ ಏರಿಯಾಗಿತ್ತು. ನಾನು ಹೊರಟೆ. ಪುರುಷೋತ್ತಮನನ್ನು ಕರೆದೆ. ಪುರುಷೋತ್ತಮ, 'ಇಲ್ಲ ನಾನೀಗ ಬರುವುದಿಲ್ಲ. ಯಾರೋ ಫ್ರೆಂಡ್ಸ್ ಬರ್ತೇವೆ ಅಂತ ಹೇಳಿದ್ದಾರೆ' ಅಂದ. ನಾನು ಹೊರಟು ಹೋದೆ. ನಾನೂ ಅವನು ಮಾತಾಡುತ್ತಿರುವ ಸಮಯಕ್ಕೆ ಸರಿಯಾಗಿ ಪ್ರಿನ್ಸಿಪಾಲರು ಅವರ ಹಳೆಯ ಯಜ್ಡಿ ಬೈಕ್ ಏರಿದರು. ಅದೇ ಸಮಯಕ್ಕೆ ಸರಿಯಾಗಿ ಶಾಲಿನಿಯು ಲೈಬ್ರರಿಯಿಂದ ಹೊರ ಬಂದಳು. ಪುರುಷೋತ್ತಮ ಕಣ್ಣು ಮಿಟುಕಿಸಿದ. 'ಏನಾದರೂ ಸತ್ಕೊಳ್ಳಿ' ಎಂದು ಹೊರಟೆ. ಅದಾದ ಸ್ವಲ್ಪ ಹೊತ್ತಿಗೆ ನಡೆದ ಘಟನೆಯಿದು.

ಪಿ.ಡಿ.ಯವರ ರೂಮು ಪ್ರತ್ಯೇಕವಾಗಿರುವುದರಿಂದ ಅದಕ್ಕೆ ಅಂಡಮಾನ್ ಎಂಬ ಹೆಸರು ಬೇರೆ ಇತ್ತು. ಪಿ.ಡಿ.ಯವರು ಬಾಗಿಲನ್ನು ಕೊಂಚ ಓರೆ ಮಾಡಿದ್ದಾರೆ. ಶಾಲಿನಿಯು ಬಗ್ಗಿ ನಿಂತಿದ್ದಾಳೆ. ಪಿ.ಡಿ. ಕುಳಿತಿದ್ದಾರೆ. ಅವರ ಕೈ ಬೆರಳುಗಳು ಅನುಕೂಲ ಕಾರ್ಯವನ್ನೇ ಮಾಡಿವೆ. ಇದೇ ಸಂದರ್ಭದಲ್ಲಿ ಪುರುಷೋತ್ತಮ ಮತ್ತು ಅವನ ಫ್ರೆಂಡ್ಸ್ ನುಗ್ಗಿದ್ದಾರೆ. ಅವರೆದುರು ಗಾಬರಿಬಿದ್ದ ಶಾಲಿನಿಯು ಓಡಿಹೋಗಿದ್ದಾಳೆ. ಪುರುಷೋತ್ತಮ ಮಾತ್ರ ನಿಶ್ಚಿಂತೆಯಿಂದ ಅದನ್ನು ಕಂಡೂ ಕಾಣದಂತೆ, 'ಕೇರಂ ಬೋರ್ಡಿಗೆ ಬಂದೆ ಸಾರ್' ಅಂದಿದ್ದಾನೆ. ಪಿ.ಡಿ. ಯವರು ಪುರುಷೋತ್ತಮನ ಕೈ ಹಿಡಿದು, 'ಅಯ್ಯೋ ಮಾರಾಯ ಅದಕ್ಕೇನು ಕೊಡ್ತೇನೆ.

ಆದರೆ ಈ ವಿಷಯ ಮಾತ್ರ ಯಾರಿಗೂ ಹೇಳ್ಬೇಡ' ಅಂದಿದ್ದಾರೆ. ಪುರುಷೋತ್ತಮ ಪೆದ್ದುಪೆದ್ದಾಗಿ 'ಯಾವುದು ಸಾರ್' ಎಂದು ಹೇಳಿದ್ದಾನೆ ಅಷ್ಟೆ. ಪಿ.ಡಿ.ಯವರ ಮುಖ ಕೆಂಪೇರಿತ್ತು.

ಸೋಮವಾರದ ಹೊತ್ತಿಗೆ, 'ಪಿ.ಡಿ.ಯವರ ಮತ್ತು ಕಾಲೇಜು ವಿದ್ಯಾರ್ಥಿನಿಯ ಪ್ರಣಯದಾಟ' ಎಂಬ ಸುದ್ಧಿಯು ಬ್ಲಾಕ್‌ಮೇಲ್ ಪತ್ರಿಕೆಯೆಂದು ಹೆಸರು ಪಡೆದ 'ಕಾಳಿಂಗ ಸರ್ಪ' ಪತ್ರಿಕೆಯಲ್ಲಿ ಪ್ರಕಟವಾಯಿತು. ಪುರುಷೋತ್ತಮನ ಸಾಹಸ ಯಾವ ಬಗೆಯದು ಎಂದು ನನಗೆ ಅರ್ಥವಾಯಿತು. ಅದೇ ತಿಂಗಳು ಶಾಲಿನಿಯ ತಂದೆ ವರದಕ್ಷಿಣೆ ಕೊಟ್ಟು ಮದುವೆ ಮಾಡಿ ಮಗಳನ್ನು ಬೊಂಬಾಯಿಗೆ ಕಳಿಸಿಕೊಟ್ಟರು ಎಂಬುದು ಬೇರೆ ಮಾತು. ಪಿ.ಡಿ.ಯವರು ಮಾತ್ರ ಇಂಗು ತಿಂದ ಮಂಗನಂತಾಗಿದ್ದರು.

ಪುರುಷೋತ್ತಮನ ಸಾಹಸ ಕತೆಯು ಮಾತ್ರ ಗುಸು ಗುಸು ಸುದ್ದಿಯಿಂದ ಪ್ರಚಾರ ನಡೆಯಿತು. ಅಂದಿನಿಂದ ಪುರುಷೋತ್ತಮ ಕಾಲೇಜಿಗೆ ಬರುವ ಕ್ರಮವು ಬೇರೆಯಾಯಿತು. ಅವನು ಹೇಗೆ ಬಂದರೂ ಅವನ ಸಹವಾಸವೇ ಬೇಡವೆಂದು ಕೆಲವು ಉಪನ್ಯಾಸಕರು ಅವನಿಗೆ ವಿಶೇಷ ರಿಯಾಯಿತಿಯನ್ನು ಕೊಡಲು ಪ್ರಾರಂಭಿಸಿದರು. ಒಮ್ಮೊಮ್ಮೆ ಅವನ ಹತ್ತಿರ ಸುಳಿಯುವುದು ಕೂಡಾ ಕಷ್ಟವಾಗುತ್ತಿತ್ತು. ಹುಳಿವಾಸನೆ ಅವನ ಬೆವರಿನಿಂದ ಬರುತ್ತಿತ್ತು. ಅಷ್ಟೇ ಅಲ್ಲ ಮೂರು ನಾಕು ದಿನಗಳಿಗೊಮ್ಮೆ ತೊಳೆಯುವ ಅವನ ಸಾಕ್ಸು ಇತ್ಯಾದಿಗಳಿಂದಾಗಿ ಭಾರೀ ಕಷ್ಟವಾಗುತ್ತಿತ್ತು. ಆದರೆ ಉಪನ್ಯಾಸಕರು ತನ್ನ ಬೆನ್ನು ತಟ್ಟಿ ಮಾತಾಡಿಸುತ್ತಿರುವುದು ತನಗೊಂದು ಹೆಮ್ಮೆಯೆಂದು ತಿಳಿದುಕೊಂಡಿದ್ದ. ಇಷ್ಟೆಲ್ಲವಾದರೂ ಅವನು ಕೆಲವು ವಿಷಯದಲ್ಲಿ ಒಳ್ಳೆಯವನೂ ಆಗಿದ್ದ. ಯಾರಾದರೂ ಹೊಗಳಿದರೆ ಎಂಥಾ ಕೆಲಸ ಮಾಡಲು ತಯಾರಿರುವ ಅವನನ್ನು ಬಗ್ಗಿಸುವುದು ಹೇಗೆಂದು ಕೆಲವು ಹುಡುಗಿಯರು ಅರ್ಥಮಾಡಿಕೊಂಡಿದ್ದರು. ರಾಖಿ ಕಟ್ಟುವ ಸಮಯದಲ್ಲಿ ಹೆಚ್ಚಿನ ಹುಡುಗಿಯರು ಅವನ ಕೈಗಳಿಗೆ ರಾಖಿ ಕಟ್ಟಿ, 'ನೀವು ನನ್ನ ಅಣ್ಣ', 'ನೀವು ನನ್ನ ತಮ್ಮ' ಮುಂತಾದ ಮಾತುಗಳಿಂದ ಅವನನ್ನು ರೈಲು ಹತ್ತಿಸುತ್ತಿದ್ದರು. ಅವನು ಇಂಥ ಮಾತುಗಳನ್ನು ನಂಬುತ್ತಿದ್ದ ಕೂಡಾ. ಒಂದು ದಿನ ನಾನೂ ಪುರುಷೋತ್ತಮ ಕ್ಲಾಸಿಗೆ ಹೋಗುತ್ತಿರುವಾಗ ನಮ್ಮ ಜೂನಿಯರ್ ಹುಡುಗಿಯೊಬ್ಬಳು ಬಂದು ಮೊದಲು ಪುರುಷೋತ್ತಮನಿಗೆ, ಈವತ್ತು ರಕ್ಷಾ ಬಂಧನ. ನಿಮ್ಮ ತಂಗಿಯಾಗಿ ನಿಮ್ಮ ಕೈಗೆ ರಾಖಿ ಕಟ್ತೇನೆ' ಅಂದಳು. ಪುರುಷೋತ್ತಮ ತುಂಬಾ ಖುಷಿಪಟ್ಟು ಕೈ ನೀಡಿದ. ಅವಳು ರಾಖಿ ಕಟ್ಟಿದ್ದಳು.

ಪುರುಷೋತ್ತಮನತ್ರ ಹುಡುಗಿಯರು ಬೇರೆ ಬೇರೆ ಕೆಲಸ ಮಾಡಿಕೊಳ್ಳುತ್ತಿದ್ದರು. ಅವನೂ ಅಷ್ಟೆ – ತುಂಬಾ ಆಸ್ಥೆ ವಹಿಸಿ ಹುಡುಗಿಯರಿಗೆ ಇನ್‌ಲ್ಯಾಂಡ್‌ಲೆಟರ್,

ಸೋಪ್ ಇತ್ಯಾದಿಗಳನ್ನು ತಂದುಕೊಡುತ್ತಿದ್ದ. ಅವನ ಸೇವೆಯಿಂದ ಕೆಲವು ಹುಡುಗಿಯರು ಸಂತೃಪ್ತರಾದಂತೆ ನಟಿಸುತ್ತಿದ್ದರು. ಪುರುಷೋತ್ತಮ ಅವರನ್ನು ಮೆಚ್ಚಿಸುವುದಕ್ಕೆ ಕುಣಿಯುತ್ತಿದ್ದ. ಸುಳ್ಳು ಹೇಳುತ್ತಿದ್ದ. ನಿಶಾ ಒಂದು ದಿನ ಅವನೊಂದಿಗೆ ಕಾಫಿ ಕುಡಿಯಲು ಕ್ಯಾಂಟೀನ್‌ಗೆ ಹೋದಳು. ಆ ದಿನ ಅವನು ಹೇಳಿದ ಸಂಗತಿಯನ್ನು ನಿಶಾ ನನಗೆ ಹೇಳಿದ್ದಳು – ಅವನು ಸುಳ್ಳುಹೇಳಿದ್ದು ಮಾತ್ರ ಅವಳ ಗಮನಕ್ಕೆ ಬಂದಿರಲಿಲ್ಲ. ಆದದ್ದು ಹೀಗೆ – ಪುರುಷೋತ್ತಮ ಕಾಲೇಜು ಮುಗಿಸಿ ಪೇಟೆಗೆ ಹೋಗಿ ಒಂದು ರೌಂಡ್ ಎಲ್ಲಾ ಸ್ನೇಹಿತರನ್ನು ಮಾತಾಡಿಸಿದ ಮೇಲೆ ನಡೆದ ಘಟನೆಯಿಂದ ನನಗೆ ಅವನ ಸುಳ್ಳು ಪುರಾಣ ತಿಳಿಯಿತು. ಸ್ನೇಹಿತರನ್ನು ಕಂಡ ಅವನು ಹೊರಟಾಗ ರಾತ್ರಿಯೆಂದರೆ ರಾತ್ರಿ. ಕಾಲನ್ನು ಇಡುವುದಕ್ಕೂ ಭಯವೆನಿಸುವ ಹೊತ್ತು. ಆ ದಿವಸ ಅಮಾವಾಸ್ಯೆ ಬೇರೆ. ರಸ್ತೆಯನ್ನು ಬಿಟ್ಟು ಅವನು ಅವನ ಮನೆ ತಲುಪಬೇಕೆಂದರೆ ಹೆಚ್ಚು ಕಡಿಮೆ ಮೂರು ಮೈಲು ನಡೆಯಬೇಕು, ಗುಡ್ಡ ಹತ್ತಿ ಇಳಿಯಬೇಕು. ಗುಡ್ಡ ಹತ್ತಿ ಇಳಿಯುವಾಗ ಅವನಿಗೆ ಕಾಲು ದಾರಿಯೊಂದರ ಹೊರತು ಬೇರೆ ಆಯ್ಕೆಗಳಿಲ್ಲ. ಗುಡ್ಡದ ತುದಿಯಲ್ಲಿ ನಿರ್ಜನ ಪ್ರದೇಶ ಬೇರೆ. ಮಾವಿನ ಮರಗಳು, ಒಂದೆರಡು ಹುಣಸೆಮರ ಮತ್ತು ಒಂದಿಷ್ಟು ಗೇರುಮರಗಳು ಮಾತ್ರ ಅಲ್ಲಿದ್ದವು. ಗೇರುಮರಗಳಿಂದ ಗೇರು ಬೀಜವನ್ನು ಯಾರ್ಯಾರೋ ಕದ್ದುಕೊಂಡು ಹೋಗುವುದೇ ಹೆಚ್ಚು. ಬೀಜವನ್ನು ಹಣ್ಣಾಗಲು ಯಾರೂ ಬಿಟ್ಟಿಲ್ಲ. ಹುಣಿಸೆಯನ್ನೂ ಅಷ್ಟೆ, ಯಾರೋ ಕೊಂಡು ಹೋಗುತ್ತಿದ್ದರು. ಇಲ್ಲಾ ಶಾಲೆಯ ಹುಡುಗರು ಕಲ್ಲು ಹೊಡೆದು ಅದನ್ನು ಬೀಳಿಸಿ ತಿಂದುಕೊಂಡು ಹೋಗುತ್ತಿದ್ದರು. ಮಾವಿನ ಮರದಲ್ಲಿನ ಮಾವಿನ ಮಿಡಿಯನ್ನು ಚೀಲದಲ್ಲಿ ತುಂಬಿಕೊಂಡು ಹೋದವರು ಎಷ್ಟು ಉಪ್ಪಿನಕಾಯಿ ಹಾಕಿದರು. ಎಷ್ಟು ಮಾವಿನ ಕಾಯಿ ಚಟ್ನಿ ಮಾಡಿದರು ಎಂಬುದಕ್ಕೆ ಲೆಕ್ಕವಿಲ್ಲ. ಇದರಿಂದಾಗಿ ಆ ಮರಗಳು ಯಾರ ಸ್ವತ್ತು ಆಗದೇ ಉಳಿದವು. ಸಾಧಾರಣವಾಗಿ ರಾತ್ರಿ ಹೊತ್ತು ಈ ಮರಗಳ ನಡುವೆ ಒಬ್ಬೊಬ್ಬರೇ ಹೋಗಲು ಹೆದರುತ್ತಾರೆ. ಹುಣಿಸೆ ಮರದಲ್ಲಿ ದೆವ್ವ ಕುಳಿತಿದೆಯೆಂದೂ ಅದು ರಾತ್ರಿ ಹೋಗುವವರನ್ನು ಹಿಂಬಾಲಿಸುತ್ತಿಯೆಂದೂ ಪ್ರಚಾರ ಬೇರೆ ಆಗಿತ್ತು. ಪುರುಷೋತ್ತಮ ರಾತ್ರಿಯಲ್ಲಿ ಕಾಲುದಾರಿಯ ಕಡೆಗೆ ತಿರುಗುವ ಮನೆಯಲ್ಲಿ ಒಂದು ತೆಂಗಿನ ಗೆರಟೆಯನ್ನು ಕೇಳಿ ಪಡೆದುಕೊಂಡು ಅದಕ್ಕೆ ಅವರ ಮನೆಯ ಅಂಗಳದಲ್ಲಿಯೇ ನಿಂತುಕೊಂಡು ಮೇಣದ ಬತ್ತಿ ಉರಿಸಿಟ್ಟ. ಇದು ಸಾಮಾನ್ಯವಾಗಿ ಹಳ್ಳಿಯಲ್ಲಿ ಅನುಸರಿಸುತ್ತಿದ್ದ ಸುಲಭದ ಉಪಾಯ! ಒಂದು ತೆಂಗಿನ ಗರಿಯ ಸೂಟೆ ತಪ್ಪಿದರೆ ಗೆರಟೆಯಲ್ಲಿ ಸಣ್ಣ ಮೇಣದ ಬತ್ತಿಯನ್ನು ಉರಿಸಿಟ್ಟು ಹಿಡಿದುಕೊಳ್ಳುವುದು. ಇಂಥ ದಾರಿ ದೀಪಕ್ಕೆ ಹೆಚ್ಚಿನ ಖರ್ಚಿಲ್ಲ. ಆ ದಿನ ಬೆಳಕಿಗೆ ಇದು ಸಾಕಾದ್ದರಿಂದ ಪುರುಷೋತ್ತಮ ಈ ವಿಧಾನವನ್ನು ಅನುಸರಿಸಿ

ಕತ್ತಲೆಯಲ್ಲಿಯೇ ತನ್ನ ದಾರಿಯನ್ನು ಹಿಡಿದು ಗುಡ್ಡವೇರತೊಡಗಿದ. ಸ್ವಲ್ಪಹೊತ್ತಿಗೆ ಗೇರು ಬೀಜದ ತರಗೆಲೆಯಲ್ಲಿ ಯಾರೋ ನಡೆದು ಬಂದ ಸದ್ದಾಯಿತು. ಇದ್ದಕ್ಕಿದ್ದಂತೆ ಪ್ರಾರಂಭವಾದ ಸದ್ದಿನಿಂದ ಗಾಬರಿ ಬಿದ್ದ ಪುರುಷೋತ್ತಮ ಕೈಯಲ್ಲಿದ್ದ ಗೆರಟೆಯನ್ನು ತಿರುಗಿಸಿದ. ಅದರ ಒಳಗೆ ಹಚ್ಚಿ ಇಟ್ಟಿದ್ದ ಮೇಣದ ಬತ್ತಿಯು ಆರಿ ಹೋಯಿತು. ಒಂದು ಕ್ಷಣ ಪುರುಷೋತ್ತಮನಿಗೆ ಏನು ಮಾಡುವುದೆಂದು ತಿಳಿಯದೆ ಅಲ್ಲಿಯೇ ನಿಂತು ಬಿಟ್ಟ. ಪುನಃ ತರಗೆಲೆಯ ಸದ್ದಾಯಿತು. ಇನ್ನು ಇಲ್ಲಿಯೇ ನಿಂತರೆ ಫಜೀತಿಯೆಂದು ಪುರುಷೋತ್ತಮ ಮುಂದೆ ನಡೆಯಲು ಹೆಜ್ಜೆ ಹಾಕಿದ. ಅಷ್ಟು ಹೊತ್ತಿಗೆ ಹಿಂದಿನಿಂದ, 'ಓಯ್ ಸ್ವಲ್ಪ ನಿಲ್ಲಿ ಎಲೆಯಡಿಕೆ ಇದೆಯಾ' ಎಂದು ಕೇಳಿದಂತಾಯಿತು. ಇದು ಮೋಹಿನಿ ಯಾವ ಸಂಶಯವೂ ಇಲ್ಲವೆಂದು ಪುರುಷೋತ್ತಮನಿಗೆ ಅನಿಸಿತು. ಮೋಹಿನಿ ಮೊದಲು ಕೇಳುವುದು ಎಲೆಯಡಿಕೆಯನ್ನು, ಎಲೆಯಡಿಕೆ ಕೊಟ್ಟರೆ ಅದನ್ನು ತಿನ್ನುವ ನೆಪದಲ್ಲಿ ಮೋಹಿನಿ ಹತ್ತಿರ ಬರುತ್ತದೆ. ಎಲೆಯಡಿಕೆಯ ಸಂಚಿಯನ್ನು ತೆಗೆಯಲು ಬಗ್ಗುವಾಗ ಅದು ಕೊರಳನ್ನು ಹಿಡಿಯುತ್ತದೆ. ಅಲ್ಲಿಗೆ ಮುಗಿಯುತ್ತದೆ ಕತೆ. ಇನ್ನು ಹೆದರಿದರೆ ಉಳಿಗಾಲವಿಲ್ಲವೆಂದು ಪುರುಷೋತ್ತಮ ಓಡಿದ. ಅನಂತರ 'ನಾನು ಎಷ್ಟು ಬೆವರಿದ್ದೆ ಗೊತ್ತಾ? ನನ್ನ ಬದಲು ಬೇರೆ ಯಾರಾದರೂ ಇದ್ದಿದ್ದರೆ ಎದೆಯೊಡೆದು ಸತ್ತು ಹೋಗ್ತಿದ್ದರು' ಎಂದು ನಿಶಾ ಕೆಳಗಿನಮನೆಯತ್ರ ಹೇಳಿದ. ಅವಳು ಎರಡು ದಿನ ಮೋಹಿನಿ ಕತೆಯಲ್ಲಿಯೇ ಮುಳುಗಿದ್ದಳು. ನಾನೇ "ಇವೆಲ್ಲಾ ಸುಳ್ಳು, ಯಾಕೆ ನಂಬ್ತಿಯಾ?" ಎಂದು ಹೇಳಿದೆ.

ಪುರುಷೋತ್ತಮ ಇಷ್ಟು ಸುಳ್ಳು, ಕಿಲಾಡಿತನ ಮಾಡಿಕೊಂಡಿದ್ದವನು ಡಿಗ್ರಿ ಮುಗಿಸಿ ಉದ್ಯೋಗಕ್ಕಾಗಿ ಮುಂಬೈ ಕಡೆಗೆ ತೆರಳಿದ. ನಾನು ಮುಂದುವರಿದೆ. ಆದರೆ ನಿಶಾ ಕೆಳಗಿನಮನೆಯ ಚರಿತ್ರೆಯು ಮಾತ್ರ ಮುಗಿದಿರಲಿಲ್ಲ. ಅವಳು ಯಥಾ ಪ್ರಕಾರದ ಮುಗ್ಧತೆ ಇಟ್ಟುಕೊಂಡಿದ್ದಳು. ಸದಾ ನಗುತ್ತಿದ್ದಳು. ಅದೇ ನಿಶಾ ಒಂದು ದಿನ ಅಳುತ್ತಾ ಬಂದು ನನ್ನ ಸಣ್ಣ ಕೋಣೆಯಲ್ಲಿ ಕುಳಿತಿದ್ದಳು ಕಡಲಾಗಿ! ಅದೂ ಪುರುಷೋತ್ತಮ ಹೇಳಿದ ಮೋಹಿನಿ ಕತೆ ಕೇಳಿ ನಾಲ್ಕೈದು ವರ್ಷಗಳು ದಾಟಿದ ತರುವಾಯ!

ನಿಶಾ ಕೆಳಗಿನ ಮನೆಗೆ ಆಗ ನಾಟಕದ ಹುಚ್ಚು. ಕವಿತೆಯ ಪ್ರೀತಿ. ಕವಿಗಳ ಬಗೆಗೆ ಅತಿಯಾದ ಗೌರವ ಮತ್ತು ಅಭಿಮಾನ. ಕಾವ್ಯಕ್ಕೆ ಅವಳು ವಿಪರೀತವಾದ ಪ್ರೀತಿ ತೋರಿಸಿದ್ದು ಅವಳ ಒಂದು ಪ್ರೇಮಭಂಗಕ್ಕೆ ಕಾರಣವಾಯಿತು. ನೀಲಾಂಶು ಎಂಬ ಕವಿ; ಕಲಾವಿದನನ್ನು ಅವಳು ಭೇಟಿಯಾದುದು ಒಂದು ವಿಚಾರ ಸಂಕಿರಣದಲ್ಲಿ, ನೀಲಾಂಶುವೆಂದರೆ ಥೇಟು ನೀಲಾಂಶ. ಕವಿಗೋಷ್ಠಿಯ ಒಟ್ಟು

ಹದಿನೈದು ಕವಿಗಳಲ್ಲಿ ಕೊನೆಗೆ ಕವಿತೆಯನ್ನು ಓದಿದವನು ಅವನು. ಕವಿತೆಯನ್ನು ಓದುವಾಗ ಸಂಜೆ ಐದೂವರೆಯಾಗಿತ್ತು. ಬೆಳಗಿನಿಂದ ಸಂಜೆಯವರೆಗೆ ನಡೆದ ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸಿದವರೆಲ್ಲಾ ಸಾಹಿತ್ಯದ ಉದ್ಧಾರಕ್ಕೆ ನಾವೇ ಸೈಯೆಂಬಂತೆ ಮಾತಾಡಿದ್ದರು. ಪ್ರಬಂಧ ಮಂಡನೆಗೆ ಸಮಯ ಸಾಕಾಗಲಿಲ್ಲವೆಂದು ಗೊಣಗುತ್ತಾ ಮಾತಿನಲ್ಲಿ ಭೂಮಿ ಆಕಾಶ ಒಂದು ಮಾಡಿದ್ದರೂ ಕೇಳಿ ಕೇಳಿ ಸಭೆಯಲ್ಲಿ ಇದ್ದವರಿಗೆ ಸಣ್ಣನೆಯ ತಲೆನೋವು ಪ್ರಾರಂಭವಾಗಿದ್ದ ಹೊತ್ತಿನಲ್ಲಿ, ನೀಲಾಂಶು ಬಂದು ಕವಿತೆಯೋದಲು ನಿಂತಿದ್ದ. ಗಡ್ಡ ಬಿಟ್ಟುಕೊಳ್ಳುವುದು ಆಗಿನ ಕವಿಗಳ ಚಹರೆಯಾಗಿದ್ದುದರಿಂದ ನೀಲಾಂಶುವೂ ಗಡ್ಡ ಬಿಟ್ಟು, ವ್ಯವಸ್ಥೆಯ ಬಗೆಗಿನ ವಿಪರೀತವಾದ ಸಿಟ್ಟನ್ನು ಇಟ್ಟುಕೊಂಡಿದ್ದ. ಆಗ ಕೆಲವರು ಕೆದರಿದ ಕೂದಲಿನ ಮೂಲಕ ವ್ಯವಸ್ಥೆಯನ್ನು ಪ್ರತಿಭಟಿಸುತ್ತಿದ್ದರು. ಅವನೂ ಅದೇ ರೀತಿ ಕೆದರಿದ ಉದ್ದಕೂದಲು ಬಿಟ್ಟುಕೊಂಡಿದ್ದ. ಆಗ ಅವನಿಗೆ ವಯಸ್ಸು ಕೇವಲ ಇಪ್ಪತ್ತನಾಲ್ಕೇ ಇತ್ತು. ನೀಲಾಂಶು ಜುಬ್ಬ ಹಾಕಿಕೊಂಡಿದ್ದ. ಅದಕ್ಕೆ ಒಪ್ಪುವ ಕಡು ನೀಲಿಯ ಪ್ಯಾಂಟು ಹಾಕಿಕೊಂಡಿದ್ದ. ಬಾಟಾ ಕಂಪೆನಿಯ ಚಪ್ಪಲಿಯನ್ನು ಹಾಕಿಕೊಂಡಿದ್ದ. ಎಡಹುಬ್ಬಿನ ಮೇಲೆ ಸಣ್ಣದೊಂದು ಗಾಯದ ಕಲೆ ಇತ್ತು. ಹಿರಿಯ ಕವಿಗಳ ಒಂದು ಮೈಲು ಉದ್ದದ, ಅರ್ಥವಾಗದ ಕವಿತೆಗಳನ್ನು ಕೇಳಿದ ಸಭಿಕರು ಈ ಹಿರಿಯ ಕವಿಗಳ ಬಾಲದಂತಿರುವ ಈ ಕಿರಿ ಕವಿಯು ಏನು ಹೇಳುತ್ತಾನೆಂದು ಕೇಳಿದರೆ; ಮತ್ತೆ ಕೆಲವರು ಅವನನ್ನು ಔದಾಸೀನ್ಯದಿಂದ ನೋಡಿದರು. ಕವಿಗೋಷ್ಠಿಯಲ್ಲಿ ಕೇಳುತ್ತಾ ಕುಳಿತವರಲ್ಲಿ ನಿಶಾ ಕೂಡಾ ಒಬ್ಬಳು. ಅವಳು ಎದುರು ಹಾಕಿದ ಕುರ್ಚಿಗಳ ನಾಲ್ಕನೆಯ ಸಾಲಿನ ನಾಲ್ಕನೆಯ ಕುರ್ಚಿಯಲ್ಲಿ ಕುಳಿತಿದ್ದಳು. ಐದು ಗಂಟೆ ದಾಟಿದ ಮೇಲೆ ಪ್ರಳಯಾಂತಕ ವಿಷಯವಿದ್ದರೂ ಹುಡುಗಿಯರು ಒಬ್ಬೊಬ್ಬರೇ ಎದ್ದು ಕೈಯಲ್ಲಿನ ವ್ಯಾನಿಟಿ ಬ್ಯಾಗ್ ಹಿಡಿದುಕೊಂಡು ತಲೆಕೆಳಗು ಮಾಡಿಕೊಂಡು ಜಾರುವುದೇ ಹೆಚ್ಚು. ಇದೇ ವೇಳೆಗೆ ಸರಿಯಾಗಿ ನೀಲಾಂಶು ಒಂದೆರಡು ಸಣ್ಣ ಕವಿತೆಗಳನ್ನು ಓದಿ ಕುಳಿತುಬಿಟ್ಟ. ತುಂಬಾ ನಿರಾಸಕ್ತನಂತೆ ಪದೇ ಪದೇ ನಿಶಾ ಕೆಳಗಿನಮನೆಯನ್ನು ನೋಡುತ್ತಾ ಕುಳಿತವನನ್ನು ಅವಳೂ ಗಮನಿಸಿದಳು. ಇದ್ದಕ್ಕಿದ್ದಂತೆ ಕವಿಗೋಷ್ಠಿಯು ಮುಗಿದು ಎಲ್ಲರೂ ಹೊರಟಾಗ ಕಾವ್ಯದ ಅಭಿಮಾನಿಯಾದ ನಿಶಾ ಕೆಳಗಿನಮನೆ ಎಲ್ಲಾ ಕವಿಗಳ ಆಟೋಗ್ರಾಫ್ ಕೇಳಿದ್ದಳು. ಕವಿಗಳು ಅಮೃತಾಕ್ಷರದಿಂದ ಬರೆದರು. ಅಷ್ಟು ಹೊತ್ತಿಗೆ ನೀಲಾಂಶು ಹೊರಟುಬಿಟ್ಟಿದ್ದ. ನಿಶಾ ಅವನನ್ನು ಆಟೋಗ್ರಾಫ್ ಕೇಳಿದಳು. ಅವನು ಆಟೋಗ್ರಾಫ್‌ನಿಂದ ಅವಳ ಮುಖ ನೋಡುತ್ತಾ ಅವಳ ಕಣ್ಣುಗಳ ರೀತಿಯನ್ನು ಅನುಸರಿಸಿ ಚಿತ್ರ ಬರೆದು ಸಹಿ ಹಾಕಿಕೊಟ್ಟ. ನಿಶಾ ಆಶ್ಚರ್ಯದಿಂದ, "ನೀವು ಬರಿಯ ಕವಿ ಮಾತ್ರವೇ ಅಲ್ಲ, ಚಿತ್ರಕಾರರೂ ಹೌದು. ಎಷ್ಟು ಚಂದ ಚಿತ್ರ

ಬರೀತೀರಿ' ಅಂತ ಹೊಗಳಲು ಪ್ರಾರಂಭಿಸಿದಳು. ನೀಲಾಂಶು ಸಂತೋಷದಿಂದ 'ಥ್ಯಾಂಕ್ಸ್' ಅಂದ. ಅಲ್ಲಿಂದ ಪ್ರಾರಂಭವಾಯಿತು ಅವರ ಮಾತುಕತೆ. ನಿಶಾ ಗುಪ್ತವಾಗಿ ಅವನನ್ನು ಹಂಬಲಿಸತೊಡಗಿದಳು. ನೀಲಾಂಶು ಒಂದೊಂದು ದಿನ ಅವಳೊಂದಿಗೆ ಆಸಕ್ತನಂತೆಯೂ ಮತ್ತೆ ಕೆಲವು ದಿನ ನಿರಾಸಕ್ತನಂತೆಯೂ ಮಾತಾಡುತ್ತಿದ್ದ. ಇಬ್ಬರೂ ಒಂದು ದಿನದ ಹುಣ್ಣಿಮೆಯಲ್ಲಿ ಕಡಲ ಬದಿಗೆ ಹೋದರು. ಅದೂ ಉಳ್ಳಾಲದ ಕಡಲದಂಡೆಯ ಮೇಲೆ ಕುಳಿತು ಇಬ್ಬರೂ ದಡಗಳನ್ನು ಅಪ್ಪಳಿಸುವ ಅಲೆಗಳನ್ನು ನೋಡಿದರು. ನೀಲಾಂಶು ಮರಳರಾಶಿಯ ಮೇಲೆ ಕುಳಿತು ಚಿತ್ರ ಬರೆಯತೊಡಗಿದ. ಆ ಚಿತ್ರದಲ್ಲಿ ನಿಶಾಳ ಕಣ್ಣಿತ್ತು. ಅವಳ ಗುಂಗುರು ಕೂದಲುಗಳಿದ್ದವು. ಅವನು ಉದ್ದೇಶಪೂರ್ವಕ ಬರೆದನೋ ಇಲ್ಲವೋ ಎಂಬುದು ನಿಶಾಳಿಗೆ ಸರಿಯಾಗಿ ಅರ್ಥವಾಗಲಿಲ್ಲ. ಕಡಲಿನ ಎದುರು ಅವನು ಮೌನಿಯಾಗಿದ್ದ, ಅನ್ಯಮನಸ್ಕನಾಗಿದ್ದ. ಅವನ ಮೌನ ಮುರಿಯಲು ನಿಶಾ ಹೇಳಿದಳು: "ಈ ಹುಣ್ಣಿಮೆಯಲ್ಲಿ ಸಮುದ್ರಕ್ಕೆ ಹುಚ್ಚು ಏರುತ್ತೆ ಎಂದು ಕಾಣಿಸುತ್ತದೆ. ಅದರ ದೊಡ್ಡ ದೊಡ್ಡ ಅಲೆಗಳು ಬಂದು ದಡವನ್ನು ಅಪ್ಪಳಿಸುವುದು ಎಷ್ಟು ಚೆಂದ?" ನೀಲಾಂಶು ಮೌನವಾಗಿ ಅವಳ ಮುಖವನ್ನು ನೋಡಿದ. ಮಾತಿನ ಮಲ್ಲಿಯಾದ ನಿಶಾ ಒಂದು ಗಳಿಗೆ ಕೂಡಾ ಸುಮ್ಮನೆ ಕುಳಿತವಳಲ್ಲ. ಬಂಡೆಯನ್ನೇ ಮಾತಾಡಿಸುವ ಹುಡುಗಿಗೆ ಬಂಡೆಯಂಥ ಹುಡುಗ ನೀಲಾಂಶುವನ್ನು ಮಾತಾಡಿಸುವುದು ಕಷ್ಟವಾಗಿರಲಿಲ್ಲ. "ಸಮುದ್ರ; ಹುಣ್ಣಿಮೆ; ಮರಳರಾಶಿ; ಅಪ್ಪಳಿಸುವ ಅಲೆಗಳು ಇವುಗಳನ್ನು ನೋಡಿದರೆ ಈ ನಿಸರ್ಗವು ಕೂಡಾ ತುಂಬಾ ಕುತೂಹಲದಾಯಕವೆಂದು ಅನಿಸುತ್ತದೆ. ಸಮುದ್ರದ ಅಲೆಗಳಿಗೆ ದಂಡೆಯು ಒಂದು ಸಾಂಗತ್ಯ ಕೊಡುತ್ತದೆ. ಹಗಲು ಕಾದು ಕಾವಲಿಯಾದ ಮರಳಿನ ರಾಶಿಗೆ ಅಲೆಗಳು ಮುತ್ತಿಕ್ಕಿದ್ದಂತೆ ಈ ಮರಳು ತಣ್ಣಗಾಗುತ್ತದೆ ಎಷ್ಟು

ಚೆಂದವೋ ಮಾರಾಯ" ಎಂದು ಅಲೆಗಳ ಮೇಲೆ ಕಣ್ಣು ನೆಟ್ಟು ಹೇಳತೊಡಗಿದಳು. 'ನನಗೆ ಇದೆಲ್ಲಾ ಈಗ ಆಸಕ್ತಿ ಕೆರಳಿಸ್ತಾ ಇಲ್ಲ' ಅಂದ ನೀಲಾಂಶು.

'ಯಾಕೆ?' ಅವನ ಮುಖ ನೋಡಿ ನಿಶಾ ಕೇಳಿದಳು. 'ನನಗೆ ಮನುಷ್ಯ ಸಂಬಂಧ ಮುಖ್ಯ ಅಂತ ಅನಿಸುತ್ತದೆ' ಅಂದ ನೀಲಾಂಶು. ನಿಶಾ ಮೌನಿಯಾದಳು. ಕೆಲವೇ ಕೆಲವು ಕ್ಷಣ ಮತ್ತೆ ಮೌನ ಮುರಿದು ಹೇಳಿದಳು: 'ನೀಲಾಂಶು ನಾನು ನಿನ್ನನ್ನು ಪ್ರೀತಿಸುತ್ತೇನೆ' ಅವಳ ಮಾತಿನಲ್ಲಿ ಸಂಕೋಚವಿರಲಿಲ್ಲ. ದೃಢತೆಯಿತ್ತು. ನೀಲಾಂಶು ಒಪ್ಪಿಯೇ ಒಪ್ಪುತ್ತಾನೆಂಬ ಭರವಸೆಯಿತ್ತು. ನೀಲಾಂಶು ಮೆಲ್ಲಗೆ ಅವಳ ತಲೆಗೆ ಹೊಡೆದು, 'ಒಂದಲ್ಲ ಒಂದು ದಿನ ಇದನ್ನು ನೀನು ಹೇಳಿಯೇ

ಹೇಳುತ್ತಿ ಎಂದು ನನಗೆ ಗೊತ್ತಿತ್ತು. ಆದರೆ ನಾನು ನೀನು ಇಬ್ಬರು ಬರೀ ಸ್ನೇಹಿತರು. ಅದರಾಚೆಗೆ ಏನೂ ಅಲ್ಲ – ಸಾರಿ, ನಾನು ಬೇರೊಬ್ಬ ಹುಡುಗಿಯನ್ನು ಪ್ರೀತಿಸುತ್ತೇನೆ. ಅವಳಲ್ಲಿ ಮಾತಾಡಿಲ್ಲ – ಆದರೂ ಅವಳಿಗಾಗಿ ಹಂಬಲಿಸುತ್ತೇನೆ' ಅಂದ. ಮುಂದಿನ ಯಾವ ಮಾತನ್ನು ಕೇಳಿಸಿಕೊಳ್ಳುವ ಉತ್ಸಾಹ ನಿಶಾಗೆ ಉಳಿಯಲಿಲ್ಲ. ಅವನನ್ನು ಅಲ್ಲಿಯೇ ಬಿಟ್ಟು ಹೊರಟು ಹೋದಳು ತನ್ನ ಕೋಣೆಗೆ.

ನೀಲಾಂಶು ಸ್ವಲ್ಪ ಹೊತ್ತು ಬೀಚಿನಲ್ಲಿಯೇ ಇದ್ದು ಮತ್ತೆ ತನ್ನ ಕೋಣೆಯ ಕಡೆಗೆ ಹೊರಟುಹೋದ.

ನಿಶಾ ತನ್ನ ಕೋಣೆಯಲ್ಲಿ ಅಳುತ್ತಾ ಕುಳಿತವಳು ಸ್ವಲ್ಪ ಹೊತ್ತು ಬಿಟ್ಟು ಕಂಗಾಲಾದವಳಂತೆ; ಏನೂ ಮಾಡಲು ದಿಕ್ಕು ತೋಚದವಳಂತೆ ಮುಖ ತೊಳೆದುಕೊಂಡಳು. ನೀಲಾಂಶು ಇಲ್ಲದೆ ಹೋದರೆ ತನ್ನ ಬದುಕು ಸಾಗುವುದು ಕಷ್ಟವೆಂದು ಅವಳಿಗೆ ಅನಿಸಿತು.

ಆಗ ಹೆಚ್ಚು ಕಡಿಮೆ ಹತ್ತು ಗಂಟೆ ದಾಟಿರಬಹುದು. ನಾನು ಇದ್ದುದು ಒಂದು ಸಣ್ಣ ಬಾಡಿಗೆ ರೂಮಿನಲ್ಲಿ. ಒಂದು ಮಂಚ ಬಿಟ್ಟರೆ ಮತ್ತೆ ಏನೂ ಇಲ್ಲ. ಸ್ವಲ್ಪ ಜಾಗ ಓಡಾಡುವುದಕ್ಕೆ, ಬರೆಯಲು ಒಂದು ಟೇಬಲ್ ಮತ್ತು ಅದರ ಪಕ್ಕದಲ್ಲಿ ಕುರ್ಚಿ. ಮರುದಿನವೇ ಪತ್ರಿಕೆಗೆ ಒಂದು ಲೇಖನ ಬರೆಯಲೇಬೇಕಿತ್ತು. ಸ್ಟೌವಿನಲ್ಲಿ ಅನ್ನ ಮಾಡಿ ಬರೆಯಲು ಕೂರಬೇಕೆಂದುಕೊಂಡು ರೂಮಿನ ಬಾಗಿಲು ಹಾಕಿಕೊಂಡು ಬಿಯರ್‌ನ ಬಾಟಲು ತೆರೆದು, ಬಾಟಲಿಯನ್ನು ಬಾಯಿಗೆ ಹಿಡಿದುಕೊಂಡು ಕುಡಿದ ಮೇಲೆ ಒಂದು ಪುಟ ಬರೆದಾಗಿರಬಹುದು ಅಷ್ಟು ಹೊತ್ತಿಗೆ ರೂಮಿನ ಬಾಗಿಲನ್ನು ಯಾರೋ ಮೆಲ್ಲನೆ ಹೊಡೆದ ಸದ್ದು ಕೇಳಿಸಿತು. ಅವಸರಿಸಿ ಬಾಟಲಿಯನ್ನು ಮಂಚದ ಕೆಳಗಿಟ್ಟು ಬಾಗಿಲು ತೆರೆದು ನೋಡಿದರೆ ನಿಶಾ ಕೆಳಗಿನಮನೆ ಆಶ್ಚರ್ಯವಾಯಿತು. 'ಏನೋ ಇಷ್ಟು ಹೊತ್ತಿಗೆ?' ಎಂದು ಕೇಳಿದೆ. ಅವಳು ಮಂಕಾಗಿದ್ದಳು. 'ಯಾಕೆ? ಏನಾಯಿತು ನಿಶಾ?' ಎಂದು ಕೇಳಿದೆ. ಅವಳು ಮತ್ತೂ ಮೌನದಲ್ಲಿಯೇ ಇದ್ದಳು. ಎಲ್ಲಾ ಕಳೆದುಕೊಂಡವಳಂತೆ! ಆಗ ಅವಳಿಗೆ ವಯಸ್ಸು ಇಪ್ಪತ್ತೆರಡು. 'ಯಾಕೋ? ಏನಾಯಿತು? ಮಾತಿನಮಲ್ಲಿಯ ಮೌನವ್ರತ?' ಛೇಡಿಸಿದೆ. ಇದ್ದಕ್ಕಿಂತೆಯೇ ಅಳಲು ಪ್ರಾರಂಭಿಸಿದಳು. ನನಗೆ ಏನು ಮಾಡುವುದು ಎಂದು ತೋರಲಿಲ್ಲ. ಅಳುವವರನ್ನು ಸ್ವಲ್ಪ ಅಳಲು ಬಿಡುವುದು ಯಾವಾಗಲೂ ಒಳ್ಳೆಯದೆಂದು ಎಲ್ಲಿಯೋ ಓದಿದ್ದು ನೆನಪಿಗೆ ಬಂತು. ಅವಳ ತಲೆಗೂದಲು ಅಸ್ತವ್ಯಸ್ತವಾಗಿತ್ತು ಕಣ್ಣೀರು ಹರಿಯುತ್ತಿತ್ತು. ಗಳಿಗೆಗೊಮ್ಮೆ ಕರ್ಚೀಫಿನಿಂದ ಕಣ್ಣೀರು ಒರಸಿಕೊಳ್ಳುತ್ತಿದ್ದಳು. 'ನಿಶಾ ನಾನು ಬಿಯರ್ ಕುಡಿಯುತ್ತಿದ್ದೇನೆ' ಎಂದು ಮಂಚದ ಕೆಳಗಿಟ್ಟು ಬಿಯರ್ ಬಾಟಲನ್ನು ತೆಗೆದುಕೊಂಡು ತಂದು ನನ್ನ ಮೇಜಿನ

ಮೇಲಿಟ್ಟೆ. ತಿರುಗಿ, 'ಏನು ನಿಶಾ?' ಎಂದೆ. ಅವಳು 'ನೀಲಾಂಶು ನನ್ನನ್ನು ತಿರಸ್ಕರಿಸಿದ. ನನ್ನ ಮೇಲೆ ಅವನಿಗೆ ಇಷ್ಟವಿಲ್ಲ. ಯಾಕೋ ನಾನೊಬ್ಬಳೆ ರೂಮಿನಲ್ಲಿದ್ದರೆ ಏನು ಮಾಡ್ಕೊಳ್ಳುತ್ತೀನೋ ಎಂದು ಭಯವಾಯಿತು. ಅದಕ್ಕೆ ಬಂದೆ' ಎಂದು ಅಳುತ್ತಾ ಹೇಳಿದಳು. "ನೀಲಾಂಶು ಇಲ್ಲದಿದ್ದರೆ ನಾನು ಬದುಕಲಾರೆ. ನನಗೂ ಬಿಯರ್ ಕೊಡು" ಎಂದಳು. ಕುಡಿದಳು. 'ಏಯ್ ನಾನೂ ಒಂಚೂರು ಉಳಿಸದೆ ಕುಡಿದೆ' ಮತ್ತೆ ಹೇಳಿದಳು "ನಾನು ನನಗಾಗಿ ತಂದಿಟ್ಟುಕೊಂಡ ಮತ್ತೊಂದು ಬಿಯರ್ ಬಾಟಲ್ ತೆರೆದೆ." ಅವಳು ಮತ್ತೆ ಅಳುವುದು ಪ್ರಾರಂಭಿಸಿದಳು.

'ಆರಾಮವಾಗಿರು. ನೀಲಾಂಶು ಜೊತೆ ನಾನು ನಾಳೆ ಮಾತಾಡ್ತೇನೆ' ಎಂದೆ. ನೀಲಾಂಶುವನ್ನು ಪರಿಚಯವಾದಲ್ಲಿಂದ ಪ್ರಾರಂಭವಾಗಿ ಪ್ರತಿಯೊಂದನ್ನು ವಿವರಿಸುತ್ತಿದ್ದಳು. ನಾನು ಕೇಳಿಸಿಕೊಂಡೆ. ಕೊನೆಗೆ ಅವಳಿಗೆ ಅಂದೆ, 'ನೀನು ಹತ್ತು ನಿಮಿಷ ಮಲಗಿರು ಅನಂತರ ನಿನ್ನನ್ನು ನಿನ್ನ ರೂಮಿಗೆ ಬಿಟ್ಟು ಬರ್ತೇನೆ. ನಾನು ಒಂದೆರಡು ಪುಟ ಬರೆದು ನಾಳೆ ಕಳಿಸಬೇಕು' ಎಂದೆ. ಸರಿಯೆಂದು ಮಂಚದ ಮೇಲಿದ್ದ ನನ್ನ ಹಾಸಿಗೆಯನ್ನು ಬಿಡಿಸಿಕೊಂಡು ಮಲಗಿದಳು. ನಾನು ಬರೆಯತೊಡಗಿದೆ. ನಾನು ಬರೆದು ಮುಗಿಸುವಾಗ ಹತ್ತೂವರೆ. ಅಷ್ಟು ಹೊತ್ತಿಗೆ ನಿಶಾ ನಿದ್ದೆ ಮಾಡಿಯಾಗಿತ್ತು ನನ್ನ ಹೊದಿಕೆಯನ್ನು ಹೊದ್ದುಕೊಂಡು. ಅವಳನ್ನು ಎಬ್ಬಿಸಲು ಮನಸ್ಸು ಬರಲಿಲ್ಲ. ಮಂಚದ ಕೆಳಗೆ ಲುಂಗಿಯನ್ನು ಹಾಸಿಕೊಂಡು ನಿದ್ದೆ ಹೋದೆ. ಅವಳು ರಾತ್ರಿಯಿಡೀ ನೀಲಾಂಶುವಿನ ಹೆಸರನ್ನು ಕನವರಿಸುತ್ತಿದ್ದಳು. ಬೆಳಿಗ್ಗೆ ಏಳೂವರೆಗೆ ಎದ್ದಳು. ಅವಳ ಮುಖದಲ್ಲಿ ಮತ್ತೆ ಎಂದಿನ ಲವಲವಿಕೆ. 'ಥ್ಯಾಂಕ್ಸ್ ಕಣೋ' ಎಂದಳು. 'ಯಾಕೆ?' ಎಂದೆ. 'ನನ್ನಿಂದ ತೊಂದರೆ ಅನುಭವಿಸಿದಕ್ಕೆ' ಅಂದಳು. ಮೊನ್ನೆ ಫೋನ್ ಮಾಡಿ ಅದೇ ರೀತಿಯಲ್ಲಿ ಗಟ್ಟಿಯಾಗಿ ನಗಾಡಿದಳು.

ನಾನು ಹೇಳಿದೆ, 'ನನಗೆ ನಿನ್ಮೇಲೆ ಸಿಟ್ಟಿದೆ'.

ಅವಳು, 'ಯಾಕೆ? "ನೀನು ನನ್ನನ್ನು ಹಾಳು ಮಾಡದೆ ಇದ್ದುದಕ್ಕೆ' ಅಂದೆ. 'ನಿಶಿತ ನೀನು ಏನು ಮನುಷ್ಯನೋ ಮಾರಾಯ?' ಅಂದಳು. ನಾನೂ ಜೋರಾಗಿ ನಗಾಡಿ, 'ಕೊನೆಯ ಪಕ್ಷ ಕೆಲವು ಕ್ಷಣ ನೀನು ನನ್ನ ಹಾಳು ಮಾಡಬಹುದಿತ್ತು ನಿನ್ನ ಹಣೆಯಲ್ಲಿ ಅದು ಬರೆದಿಲ್ಲ' ಎಂದ ನನಗೆ 'ಹಣೆಬರಹ' ಎಂದಳು ಅಷ್ಟೆ. ಇಬ್ಬರಿಗೂ ನಗು. ನಮ್ಮಿಬ್ಬರ ನಗುವಿನಲ್ಲಿ ಶುಭ್ರತೆಯಿತ್ತು. ಹಳೆಯ ನೆನಪುಗಳಿದ್ದವು.

* * * * *

"ಜೀವನದಲ್ಲಿ ಆಯ್ಕೆಯೆಂಬುದೆ ಕಷ್ಟ"

## 1992
## ಜುಲೈ
## 23

ನಮಗಿದ್ದ ಅಡಿಕೆ ತೋಟವೆಂದರೆ ಒಟ್ಟು ನಾಕು ಎಕ್ರೆ ಮಾತ್ರ. ಮನೆಯ ಹಿಂದೆ ಇರುವ ಐದಾರು ಸೆಂಟ್ಸ್ ಗೇರು ಬೀಜದ ಗುಡ್ಡೆ. ಈ ನಾಕು ಎಕ್ರೆ ಅಡಿಕೆ ತೋಟದಲ್ಲಿ ಎರಡೆಕ್ರೆ ಅಡಿಕೆತೋಟ ತುಂಬಾ ಹಳೆಯದು. ಅಜ್ಜನಿಂದ ಬಳುವಳಿಯಾಗಿ ಬಂದ ತೋಟವದು. ಹಾಗಾಗಿ ಈ ತೋಟದ ಅಡಿಕೆಯ ಮರಗಳು ತುಂಬಾ ಎತ್ತರವಾಗಿ ಬೆಳೆದಿದ್ದವು. ಎತ್ತರವಾಗಿ ಬೆಳೆದುದರಿಂದ ಸಹಜವಾಗಿಯೇ ಅದಕ್ಕೆ ತೆಂಕುದಿಕ್ಕಿನ ಬಿಸಿಲು ಹೆಚ್ಚು ಬಿದ್ದು ಆ ಭಾಗವು ಕೊಂಚ ಬಿರಿಬಿಟ್ಟಿರುವುದೋ ಅಥವಾ ಬಿಸಿಲಿನ ಝಳದಿಂದ ಸುಟ್ಟು ಟೊಳ್ಳಾಗಿರುವುದು ಸಾಮಾನ್ಯ. ಮಳೆಗಾಲದಲ್ಲಿ ಜೋರಾಗಿ ಬೀಸುವ ಗಾಳಿಯ ದೆಸೆಯಿಂದ ಮುದುಕರು ಬಿದ್ದಂತೆ ಅಡಿಕೆ ಮರಗಳು ಬೀಳುವುದು ಸಹಜ. ಮಳೆಗಾಲದಲ್ಲಿ ಕಡಿಮೆಯೆಂದರೆ ಜೇಳೆಂಟು ಮರಗಳು ಬೀಳುತ್ತಿದ್ದವು. ಮಳೆಗಾಲದಲ್ಲಿ ಬೀಳುವ ಮರಗಳನ್ನು ನೋಡಿ ನಮಗೆ ಅಂಥ ವ್ಯಥೆಯಾಗದಿದ್ದರೂ ಮರುದಿನ ಬಿದ್ದ ಅಡಿಕೆ ಮರಗಳನ್ನು ನೋಡಿ ತಂದೆಯವರು ದುಃಖಿಸುತ್ತಿದ್ದರು – ಕರುವನ್ನು ಕಳೆದುಕೊಂಡ ಹಸುವಿನಂತೆ! ಅಡಿಕೆ ತೋಟಕ್ಕೆ ಬೇಕಾದಷ್ಟು ನೀರಿನ ಆಸರೆ ದೊರೆಯಲಿ ಎಂದು ಅಜ್ಜನೇ ತೋಡಿಸಿದ ಕೆರೆಗಳಿದ್ದವು. ಮಳೆಗಾಲದಲ್ಲಿ ಒಂದು ಕೆರೆಯಲ್ಲಿ ತುಂಬಿದ ನೀರು ಮತ್ತೊಂದು ಕೆರೆಯಲ್ಲಿ ತುಂಬಿ, ಅನಂತರ ಕಾಲುವೆಯಲ್ಲಿ ಮುಂದುವರಿದು ಅದು ತೋಟವನ್ನು ಸೇರುತ್ತಿತ್ತು. ಒಂದೊಂದು ಕೆರೆಗೂ ಒಂದೊಂದು ಹೆಸರುಗಳನ್ನು ಅಜ್ಜ ಕೊಟ್ಟಿದ್ದರು. ಒಂದು ಕೆರೆಗೆ ಕೇದಿಗೆ ಕೆರೆಯೆಂದು ಹೆಸರು. ಯಾಕೆಂದರೆ ಆ ಕೆರೆಯ ಪಕ್ಕದಲ್ಲಿಯೇ ಒಂದು ಕೇದಿಗೆಯ ಬುಡವಿತ್ತು. ಕೇದಿಗೆಯ ಬುಡದಲ್ಲಿ ಹಾವುಗಳೂ ಓಡಾಡುತ್ತಿದ್ದುದರಿಂದ ಸಂಜೆಯ ಹೊತ್ತಿಗೆ ಅಲ್ಲಿ ಓಡಾಡಲು ನಮಗೆ ಭಯವಾಗುತ್ತಿತ್ತು. ಎಷ್ಟೋ ಸಂದರ್ಭದಲ್ಲಿ ಆ ಕೆರೆಯ ಪಕ್ಕದಲ್ಲಿ ಕಪ್ಪೆಗಳು ಜೋರಾಗಿ ವಟರ್ ವಟರ್ ಎಂದು ಹಂಸಧ್ವನಿಯಲ್ಲಿ ಕೂಗಿ, ಕೇರೆ ಹಾವುಗಳು ಅವುಗಳನ್ನು ಹಿಡಿದಿವೆಯೆಂದು ಸೂಚಿಸುತ್ತಿದ್ದವು. ಕಪ್ಪೆಗಳ ಸಾಮಾನ್ಯ ವಟಗುಟ್ಟಿವಿಕೆಗೂ, ಹಾವುಗಳು ಹಿಡಿದಾಗ ಅವು ಅರುಚುತ್ತಿದ್ದ ಕ್ರಮಕ್ಕೂ ವ್ಯತ್ಯಾಸವಿದ್ದುದರಿಂದ ನಮಗದು ತಕ್ಷಣ ಅರ್ಥವಾಗುತ್ತಿತ್ತು. ಮತ್ತೊಂದು ಕೆರೆಯ

ಹೆಸರು ತೋಡಿನಕೆರೆ. ಅದು ತುಂಬಾ ಉದ್ದವಾದ ಕೆರೆ. ಮಳೆಗಾಲದಲ್ಲಿ ಅದರ ಹತ್ತಿರದಲ್ಲಿ ಹರಿಯುತ್ತಿದ್ದ ತೋಡಿನಿಂದ ಅದಕ್ಕೆ ನೀರು ಬರುವಂತೆ ಕಾಲುವೆಯನ್ನು ತೋಡಲಾಗಿತ್ತು. ಮತ್ತೊಂದು ಕುಡಿಯುವ ನೀರಿಗಾಗಿ ತೋಡಿಸಿದ ಕೆರೆ. ಇದು ಸಂಕ್ರನ ಕೆರೆ. ಇದನ್ನು ಒಮ್ಮೊಮ್ಮೆ ಸಂಕ್ರನ ಗದ್ದೆ ಕೆರೆಯೆಂದು ಕರೆಯುತ್ತಿದ್ದರು. ಈ ಸಂಕ್ರನ ಕೆರೆಯು ಹೆಚ್ಚು ಕಡಿಮೆ ಹನ್ನೆರಡು ಹದಿಮೂರು ಅಡಿ ಉದ್ದ ಮತ್ತು ಅಷ್ಟೇ ಅಗಲವಿತ್ತು. ಆಳವು ಮಾತ್ರ ಇಪ್ಪತ್ತೈದು ಅಡಿಗಳಿಗಿಂತಲೂ ಹೆಚ್ಚು ಇದ್ದುದರಿಂದ ಅದನ್ನು ಮಳೆಗಾಲದಲ್ಲಿ ನೋಡುವುದು ಮಾತ್ರ ತುಂಬಾ ಸಂತೋಷ ಉಂಟು ಮಾಡುತ್ತಿತ್ತು. ನೀರು ತುಂಬಾ ತುಂಬಿರುತ್ತಿದ್ದುದರಿಂದ ಮತ್ತು ಅದರ ಕಟ್ಟೆಗಳಲ್ಲಿ ಹಾವಸೆಯೂ ಕೂಡಾ ಬೆಳೆದಿರುತ್ತಿತ್ತು. ಸಂಕ್ರನ ಕೆರೆಯಲ್ಲಿ ನೀರು ತುಂಬಿರುತ್ತಿದ್ದರಿಂದ ಅದು ನೀಲಿಯಾಗಿ ಕಾಣಿಸುತ್ತಿತ್ತು. ಕೆರೆಯ ನೀಲಿವರ್ಣವನ್ನು ನೋಡುವುದೆಂದರೆ ಅದೊಂದು ಅನೂಹ್ಯವಾದ, ಅತೀವ ಸಂತೋಷದ ಅನುಭವವಾಗುತ್ತಿತ್ತು. ಮಳೆಗಾಲದಲ್ಲಿಯೂ ಅದರಲ್ಲಿ ಕಲಕಿದ ಕೆಂಪು ನೀರನ್ನು ನೋಡಿಲ್ಲ. ಅದರ ಸುತ್ತುಮುತ್ತೆಲ್ಲ ಇದ್ದ ಬೇರೆಯವರ ಗದ್ದೆಗಳಿಂದ ಬಸಿದು ಬಂದ ನೀರು ಅದರಲ್ಲಿ ಸಂಗ್ರಹವಾಗುತ್ತಿತ್ತು. ಆದುದರಿಂದಲೇ ಅದರಲ್ಲಿ ನೀಲವರ್ಣದ ನೀರು ಇರುತ್ತಿತ್ತು ಎಂದು ಅನಿಸುತ್ತದೆ. ಆ ಕೆರೆಯಲ್ಲಿದ್ದ ದೊಡ್ಡ ದೊಡ್ಡ ಮೀನುಗಳು, ಸಣ್ಣನೆಯ ಬಣ್ಣ ಬಣ್ಣದ ಮೀನುಗಳು ಅಂಗಳದಲ್ಲಿ ಮಕ್ಕಳು ಆಟವಾಡುತ್ತಿದ್ದುದನ್ನು ನೋಡಲು ಅಡುಗೆ ಮನೆಯಿಂದ ಅವಲಕ್ಕಿಯನ್ನೋ, ಅಕ್ಕಿಯನ್ನೋ, ಅನ್ನವನ್ನೋ ಕದ್ದು ಅದರ ಹತ್ತಿರ ಹೋಗಿ ನೀರಿಗೆ ಹಾಕುತ್ತಿದ್ದೆವು. ಅವನ್ನು ತಿನ್ನಲು ಬಂದ ಮೀನುಗಳು ಅವನ್ನು ನುಂಗಿ ಓಡಾಡಿದಂತೆ ಓಡಾಡುತ್ತಿದ್ದವು. ಅದರಲ್ಲಿಯೂ ಸಂಜೆಯ ಐದು ಗಂಟೆಯ ಹೊತ್ತಿಗೆ ಆ ಕೆರೆಯನ್ನು ತನ್ಮಯತೆಯಿಂದ ನೋಡುತ್ತಾ ಕಾಲ ಕಳೆಯುವುದು ನನಗೆ ಅತ್ಯಂತ ಇಷ್ಟವಾದ ಸಂಗತಿಯಾಗಿತ್ತು. ಕೆರೆಯ ಹತ್ತಿರದ ತೋಟದ ನೀರವ ವಾತಾವರಣ, ಕೆರೆಯ ನೀಲವರ್ಣ ಒಂದು ವಿಶಿಷ್ಟ ಅನುಭವಕ್ಕೆ ಕಾರಣವಾಗುತ್ತಿತ್ತು. ಜೀವನದಲ್ಲಿ ಇದಕ್ಕೆ ಸಂವಾದಿಯಾದ ಅನುಭವ ದೊರಕುವುದು ಕಷ್ಟ. ಮುಂದೆ ತರಗತಿಗಳಲ್ಲಿ ಮೇಷ್ಟ್ರು ಆಗಾಗ ವಿವರಿಸುತ್ತಿದ್ದ ವೈಶಂಪಾಯನ ಸರೋವರ, ನೀರೊಳಗಿದ್ದು ಬೆವರಿದ್ದ ಮೀನುಗಳು; ಬಾಣಲೆ ಮೇಲಿನ ಗೋಳಿ ಬಜೆಯಂತೆ ಕೊತಕೊತನೆ ಕುದಿದು ಸಾಯತೊಡಗಿದ್ದರ ವರ್ಣನೆಯನ್ನು ಪದೇ ಪದೇ ಕೇಳಿ ಸಂಜೆಯ ವೇಳೆಗೆ; ಅದರಲ್ಲಿಯೂ ಮುಸ್ಸಂಜೆಯ ವೇಳೆಗೆ ನೆನಪಿಸಿಕೊಂಡು ಅಲ್ಲಿಗೆ ಹೋದರೆ ಚಳಿಹಿಡಿದಂತಾಗುತ್ತಿತ್ತು. ಕೆರೆಯೊಳಗಿನಿಂದ ಯಾರೋ ಕರೆದಂತಾಗುತ್ತದೆಯೆಂದು ಕೆಲವರು ಹೇಳುತ್ತಿದ್ದರು. ಒಂದು ಮುಸ್ಸಂಜೆ ಚಂದುನಾಯ್ಕನ ಹೆಂಡತಿ ಹುಲ್ಲಿನ ಹೊರೆಯನ್ನು ಹೊತ್ತುಕೊಂಡು ಅದರ ಹತ್ತಿರ ಹೋಗುತ್ತಿದ್ದಾಗ ಯಾರೋ

ಕರೆದಂತಾಯಿತಂತೆ. ಅವಳು ಹೆದರಿ ಹುಲ್ಲಿನ ಹೊರೆಯನ್ನು ಅಲ್ಲಿ ಬಿಸಾಕಿ ಓಡಿ ಹೋದವಳು ಒಂದು ವಾರ ಮುಖ ಬಿಳುಚಿಸಿಕೊಂಡು ಮಲಗಿದಳಂತೆ. ಆಮೇಲೆ ಮಂತ್ರವಾದಿಗಳೊಬ್ಬರು ಮಂತ್ರಿಸಿದ ಕಾಲಿನ ಬಳೆಕೊಟ್ಟರಂತೆ. ಅದರಿಂದ ಅವಳು ಗುಣ ಹೊಂದಿದಳೆಂದೂ ಹೇಳುತ್ತಿದ್ದರು. ಅದು ಅವಳ ಕಾಲಲ್ಲಿ ಖಾಯಂ ಇತ್ತು – ಸಾಯುವ ತನಕ. ಅವಳ ಕೊನೆಯ ಕಾಲದಲ್ಲಿ ಕಾಯಿಲೆ ಉಲ್ಬಣಗೊಂಡರೂ ಸಾಯಲಿಲ್ಲವಂತೆ. ಆಮೇಲೆ ಮಂತ್ರಿಸಿದ ಅವಳ ಕಾಲ್ಬಳೆ ತೆಗೆದ ಮೇಲೆಯೇ ಉಸಿರು ಬಿಟ್ಟಳಂತೆ. ಈ ಸಂಗತಿಯ ಉತ್ತರಾರ್ಧ ಈಚೆಗೆ ತಿಳಿಯಿತು.

ಸಂಕ್ರನ ಕೆರೆಗೆ ಅಂಟಿದ ಕಳಂಕದಿಂದ ಯಾರೂ ಸಂಜೆ ಅಲ್ಲಿ ಸುಳಿಯುತ್ತಿರಲಿಲ್ಲ. ಸಂಜೆಯ ಹೊತ್ತು ಅದರ ದಡದಲ್ಲಿ ನಾನು ಕುಳಿತುಕೊಳ್ಳುತ್ತಿದ್ದಾಗ ನನಗೆ ಎಲ್ಲರೂ ಬಯ್ಯುತ್ತಿದ್ದರು. ಆದರೆ ಯಾರಾದರೂ ಏನಾದರೂ ಹೇಳಿದರೂ ಅದನ್ನು ಕೇಳುವ ಸ್ವಭಾವ ಮತ್ತು ಸದ್ಗುಣ ನನ್ನಲ್ಲಿ ಇಲ್ಲವಾದ್ದರಿಂದ, ಅದರ ಪಕ್ಕ ಕುಳಿತು ನೀರನ್ನು ನೋಡುತ್ತಾ ಕಾಲಹರಣ ಮಾಡುತ್ತಿದ್ದೆ. ಕವಿಯಾಗಲು ಬೇಕಾದ ಅರ್ಹತೆಗಳಲ್ಲಿ ಕೆರೆಯ ನೀಲ ನೀರನ್ನು ನೋಡುವುದು ಒಂದು ಲಕ್ಷಣವೆಂದೇ ಭಾವಿಸಿದ್ದೆ. ಕವಿಯಾಗದಿರುವುದು ನನ್ನ ಜೀವನದ ದುರಂತವಲ್ಲ – ಅದು ಸುಖಾಂತ್ಯ!

ಸಂಕ್ರನ ಕೆರೆಯಲ್ಲಿ ಮಾತ್ರ ಒಂದು ದುರಂತ ಕತೆಯೂ ಇತ್ತು. ಅದರ ದೆಸೆಯಿಂದ ಆ ಕೆರೆಯ ಸುತ್ತ ಜನರು ಓಡಾಡಲು ಅಳುಕುತ್ತಿದ್ದರು. ಅದು ಊರಿನಲ್ಲಿ ಜನರ ಕಿವಿಯಿಂದ ಕಿವಿಗೆ ಹೋಗಿ, ಮಾತಿನಿಂದ ಮಾತಿನ ಕಡೆಗೆ ಹೋದ ಕತೆಗೆ ಸುಣ್ಣ ಬಣ್ಣವನ್ನು ಹಚ್ಚಿದ್ದರು. ಓರೆ ಮುಕುಳಿ ತುಕ್ರನ ಕತೆಯ ಹಿಂದೆಯೋ ಮುಂದೆಯೋ ಆಗಿ ಹೋದ ಘಟನೆಯಿದು. ಚಂದುನಾಯ್ಕನ ಅಪ್ಪನ ಹೆಸರು ಕೋಮಣದ ಸಂಕ್ರ. ಕೋಮಣ ಒಂದರ ಹೊರತು ಅವನು ಬೇರೆ ಯಾವ ಬಟ್ಟೆಯನ್ನು ಹಾಕಿಕೊಳ್ಳುತ್ತಿರಲಿಲ್ಲ. ಸದಾಕಾಲ ತಲೆಗೆ ಅಡಿಕೆ ಹಾಳೆಯ ಒಂದು ಮುಟ್ಟಾಳೆ. ಅದರ ಮೇಲೆ ಒಂದು ಬೈರಾಸಿನ ಮುಂಡಾಸು. ಸೊಂಟದಲ್ಲಿ ಒಂದು ಸೊಪ್ಪು ಕಡಿಯುವ ಕತ್ತಿ. ಕತ್ತಿಯನ್ನು ಸೊಂಟದ ಉಡಿದಾರಕ್ಕೆ ಸಿಕ್ಕಿಕೊಳ್ಳುವುದಕ್ಕೆ ಬೇಕಾದಂತೆ ಒಂದು ಸಣ್ಣ ಕಬ್ಬಣದ ಹಿಡಿಕೆ. ಕುಳ್ಳಗಿವನು. ಮೂರು – ಮೂರೂವರೆ ಅಡಿ ಎತ್ತರ, ಗಟ್ಟಿಮುಟ್ಟಾದ ದೇಹ. ಮಳೆಗಾಲದಲ್ಲಿ ಹಲಸಿನಕಾಯಿ ಎಷ್ಟು ಎತ್ತರದಲ್ಲಿ ಬೇಕಾದರೂ ಇರಲಿ, ಮರವೇರಿ ಬಲಿತ ಹಲಸಿನ ಕಾಯಿಯನ್ನು ಒಂದು ಬಳ್ಳಿ ಕಟ್ಟಿ ಇಳಿಸಬಲ್ಲವನು. ಕಾಡು ಜಾತಿಯ ಮರಗಳ ಕೊಂಬೆಯಲ್ಲಿ ಜೇನುಗೂಡು ಇದ್ದರೆ ಮರವೇರಿ ಅದರ ಕೆಳಗೆ ಒಂಚೂರು ಹೊಗೆ ಹಾಕಿ ಜೇನು ಹುಳ ಹಾರಿಹೋದ ಮೇಲೆ ಜೇನಿನ ಹುಟ್ಟನ್ನು ಅಲ್ಲಿಯೇ

ಬಾಯಿಗಿಟ್ಟು ಜೇನು ಕುಡಿಯಬಲ್ಲವನು. ಕಾಡುಕೋಳಿ; ಮೊಲವನ್ನು ಹೇಗೆ ಬೇಕಾದರೂ ಬೇಟೆಯಾಡಬಲ್ಲವನು. ಹಾವು ಕಡಿದವರಿಗೆ ಹಸಿರು ಔಷಧಿ ಕೊಡುವುದು; ಬೇಧಿಗೆ ಔಷಧಿ; ಬಾಣಂತಿಯರಿಗೆ ಔಷಧಿ – ಹೀಗೆ ಬೇರೆ ಬೇರೆ ತಂತ್ರ ಬಲ್ಲವನು. ಅವನತ್ರ ಯಾರಾದರೂ ವಿವರ ಕೇಳಿದರೆ ನಾಟಿ ಔಷಧಿಯ ಸತ್ವ ಹೊರಟು ಹೋಗುತ್ತದೆಯೆಂದು ಹೇಳುತ್ತಿದ್ದ. ಮಳೆಗಾಲ ಮುಗಿಯುತ್ತಿರುವ ವೇಳೆಯಲ್ಲಿ ಅವನು ಹರಿಯುವ ನೀರಿಗೆ ಕಾಸರಕನ ಬೀಜವನ್ನು ಜಜ್ಜಿ ಹಾಕಿ ಸತ್ತು ಹೋದ ಮೀನುಗಳನ್ನು ಹಿಡಿಯುತ್ತಿದ್ದ. ಮೀನುಗಳನ್ನು ಹಿಡಿದರೆ ಅದರಲ್ಲಿ ಅವರಿವರಿಗೆ ಹಂಚಿ ಕೆಲವನ್ನು ಮನೆಗೆ ಕೊಂಡೊಯ್ಯುತ್ತಿದ್ದ. ಮೀನುಗಳನ್ನು ಕೊಟ್ಟರೂ ಎರಡನ್ನು ಮಾತ್ರ ಜೀವ ಹೋದರೂ ಕೊಡಲಿಕ್ಕಿಲ್ಲವೆಂದು ಬಾಯಿಬಿಟ್ಟು ಹೇಳುತ್ತಿದ್ದ – ಅವು ಆಮೆ ಮತ್ತು ಏಡಿ. ಅವುಗಳೆಂದರೆ ಅವನಿಗೆ ಜೀವ. ಎಷ್ಟೇ ಏಡಿಯಿರಲಿ ಅವುಗಳ ಕೊಂಬು ಮುರಿದು ಅಡಿಕೆ ಹಾಳೆಯಲ್ಲಿ ಕಟ್ಟಿಕೊಂಡು ಹೋಗಿಬಿಡುತ್ತಿದ್ದ. ಏಡಿಯ ಪದಾರ್ಥವೆಂದರೆ ಅವನಿಗೆ ವಿಪರೀತವಾದ ಪ್ರೀತಿಯಾಗಿರುವುದರಿಂದ ಅದರ ಬೇಟೆಗೆ ಬೇಕು ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದ. ಕೋಮಣದ ಸಂಕ್ರ ಏಡಿಯ ಪದಾರ್ಥವಿದ್ದರೆ ನಾಲ್ಕು ಹಿಡಿ ಅನ್ನ ಹೆಚ್ಚು ತಿಂದು ಅದು ಕರಗಬೇಕಿದ್ದರೆ ಒಂಚೂರು ಹುಳಿ ಮಜ್ಜಿಗೆ ಬೇಕೆಂದು ಯಾರಾದರೂ ಬ್ರಾಹ್ಮಣರ ಮನೆಗೆ ಹೋಗಿ ಕೇಳುತ್ತಿದ್ದ.

ಏಡಿಗಾಗಿ ಏನು ಬೇಕಾದರೂ ಮಾಡಲು ಸಿದ್ಧನಾಗಿರುತ್ತಿದ್ದ ಸಂಕ್ರನ ಈ ಹುಚ್ಚು ಕಂಡು ಎಲ್ಲರೂ ತಮಾಷೆ ಮಾಡುತ್ತಿದ್ದರು. ಏಡಿ ಸಿಗುತ್ತದೆಯೆಂದು ಗೊತ್ತಾದರೆ ಮೈಲಿಗಟ್ಟಲೆ ನಡೆಯಬಲ್ಲ ಮತ್ತು ಅದಕ್ಕಾಗಿ ಆತ ದಿನವಿಡೀ ಕಾಯಬಲ್ಲವನಾಗಿದ್ದ. ಎಲ್ಲಿಯೇ ತೋಡು; ಕೆರೆ ಕಾಣಿಸಲಿ ಅವನ ಕಣ್ಣು ಮಾತ್ರ ಏಡಿಯು ಅಡಗಿರಬಹುದಾದ ಕಲ್ಲಿನ ಸೆರೆಗಳನ್ನು; ತೋಡಿನ ಪಕ್ಕದಲ್ಲಿ ಕೊರೆದಿರಬಹುದಾದ ಬಿಲಗಳನ್ನು ಹುಡುಕುತ್ತಿತ್ತು. ಏಡಿಯನ್ನು ಹಿಡಿಯುವಲ್ಲಿಯೂ ಅವನಿಗೆ ವಿಶೇಷ ಚಾಕಚಕ್ಯತೆಯಿತ್ತು. ಸಣ್ಣ ಕೋಲನ್ನು ಏಡಿಯಿರುವ ಜಾಗಕ್ಕೆ ಹಿಡಿದು ಏಡಿಯು ಆ ಕೋಲನ್ನು ಕೊಂಬುಗಳಿಂದ ಹಿಡಿದುಕೊಂಡಾಗ ಅದರ ಕೊಂಬುಗಳನ್ನು ಮುರಿಯುತ್ತಿದ್ದ. ಮತ್ತೆ ಅದನ್ನು ಕೈಯಲ್ಲಿ ಹಿಡಿದೆತ್ತುತ್ತಿದ್ದ. "ಯಾಕೋ ಏಡಿಗಳಿಗೆ ಎಷ್ಟೊಂದು ಜೀವ ಬಿಡ್ತಿಯಾ?" ಅಂತ ಕೇಳಿದರೆ ಅವನು ತನ್ನ ಬಲಗೈಯ ಹೆಬ್ಬೆರಳು ತೋರಿಸಿ ಅದಕ್ಕೊಂದು ಕತೆ ಹೇಳುತ್ತಿದ್ದ. ಅವನು ಹದಿನೈದೋ – ಹದಿನಾರೋ ವಯಸ್ಸಿನ ಹುಡುಗನಾಗಿದ್ದಾಗ ಏಡಿಯೊಂದು ತೋಡಿನ ಬಿಲದೊಳಗೆ ಇತ್ತಂತೆ. ಆಗ ಅವನಿಗೆ ಯೌವನದ ಉತ್ಸಾಹ. ಬಿಲದೊಳಗೆ ಕೈ ಹಾಕಿದ. ಏಡಿಯು ಅವನ ಬಲಗೈಯ ಹೆಬ್ಬೆರಳನ್ನು ಗಟ್ಟಿಯಾಗಿ ಕೊಂಬಿನಲ್ಲಿ

ಹಿಡಿದುಕೊಂಡಿತು. ಅದರ ಕೊಂಬನ್ನು ಮುರಿದರೂ ಕೊಂಬು ಅವನ ಕೈಯನ್ನು ಬಿಡಲಿಲ್ಲ. ಕೊನೆಗೆ ಏಡಿಯು ಕಚ್ಚಿ ಹಿಡಿದ ಅದರ ಕೊಂಬನ್ನು ಚೂರಿಯಿಂದ ಬಿಡಿಸಬೇಕಾಯಿತು. ಇಷ್ಟು ಹೇಳಿ ಕೊನೆಗೆ ಅವನು ಎರಡು ವಾಕ್ಯಗಳನ್ನು ಸೇರಿಸಿಕೊಳ್ಳುತ್ತಿದ್ದ ಒಂದನೆಯದಾಗಿ, ಯಾವುದೇ ಏಡಿಯ ಕೊಂಬು ಒಮ್ಮೆ ಕಚ್ಚಿ ಹಿಡಿಯಿತು ಎಂದರೆ ಅದು ಇಕ್ಕುಳಕ್ಕಿಂತ ಗಟ್ಟಿಯಾಗಿರುತ್ತದೆ. ಅದನ್ನು ಅಷ್ಟು ಸುಲಭದಲ್ಲಿ ಬಿಡಿಸಲಾಗುವುದಿಲ್ಲ. ಎರಡನೆಯದಾಗಿ, ಏಡಿಯಿಂದ ತನ್ನ ಬಲಗೈಯ ಹೆಬ್ಬೆರಳು ಡೊಂಕಾಯಿತು. ಆ ದ್ವೇಷವನ್ನು ಏಡಿ ತಿನ್ನುವುದರ ಮೂಲಕ ತೀರಿಸುತ್ತೇನೆ ಎನ್ನುತ್ತಿದ್ದ. ಇವೆಲ್ಲವು ಕಿವಿಯಿಂದ ಕಿವಿಗೆ ಅವನ ಬಗ್ಗೆ ಹರಿದು ಬಂದ ಕತೆಗಳು.

ಏಡಿಯ ವಿಷಯದಲ್ಲಿ ಅವನಿಗಿದ್ದ ವಿಪರೀತ ಪ್ರೀತಿಯಿಂತೂ ಅಮವಾಸ್ಯೆಯ ಹಿಂದಿನ ದಿನ ಸರಿಯಾಗಿ ತಿಳಿಯುತ್ತಿತ್ತು. ಸಂಕ್ರನ ಜಾತಿಯಲ್ಲಿ ಅಮವಾಸ್ಯೆಯೆಂದರೆ ಅದು ಪಿತೃಗಳಿಗೆ ಎಡೆಯಿಡುವ ದಿನವಾದ್ದರಿಂದ ಅವರ ಹೆಸರಿನಲ್ಲಿ ಸಂಕ್ರನೂ ತಿನ್ನುವುದಕ್ಕೆ ಸಾಧ್ಯವಾಗುತ್ತಿತ್ತು. ಅಮವಾಸ್ಯೆಯ ಹಿಂದಿನ ದಿನ ಎಲ್ಲಿಂದಾದರೂ ಸರಿ ಆಮೆ ಅಥವಾ ಏಡಿಯನ್ನು ಸಂಕ್ರ ಬೇಟೆಯಾಡುತ್ತಿದ್ದ. ಏಡಿಯಾದರೆ ಕನಿಷ್ಟ ನಾಲ್ಕೈದು ಬೇಕು. ಒಂದು ವೇಳೆ ಆಮೆ ಸಿಕ್ಕಿತು ಎಂದಾದರೆ ಒಂದೇ ಸಾಕು. ಅಮವಾಸ್ಯೆಯ ಹಿಂದಿನ ದಿನ ಮತ್ತು ಆ ದಿನ ಸಂಕ್ರ ಬೇರೆ ಯಾವುದೇ ಕೆಲಸಕ್ಕೆ ಹೋಗುತ್ತಿರಲಿಲ್ಲ. ಅಮಾವಾಸ್ಯೆಯ ದಿನ ತೋಳಿಗೆ; ಹೊಟ್ಟೆಗೆ; ಎದೆಗೆ ಅವನು ಉದ್ದನೆಯ ನಾಮ ಹಚ್ಚಿಕೊಳ್ಳುತ್ತಿದ್ದ. ಮಧ್ಯಾಹ್ನ ನಂತರ ಅವನ ಹೊಟ್ಟೆ ಡುಮ್ಮಣ್ಣ; ಕೈ ಕಾಲು ಸಣ್ಣಣ್ಣನ ಥರ ಇರುತ್ತಿತ್ತು.

ಅಂಥ ಒಂದು ದಿನ ಸಂಕ್ರ ಎಲ್ಲಿಯಾದರೂ ಏಡಿ ಮತ್ತು ಆಮೆ ಸಿಗುತ್ತದೋ ಎಂದು ಹುಡುಕುತ್ತಾ ಹೊರಟ. ಅದು ಕಡು ಮಳೆಗಾಲದ ದಿನ. ಗದ್ದೆಗಳಿಂದ ಹೆಚ್ಚಾದ ನೀರು ಹೋಗುವುದಕ್ಕೆಂದು ಬಿಟ್ಟಿದ್ದ ಸಣ್ಣ ಸಣ್ಣ ಕಾಲುವೆಗಳಲ್ಲಿ, ಗದ್ದೆಯ ಬದುವಿನಲ್ಲಿ ಎಲ್ಲಿಯೂ ಅವನಿಗೆ ಏಡಿಗಳು ಸಿಗಲಿಲ್ಲ. ಆಗ ಥಟ್ಟನೆ ಹೊಳೆದದ್ದು ಕೆರೆ. ಕೆರೆಗಳ ಸುತ್ತಮುತ್ತ ಏಡಿ ಮತ್ತು ಆಮೆಗಳು ಸಿಗುವುದು ಖಾತ್ರಿಯೆಂದು ಕೆರೆಯ ಸಮೀಪ ಬಂದು ನಿಂತ. ಆಗ ಹೆಚ್ಚು ಕಡಿಮೆ ಮಧ್ಯಾಹ್ನದ ಹನ್ನೆರಡು ಗಂಟೆಯಿರಬಹುದು. ಅವನು ಏನನ್ನೋ ಹುಡುಕುತ್ತಾ ಹೊರಟದ್ದನ್ನು ನೋಡಿದ ಹೆಂಗಸು ಹುಲ್ಲು ಕೊಯ್ಯುವುದನ್ನು ನಿಲ್ಲಿಸಿ, "ಏನಣ್ಣ – ಏನೋ ಹುಡುಕುತ್ತಾ ಹೊರಟಹಾಗಿದೆ" ಅಂದಳು. ಸಂಕ್ರ, 'ನಾಳೆ ಅಮವಾಸ್ಯೆಯಲ್ಲವಾ? ಅದಕ್ಕೆ ಎಲ್ಲಿಯಾದರೂ ಏಡಿ – ಗೀಡಿ ಸಿಗುತ್ತದೋ ಅಂತ ಹುಡುಕುತ್ತಾ ಹೊರಟ್ಟಿದ್ದೇನೆ' ಅಂದ. 'ನಿನಗೆ ಅಮವಾಸ್ಯೆಯಾದರೇನು ಹುಣ್ಣಿಮೆಯಾದರೇನು ಒಟ್ಟು ಏಡಿಯೋ

– ಆಮೆಯೋ ಸಿಕ್ಕಿದರಾಯಿತು. ನಿನ್ನ ಬಾಯಿ ಚಪಲಕ್ಕೆ ಅಮವಾಸ್ಯೆಯೊಂದು ಕಾರಣ ಅಷ್ಟೇ' ಎಂದು ಹೇಳುತ್ತಾ. 'ಅಣ್ಣಾ ಒಂಚೂರು ಎಲೆಯಡಿಕೆ ಕೊಡು. ಬರುವಾಗ ಮರೆತುಬಿಟ್ಟೆ. ನಮ್ಮ ಮನೆಯ ದನಗಳಿಗೆ ಹಸಿ ಹುಲ್ಲು ಒಳ್ಳೆ ರುಚಿ ಹಿಡಿಸಿಬಿಟ್ಟಿದೆ. ಒಣಹುಲ್ಲನ್ನು ಏನೂ ಮಾಡಿದರೂ ಮುಟ್ಟುವುದಿಲ್ಲ. ಒಂಯೋ ಎಂದು ಅರಚುತ್ತವೆ' ಎಂದಳು. ಸಂಕ್ರ ಅವಳಿಗೆ ಎಲೆಯಡಿಕೆ ಕೊಟ್ಟು 'ಹೊಗೆಸೊಪ್ಪು ಏನೂ ಪ್ರಯೋಜನ ಇಲ್ಲ. ಸುಣ್ಣದ ನೀರು ಕೊಟ್ಟು ನೋಡಿದೆ. ಸಪ್ಪೆ ಅಂದ್ರೆ ಸಪ್ಪೆ. ಬೈಹುಲ್ಲು ಬಾಯಿಗೆ ಹಾಕಿದ ಹಾಗೆ ಆಗುತ್ತದೆ' ಎಂದು ಹೇಳುತ್ತಲೇ ಸುತ್ತಮುತ್ತ ನೋಡತೊಡಗಿದ. ಆ ಹೆಂಗಸು ಎಲೆಯಡಿಕೆ ಬಾಯಿಗೆ ಹಾಕಿಕೊಂಡು ಹುಲ್ಲು ಕೊಯ್ಯುವ ಕೆಲಸ ಮುಂದುವರಿಸಿದಳು. ಸಂಕ್ರ ಅಲ್ಲಿಂದ ಜಾಗ ಖಾಲಿ ಮಾಡಿದ. ಆ ಹೆಂಗಸು ಅವನು ಜಾಗ ಖಾಲಿ ಮಾಡಿದ್ದು ನೋಡಿ ಮನಸ್ಸಿನಲ್ಲಿಯೆ, "ಅಯ್ಯೋ ಇವನ ಹುಚ್ಚು" ಅಂದುಕೊಂಡಳು. ಸಂಕ್ರನೂ ಮನಸ್ಸಿನಲ್ಲಿಯೇ ಅಂದುಕೊಂಡ, "ಅಯ್ಯೋ ದೇವರೇ, ಒಂದೆರಡು ಏಡಿಯಾದರೂ ಸಿಗಲಿ. ಹಿರಿಯರ ದಿನ ಚೆನ್ನಾಗಿ ನಡೆಯಲಿ. ಅಮವಾಸ್ಯೆ ಒಂದು ದಿನವಾದರೂ ರೊಟ್ಟಿ; ಖಾರದ ಏಡಿ ಸಾರು. ಉಳಿದ ದಿನವೆಲ್ಲಾ ಉಪ್ಪು ಗಂಜಿ. ಬ್ರಾಹ್ಮಣರಿಗೆ ತಿಥಿಯ ದಿನ ವಡೆ. ಪಾಯಸ ತಿನ್ನುವ ಹುಚ್ಚು. ಶೆಟ್ರುಗಳಿಗೆ ಕೋಳಿ ಅಂಕದ ದಿನವೆಲ್ಲಾ ಕೋಳಿ ರೊಟ್ಟಿ ಸಿಗ್ತದೆ. ನಮ್ಮಂಥವರಿಗೆ ಏಡಿ, ಆಮೆ ಬಿಟ್ರೆ ಏನು ಸಿಗ್ತದೆ.? ಇದನ್ನು ಕಂಡ್ರೆ ಎಲ್ಲಾ ಮೂಗು ಮುರಿಯುತ್ತಾರೆ. ಆದರೆ ಬಾಯಿರುಚಿ ಯಾರಿಗೆ ಬಿಟ್ಟಿದೆ? ಏಡಿ ತಿನ್ನುವುದು ನಾನು, ಅದು ನನ್ನ ಇಷ್ಟ, ನನ್ನ ನಾಲಿಗೆ ಹೇಳುತ್ತದೆ. ಅದರಿಂದಾಚೆಗೇನು.?" ಸಂಕ್ರ ಕೆರೆಯ ಹತ್ತಿರ ಬಂದು ಕುಳಿತ.

ಕೆರೆಯ ಸುತ್ತ ಕುಸಿಯದಂತೆ ಕಟ್ಟಿಸಿದ ಕಲ್ಲುಗಳ ಸೆರೆಯನ್ನು ಇಣಕುತ್ತಾ ನೋಡಿದ. ಎಲ್ಲಿಯೂ ಏಡಿ ಕಾಣಿಸಲಿಲ್ಲ. ಒಂದೆರಡು ನೀರು ಹಾವುಗಳು ಕಲ್ಲಿನ ಸೆರೆಯಿಂದ ಇಣಕಿ ನೋಡಿ ಮುಂದೆ ಹೋದವು. ಸಂಕ್ರನಿಗೆ ನಿರಾಶೆಯಾಯಿತು. ಅಷ್ಟು ಹೊತ್ತಿಗೆ ಆಮೆಯೊಂದು ನೀರಿನ ಮೇಲು ಭಾಗಕ್ಕೆ ಬಂದು ತಲೆಯೆತ್ತಿ ನೋಡಿ ಮತ್ತೆ ನೀರೊಳಗೆ ಹೊರಟುಹೋಯಿತು.

ಸಂಕ್ರ ನೀರಿಗೆ ಧುಮುಕಿ ಆಮೆಯನ್ನು ಹಿಂಬಾಲಿಸಿದ. ಅದು ನೀರೊಳಗೆ ಹೋದುದರಿಂದ ಅದರ ಹಿಂದೆಯೇ ಮುಳುಗಿದ. ಮುಳುಗಿದ ಸಂಕ್ರ ಮೇಲೆ ಬರಲಿಲ್ಲ. ಆದದ್ದು ಇಷ್ಟೆ: ಸಂಕ್ರನು ಮುಳುಗಿದವನು ಆ ಕೆರೆಯ ಬುಡದಲ್ಲಿ ತೋಡಿಸಿದ್ದ ಸುರಂಗದೊಳಗೆ ಸಿಕ್ಕಿಹಾಕಿಕೊಂಡಿದ್ದ. ಮೇಲೆ ಬರಲು ಸಾಧ್ಯವಾಗದೆ ಸತ್ತುಹೋದ. ಅದೂ ಸುರಂಗವೆಂದರೆ ಅಂತಿಂಥ ಸುರಂಗವಲ್ಲ. ಬೇಸಿಗೆಯಲ್ಲಿ ಕೆರೆಗೆ ನೀರು ಸಾಕಾಗುವುದಿಲ್ಲ ಎಂದು ಒಂದಾಳು ಎತ್ತರದ ತುಂಬಾ ಉದ್ದನೆಯ

ಸುರಂಗ ತೋಡಲಾಗಿತ್ತು. ಸುರಂಗವು ಉದ್ದವಿದ್ದುದರಿಂದ ಅದರೊಳಗೆ ಸುರಂಗ ಕೆಲಸ ಮಾಡುವವರಿಗೆ ಕಷ್ಟವಾಗುತ್ತಿತ್ತು. ಬೇಸಿಗೆಯಲ್ಲಿ ಕೆರೆಗೆ ಆ ಸುರಂಗದಲ್ಲಿ ಬರುತ್ತಿದ್ದ ನೀರು ಎಂದರೆ ಕೈ ಬೆರಳಿನಷ್ಟು ದಪ್ಪ ಮಾತ್ರ. ಒಂದಾಳು ಎತ್ತರವಿದ್ದ ಆ ಸುರಂಗದೊಳಗೆ ಸಂಕ್ರ ಸಿಕ್ಕಿಹಾಕಿಕೊಂಡಿದ್ದ. ಅವನು ಅಲ್ಲಿಯೇ ಸತ್ತುಹೋದುದು ತಿಳಿದದ್ದು ಸಂಜೆಯೇ. ಅದು ಅವನು ಕೊಟ್ಟ ಎಲೆಯಡಿಕೆಯನ್ನು ತಿಂದ ಹೆಂಗಸಿನಿಂದ. ಅವನ ಹೆಣವನ್ನು ತೆಗೆಯುವುದು ಭಾರೀ ಸಾಹಸವಾಯಿತಂತೆ. ಅಂದಿನಿಂದ ಆ ಕೆರೆಗೆ ಸಂಕ್ರನ ಕೆರೆಯೆಂಬ ಹೆಸರು ಬಂತು. ಮುಸ್ಸಂಜೆಯ ವೇಳೆಗೆ ಆ ಕೆರೆಯ ಸುತ್ತ ಸಂಕ್ರನ ಪ್ರೇತ ಓಡಾಡುತ್ತಿದೆಯೆಂಬ ಪ್ರಚಾರ ಅನೇಕ ವರ್ಷಗಳಿಂದ ಚಾಲ್ತಿಯಲ್ಲಿತ್ತು. ಸಂಕ್ರನ ಕೆರೆಯೇ ತನ್ನ ಅಪಖ್ಯಾತಿಯ ಜೊತೆಗೆ ಅನೇಕ ಏಡಿಗಳಿಗೆ ಜೀವಾಶ್ರಯವನ್ನು ಉಳಿಸಿಕೊಟ್ಟು ಉಪಕಾರ ಮಾಡಿತು.

* * * * *

**ಕಾಫ್ಕ ತನ್ನ ಬಾಳಿನ ಮತ್ತು ಸಾಹಿತ್ಯದ ಸಮಸ್ಯೆಗಳೊಡನೆ ಸೆಣಸಾಡುವುದನ್ನು ಅವನ ದಿನಚರಿಯ ಪುಟಗಳಲ್ಲಿ ಕಾಣುತ್ತೇವೆ. ಅವನು ಅನುಭವಿಸಿದ ಸಂತೋಷ, ದುಃಖ, ನಿರಾಸೆ ಎಲ್ಲಾ ಇಲ್ಲಿ ಶಬ್ದಗಳಲ್ಲಿ ರೂಪತಾಳಿವೆ. ಬಹುಮಟ್ಟಿಗೆ ಈ ಪುಟಗಳಲ್ಲಿ ಕಾಣುವುದು ಅಸಹನೀಯವಾದ, ದಿಗ್ಭ್ರಮೆ ಹಿಡಿಸುವ ಏಕಾಕಿತನ. ಅಸ್ಥಿರವಾದ ವ್ಯಕ್ತಿತ್ವ, ತನ್ನ ಜೀವನದಲ್ಲಿ ನಡೆದ – ನಡೆಯುತ್ತಿರುವ ಘಟನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬ ಚಿಂತೆ, ತಾನು ತಪ್ಪಿತಸ್ಥನೇ ಎಂಬುದನ್ನು ನಿರ್ಧರಿಸಲಾಗದ ಯಾತನೆ, ತಪ್ಪು ಮಾಡಿದ್ದೇನೆ, ಮಾಡಿರಬೇಕು, ಅದರಿಂದಲೇ ಈ ಶಿಕ್ಷೆ ತನಗೆ ಎಂಬ ಭಾವನೆ, ತೀವ್ರ ನಿರಾಸೆ ಎಲ್ಲಾ ಈ ಪುಟಗಳಲ್ಲಿ ದಾಖಲೆಯಾಗಿದೆ. ಆದರೆ ಈ ಪುಟಗಳಲ್ಲೆ ಕತೆಗಾರ – ಕಾದಂಬರಿಕಾರ ಕಾಫ್ಕನನ್ನೂ ಕಾಣಬಹುದು.**

**– ಕಾಫ್ಕನ ದಿನಚರಿ**

**1992**
**ಆಗಸ್ಟ್**
**14**

ಉದ್ದಕಾಲು ಲಕ್ಷ್ಮಿಯು ಮೇಲು ನೋಟಕ್ಕೆ ಅತ್ಯಂತ ಸಭ್ಯ ಹೆಂಗಸು ಅಂತ ಅನಿಸಿದರೂ ಅಂತರಾಳದಲ್ಲಿ ಅವಳು ಅಂಥ ಪತಿವ್ರತಾ ಶಿರೋಮಣಿಯಾಗಿರಲಿಲ್ಲ. ಅವಳ ತಂದೆಯದು ಪೌರೋಹಿತ್ಯ ಕಸುಬು. ಇಡಿಯ ಸೀಮೆಯಲ್ಲಿ ವೇದಬ್ರಹ್ಮ ಎಂಬ ಹೆಗ್ಗಳಿಕೆ ಅವನದು. ಹೆಸರಿನ ಎದುರು ವೇ.ಬ್ರ.ನಾರಾಯಣ ಭಟ್ಟ ಎಂದು ಬರೆಯುವ ಮೂಲಕವೇ ಜನರೆದುರು ತನ್ನ ಪಾಂಡಿತ್ಯವನ್ನು ಪ್ರದರ್ಶಿಸಿದ್ದ. ಹೆಗಲಿಗೆ ಸದಾ ಕೆಂಪು ಪಟ್ಟೆಯ ಶಾಲು ಮತ್ತು ಹದಿನಾರು ಮೊಳದ ಪಂಚೆಯನ್ನು ಕಟ್ಟಿಕೊಳ್ಳುವುದು ಅವನ ರೂಢಿ. ಹೆಗಲಿನ ಮೇಲಿರುವ ತನ್ನ ಶಾಲನ್ನು ಸ್ವತಃ ಮಠದ ಸ್ವಾಮಿಗಳೇ ಸನ್ಮಾನಿಸಿ ಕೊಟ್ಟದ್ದು ಎಂದು ಹೇಳಿಕೊಂಡಿದ್ದ. ಸೀಮೆಯ ಪುರೋಹಿತನಾಗಿರುವುದರಿಂದಲೂ; ವೇದವನ್ನು ಉರುಹಚ್ಚಿದ ಘನ ಪಂಡಿತನೂ ಆಗಿರುವುದರಿಂದ ಮಠದ ಸ್ವಾಮಿಗಳು ತುಂಬಾ ಗೌರವದಿಂದ ಕಂಡಿದ್ದಾರೆ ಎಂದು ಅವನ ಖಚಿತ ನಂಬಿಕೆಯಾಗಿತ್ತು. ಮನುಸ್ಮೃತಿಯು ಅವರಿಗೆ ಸಿದ್ಧಿಸಿದೆ. ವರ್ಷಕ್ಕೆ ಕಡಿಮೆಯೆಂದರೂ ಐದಾರು ಬಾರಿ ಸ್ವತಃ ಮಠದ ಸ್ವಾಮಿಗಳೇ ಅವನನ್ನು ಕರೆಸುವುದಿತ್ತು. ಸ್ವಾಮಿಗಳ ಖಾಸಾ ಕೋಣೆಗೆ ಪ್ರವೇಶಿಸುವ ಹಕ್ಕು ಇದ್ದುದ್ದು ಅವನು ಒಬ್ಬನಿಗೆ ಮಾತ್ರ.

ಜಾತಿಗೆ ಬಾಹಿರವಾದ ಕೆಲಸವನ್ನು ಯಾರಾದರೂ ಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವನ್ನೋ, ಶುದ್ಧಿಯನ್ನೋ, ಪರಿಹಾರವನ್ನೋ ಸೂಚಿಸುವವನು ಈ ವೇದ ಬ್ರಹ್ಮ. ಗಂಡ ಸತ್ತ ಹೆಂಗಸರು ಮಂಡೆ ಬೋಳಿಸಿಕೊಳ್ಳಬೇಕೇ ಬೇಡವೇ? ಹುಡುಗಿಯೊಬ್ಬಳು ಋತುಮತಿಯಾದ ಮೇಲೆ ಮದುವೆಯಾದರೆ ಅದಕ್ಕೆ ಏನು ಪರಿಹಾರ? ಹೆಂಗಸಿನ ವ್ಯಭಿಚಾರಕ್ಕೆ ಏನು ಶಿಕ್ಷೆ ಮುಂತಾದವುಗಳನ್ನು ಸಾಮಾನ್ಯರಿಗೆ ಅರ್ಥವಾಗದ ಸಂಸ್ಕೃತದ ಮಂತ್ರಗಳಿಂದ ರಾಗಬದ್ಧವಾಗಿ ಉದಾಹರಿಸುತ್ತಿದ್ದ. ಮತ್ತು ಪ್ರತಿಯೊಂದು ಸಂದರ್ಭದಲ್ಲೂ ಶ್ರೀಮಠಕ್ಕೆ ಕಟ್ಟಬೇಕಾದ ತಪ್ಪು ದಂಡ ಎಷ್ಟು ಎಂದು ತೀರ್ಮಾನ ಹೇಳುತ್ತಿದ್ದ. ಇದರಿಂದ ಮಠಕ್ಕೆ ಆದಾಯವೂ ಹೆಚ್ಚಾಗುತ್ತಿತ್ತು. ವೇದ ಬ್ರಹ್ಮನಾರಾಯಣ ಭಟ್ಟ ಹೇಳುವ ತೀರ್ಮಾನವನ್ನು ಧಿಕ್ಕರಿಸಿ ಜಾತಿಭ್ರಷ್ಟರಾಗುವ ಧೈರ್ಯ ಆ ಕಾಲದಲ್ಲಿ ಯಾರಿಗೂ ಇರಲಿಲ್ಲ. ಅದಕ್ಕೆ ತಕ್ಕನಾಗಿ ಶ್ರೀ ಮಠದಿಂದಲೂ ದಕ್ಷಿಣೆ ಪಡೆಯುತ್ತಿದ್ದ. ಅವನಿಗೆ ಎಲೆಯಡಿಕೆ ಜಗಿಯುವ ಚಟ. ಇದಕ್ಕೆ ವೇದದಲ್ಲಿ

ಸಾಕಷ್ಟು ಉದಾಹರಣೆಗಳಿವೆಯೆಂದೂ ಪ್ರತಿಪಾದಿಸುತ್ತಿದ್ದ. ಮಠದ ಸ್ವಾಮಿಗಳ ಅನೇಕ ಖಾಸಗಿ ಸಂಗತಿಗಳು ವೇ. ಬ್ರ. ಗೊತ್ತಿದ್ದುದರಿಂದ ಅವನನ್ನು ಬಿಡುವುದಕ್ಕೆ ಸ್ವಾಮಿಗಳಿಗೆ ಮನಸ್ಸಿರಲಿಲ್ಲ. ಚಾತುರ್ಮಾಸ್ಯಕ್ಕೆಂದು ಸ್ವಾಮಿಗಳು ಎಲ್ಲಿಯಾದರೂ ಹೋದರೆ ಅವರಿಗೆ ಜೊತೆಗಾರನಾಗಿ ವೇ.ಬ್ರ. ಇರುತ್ತಿದ್ದ. ಚತುರ್ಮಾಸಕ್ಕೆ ಹೋದ ಸ್ವಾಮಿಗಳು ತಮ್ಮ ಇಂದ್ರಿಯ ನಿಗ್ರಹದ ಕಟ್ಟು ಬಿಡುತ್ತಿದ್ದರು. ಗೋಡಂಬಿ; ದ್ರಾಕ್ಷಿ; ಬಾದಾಮಿ; ಹಣ್ಣು ಹಂಪಲು ತಿಂದು ಅದರ ಮೇಲೆ ಪವಿತ್ರ ಮಾತೆಯಾದ ಗೋವಿನ ಹಾಲನ್ನು ಕುಡಿದು ಮಧ್ಯಾಹ್ನದ ಹೊತ್ತು ಕಾಲು ಕುಡಿಕೆ ತುಪ್ಪ ತಿನ್ನುತ್ತಿದ್ದ ಸ್ವಾಮಿಗಳ ದೇಹ ಕೊಬ್ಬಿರುವಾಗ ಕೊಬ್ಬು ಇಳಿಸುವುದಕ್ಕೆ ಚತುರ್ಮಾಸವೆಂಬುದು ಒಳ್ಳೆಯ ಅವಕಾಶವಾಗಿರುತ್ತಿತ್ತು. ಮೋಕ್ಷದ ನಿಜವಾದ ಹಾದಿಯೆಂದರೆ – ಹೆಣ್ಣಿನ ಮತ್ತು ಗಂಡಿನ ಸಂಪೂರ್ಣವಾದ ಸಮಾಗಮವೆಂದು ಸ್ವಾಮಿಗೂ ಗೊತ್ತು. ರಸಿಕರಾದ ಸ್ವಾಮಿಗಳು ವೇದ ಬ್ರಹ್ಮ ಒಬ್ಬರೇ ಇದ್ದಾಗ ಇದನ್ನು ಹೇಳುವುದೂ ಇತ್ತು. "ಗೃಹಸ್ಥರಾಗಿ ನೀವು ಕೆಟ್ಟಿರಿ. ನಾವು ಗೃಹಸ್ಥರಾಗದೆ ಗೆದ್ದೆವು. ನಮಗೆ ಬಂಧನವಿಲ್ಲ. ಆದರೆ ಮೋಕ್ಷದ ಹಾದಿ ಗೊತ್ತುಂಟು. ಪ್ರತಿಯೊಬ್ಬ ಹೆಣ್ಣು ಕೂಡಾ ಮೈಥುನದ ಕೊನೆಗೆ ಮೋಕ್ಷದ ಹಾದಿ ಹೇಳಿಕೊಡುತ್ತಾಳೆ. ಆ ಸುಖದ ಎದುರಿಗೆ ಬೇರೆ ಯಾವ ಸುಖವಿದೆ?" "ವೇದ ಬ್ರಹ್ಮ ಕೂಡಾ ಹೂಂ ಗುಟ್ಟುತ್ತಿದ್ದ. ವೇದಬ್ರಹ್ಮನ ಉದ್ದಕಾಲು; ಹಲಗೆಯಂತೆ ಮೇಲಿನಿಂದ ಕೆಳಗಿನವರೆಗೆ ಒಂದೇ ರೀತಿಯಿರುವ ಶರೀರ; ಉದ್ದನೆಯ ಮುಖ ಮತ್ತು ಅವನ ಉಷ್ಣದೇಹ ಪ್ರಕೃತಿ – ಲಕ್ಷ್ಮಿಗೂ ಬಂದಿದೆ. ಉಷ್ಣದೇಹ ಪ್ರಕೃತಿಯಿರುವವರು ಸದಾ ಮೈಥುನದ ಆಸೆಯಿರುವವರು ಅಂತ ಲಕ್ಷ್ಮಿಯು ಅವಳ ಅಪ್ಪ ತೆಗೆದಿರಿಸಿದ ಪುಸ್ತಕವೊಂದನ್ನು ಕದ್ದು ಓದಿ ಅರ್ಥಮಾಡಿಕೊಂಡಿದ್ದಾಳೆ. ಗಂಡನ ಜೊತೆಗೆ ಹೋಗುವಾಗ ಮಾತ್ರ ಅವಳು ಸ್ವಲ್ಪ ಮೈ ಬಗ್ಗಿಸಿ ನಡೆಯುತ್ತಾಳೆ ಅಷ್ಟೆ! ಅವಳ ಅಪ್ಪನ ಅಂದರೆ ವೇ.ಬ್ರ.ನ ಮೊದಲನೆಯ ಹೆಂಡತಿಯು ಬಟ್ಟೆ ಒಗೆಯಲು ಹೋಗಿ ಕಾಲು ಜಾರಿ ಕೆಳಗೆ ಬಿದ್ದು ಸತ್ತಳು ಅಂತ ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ವೇ.ಬ್ರ. ಸಿಟ್ಟಿನ ಭರದಲ್ಲಿ ಅವಳ ಕೆನ್ನೆಗೆ ಹೊಡೆಯಲೆಂದು ಹೋಗಿ ಕೈ ತಪ್ಪಿ ಆಯಕಟ್ಟಿನ ಜಾಗಕ್ಕೆ ಬಿದ್ದು ಸತ್ತಳು ಅಂತ ಹೇಳುತ್ತಾರೆ. ಆದರೆ ನಿಜ ಸಂಗತಿ ಯಾರಿಗೂ ಗೊತ್ತಿಲ್ಲ.

ಬ್ರಾಹ್ಮಣ ಹೆಂಗಸೊಬ್ಬಳು ಬೇರೆ ಜಾತಿಯವನನ್ನು ಸೇರಿದ್ದಕ್ಕೆ ಒಂದು ಪಿರ್ಯಾದಿ ಪತ್ರವನ್ನು ಮಠಕ್ಕೆ ಬರೆದು ತನ್ಮೂಲಕ ಅವಳನ್ನು ಜಾತಿಯಿಂದ ತೆಗೆದು ಹಾಕಲು ಕಾರಣನಾದ ವೇ.ಬ್ರ. ಎರಡನೆಯ ಮದುವೆಯಾದ. ಅದರಲ್ಲಿ ಮೂರು ಸಂತಾನ. ಲಕ್ಷ್ಮಿಯೊಬ್ಬಳೇ ಮಗಳು. ವೇ.ಬ್ರ.ನ ಎರಡನೆಯ ಹೆಂಡತಿ ಕೊಂಚ ಕುಳ್ಳಿ. ಅವಳ ಕುಳ್ಳತನವನ್ನು ಹೊತ್ತುಕೊಂಡು ಬಂದವನು ವೇ.ಬ್ರ.ನ ಮೊದಲನೆಯ ಮಗ. ವೇ.ಬ್ರ. ತೀರಿಹೋದ ಮೇಲೆ ಕುಲಕಸುಬು ಮುಂದುವರಿಸಿಕೊಂಡು

ಹೋದ. ವೇ.ಬ್ರ. ತೀರಿ ಹೋದ ಮೇಲೆ ಅವನೂ ಪಂಚಾಂಗ ಬಿಡಿಸಿದ. ಇಷ್ಟಿದ್ದರೂ ವೇ.ಬ್ರ. ಜೀವಂತವಾಗಿದ್ದಾಗ ಅವನಿಗೆ "ಆರತಿ ಭಟ್ಟ", "ಪಿರ್ಯಾದಿ ಭಟ್ಟ", "ಹೂಸು ಭಟ್ಟ" ಎಂದು ಅಪಹಾಸ್ಯ ಮಾಡುತ್ತಿದ್ದರು. ಯಾಕೆಂದರೆ ಯಾರನ್ನೂ ಕಂಡರೂ ಅವರ ಬಗ್ಗೆ ಮಠಕ್ಕೆ ಒಂದಲ್ಲ ಒಂದು ದೂರು ಸಲ್ಲಿಸುವುದು ಅವನ ಕೆಲಸವಾಗಿತ್ತು. ತನ್ನ ದಾಯಾದಿಗಳಿಗೆ ಅವನು ಕೊಟ್ಟ ಹಿಂಸೆಯು ಅಷ್ಟಿಷ್ಟಲ್ಲ.

ಉದ್ದಕಾಲು ಲಕ್ಷ್ಮಿಯು ಕಲಿತದ್ದು ಎರಡನೆಯ ತರಗತಿ ಮಾತ್ರ. ಉಳಿದದ್ದು ಮನೆಪಾಠ. ದೇವರ ನಾಮ ಹಾಡಲು ಕಲಿತಿದ್ದಾಳೆ. ಮನೆಗೆಲಸ ಗೊತ್ತು. ಎಷ್ಟೇ ಪ್ರಯತ್ನ ಮಾಡಿದರೂ ಅವಳಿಗೆ ತಕ್ಕ ಗಂಡ ಸಿಗಲಿಲ್ಲ. ಕೊನೆಗೆ ಅವಳ ಅಣ್ಣ ಅವಳ ಜಾತಕವನ್ನು ತಿದ್ದಿದ. ಅವಳಿಗೆ ಕೊನೆಗೂ ಮದುವೆಯಾಗುವ ಯೋಗ ಬಂದುದು ಬಡ್ಡಿಸುಬ್ಬಣ್ಣನ ಜೊತೆಗೆ. ಬಡ್ಡಿಯ ವಿಷಯದಲ್ಲಿ ಮಹಾನ್ ಕಿರಾತಕನಾದ ಸುಬ್ಬಣ್ಣನ ಕುರಿತು ಅವಳಿಗೆ ಒಂದರ್ಥದಲ್ಲಿ ಹೆಮ್ಮೆಯೂ ಇತ್ತು. ದುಡ್ಡಿಗೆ ದುಡ್ಡು ಮಾಡುವುದು ಮುಂದೆ ತನ್ನ ಮಕ್ಕಳಿಗೆ ತಾನೆ ಎಂದು ಅವಳ ಲೆಕ್ಕಚಾರ. ಮದುವೆಯಾದ ಹೊಸತರಲ್ಲಿ ಸುಬ್ಬಣ್ಣ ಅಂದಿದ್ದ, "ತೆಂಗಿನಕಾಯಿ ಹಾಕಿಯೇ ಪದಾರ್ಥ ಮಾಡಬೇಕಾಗಿಲ್ಲ, ಹುಣಿಸೆ ಹಣ್ಣು ಕಿವುಚಿ ಸಾರು ಮಾಡು. ಊಟಕ್ಕೆ ಗಟ್ಟಿ ಮಜ್ಜಿಗೆಯೇ ಬೇಕಾಗಿಲ್ಲ. ಹುಳಿ ಮಜ್ಜಿಗೆಗೆ ಒಂಚೂರು ಉಪ್ಪು ಹಾಕಿದರೆ ಹೊಟ್ಟೆಗೂ ಒಳ್ಳೆಯದು". ಊಟಕ್ಕೆ ಬಾಳೆ ಎಲೆಯನ್ನಿಟ್ಟರೆ, ಬಾಳೆಲೆಗಿಂತ ಅಡಿಕೆಯ ಹಾಳೆಯೇ ಒಳ್ಳೆಯದು ಅಂತ ಪ್ರವರ ಪ್ರಾರಂಭಿಸಿದ್ದ. ಅಡಿಕೆಯ ತೋಟದಲ್ಲಿ ಬೇಕಾದಷ್ಟು ಹಾಳೆ ಬಿದ್ದಿದ್ದರೂ ಊಟಕ್ಕೆ ಉಪಯೋಗಿಸಿದ ಹಾಳೆಯನ್ನು ತೊಳೆದು ಕವುಚಿ ಇಡುತ್ತಿದ್ದ. ಮರುದಿನ ಊಟಕ್ಕೆ ಅದನ್ನು ಬಳಸಿಕೊಳ್ಳುತ್ತಿದ್ದ. ಗಂಡನಿಗೆ ತಕ್ಕನಾದ ಹೆಂಡತಿಯು ತಾನಾಗಬೇಕೆಂದು ಲಕ್ಷ್ಮಿಯೂ ಅದನ್ನೇ ಅನುಸರಿಸತೊಡಗಿದಳು. ಮಜ್ಜಿಗೆಯನ್ನು ದಿನಾ ಉಳಿಸಿ ವಾರಕ್ಕೊಮ್ಮೆ ಗಂಡನಿಗೆ ಗೊತ್ತಾಗದಂತೆ ಮಾರತೊಡಗಿದಳು. ದಿನಾ ಅಡುಗೆಯ ಕೆಲಸ ಮುಗಿಸಿ ತೋಟಕ್ಕೆ ಹೋಗಿ ತೆಂಗಿನ ಮಡಲು, ಅಡಿಕೆಯ ಸೋಗೆಯನ್ನು ತಂದು ಕಸಬರಿಕೆ ಮಾಡಿ ಮಾರತೊಡಗಿದಳು. ಶೂದ್ರರಿಗೆ ಮಜ್ಜಿಗೆ ಮಾಡಲು ಏನು ಬರುತ್ತದೆ? ಅವಕ್ಕೆ ಮಜ್ಜಿಗೆ ಹೇಗಿದ್ದರೇನು? ಎಂದು ಅವಳ ಲೆಕ್ಕಚಾರ. ಒಂದು ಪಾವು ಮಜ್ಜಿಗೆಗೆ ನಾಕಾಣೆಯಂತೆ ಲೆಕ್ಕ ಹಾಕಿ ದುಡ್ಡು ಕೂಡಿಟ್ಟಳು. ತನ್ನ ಹತ್ರ ಬಡ್ಡಿ ಸುಬ್ಬಣ್ಣನಿಗೆ ಅವಳ ಹತ್ತಿರ ಎಷ್ಟು ದುಡ್ಡಿದೆ ಎಂದು ಗೊತ್ತಾಗದಂತೆ ನೋಡಿಕೊಂಡಳು. ತವರು ಮನೆಗೆ ಹೋದರೆ ಬರುವಾಗ ಪೇಟೆಯಿಂದ ರವಿಕೆಯ ಖಣ ತರುವುದು ಅದಕ್ಕೆ ಒಂದೆರಡು ಪಟ್ಟು ಹೆಚ್ಚು ಬೆಲೆ ನಿಗದಿಗೊಳಿಸಿ ಹೆಂಗಸರಿಗೆ ಗುಟ್ಟಾಗಿ ಮಾರುವುದು ಮಾಡತೊಡಗಿದಳು. ಸುಬ್ಬಣ್ಣ ಮತ್ತು ಅವಳಿಗೆ ಮೊದಲು ಹುಟ್ಟಿದ

ಹುಡುಗಿ. ಮಗಳು ಹುಟ್ಟಿದಳು ಎನ್ನುವ ಕಾರಣಕ್ಕೆ ಸುಬ್ಬಣ್ಣ ಬಾಣಂತಿಯನ್ನು ನೋಡಲು ಹೋಗಿರಲಿಲ್ಲ. "ಅಯ್ಯೋ ಹಣೆಬರಹವೇ ಇವಳೊಬ್ಬಳು ದರಿದ್ರ ರಂಡೆ ಹುಡುಗಿಯನ್ನು ಹೆತ್ತು ನನ್ನನ್ನು ನಾಶ ಮಾಡಿದಳು" ಎಂದು ಭಾವಿಸಿಕೊಂಡು ಕೂತ. "ಏನು ಸುಬ್ಬಣ್ಣ ನಿನ್ನ ಹೆಂಡತಿ ಹೆತ್ತಳಂತೆ ಗಂಡೋ ಹೆಣ್ಣೋ" ಎಂದು ಕೇಳಿದರೆ ಜನಿವಾರದಿಂದ ಬೆನ್ನು ಕರೆದುಕೊಂಡು, "ಆ ಮುಂಡೆ ಸಕ್ಕರೆ ತೆಂಗಿನಕಾಯಿ ಚೂರು ಹಂಚದ ಹಾಗೆ ಮಾಡಿದಳು. ಈಗ ಏನಿದ್ದರೂ ಬೆಲ್ಲ ತೆಂಗಿನ ಚೂರು ಹಂಚಬೇಕಷ್ಟೆ. ಇನ್ನು ಏನಿದ್ದರೂ ನಾನು ಕಳೆಯುವ ಲೆಕ್ಕ ಕಲಿಯಬೇಕು. ಆ ದರಿದ್ರದಿಂದಾಗಿ ಎಲ್ಲಾ ಹಾಳಾಯಿತು" ಎಂದು ಹೇಳುತ್ತಾ ತಿಂಗಳಾನುಗಟ್ಟಲೆ ಕಳೆದ. ಕೊನೆಗೊಂದು ದಿನ ಉದ್ದಕಾಲು ಲಕ್ಷ್ಮಿಯನ್ನು, ಅವಳ ಹೆಣ್ಣುಕೂಸನ್ನು ಸುಬ್ಬಣ್ಣನ ಮನೆಗೆ ಕರೆತಂದು ಬಿಟ್ಟದ್ದು ಲಕ್ಷ್ಮಿಯ ಅಣ್ಣ. ಆ ದಿನ ಸುಬ್ಬಣ್ಣ ಉದ್ದಕಾಲು ಲಕ್ಷ್ಮಿಯ ಅಣ್ಣನತ್ರ ಕೇಳಿದ, "ನನಗೆ ಮುಂದೆ ಗಂಡು ಹುಟ್ಟುತ್ತದೋ ಹೆಣ್ಣೋ?" ಅವಳಣ್ಣ ಕೈ ಬೆರಳು ಮಡಚಿ ಭಾಗಾಕಾರ ಮಾಡಿ, "ಮುಂದೆ ಗಂಡು ಹುಟ್ಟುವುದು ಖಂಡಿತಾ. ಆದರೆ ಉಳುಮೆಗೆ ಮುಹೂರ್ತ ಇರುವ ಹಾಗೆ ಇದಕ್ಕೂ ಮುಹೂರ್ತ ಅಂತ ಉಂಟು" ಎಂದ. ಅಲ್ಲಿಂದ ಸುಬ್ಬಣ್ಣನ ವರಸೆಯು ಬೇರೆಯಾಯಿತು. ತಿಂಗಳಿಗೊಮ್ಮೆ ಉದ್ದಕಾಲು ಲಕ್ಷ್ಮಿಯ ತವರು ಮನೆಗೆ ಹೋಗುವುದು ಪಂಚಾಂಗ ಇಡಿಸುವುದು ಮತ್ತೆ ಬರುವುದು. ಲಕ್ಷ್ಮಿಯು ಮುಟ್ಟಾದ ದಿನದಿಂದ ಪ್ರಾರಂಭ ಮಾಡಿ ಆ ಗಳಿಗೆಯನ್ನು ಲೆಕ್ಕ ಮಾಡಿ ಅವಳ ಅಣ್ಣ ಮುಹೂರ್ತ ನಿಶ್ಚಯ ಮಾಡಿ ಹೇಳತೊಡಗಿದ. ರಜೋದರ್ಶನವಾದ್ದು ಮಧ್ಯಾಹ್ನವಾದರೆ –ಮಧ್ಯಾಹ್ನ. ಸಂಜೆಯಾದರೆ – ಸಂಜೆ. ಒಮ್ಮೊಮ್ಮೆ ರಾತ್ರಿ ಏಳು ಗಂಟೆಗೆ. ಮತ್ತೆ ಒಮ್ಮೊಮ್ಮೆ ಹತ್ತು ಗಂಟೆಗೆ. ಅದಕ್ಕೆ ಹೊತ್ತು ಗೊತ್ತು ಅಂತ ಏನಿದೆ? ಉಳಿದ ದಿನಗಳಲ್ಲಿಯೂ ಇದೇ ಕಾರಣಕ್ಕೆ ಹೆಂಡತಿಯ ಜೊತೆಗೆ ಮಲಗುವುದಿಲ್ಲ ಎಂದು ನಿರ್ಧಾರ ಮಾಡಿದ. ಒಂದು ಸಾರಿ ಗಂಡ – ಹೆಂಡತಿ ಇಬ್ಬರೂ ಬೆಳಗಿನ ಹನ್ನೆರಡು ಗಂಟೆಗೆ ಸೇರಿದರೆ ಗಂಡು ಹುಟ್ಟಬಹುದು ಎಂದು ಮುಹೂರ್ತ ಕೂಡಿ ಬಂತು. ಮಹಾಲಕ್ಷ್ಮಿಯ ಅಣ್ಣನತ್ರ ಎರಡೆರಡು ಸಾರಿ ಕೇಳಿ ಸುಬ್ಬಣ್ಣ ಅದನ್ನು ಗಟ್ಟಿ ಮಾಡಿಕೊಂಡ. ಮಹಾಲಕ್ಷ್ಮಿಯು ಮಾತ್ರ "ಈಗ ಬೇಡ. ಯಾರಾದರೂ ಬಂದರೆ ಕಷ್ಟವಾದೀತು" ಅಂದಳು. ಬಡ್ಡಿ ಸುಬ್ಬಣ್ಣನ ಮನಸ್ಸಿನಲ್ಲಿ ಗಂಡು ಮಗು ಬೇಕು ಎನ್ನುವ ಚಿಂತೆಯಿತ್ತೇ ಹೊರತು ಬೇರೆ ಯಾವುದೂ ಇರಲಿಲ್ಲ. 'ಏಯ್, ದರಿದ್ರದವಳೆ ನಾನು ಹೇಳಿದಷ್ಟು ಮಾಡು. ಹನ್ನೆರಡು ಗಂಟೆಯ ಮುಹೂರ್ತ ಒಳ್ಳೆಯದಂತೆ' ಅಂದ. ಗಂಡ– ಹೆಂಡತಿಯರಿಬ್ಬರೂ ದೇವರ ಕೋಣೆಗೆ ಹೋಗಿ ಕೈ ಮುಗಿದು ದೇವತಾ ಸೇವೆ ಪ್ರಾರಂಭಿಸಬೇಕೆಂದು ತೊಡಗಿಕೊಳ್ಳುವಷ್ಟರಲ್ಲಿ ಕರಿಪರಮೇಶ್ವರಿಯು ಹಿತ್ತಲಲ್ಲಿ

ಬಂದು ಕರೆಯತೊಡಗಿದಳು. ಲಕ್ಷ್ಮಿಯು ಸೀರೆಯ ಸೆರಗು ಸರಿ ಮಾಡಿಕೊಂಡು ಹೊರಟಳು. ಒಂದೊಂದು ಸರ್ತಿ ಒಂದೊಂದು ವಿಘ್ನ ಬಂದು ಸುಬ್ಬಣ್ಣನಿಗೆ ತಲೆಬಿಸಿಯಾಗತೊಡಗಿತ್ತು. ಯಾವಾಗ ಅಂದರೆ ಆವಾಗ ಹೊತ್ತು ಗೊತ್ತು ಒಂದು ಇಲ್ಲದೆ ತನ್ನನ್ನು ಗಂಡು ಮಗು ನೀನು ಹೆರಲೇಬೇಕೆಂದು ಒತ್ತಾಯಿಸುವ ಸುಬ್ಬಣ್ಣನಿಂದ ಉದ್ದಕಾಲು ಲಕ್ಷ್ಮಿಗೂ ತನ್ನ ಗಂಡನ ಧೋರಣೆಯ ಬಗ್ಗೆ ಸಣ್ಣ ಅಸಹನೆಯು ಮೂಡತೊಡಗಿತ್ತು. ಹೆಣ್ಣು ಮಗುವನ್ನು ಎತ್ತಿಕೊಳ್ಳುವುದಾಗಲಿ ಅದನ್ನು ಮುದ್ದಾಡುವುದಾಗಲಿ ಸುಬ್ಬಣ್ಣ ಮಾಡಿದವನಲ್ಲ. ಸಣ್ಣ ಮಗು ಜೋರಾಗಿ ಅಳುತ್ತಿದ್ದರೆ, 'ಓಯ್ ಕೇಳಿಸ್ತಾ ನಿನ್ನ ಮಗಳು ಕತ್ತೆ ಅರಚಿದ ಹಾಗೆ ಅರಚುತ್ತಿದ್ದಾಳೆ' ಎಂದು ಹೇಳುತ್ತಿದ್ದ. ಉದ್ದಕಾಲು ಲಕ್ಷ್ಮಿಯು ಸ್ನಾನಕ್ಕೆ ಹೋದಮೇಲೆ ಅದೂ ಹೇಲು ಮಾಡಿಕೊಂಡರೂ ಸುಬ್ಬಣ್ಣ ತಿರುಗಿಯೂ ನೋಡುತ್ತಿರಲಿಲ್ಲ. ಸುಬ್ಬಣ್ಣನ ಮಗಳಿಗೆ ಒಂದು ತುಂಬಿ ಅದನ್ನೂ ದಾಟಿತು. ಸುಬ್ಬಣ್ಣನ ಮುಹೂರ್ತ ಹಾಸುಗೆಯ ಮೇಲೆ: ನೆಲದ: ಮೇಲೆ ಬಚ್ಚಲಲ್ಲಿ ಫಲಪ್ರದವಾಗಲಿಲ್ಲ. ಸುಬ್ಬಣ್ಣ ಹೆಂಡತಿಯನ್ನು ಹಂಗಿಸುತ್ತಲೆ ಇದ್ದ. ಉದ್ದಕಾಲು ಲಕ್ಷ್ಮಿಗೆ ಜ್ವರ ಬಂದರೆ, 'ಅಯ್ಯೋ ದುಡ್ಡು ದಂಡ ಕಷಾಯ ಮಾಡಿ ಕುಡಿ' ಅನ್ನುತ್ತಿದ್ದ. ಅವಳು ಜ್ವರ ಬಂದು ಮಲಗಿದರೂ ಮುಹೂರ್ತದ ಗಳಿಗೆಯನ್ನು ಬಿಡಲಿಲ್ಲ. ಒಂದೊಂದು ದಿನ ಅವಳ ಮನಸ್ಸು ಸಿದ್ಧವಾಗಿರದಿದ್ದರೂ ಸುಬ್ಬಣ್ಣ ಹೇಳಿದಂತೆ ಕೇಳಬೇಕಾಗಿತ್ತು. ಕೊನೆ ಕೊನೆಗೆ ಲಕ್ಷ್ಮಿಯು ಅದಕ್ಕೆ ತಕ್ಕ ಪ್ರತ್ಯುಪಾಯ ಹೂಡತೊಡಗಿದಳು. ಮುಹೂರ್ತದ ಗಳಿಗೆಯೆಂದು ಗೊತ್ತಾದ ತಕ್ಷಣ ಹಗಲು ಹೊತ್ತಾದರೆ ಎಲ್ಲೆಲ್ಲಿಯೋ ಕೂತು ಬಿಡುವುದು. ಮುಟ್ಟಾದ ದಿನವನ್ನು ಬೇಕೂಂತಲೇ ತಪ್ಪಾಗಿ ಹೇಳುವುದು ಮುಂತಾದವುಗಳನ್ನು ಮಾಡತೊಡಗಿದಳು. ಸುಬ್ಬಣ್ಣನ ದೆಸೆಯಿಂದಾಗಿ ರಾತ್ರಿಯ ಸುಖದಿಂದ ವಂಚಿತಳಾಗತೊಡಗಿದಳು. ಹೊರಗಿನವರ ಎದುರು ಅವಳು ತೋರಿಸಿಕೊಳ್ಳದಿದ್ದರೂ ಗಂಡನ ಎದುರು ಬೇರೆ ಬೇರೆ ರೀತಿಯಲ್ಲಿ ತನ್ನ ಅಸಹನೆ ವ್ಯಕ್ತಪಡಿಸುತ್ತಿದ್ದಳು. ಮಳ್ಳಿಯೆಂದರೆ ಮಳ್ಳಿ. ಊರಿನವರ ಎದುರು ತನ್ನ ಗಂಡನನ್ನು ಸದಾ ಹೊಗಳುತ್ತಿದ್ದ ಅವಳು ಮನೆಯೊಳಗೆ ಮಾತ್ರ ಗಂಡನನ್ನು ಬೇರೆ ಬೇರೆ ರೀತಿಯಲ್ಲಿ ಹಂಗಿಸತೊಡಗಿದಳು. ಒಂದು ದಿನ ಬಡ್ಡಿ ಸುಬ್ಬಣ್ಣ ಒಂದು ವಾರದ ಮಟ್ಟಿಗೆ ಬಡ್ಡಿ ವಸೂಲಿಗೆ ಪರ ಊರಿಗೆ ಹೋಗಬೇಕಾಗಿತ್ತು. ಆಗ ನಡೆಯಿತು ಉದ್ದಕಾಲು ಲಕ್ಷ್ಮಿಯ ನಿಜವಾದ ಪಾತಿವ್ರತ್ಯದ ಪ್ರಕಟಣೆ.

ಈ ಘಟನೆಯು ನಡೆದಾಗ ಬಡ್ಡಿ ಸುಬ್ಬಣ್ಣನ ವಯಸ್ಸೂ ಮೂವತ್ತರ ಆಸುಪಾಸು. ಉದ್ದಕಾಲು ಲಕ್ಷ್ಮಿಯ ವಯಸ್ಸು ಇಪ್ಪತ್ತನಾಲ್ಕರ ಆಸುಪಾಸು ಇರಬಹುದು. ಸುಬ್ಬಣ್ಣನ ಗಳಿಗೆಯನ್ನು ಆಧರಿಸಿಕೊಂಡು ನಿರಂತರ ಪೀಡಿಸುವುದು,

ತನಗೆ ಬೇಕೆಂದು ಅನಿಸಿದಾಗ ಅವನು ಬೇಡವೆಂದು ಹೇಳುವುದು. ಹೆಣ್ಣು ಮಗುವನ್ನು ಹೆತ್ತಿರುವುದಕ್ಕೆ ಹಂಗಿಸುವುದು ಇದೆಲ್ಲಾ ಲಕ್ಷ್ಮಿಯ ಅಸಮಾಧಾನಕ್ಕೆ ಕಾರಣವಾಗಿತ್ತು. ಆದರೂ ಮನಸ್ಸನ್ನು ತಡೆಹಿಡಿದುಕೊಂಡಿದ್ದಳು. ಮನೆಗೆ ಬಂದವರಿಗೆ ಒಂದು ಲೋಟ ನೀರು. ಒಂಚೂರು ಬೆಲ್ಲ ಕೊಡದಿರುವ ಅವಳ ಮನೆಗೆ ಬಂದು ಹೋಗುವವರು ಯಾರೂ ಇಲ್ಲ. ಆಗಿನ್ನು ಮಾಚಣ್ಣ ಊರಿಗೆ ಬಂದಿಲ್ಲವಾದುದರಿಂದ ದೋಪಿಯ ಸ್ನೇಹ ಅವಳಿಗಿರಲಿಲ್ಲ. ಬಡ್ಡಿ ಸುಬ್ಬಣ್ಣ ಊರಿನಲ್ಲಿ ಇಲ್ಲ. ಮಗಳನ್ನು ಕಾಲಿನಲ್ಲಿ ಮಲಗಿಸಿಕೊಂಡು ಉದ್ದಕಾಲು ಲಕ್ಷ್ಮಿಯು ಕುಳಿತಿದ್ದಳು. ಅದು ಸಂಜೆ. ಚಿಮಿಣಿ ದೀಪವನ್ನು ತುಂಬಾ ಹೊತ್ತು ಉರಿಸುವುದು ಖರ್ಚಿನ ದಾರಿಯೆಂದು ಅವಳು ಗಂಡನಿಂದ ಕಲಿತಿದ್ದಳು. ಅದಕ್ಕಾಗಿಯೇ ಕತ್ತಲೆಯಲ್ಲಿ ಏನೇನೂ ಕಾಣಿಸುವುದಿಲ್ಲವೆಂಬ ಹೊತ್ತು ಚಿಮಿಣಿ ದೀಪ ಉರಿಸುತ್ತಿದ್ದಳು. ರಾತ್ರಿ ಎಂಟೂವರೆಗೆ ದೀಪವಾರಿಸಿ ಮಲಗಿಬಿಡುತ್ತಿದ್ದಳು. ಆ ದಿನ ಹೊರ ಜಗುಲಿಯಲ್ಲಿ ಅವಳು ಕುಳಿತಿದ್ದಳು. ಅದೇ ವೇಳೆಗೆ ಅವಳ ಮನೆಗೆ ಅವಳ ಸೋದರತ್ತೆಯ ಮಗ ಬಂದ. ರಾತ್ರಿಯೂಟದ ಹೊತ್ತಿಗೆ ಬಂದ ನೆಂಟ ಅವನು. ತೆಳ್ಳಗೆ ಬೆಳ್ಳಗೆ ಇರುವ ದುಂಡು ಮುಖದವನು. ಅವನಿಗೆ ಜೀವನದಲ್ಲಿ ಜವಾಬ್ದಾರಿ ತೆಗೆದುಕೊಂಡು ಗೊತ್ತಿಲ್ಲ. ಎಲ್ಲಿಯಾದರೂ ಹೋದರೆ ವಾರಗಟ್ಟಲೆ ಕುಳಿತುಕೊಳ್ಳುವುದು ಅವನ ಅಭ್ಯಾಸ. ವೆಂಕಟೇಶನೆಂದು ಅವನ ಹೆಸರು. ವಯಸ್ಸು ಇಪ್ಪತ್ತೊಂದು ದಾಟಿದೆ. ಲಕ್ಷ್ಮಿಗೆ ಅವನು ಬಂದುದು ತುಂಬಾ ಸಂತೋಷವೆನಿಸಿತು. ಲಕ್ಷ್ಮಿಯ ವಯಸ್ಸಿನಿಂದ ಸಣ್ಣವನಾದುದರಿಂದಲೂ ಸೋದರತ್ತೆಯ ಮಗನಾದುದರಿಂದಲೂ ಒಂದು ರೀತಿಯ ಸಲುಗೆಯಿತ್ತು.

'ಏನೋ ವೆಂಕಟ ಬಾ ಕೂತುಕೋ' ಎಂದಳು – ಕಾಲಿನ ಮೇಲೆ ಮಲಗಿದ ಮಗುವಿನ ಬೆನ್ನು ತಟ್ಟುತ್ತಾ ವೆಂಕಟ. "ಏನೋ ಮಾರಾಯ್ತಿ ನೀನು ಇನ್ನೂ ದೀಪ ಉರಿಸಿಲ್ಲ' ಅಂದ. "ಮಗಳು ಕಾಲ ಮೇಲೆ ಮಲಗಿದ್ದಳು ನೋಡು ಕಾಲು ಅಲುಗಾಡಿಸಿದರೆ ಅವಳಿಗೆ ಎಚ್ಚರವಾಗುತ್ತದೆ. ಅದೂ ಅಲ್ಲದೆ ಇಷ್ಟು ಹೊತ್ತಿಗೆ ದೀಪ ಉರಿಸಿದರೆ ಸುಮ್ಮನೆ ದಂಡ" ಎಂದಳು. 'ಓ ಅಣ್ಣ ಭಾರೀ ತರಬೇತಿ ಕೊಟ್ಟ ಹಾಗೆ ಕಾಣಿಸುತ್ತದೆ. ಅಂದ ಹಾಗೆ ಎಲ್ಲಿ ಅಣ್ಣ?'

"ಏನೋ ವ್ಯವಹಾರ ಅಂತ ಹೋಗಿದ್ದಾರೆ. ಹೆಚ್ಚು ಕಡಿಮೆ ಒಂದು ವಾರ ಆಗಬಹುದು. ಅಂದಿದ್ದಾರಪ್ಪ" ಎಂದು ಹೇಳುತ್ತಾ ಉದ್ದಕಾಲು ಲಕ್ಷ್ಮಿಯು ಮಗುವನ್ನು ಎತ್ತಿಕೊಂಡು ಹೋಗಿ ಮಲಗಿಸಿದಳು. ವೆಂಕಟ ಕೈ ಕಾಲು ತೊಳೆಯಲು ಹೊರಟ.

ವೆಂಕಟ ಬಂದಿದ್ದಾನೆಂದು ಲಕ್ಷ್ಮಿಯು ರಾತ್ರಿಯ ಅಡುಗೆಗೆ ತೊಂಡೆಕಾಯಿ ಪಲ್ಯ ಮಾಡಲು ಹೊರಟಾಗ ಜಗುಲಿಯಲ್ಲಿ ಕುಳಿತು ಬೇಜಾರಾದ ವೆಂಕಟನೂ

ಅಡುಗೆ ಮನೆಯ ಹತ್ತಿರ ಹೊರಟ. ವೆಂಕಟ ಅಡುಗೆ ಮನೆಯತ್ತ ಬಂದಾಗ ಲಕ್ಷ್ಮಿಯು, 'ಹೋಗೋ ವೆಂಕಟ ಒಂದು ಮಣೆ ತೆಗೆದುಕೊಂಡು ಬಂದು ಕುಳಿತುಕೊ' ಅಂದಳು. ವೆಂಕಟನೂ ಅದರಂತೆ ಮಾಡಿದ. ಅವನು ಮೆಟ್ಟು ಕತ್ತಿಯ ಎದುರು ಕುಳಿತುಕೊಂಡು ಅವಳು ತರಕಾರಿಗಳನ್ನು ಹೆಚ್ಚುವುದನ್ನು ನೋಡುತ್ತಾ ಕುಳಿತುಕೊಂಡ. ಅವಳ ಎದುರು ಒಂದು ಚಿಮಿಣಿ ದೀಪ ಉರಿಯುತ್ತಿತ್ತು ಮತ್ತು ಹೊಗೆಯಾಡುತ್ತಿತ್ತು. ವೆಂಕಟ ಮಾತಾಡುತ್ತಲೇ ಚಿಮಿಣಿ ದೀಪಕ್ಕೆ ಅಲ್ಲಿಯೇ ಹರಿದಾಡುತ್ತಿದ್ದ ಇರುವೆಯನ್ನು ಹಾಕಿದ. ಅವನು ಮಾಡುವುದನ್ನು ನೋಡಿ ಲಕ್ಷ್ಮಿಯು, 'ಇನ್ನೂ ಹುಡುಗಾಟ ಬಿಟ್ಟಿಲ್ಲ ನೋಡು. ಸಣ್ಣವರಿರುವಾಗ ನಮಗಿಬ್ಬರಿಗೂ ಇದೇ ಕೆಲಸವಾಗಿತ್ತು. ಇರುವೆಯನ್ನು; ಗೆದ್ದಲು ಹುಳವನ್ನು ಚಿಮಿಣಿ ದೀಪಕ್ಕೆ ಹಿಡಿಯುವುದು. ಈಗಲೂ ಅದೇ ಮಾಡ್ತಿಯಾ. ಆಗ ತಾಗಿದ ಬೆಂಕಿಯಿಂದ ಉಂಟಾದ ಕಲೆಯು ಇನ್ನೂ ಹೋಗಿಲ್ಲ. ನೀನಾಗ ನನ್ನ ಕೈ ದೂಡಿದ್ದೆ. ನೆನಪಿದೆಯಾ? ನನಗೆ ಈ ಕೈಯನ್ನು ನೋಡುವಾಗೆಲ್ಲಾ ನಿನ್ನದೇ ನೆನಪು ಬರುತ್ತದೆ' ಅಂದಳು. 'ನೀನು ಬಾಕಿಯಾ? ನಿನ್ನಿಂದಾಗಿ ನನ್ನ ಅಪ್ಪನಿಂದ ಪೆಟ್ಟು ತಿನ್ನುವ ಹಾಗಾಯಿತು' ಅಂದ. ಇಬ್ಬರೂ ಮನಸ್ಸು ತುಂಬಿ ನಗಾಡುತ್ತಾ ಹಳೆಯ ನೆನಪುಗಳ ಕಡೆಗೆ ಹೋದರು. ಊಟವಾಗುವ ತನಕ ಮತ್ತು ಮಲಗುವ ಮುನ್ನ ದೀಪವಾರಿಸುವ ತನಕ ಇಬ್ಬರೂ ಮಾತಾಡುತ್ತಲೇ ಇದ್ದರೂ. ವೆಂಕಟ ಹೊರಜಗುಲಿಯಲ್ಲಿ ಮಲಗಿದ್ದ. ಲಕ್ಷ್ಮಿಯು ಒಳಗಿನ ಕೋಣೆಯಲ್ಲಿ, ಸ್ವಲ್ಪ ಹೊತ್ತಿಗೆ ವೆಂಕಟ ಸಣ್ಣ ಗೊರಕೆಯನ್ನು ಹೊಡೆಯಲು ಪ್ರಾರಂಭಿಸಿದ್ದ.

ಉದ್ದಕಾಲು ಲಕ್ಷ್ಮಿಗೆ ನಿದ್ದೆಯೇ ಬರಲಿಲ್ಲ. ಬಾಲ್ಯದಲ್ಲಿ ವೆಂಕಟನ ಜೊತೆಗೆ ಆಟವಾಡಿದ್ದರಿಂದ ಪ್ರಾರಂಭಿಸಿ ಇಲ್ಲಿಯವರೆಗೆ ನಡೆದುದು ಅವಳ ನೆನಪುಗಳಲ್ಲಿ ಹಾದು ಹೋಯಿತು. ಕಾಲು ಮಡಚಿಕೊಂಡು ಮಲಗಿದಳು. ನಿದ್ದೆ ಬರಲಿಲ್ಲ. ಓರೆ ಮಲಗಿದಳು, ನಿದ್ದೆ ಬರಲಿಲ್ಲ. ಹೊದ್ದುಕೊಂಡದ್ದನ್ನು ಕಾಲ ಬುಡಕ್ಕೆ ಹಾಕಿಕೊಂಡಳು ನಿದ್ದೆಯ ಸುಳಿವಿಲ್ಲ. ತಡೆಯಲಾಗದೆ ಮಹಾಲಕ್ಷ್ಮಿಯು ಎದ್ದು ಬಂದು ವೆಂಕಟನ ಹತ್ತಿರ ಮಲಗಿದಳು. ಅದು ಅವಳಿಗೆ ಸಂಪೂರ್ಣವಾಗಿ ತೃಪ್ತಿ ತಂದ ರೀತಿ. ವೆಂಕಟನಿಗೆ ತಿಳಿಯದಿರುವುದನ್ನು ಹೇಳಿಕೊಟ್ಟಳು. ಸತತವಾಗಿ ಐದು ದಿನವಿಡೀ ದೇಹದ ಮಹತ್ವವನ್ನೇ ಒಬ್ಬರಿಗೊಬ್ಬರು ತೋಡಿಕೊಂಡರು. ಆರನೆಯ ದಿನ ವೆಂಕಟ ಊರಿಗೆ ಹೋದ. ಅವನು ಹೊರಟಾಗ ಲಕ್ಷ್ಮಿಯ ಕಣ್ಣಂಚಿನಲ್ಲಿ ಕೊಂಚ ಅಳು. ಅವನು ಹೋದ ದಿನ ರಾತ್ರಿಯೇ ಬಡ್ಡಿ ಸುಬ್ಬಣ್ಣ ವಾಪಾಸಾದ. ಬಡ್ಡಿ ಸುಬ್ಬಣ್ಣ ಬಂದಾಗ ಅವನಿಗೆ ವಿಶೇಷ ಉಪಚಾರವನ್ನು ಮಾಡಿದಳು. ಅವಳಿಗೆ ಇದ್ದ ಪಾಪಪ್ರಜ್ಞೆಯೇ ಈ ಉಪಚಾರಗಳಿಗೆ ಕಾರಣವಾಯಿತು.

ಅವಳ ಆದರದ ಹೊಸ ಬಗೆಯನ್ನು ಕಂಡರೂ ಅದರ ಬಗ್ಗೆ ವಿಶೇಷ ಗಮನ ಕೊಡುವಷ್ಟು ವ್ಯವಧಾನ ಸುಬ್ಬಣ್ಣನಿಗಿರಲಿಲ್ಲ. ತಾನು ಹೋದ ಕೆಲಸವನ್ನು ಸಮರ್ಥವಾಗಿ ಮುಗಿಸಿ ಬಂದೆನೆನ್ನುವ ಉತ್ಸಾಹವಿತ್ತು. ಬಡ್ಡಿ ಅಸಲು ಎರಡೂ ವಸೂಲು ಮಾಡಿದ ಹುಮ್ಮಸ್ಸಿತ್ತು. ಜೀವನದಲ್ಲಿ ಮೊಟ್ಟಮೊದಲ ಬಾರಿಗೆ ಹೆಂಡತಿಗೆಂದು ಆ ದಿನ ತಂದು ಕೊಟ್ಟದ್ದು ನಾಕಾಣೆಯ ಮಲ್ಲಿಗೆ. ಅದು ದಂಡವಲ್ಲವೆಂದು ಸಮರ್ಥಿಸಿದ. ಉದ್ದಕಾಲು ಲಕ್ಷ್ಮಿಯು ಕೂಡ ಗಂಡ ತಂದು ಕೊಟ್ಟ ಮಲ್ಲಿಗೆಯನ್ನು ಮೂಸಿ ನೋಡಿ, 'ತುಂಬಾ ಚೆನ್ನಾಗಿದೆ. ಸಂಜೆ ಮಲ್ಲಿಗೆಯನ್ನು ಮುಡಿಯದೆ ತುಂಬಾ ವರ್ಷಗಳಾದವು' ಎಂದಳು. ತಾನು ಹೋದ ಮೇಲೆ, 'ಏನೇನು ವಸೂಲು ಮಾಡಿದೆ. ಬಡ್ಡಿಗೆ ಬಡ್ಡಿ ಸೇರಿಸಿ ಚಕ್ರ ಬಡ್ಡಿ ಹಾಕಿ ವಸೂಲು ಮಾಡಿದ ವಿವರವನ್ನು ಹೆಂಡತಿಗೆ ತಿಳಿಸಿದ. ಬಡ್ಡಿಗೆ ದುಡ್ಡು ತೆಗೆದುಕೊಂಡವನು ತನ್ನ ಕಾಲು ಹಿಡಿದದ್ದು. ಅವನ ಹೆಂಡತಿ ಕೊರಳಿನ ತಾಳಿಯನ್ನು ಕೂಡಾ ತೆಗೆದುಕೊಟ್ಟದ್ದು ಮೊದಲಾದವುಗಳನ್ನು ಮೊಟ್ಟ ಮೊದಲ ಬಾರಿಗೆ ವಿವರಿಸಿ ತಾನು ವಸೂಲು ಮಾಡಿ ತಂದ ಹಣದಲ್ಲಿ ಮಹಾಲಕ್ಷ್ಮಿಗೆ ಖರ್ಚಿಗೆಂದು ಒಂದು ರೂಪಾಯಿಯನ್ನು ತೆಗೆದು ಉದಾರವಾಗಿ ಕೊಟ್ಟ. ಮಲ್ಲಿಗೆಯನ್ನು ಮೂಸಿ ನೋಡಿದವಳು ಒಳಗಿನಿಂದ ಅದರ ಮೇಲೆ ನೀರು ಚಿಮುಕಿಸಿ ಬಾಳೆಲೆಯ ಮೇಲಿಟ್ಟಳು. ಒಳಗಡೆ ಮಲಗಿದ ಮಗು ಕನಸಿನಲ್ಲಿ ಸಣ್ಣಗೆ ಧ್ವನಿ ಹೊರಡಿಸಿತೆಂದು ಉದ್ದಕಾಲು ಲಕ್ಷ್ಮಿಯು ಕೋಣೆಯ ಒಳಗೆ ಹೋದಳು. ಸುಬ್ಬಣ್ಣ ತನ್ನ ಭದ್ರ ಕೋಣೆಯ ಒಳಗೆ ಹೋಗಿ ಬಾಗಿಲ ಚಿಲಕ ಹಾಕಿ ಹಣವನ್ನು ಭದ್ರಪಡಿಸಿ ಬರುವಾಗ ಮತ್ತೆ ಲಕ್ಷ್ಮಿಯು ಜಗುಲಿಯ ಮೇಲೆ ಕುಳಿತಿದ್ದಳು. ಎದುರುಗಡೆ ಚಿಮಿಣಿ ದೀಪವಿರಿಸಿ ಎಂಕಟನೊಂದಿಗಿನ ಅದ್ಭುತ; ಮಾಯಲೋಕದ ರಾತ್ರಿಗಳನ್ನು ನೆನಪಿಸಿಕೊಂಡಳು, ಎಂಕಟನೊಂದಿಗೆ ಕಳೆದ ರಾತ್ರಿಗಳ ಬಗ್ಗೆ ಅವಳತ್ರ ಮಾತುಗಳು ಇರಲಿಲ್ಲ. ಸುಬ್ಬಣ್ಣ ಕೊಡದಿದ್ದ ಅದ್ಭುತ ಅನುಭವಗಳಿದ್ದವು. ಮೊದಲ ದಿನದ ರಾತ್ರಿ ಎಂಕಟನ ಪಕ್ಕ ಮಲಗಿದಾಗ ತಟಕ್ಕನೆ ಅವನು ಎಚ್ಚರಗೊಂಡಿದ್ದ. ಎಂಕಟನ ಹತ್ತಿರ ಹೋದುದೇಕೆ? ಅದು ಗಂಡನ ಬಗೆಗಿನ ಅಸಹನೆಯೋ ಅಥವಾ ತನ್ನಲ್ಲಿ ಮೊಳೆತು ಬಂದ ದಾಹವೋ ಅವಳಿಗೆ ಅರ್ಥವಾಗಿರಲಿಲ್ಲ. ಎಂಕಟನಿಗೆ ಗೊತ್ತಿರಲಿಲ್ಲವೆಂದರೆ ಏನೂ ಗೊತ್ತಿರಲಿಲ್ಲ. ಅವನು ಜ್ವರದ ಕಾವು ಬಂದಂತೆ ನಡುಗಿಬಿಟ್ಟಿದ್ದ – ಒಂದೇ ಒಂದು ಕ್ಷಣ. ಮೊದಲನೆಯ ರಾತ್ರಿ ಕಳೆದು ತಕ್ಷಣ ಎದ್ದು ಬಂದು ತನ್ನ ಚಾಪೆಯಲ್ಲಿ ಮಲಗಿದವಳಿಗೆ ಗಂಡನಿಗೆ ದ್ರೋಹ ಮಾಡಿದೆನೆ? ಎನ್ನುವ ಭಾವವು ಬಂದುದು ಕೆಲವು ಕ್ಷಣ ಮಾತ್ರ. ಮರುದಿನ ಬೆಳಿಗ್ಗೆಯೆದ್ದಾಗ ಎಂಕಟನಿಗೆ ಹೇಗೆ ಮುಖ ತೋರಿಸಲಿ? ತಾನೇ ನಾಚಿಕೆ ಬಿಟ್ಟು ಅವನತ್ರ ಹೋಗಿ ಮಲಗಿದವಳು ಎಂದು ಅನಿಸಿದ್ದೂ ನಿಜ. ಮರುದಿನ ಬೆಳಿಗ್ಗೆ

ತಿಂಡಿ ತಿಂದು ಮುಗಿಸುವವರೆಗೆ ಏನೋ ಮುಜುಗರ. ಗಂಟಲಿನ ಪಸೆಯು ಆರಿದಂಥ ಅನುಭವ. ವೆಂಕಟನೂ ಅಷ್ಟೆ ಎಷ್ಟು ಬೇಕೋ ಅಷ್ಟೆ ಮಾತಾಡಿದ್ದ. ಎಲ್ಲಿಯೋ ನೋಡುತ್ತಾ. ಉದ್ದಕಾಲು ಲಕ್ಷ್ಮಿಯು ಮನೆಯೊಳಗಿದ್ದಾಗ ಎಂಕ್ಟ ತೋಟವೆಲ್ಲಾ ಸುತ್ತಿ ಬಂದ. ಸರಿಯಾಗಿ ಒಂದು ಗಂಟೆಗೆ ಬಂದು ಉಸ್ ಎಂದು ಕುಳಿತ. ಅವನೂ ಯಾವುದೋ ಸಂಕೋಚದಲ್ಲಿದ್ದಾನೆ ಎಂದು ಲಕ್ಷ್ಮಿಗೂ ಅರ್ಥವಾಯಿತು. ಊಟವಾಗಿ ಎಂಕ್ಟ ತಲೆದಿಂಬಿಗೆ ತಲೆಯೊಡ್ಡಿ ಮುಖದ ಮೇಲೆ ಬೈರಾಸ ಹೊದ್ದುಕೊಂಡು ಮಲಗಿದ. ಲಕ್ಷ್ಮಿಯು ಊಟವಾಗಿ ಬಂದು ನೋಡಿದಾಗ ಕಂಡದ್ದು ಅಷ್ಟೆ ಸೊಂಟಕ್ಕೆ ಪಂಚೆಯುಟ್ಟುಕೊಂಡಿದ್ದಾನೆ. ಮುಖದ ಮೇಲೆ ಬೈರಾಸ್ ಹೊದ್ದುಕೊಂಡಿದ್ದಾನೆ. ವೆಂಕಟನ ಬಿಳಿಯ ಬಣ್ಣ; ಗಂಡುಸಾದರೂ ತೆಳುವಾದ ಸೊಂಟ; ಎದೆಯ ಮೇಲೆ; ಗಲ್ಲದಲ್ಲಿ; ಕಂಕುಳಲ್ಲಿ ಕರಿ ಕೂದಲು ಮತ್ತೊಮ್ಮೆ ಇದನ್ನೆಲ್ಲಾ ನೋಡಿದ ಮೇಲೆ ಅನಿಸಿತು: – ಎಂಕ್ಟನನ್ನು ಮಾತಾಡಿಸಬೇಕು. ಮಲಗಿದ್ದ ಎಂಕ್ಟನನ್ನು ಮೆತ್ತಗೆ ಕರೆದಳು – 'ಎಂಕ್ಟ ಓ ಎಂಕ್ಟಾ'. ಪ್ರಾಯಶಃ ಅವನೂ ಅದೇ ನಿರೀಕ್ಷೆಯಲ್ಲಿದ್ದಂತೆ, 'ಏನೋ ತಪ್ಪಾಯಿತು. ಆದುದನ್ನು ಮರೆತು ಬಿಡು. ನನ್ನ ಮಾನ ಮರ್ಯಾದೆ ನಿನ್ನ ಕೈಯಲ್ಲಿದೆ' ಅಂದಳು. ಎಂಕ್ಟ ಏನೂ ಹೇಳದೆ ಅವಳನ್ನೂ ಅಪ್ಪಿಕೊಂಡ ಮೃದುವಾಗಿ. ಆದರೆ ಒಬ್ಬರಿಗೊಬ್ಬರು ಭಾವನೆಗಳನ್ನು ಹಂಚಿಕೊಳ್ಳುವಂತೆ. ಮಗು ಅಳದಿದ್ದರೆ ಹಾಗೆಯೇ ಎಷ್ಟು ಹೊತ್ತು ಇರುತ್ತಿದ್ದರೋ ಏನೋ? ಆ ದಿನ ರಾತ್ರಿ ಎಂಕ್ಟನೇ ಅವಳ ಬಳಿ ಬಂದ. ಅವಳನ್ನು ಕೈ ಹಿಡಿದು ಅಡುಗೆ ಮನೆಗೆ ಕರೆದೊಯ್ದು ಕತ್ತಲೆಯ ಬಳಸು ದಾರಿಯು ಇಷ್ಟವಿಲ್ಲವೆಂಬಂತೆ ಪಿಸು ನುಡಿಯಲ್ಲಿ "ದೀಪ ಆರಿಸು" ಎಂದ. ಉದ್ದಕಾಲು ಲಕ್ಷ್ಮಿಯು ದೀಪವಾರಿಸಲಿಲ್ಲ. ರವಿಕೆ ಲಂಗದಲ್ಲಿಯೇ ಎದ್ದು ದೀಪ ಸಣ್ಣ ಮಾಡಿದಳು. ಎಂಕ್ಟ ಕಣ್ಣು ತುಂಬುವಂತೆ ಅವಳನ್ನು ನೋಡಿದ. ಸುಮ್ಮನೆ ಅವಳನ್ನು ನೋಡುತ್ತಾ ಕುಳಿತ ಉಪಾಸಕನಂತಿರುವ ಅವನನ್ನು ಎಚ್ಚರಿಸಲು ಅವನ ಎದೆಯ ಮೇಲೆ ತಲೆಯಿಟ್ಟಳು. ಅವಳ ತೋಳು ಅವನನ್ನು ಆವರಿಸಿತು. ಹೆಣ್ಣು ಕೂಡಾ ಗಂಡನನ್ನು ಆವರಿಸಿಕೊಂಡರೆ ಆಗಬಹುದಾದ ಸುಖವೇನು ಅಂತ ಅವಳಿಗೆ ಅರ್ಥವಾಯಿತು. ಸುಬ್ಬಣ್ಣನ ಆಕ್ರಮಣಕ್ಕೆ ಒಪ್ಪಿಕೊಂಡ ತನ್ನ ದೇಹದ ಆಕ್ರಮಣಕ್ಕೆ ಒಪ್ಪಿಸಿಕೊಂಡ ಎಂಕ್ಟನ ಬಗ್ಗೆ ಖುಷಿಯೆನಿಸಿತು. ಹೆಣ್ಣಿನ ಆಕ್ರಮಣಕ್ಕೆ ಒಡ್ಡಬೇಕಿಲ್ಲ. ತಾನೇ ಆಕ್ರಮಿಸಲೂಬಹುದು. ಈ ಎಲ್ಲವನ್ನೂ ಆಲೋಚಿಸುತ್ತಾ ಕೂತವಳಿಗೆ ಗಂಡ ಹತ್ತಿರ ಬಂದು ಕೂತದ್ದು ಕೂಡಾ ಗೊತ್ತಾಗಲಿಲ್ಲ. ಅವಳ ಸರಿದ ಸೆರಗು ಚಿಮಿಣಿ ದೀಪದ ಬೆಳಕಿಗೆ ನೆಟ್ಟದೃಷ್ಟಿಯು ಸುಬ್ಬಣ್ಣನಿಗೂ ಹುಚ್ಚೆಬ್ಬಿಸಿತು. ಮುಹೂರ್ತ ಕೇಳುವ ಸಮಯವಲ್ಲ ಅವನಿಗೆ. ಇನ್ನೇನು ಹತ್ತಿರ ಬಂದ ಅವನ ಮುಖವನ್ನು ನೋಡಿದ ಉದ್ದಕಾಲು ಲಕ್ಷ್ಮಿಯು ತಳ್ಳಿದಳು. ಯಾಕೆ ಎಂದು ಸುಬ್ಬಣ್ಣನಿಗೆ

ಅರ್ಥವಾಗಲಿಲ್ಲ. ತಾನು ಏನು ಮಾಡಿದೆ ಎಂಬುದು ಲಕ್ಷ್ಮಿಗೂ ಅರಿವಾಯಿತು. ಅದಕ್ಕಾಗಿಯೇ ಅಂದಳು 'ಈವತ್ತಿನ ದಿನ ಚೆನ್ನಾಗಿಲ್ಲ ಬೇಡ" ಸುಬ್ಬಣ್ಣ ಮೌನಿಯಾದ. ಅಲ್ಲಿಂದ ಅನಂತರ ಸುಬ್ಬಣ್ಣನ ಬಡ್ಡಿ ವ್ಯಾಪಾರ ಹೆಚ್ಚಾಯಿತು. ಹೊರಗಿನ ತಿರುಗಾಟ ಹೆಚ್ಚಾಯಿತು ಮತ್ತು ಉದ್ದಕಾಲು ಲಕ್ಷ್ಮಿಯು ಗಂಡುಮಗು ಹೆತ್ತು ಸುಬ್ಬಣ್ಣನ ವಂಶವನ್ನು ಉದ್ಧರಿಸಿದಳು. ಸದಾ ಕಾಲ ಎಂಕ್ಟನ ನೆನಪು ಸಾಕ್ಷಿ ಸಮೇತ ಇರುವಂತೆ ನೋಡಿಕೊಂಡಳು. ಮುಂದೆ ಎಂಕ್ಟ ಮತ್ತು ಉದ್ದಕಾಲು ಲಕ್ಷ್ಮಿ ಪರಸ್ಪರ ಭೇಟಿಯಾದರೂ ಅವರಿಬ್ಬರ ಕಣ್ಣುಗಳು ಪರಸ್ಪರ ಅಳತೆ ಮಾಡುತ್ತಿತ್ತು. ಅದೂ ಕೆಲವು ವರ್ಷ ಎಂಕ್ಟನ ಕಣ್ಣು ಬಯಸಿದ್ದರೂ ಉದ್ದಕಾಲು ಲಕ್ಷ್ಮಿಯೂ ಪೂರ್ತಿಯಾಗಿ ಸೆರಗು ಹೊದ್ದು ಸುಬ್ಬಣ್ಣನ ಸಂಕೀರ್ತನೆ ಮಾಡುತ್ತ ಕಾಲ ಕಳೆದಳು. ಕಳೆದ ಸ್ಮೃತಿಗಳು ಅವಳಲ್ಲಿ ಹಸಿರಾಗಿತ್ತು. ಸುಬ್ಬಣ್ಣನು ಗಂಡು ಮಗು ತನ್ನ ವಾರುಸದಾರನಾದುದಕ್ಕೆ ಲಕ್ಷ್ಮಿಯನ್ನು ಹೊಗಳುತ್ತಾ ಕಾಲ ಕಳೆದ. ಮಳ್ಳಿ ಲಕ್ಷ್ಮಿಯ ಲೆಕ್ಕದಲ್ಲಿ ಮಂಚಕ್ಕೆ ಮೂರೆ ಕಾಲು!

ಎಷ್ಟೋ ವರ್ಷಗಳ ತರುವಾಯ ಇದು ಕರಿಪರಮೇಸ್ವರಿಯ ಮೂಲಕ ಜಗತ್ತಿಗೆ ಗೊತ್ತಾಯಿತು. ಸುಬ್ಬಣ್ಣನಿಗೆ ಇದು ತಿಳಿದರೂ ಅವನು ಹೆಂಡತಿಯನ್ನು ಬಿಡಲಾಗಲಿಲ್ಲ. ಅದಕ್ಕಾಗಿಯೇ "ಅಂಡೆ ಬಾಯಿ ಕಟ್ಟಬಹುದು; ದೊಂಡೆ ಬಾಯಿ ಕಟ್ಟಲಿಕ್ಕೆ ಆಗುತ್ತದಾ? 'ನನಗೆ ಗಂಡು ಮಗ ಆದ್ದನ್ನು ನೋಡಲಿಕ್ಕೆ ಆಗದೆ ಹೀಗೆ ಪ್ರಚಾರ ಮಾಡಿದ್ದಾರೆ' ಎಂದು ಹೇಳಿಕೊಂಡು ಓಡಾಡಿದ. ಸುಬ್ಬಣ್ಣನ ಮಗ ಮಾತ್ರ ಪೆದ್ದು ಪೆದ್ದು. ಬಾಲ್ಯದಿಂದಲೇ ಅವನು ತನ್ನ ಕಡೆ ಬಾಯಲ್ಲಿ ಜೊಲ್ಲು ಸುರಿಸುತ್ತಿದ್ದ.ಏನು ಮಾಡಿದರೂ ಅಕ್ಷರಗಳನ್ನು ಕಲಿಯಲು ಆಗುತ್ತಿಲಿಲ್ಲ.ಸ್ಲೇಟಿನಲ್ಲಿ ಅ ;ಆ ;ಇ;ಈ ಇಷ್ಟನ್ನು ಬರೆಯಲು ಮಾಷ್ಟರು ಹೇಳಿಕೊಡುತ್ತಿದ್ದರು. ಅವರು ಚಾಕಿನ ಮೇಲೆ ಬರೆದುದನ್ನು ಮತ್ತೆ ಕಡ್ಡಿಯಲ್ಲಿ ಬರೆಯ ಬೇಕಿತ್ತು.ಸುಬ್ಬಣ್ಣನ ಮಗ ಹತ್ತು ಸರ್ತಿ ಬರೆದರು ಕಲಿಯುತ್ತಿಲಿಲ್ಲ. ಬರೆದುದನ್ನು ಒರೆಸಲು ನಾಲಿಗೆಯ ಎಂಜಲು ಹಾಕಿ ಒರಸುತ್ತಿದ್ದ. ಅವನ ಹೆಸರು ಶಂಭಟ್ಟ. ಅವನನ್ನು ಶಾಲೆಯಲ್ಲಿ ಅಂಬಟೆಯೆಂದು ಕರೆಯುತ್ತಿದ್ದರು. ಕಡೆ ಬಾಯಲ್ಲಿ ಅವನು ಸುರಿಸುತ್ತಿದ್ದ ಎಂಜಲು: ಅವನು ಹಲ್ಲುಜ್ಜದೆ. ಸ್ನಾನ ಮಾಡದೆ ಬರುತ್ತಿದ್ದ ಕ್ರಮ ಎಲ್ಲರ ಮನೆ ಮಾತಾಯಿತು. ಸುಬ್ಬಣ್ಣನ ವಂಶೋದ್ಧಾರಕನ ಪರಿಸ್ಥಿತಿ ನಗೆಪಾಟಲಿನ ವಿಷಯ. ಅಂಬಟೆಗೆ ಹದಿನೈದು ತುಂಬಿದಾಗ ಉದ್ದಕಾಲು ಲಕ್ಷ್ಮಿಗೆ ಅರೆ ಮರ್ಲು ಹಿಡಿಯಿತು. ಅದಕ್ಕೆ ಕಾರಣವೂ ಸುಬ್ಬಣ್ಣ. ಒಮ್ಮೊಮ್ಮೆ ಅವಳು ಜೋರಾಗಿ ಸುಬ್ಬಣ್ಣನನ್ನು ಹೆಸರು ಹಿಡಿದು ಕರೆಯುತ್ತಿದ್ದಳು. 'ಸುಬ್ಬಣ್ಣ ಏಯ್ ಸುಬ್ಬಣ್ಣ, ಇಲ್ಲಿ ಬಾ ಈವತ್ತು ಮುಹೂರ್ತ ಚೆನ್ನಾಗಿದೆ' ಅಂತಲೋ, 'ಸುಬ್ಬಣ್ಣ ನನ್ನ ತಲೆ ಬಾಚು,' ಅಂತಲೊ ಕರೆಯತ್ತಿದ್ದುದು

ಅವನಿಗೆ ನುಂಗಲಾರದ ತುತ್ತಾಗಿತ್ತು. ಅದಕ್ಕೆ ಸುಬ್ಬಣ್ಣ ಅವಳನ್ನು ಕೋಣೆಯಲ್ಲಿ ಹಾಕಿ ಹೊರಗಡೆಯಿಂದ ಬೀಗ ಹಾಕುತ್ತಿದ್ದ. ಸುಬ್ಬಣ್ಣ ಖಯಾಲಿಗಾಗಿ ಇರಿಸಿಕೊಂಡಿದ್ದ ಬೀಡಿಯನ್ನು ಅವಳೂ ಸೇದುತ್ತಿದ್ದಳು. ಸುಬ್ಬಣ್ಣ 'ಮುಂಡೆ ಬೀಡಿ ಸೇದಬೇಡ; ಹೋಗಿ ಬಿದ್ದು ಕೋ' ಎಂದರೆ 'ನೀನು ಬಂದು ನನ್ನ ಹತ್ರ ಬಿದ್ದು ಕೋ' ಎನ್ನುತ್ತಿದ್ದುದರಿಂದ ಅವನೂ ಬಾಯಿ ಮುಚ್ಚಿ ಇರಬೇಕಾಗುತ್ತಿತ್ತು.

* * * * *

ಆಗ ನಾನು ನನ್ನ ಮನೋಸ್ಥಿತಿಯನ್ನು ಬೇರೆ ಕಡೆಗೆ ಕೊಂಡೊಯ್ಯಬೇಕಾಗಿತ್ತು. ಕೆಸರಿನಲ್ಲಿ ಹೂತು ಹೋಗಿದ್ದೇನೆ ಅದೆಲ್ಲವನ್ನು ನಾನು ದಾಟದೆ ಹೋದರೆ ಸಂಪೂರ್ಣ ಕೊಲೇಪ್ಸ್ ಆಗುತ್ತೇನೇನೊ ಎಂದು ಅನಿಸಿತು. ಮನಸ್ಸು ಎಲ್ಲದರಲ್ಲಿಯೂ ಶೂನ್ಯ ಆವರಿಸಿದ ವೇಳೆ. ಆಗಲೂ ಅಷ್ಟೇ – ನನಗೆ ಮಂಕು ಕವಿದ ಹಾಗೆ ಅನಿಸುತ್ತಿತ್ತು. ಕಾಲೇಜಿನ ರಂಗು ರಂಗಿನ ಜೀವನ ನನಗೆ ಇಷ್ಟವಾಗುತ್ತಿರಲಿಲ್ಲ. ಒಂದು ಸಣ್ಣ ಅಂಜಿಕೆ, ಇದ್ದಕ್ಕಿದ್ದಂತೆ ಆವರಿಸಿಕೊಂಡು ಬಿಡುವ ಕೀಳರಿಮೆ. "ಅವಳು" ಎಂಬ ಬೇನಾಮಿ ನನ್ನ ಬಗ್ಗೆ ಇಲ್ಲ ಸಲ್ಲದನ್ನು ಹೇಳಿ ನನ್ನ ಮನಸ್ಸನ್ನು ಪೂರ್ತಿಯಾಗಿ ನುಂಗಿ ಹಾಕಿದ್ದಳು. ಅದೂ ಈವತ್ತು ಕೂಡಾ ಕಾಡುತ್ತಿದೆ. ನಾನು ನಾನಾಗಿಯೇ ಅವಳ ಮೈಮೇಲೆ ಬಿದ್ದಿರಲಿಲ್ಲ. ನನಗೆ ಹುಡುಗಿಯರ ಬಗ್ಗೆ ಯಾವ ತಿಳುವಳಿಕೆ ಇರಲಿಲ್ಲ. ಅವಳು ನನ್ನನ್ನು ಅಪರಾಧಿಯನ್ನಾಗಿ ಮಾಡಿದಳು. ಅದು ಅವಳ ವಯೋಸಹಜವಾದ ನಡವಳಿಕೆಯಿರಬಹುದು, ಆದರೆ ನಾನು ಆತಂಕಕ್ಕೆ ಗುರಿಯಾಗಿದ್ದೆ. ಅದರಿಂದ ನಾನು ತಪ್ಪಿಸಿಕೊಳ್ಳಲು ಮಾಡದ ಪ್ರಯತ್ನವಿಲ್ಲ. ಸಂಜೆಯಾದರೆ ಸಾಕು ನನಗೆ ಅವಳು ನೆನಪಿಗೆ ಬರುತ್ತಿದ್ದಳು. ಮಾಡದೇ ಇದ್ದುದಕ್ಕೆ ನಾನು ಬಲಿಪಶು ಆಗಿರುವುದಕ್ಕೆ ಇದ್ದಕ್ಕಿದ್ದಂತೆ ಕಂಗಾಲಾಗಿ ಬಿಡುತ್ತಿದ್ದೆ, ಸಂಜೆಯಾದರೆ ಸಾಕು – ಯಾಕೋ ಏನೇನೋ ನೆನಪುಗಳು. ಅವಳು ನನ್ನ ದೇಹವನ್ನು ಮನಸ್ಸನ್ನು ಲೂಟಿ ಮಾಡಿದ್ದಳು. ಒಬ್ಬಂಟಿತನ ನನ್ನನ್ನು ಪೀಡಿಸಿದ್ದು ಹಾಗೀಗೆ ಅಲ್ಲ. ಶಾಂಭವಿಯೂ ನನ್ನ ಜೊತೆಗೆ ಇರುತ್ತಿರಲಿಲ್ಲ.ಅದು ನನ್ನ ಮಟ್ಟಿಗೆ ಭಯಾನಕ ದಿನಗಳು ಏನು ಮಾಡಬೇಕು? ಎಲ್ಲಿ ಹೋಗಬೇಕು? ಏನು ಕತೆ? ಇದ್ಯಾವುದರ ಪರಿವೆಯು ನನಗಿರಲಿಲ್ಲ. ಕಂಗಾಲಾಗಿದ್ದೆ. ಒಬ್ಬಂಟಿಯಾಗಿದ್ದಾಗ ಬೇಜಾರಿನಲ್ಲಿ ಗೇರು ಬೀಜದ ಮರದ ಕೆಳಗೆ ಕೂತಿರುತ್ತಿದ್ದೆ. ನೀರಿನಲ್ಲಿ ಅವಳ ದೇಹ ಒದ್ದೆಯಾಗಿದ್ದ ಸನ್ನಿವೇಶದಲ್ಲಿ ಅವಳನ್ನು ನೋಡಿದ್ದೆ. ಮೊದಲ ಬಾರಿ ನಾನು ಸರಿಯಾಗಿ ನೋಡಿದ ಹೆಣ್ಣು ಅವಳು. ಬಿಳಿಯಾದ ದೇಹ, ಬಿಳಿಯಾದ ಮುಖ; ಬಿಳಿಯಾದ ಮೈ –ಅದಕ್ಕೆ ರೂಪಕಗಳು ಇದ್ದಿರಲಿಲ್ಲ, ನೀರಿನ ಚಳಿಯಲ್ಲಿ ನಾನು ಮುಟ್ಟಿದ ದೇಹವದು, ಅರೆ

ನಗ್ನ ದೇಹದ ಓರೆಕೋರೆಗಳು ನನ್ನ ಹುಚ್ಚೆಬ್ಬಿಸಿದಂತೆ ಅವಳು ನನ್ನನ್ನು ನೋಡಿದ್ದರಲ್ಲಿಯೂ ಅದೇ ನೋಟವಿತ್ತು. ತನ್ನ ಬೆರಳುಗಳಲ್ಲಿ, ಕೈಯಲ್ಲಿ ನನ್ನನ್ನು ಮುಟ್ಟಿದ ರೀತಿಯಲ್ಲಿ; ಅವಳ ಅಧರದ ಅಗಸ್ತ್ಯ ಪಾನಕ್ಕೆ ಬೇರೆ ಮಾದರಿಗಳು ಇರಲಿಲ್ಲ. ನಿಧಾನವಾಗಿ ನನ್ನ ದೇಹದ ಅಂಗುಲ ಅಂಗುಲದಲ್ಲಿ ಕಾಡಿದಳು. ಇದನ್ನೆಲ್ಲಾ ನೆನೆದು ನಾನು ಮತ್ತಷ್ಟು ಖಿನ್ನನಾಗಿ ಬಿಟ್ಟೆ. ಅವಳು ನನ್ನನ್ನು ಅವಮಾನ ಮಾಡಿದ ಕ್ರಮ ಮಾತ್ರ ನಾನು ಮರೆಯುವ ಹಾಗಿರಲಿಲ್ಲ, ನನಗೆ ಅವಳು ಕಾಡಿದ್ದಕ್ಕೆ: ನಾನು ಪ್ರಾಯಶ್ಚಿತ್ತ ಅನುಭವಿಸಲೇ ಬೇಕಿತ್ತು . ನನ್ನ ಜೀವನದಲ್ಲಿ ರಣ ರಣವೆನಿಸಿದ ಆ ಗಳಿಗೆಯನ್ನು ದಾಟುವ ಬಗೆ ತಿಳಿಯದೆ ಚಡಪಡಿಸುತ್ತಿರುವಾಗ ನನಗೆ ಒಂದು ದಾರಿಯನ್ನು ಕೊಟ್ಟದ್ದು – ಆ ಮಳೆಗಾಲ. ಅದನ್ನು ಮರೆಯಬೇಕೆಂದರೂ ಮರೆಯಲಾಗದು.ಅದು ಕೂಡಾ ನನಗೆ ಆಕಸ್ಮಿಕ. ಜೀವನದಲ್ಲಿ ಎದರಾಗುವ ಆಕಸ್ಮಿಕಗಳು ಯಾವುದೋ ರೀತಿಯಲ್ಲಿರುತ್ತವೆ. ಎದುರಾಗುತ್ತವೆ.

**[ನಿಶಿತ ಡೈರಿಯ ಕೆಲವು ಸಾಲು ಬಿಟ್ಟು ಬರೆದಿದ್ದ. ಕೆಳಗಡೆ ಸಣ್ಣ ಅಕ್ಷರದಲ್ಲಿ,]**

**ಕೆಲವು ನೆನಪುಗಳು ಕಠೋರವಾದ್ರೆ ಮತ್ತೆ ಕೆಲವು ನೆನಪುಗಳು ನಮ್ಮನ್ನು ಬಿಕ್ಕಟ್ಟಿನಿಂದ ಪಾರು ಮಾಡುತ್ತವೆ, ಅದು ನಿಜ. ನಮ್ಮ ನಮ್ಮ ವಾಸ್ತವಗಳನ್ನು ನಾವು ಬಿಚ್ಚಿಡುವುದು ಕಷ್ಟ, ಅವಳ ಮತ್ತು ನನ್ನ ಸಂಬಂಧ ನಿಷೇಧಿತವಾಯಿತು, ಬೇರೆ ದಾರಿಯು ಸಿಕ್ಕದೇ ಹೋಗಿದ್ದರೆ...............**

**[ಇಷ್ಟಕ್ಕೆ ಅವನು ನಿಲ್ಲಿಸಿದ್ದ. ಮತ್ತೆ ಏನೋ ಗೆರೆಯೆಳೆದಿದ್ದ. ತುಂಬಾ ಅಸ್ಪಷ್ಟವಾಗಿತ್ತು.]**

ಜೋರು ಮಳೆಯು ಬೀಳುತ್ತಿದ್ದ ಸನ್ನಿವೇಶದಲ್ಲಿ ಊರಿನ ಪ್ರಾಥಮಿಕ ಶಾಲೆಗೆ ಟ್ರಾನ್ಸಫರ್ ಆಗಿ ಬಂದವರು – ಕೇ.ಟಿ. ಭಟ್ರು. ಗಟ್ಟಿಯಾದ ಆಳು. ಅವರನ್ನು ನರಿಮೊಗ್ರು ಶಾಲೆಯಿಂದ ನಮ್ಮೂರಿಗೆ ವರ್ಗಾವಣೆ ಮಾಡಲಾಗಿತ್ತು. ದಪ್ಪನೆಯ ಕನ್ನಡಕ ಅವರಿಗೆ. ಬಿಳಿಯ ಪಂಚೆ. ಪ್ರತಿ ಕ್ಲಾಸಿಗೆ ಹೋಗುವುದರ ಮೊದಲು ಅವರು ಒಂದು ಬೀಡಿ ಸೇದುತ್ತಿದ್ದರು. ಕನ್ನಡ ಕ್ಲಾಸು ಅವರದು. ಸಿಟ್ಟು ಅವರ ಜೊತೆಗೆ ಸದಾ ಇರುತ್ತಿದ್ದುದರಿಂದ ಅವರ ಹತ್ತಿರ ಉಳಿದವರು ಹೋಗಲು ಹೆದರುತ್ತಿದ್ದರು. ಅವರ ಸಿಟ್ಟಿನ ನಿಜವಾದ ದರ್ಶನವಾಗಿದ್ದು ಜುಲೇಖನ ವಿಷಯದಲ್ಲಿ. ಮಮ್ಮದೆ ಬ್ಯಾರಿಯವರ ಒಬ್ಬಳೇ ಮಗಳು ಅವಳು. ಎರಡನೆ ಕ್ಲಾಸು ದಾಟಿದ ಮೇಲೆ ಅವಳು ತಂದೆಯ ಹತ್ತಿರ ನಾನು ಶಾಲೆಗೆ ಹೋಗುವುದಿಲ್ಲವೆಂದು ಹಟಹಿಡಿದಳು. ಮಮ್ಮದೆ ಬ್ಯಾರಿಯ ಜೊತೆ ಶಾಲೆಯ ಹತ್ತಿರದ ತನಕಬರುವುದು ಅವರು ಅಂಗಡಿಯ ಕಡೆಗೆ ಹೋದ ಮೇಲೆ ಜುಲೇಖ

ಈ ಕಡೆಯಿಂದ ತಪ್ಪಿಸಿಕೊಳ್ಳುವುದು ಮಾಡುತ್ತಿದ್ದಳು. ಸುಮಾರು ದಿನ ಅವಳು ತಂದೆ ಆಕಡೆಗೆ ಹೋದ ಮೇಲೆ ಈಕಡೆಯಿಂದ ಜಾಗ ಖಾಲಿ ಮಾಡುತ್ತಿದ್ದಳು. ಮತ್ತೆ ಮಮ್ಮದೆಯವರು ಶಾಲೆಯ ಬೆಲ್ಲಾಗುವ ತನ್ಕ ನಿಂತು; ಅವಳನ್ನು ಕ್ಲಾಸಿಗೆ ಬಿಟ್ಟು ನಂತರವೇ ಅಂಗಡಿಯ ಬೀಗ ತೆಗೆಯಲು ಹೋಗುತ್ತಿದ್ದರು. ಜುಲೇಖ ಅದಕ್ಕೂ ಕೂಡಾ ಮತ್ತೊಂದು ಉಪಾಯ ಹುಡುಕಿದಳು. ಹನ್ನೊಂದು ಗಂಟೆಗೆ ಒಂದಕ್ಕೆ ಬಿಟ್ಟಾಗ, ಜುಲೇಖ ಮೆಲ್ಲನೆ ಚೀಲ ತೆಗೆದುಕೊಂಡು ಓಡಿ ಹೋಗಿ ಮಧ್ಯಾಹ್ನದ ತನಕ ಮಾವಿನ ಮರದ ಕೆಳಗೆ ಕೂತಿರುವುದು, ಅನಂತರ ಮನೆಗೆ ಓಡುವುದು ಮಾಡುತ್ತಿದ್ದಳು. ಇದು ತಿಳಿದ ಮಮ್ಮದೆ ಬ್ಯಾರಿಯವರು ಆಗ ತಾನೆ ಹೊಸದಾಗಿ ಬಂದ ಕೇ.ಟಿ ಭಟ್ರೀಗೆ ವಿಷ್ಯ ಹೇಳಿ ಹೇಗಾದರೂ ತಮ್ಮ ಮಗಳಿಗೆ ಹೊಡೆದು ಬಡಿದು ಆದ್ರೂ ಸರಿ ಶಾಲೆಯಲ್ಲಿ ಸರಿಯಾಗಿ ಪಾಠ ಕಲಿಯುವಂತೆ ಮಾಡಬೇಕು" ಎಂದು ವಿನಂತಿಸಿದರು. ಕೇ.ಟಿ ಇದೇ ತಮಗೆ ಸರಿಯಾದ ಸಮಯವೆಂದು ಸಿವನತ್ರ ಹೋಗಿ ಒಂದು ಹುಣಿಸೆಯ ಅಡರು ತರುವಂತೆ ಹೇಳಿದರು. ಅವನಿಗೂ ವಿಷಯ ಸರಿಯಾಗಿ ತಿಳಿಯಲಿಲ್ಲ. ಹೊಸ ಮೇಷ್ಟ್ರರಿಗೆ ಅಗತ್ಯವಿರಬಹುದೆಂದು ಹೋಗಿ ತಂದ. ಕೇ.ಟಿ ಶಾಲೆಯ ಪ್ರಾರ್ಥನೆಯು ಮುಗಿದ ಕೂಡಲೆ ಏಕ್ದಂ ಜುಲೇಖಗೆ ಹೊಡೆದೇ ಬಿಟ್ಟರು. ಅಂದಿನಿಂದ ಕೇ.ಟಿಯರಿಗೆ ಹೆದರದಿದ್ದ ಹುಡುಗರಿಲ್ಲ. ಅವರಿಗೆ ಊರಿನಲ್ಲಿ ಉಳಿದು ಕೊಳ್ಳಲು ವ್ಯವಸ್ಥೆ ಮಾಡಿದವರು –ಬೆಟರುಮೆಂಟ್ ಕಮಿಟಿಯವರು. ಇವರು ಶಾಲೆಯಲ್ಲಿ ಹೊಸ ಪದ್ಧತಿಯನ್ನು ಪ್ರಾರಂಭಿಸಿದರು. ಹೇಗೂ ಒಬ್ಬಂಟಿಗ. ಹೆಂಡತಿ ಮಕ್ಕಳು ಅವರ ಊರಲ್ಲಿದ್ದುದರಿಂದ ಅವರಿಗೆ ಹೊತ್ತು ಹೋಗುತ್ತಿರಲಿಲ್ಲ. ಆಗ ಪ್ರಾರಂಭವಾದುದು ಪ್ರತಿ ಶುಕ್ರವಾರ ಶಾಲೆಯಲ್ಲಿ ಸಂಜೆ ಭಜನೆಯ ಕಾರ್ಯಕ್ರಮ ಮತ್ತು ಶನಿವಾರ ತಾಳಮದ್ದಲೆ. ಶುಕ್ರವಾರದ ಭಜನೆಯಲ್ಲಿ ದೇವರಿಗೆ ಪ್ರಸಾದವೆಂದು ಅವಲಕ್ಕಿಯನ್ನು ಬೆರಸಿ ಕೊಡಲಾಗುತ್ತಿತ್ತು. ಅವಲಕ್ಕಿಯನ್ನು ಬೆರೆಸುವುದು, ಗ್ಯಾಸುಲೈಟು ಉರಿಸುವುದು, ಸಿವನ ಕೆಲಸ. ಸಂಜೆ ಆರು ಗಂಟೆಯಿಂದ ಏಳು ಗಂಟೆಯವರೆಗೆ ಭಜನೆಯ ಕಾರ್ಯಕ್ರಮವಾದುದರಿಂದಲ್ಲಿಗೆ ಎಲ್ಲರೂ ಬರುತ್ತಿದ್ದರು. ಭಜನೆಯ ಕೆಲ್ಸ ಮುಗಿದ ಮೇಲೆ ಊರಿನ ಕುಡುಕ ಸಂಘದವರು ಕುಡಿಯಲು ಹೋಗುತ್ತಿದ್ದರು. ನಾನು ಈ ಭಜನೆಯ ಕಾರ್ಯಕ್ರಮಕ್ಕೆ ಹೋಗುತ್ತಿರಲಿಲ್ಲ. ನನಗೆ ಇದು ಅರ್ಥಹೀನವೆಂದು ಅನಿಸುತ್ತಿತ್ತು. ತಾಳ ಹಿಡಿದುಕೊಂಡು, 'ನೀನ್ಯಾಕೋ ನಿನ್ನ ಹಂಗ್ಯಾಕೊ' ಎಂದು ಹೇಳುವುದು ಬೇಜಾರೆನಿಸುತ್ತಿತ್ತು.

ಇದೇ ಸಮಯದಲ್ಲಿ ಭಟ್ಟರು ತಮ್ಮ ಖಯಾಲಿಗಾಗಿ ಪ್ರತಿ ಶನಿವಾರ ತಾಳಮದ್ದಲೆ ಶುರು ಮಾಡಿದರು. ರಾತ್ರಿ ಹತ್ತು ಗಂಟೆಯಿಂದ ಬೆಳಗಿನ ಜಾವದ ವರೆಗೆ ತಾಳಮದ್ದಲೆ. ಕರಿಯಾಚಾರಿಯು ಮದ್ದಲೆಗಾರ. ಗಣಪಣ್ಣ ಚೆಂಡೆಗೆ.

ಪದ ಹೇಳಲು – ಬರುತ್ತಿದ್ದವರು ಮಚ್ಚಿನಬೈಲಿನ ಗೋವಿಂದಣ್ಣ. ಶ್ರುತಿ ಜ್ಞಾನ ಚೆನ್ನಾಗಿದ್ದರೂ ತಾಳ ಅಷ್ಟಕ್ಕಷ್ಟೇ. ಕರಿಯಾಚಾರಿಯು ಸುಮ್ಮನೆ ಕೂರುವವನಲ್ಲ. ಮದ್ದಳೆಗೆ ಆಗಾಗ ಮೆಲ್ಲಗೆ ಹೊಡೆಯುತ್ತಾ ತಾನು ಮದ್ದಲೆಗಾರ ಎಂದು ಸೂಚಿಸುತ್ತಿದ್ದ. ಗಣಪಣ್ಣ ನಾದರೋ ತನ್ನ ಚೆಂಡೆಯಿಂದ ಇಡೀ ಊರಿನವರನ್ನು ಎಚ್ಚರಿಸುತ್ತಿದ್ದ. ಒಟ್ಟು ತಾಳಮದ್ದಲೆ ಊರಿನಲ್ಲಿ ಹೊಸ ವಾತಾವರಣವನ್ನು ಸೃಷ್ಟಿಸಿತು. ರಾತ್ರಿ ಊಟವಾದ ಮೇಲೆ ಮನೆಯಲ್ಲಿ ಹೊತ್ತು ಹೋಗದವರು, ರಾತ್ರಿ ಸ್ವಲ್ಪ ಏರಿಸಿಕೊಂಡವರು, ಮುದುಕರು, ನಿದ್ದೆ ಬಾರದವರು, ಭಜನೆಯವರು ಶಾಲೆಯಲ್ಲಿ ಸೇರುತ್ತಿದ್ದರು. ಸಿವ ಆರು ಗಂಟೆಗೆ ಹೋಗಿ ಮಮ್ಮದೆಯವರ ಅಂಗಡಿಯಿಂದ ಗ್ಯಾಸುಲೈಟು ತರುತ್ತಿದ್ದ. ಮಮ್ಮದೆಯವರು ತುಂಬಾ ಉದಾರವಾಗಿ ಅದನ್ನು ಕೊಡುತ್ತಿದ್ದುದು ಬೇರೆ ಯಾವುದಕ್ಕೂ ಅಲ್ಲ. – ತಾಳಮದ್ದಲೆಯಿಂದ ಅವರಿಗೆ ಎಲೆಯಡಿಕೆ, ಹೊಗೆಸೊಪ್ಪು, ಬೀಡಿ, ಹುರಿಕಡ್ಲೆ ಹೆಚ್ಚು ವ್ಯಾಪಾರವಾಗುತ್ತಿತ್ತು. ರಾತ್ರಿ ಸ್ವಲ್ಪ ಹಾಕಿಕೊಂಡು ಬಂದವರಿಗೆ ಹುರಿಕಡ್ಲೆ, ಚಕ್ಕುಲಿ, ಅತ್ಯಂತ ಆವಶ್ಯಕ. ಆ ದಿವಸ ಮಾತ್ರ ಪೈಗಳ ಹೋಟೇಲು ಕೂಡಾ ಹತ್ತು ಗಂಟೆಯ ವರೆಗೆ ಇರುತ್ತಿತ್ತು. ಅವರಿಗೂ ಚಟ್ಟಂಬಡೆ, ಗೋಳಿಬಜೆ, ಬನ್ಸಿನ ವ್ಯಾಪಾರ ಹೆಚ್ಚು. ಒಮ್ಮೊಮ್ಮೆ ಅವರು ಹೊಟೇಲಿನ ಬಾಗಿಲು ಮುಚ್ಚಿ ತಾಳಮದ್ದಲೆಗೆ ಬಂದು ಕೂರುತ್ತಿದ್ದು ಉತ್ಸಾಹದಿಂದ ತಲೆಯಲ್ಲಾಡಿಸುತ್ತಿದ್ದರು. ರಾತ್ರಿಯ ವರೆಗೆ ಬೀಡಿಕಟ್ಟಿ ಸುಸ್ತಾದ ಹುಡುಗಿಯರು ಈ ಸಮಯಕ್ಕಾಗಿಯೇ ಕಾದು ಕೂತವರಂತೆ ಕಣ್ಣಿಗೆ ಕಾಡಿಗೆ ಹಚ್ಚಿ .ವಾಯಿಲ್ ಸೀರೆ ಉಟ್ಟು ಕೊಂಡು ಹತ್ತು ಗಂಟೆ ಹಾಜರಾಗಿ ತಾಳಮದ್ದಲೆಗೆ ಉತ್ಸಾಹ ತುಂಬುತ್ತಿದ್ದರು. ಅವರಿಲ್ಲವಾದರೆ ಅರ್ಥದಾರಿಗಳಿಗೆ ಉಮೇದು ಇರುತ್ತಿರಲಿಲ್ಲ. ಆಗ ಶಾಲೆಯಲ್ಲಿ ಶುರುವಾದ ತಾಳಮದ್ದಲೆಗೆ ಬರುತ್ತಿದ್ದವರಿಗೆ ಕೇಳುವ ಸದವಕಾಶ ದೊರೆಯಿತು. ಒಂದು ರೀತಿಯಿಂದ ಊರಿನವರಿಗೆ ಮಳೆಗಾಲದಲ್ಲಿ ಮಾಡಲು ಬೇರೆ ಕೆಲಸವು ಇರಲಿಲ್ಲ. ಅಟ್ಟದ ಮೇಲೆ ಇಟ್ಟಿದ್ದ ಅಡಿಕೆಯನ್ನು ಕೆಲವರು ಹೊರ ತೆಗೆದು ಸುಲಿಯ ತೊಡಗಿದರು. ಮತ್ತೆ ಕೆಲವು ಹೆಂಗಸರು ಮನೆಯಲ್ಲಿ ತುಂಬಿಸಿ ಇಟ್ಟಿದ್ದ ಹಲಸಿಕಾಯಿಯ ಹಪ್ಪಳನ್ನೋ, ಸಂಡಿಗೆಯನ್ನೋ, ಮಿಡಿ ಉಪ್ಪಿನಕಾಯಿಯ ಭರಣಿಯನ್ನೋ ಅಟ್ಟದಿಂದ ಕೆಳಗಿಳಿಸಿದರು. ರಾತ್ರಿಯಲ್ಲಿ ಅಡಿಕೆಯನ್ನು ಸುಲಿಯುವವರಂತೂ ನಿದ್ದೆ ಬಾರದಂತೆ ಆಗಾಗ ಪೋಲಿ ಪೋಲಿ ಜೋಕುಗಳನ್ನು ಹೇಳುತ್ತಾ ನಗಾಡತ್ತಾ ಕಾಲ ಕಳೆಯುತ್ತಿದ್ದರು. 'ಈ ಮಳೆಗೆ ಹಪ್ಪಳ ಮುಟ್ಟದಿದ್ದರೆ ಸುಖವಿಲ್ಲ,' ಎಂದು ಗಂಡಸರು ಹೇಳಿದರೆ. ಹೆಂಗಸರು ಬಾಕಿಯುಳಿಯುತ್ತಿರಲಿಲ್ಲ: 'ಏನಿದ್ದರೂ ಈ ಸರ್ತಿಯ ಅಡಿಕೆಯಲ್ಲಿ ಗೋಟಡಿಕೆಯೇ ಹೆಚ್ಚು,' ಹೀಗೆ ಹೇಳುವಾಗ ಎಲ್ಲರೂ ನಗಾಡುತ್ತಿದ್ದರು. ನಮ್ಮ ಮನೆಯ ಅಟ್ಟದಲ್ಲಿ ಅಡಿಕೆಯಿರಲಿಲ್ಲ.

ನನ್ನ ಜೀವನದಲ್ಲಿ ಹೊಸ ತಿರುವು ಅದು. ನಾನು ಆದಿನ ಶಾಲೆಗೆ ಹೋದೆ. ಅದು ಶನಿವಾರ. ತಾಳಮದ್ದಲೆ ಕೇಳಬೇಕೆಂದು. 'ಕೃಷ್ಣ ಸಂಧಾನ – ಮಾಗಧ ವಧೆ.' ಕೇಟಿ ಭಟ್ಟರು ಕೃಷ್ಣ.ಗೋಳಿಮಜಲು ರೈಯವರದು ಮಾಗಧ. ಚೆನ್ನಾಗಿ ನಡೆದ ತಾಳಮದ್ದಲೆಯದು. ಯಾಕೋ ಬಹಳ ಖುಶಿಯಲ್ಲಿ ಕೇಳಿದ ತಾಳಮದ್ದಲೆಯದು. ಮರೆಯಲಾಗದು. ಅದಕ್ಕಿಂತ ಹೆಚ್ಚಾಗಿ ತಾಳಮದ್ದಲೆಯಲ್ಲಿ ವಾಗ್ಯುದ್ಧ ಕುತೂಹಲಕಾರಿಯಾಗಿತ್ತು. ಅದರಿಂದ ಅನಂತರ ನಾನು ಪ್ರತಿವಾರ ತಾಳಮದ್ದಲೆ ಕೇಳಲು ಹೋಗುತ್ತಿದ್ದೆ. ಶನಿವಾರವೆಂದರೆ ತಾಳಮದ್ದಲೆಯೆಂಬಷ್ಟು ದಿನಚರಿಯ ಒಂದು ಭಾಗವಾಯಿತು.

ಮತ್ತೊಂದು ದಿನದ ತಾಳಮದ್ದಲೆ: ಪ್ರಸಂಗ ಕರ್ಣಪರ್ವ, ಗದಾಯುದ್ಧ. ನಾನು ಕೇಳಲು ಹೋಗಿದ್ದೆ. ಭಟ್ಟರು ಪಾತ್ರದ ಪಟ್ಟಿ ಓದುವಾಗ ನನ್ನ ಹೆಸರು ಹೇಳಿ ಸಂಜಯ ಅಂದು ಬಿಟ್ಟರು. ನಾನು ಹೆದರಿ ಕಂಗಾಲು. ನನಗೆ ಅರ್ಥ ಹೇಳಲು ಕೇ.ಟಿ ಭಟ್ಟರು ಹೇಳಿಕೊಟ್ಟರು. ಒಂದೇ ಒಂದು ಪದವನ್ನು ಹೇಳಿದೆ. ಬೇರೆ ಹೇಳಲು ನನಗೆ ತಿಳಿಯಲಿಲ್ಲ. ಅನಂತರ ನಾನು ತಾಳಮದ್ದಲೆಗೆ ಹೋಗುವುದು, ಅದರಲ್ಲಿ ಅರ್ಥ ಹೇಳುವುದು ರೂಢಿಸಿಕೊಂಡೆ. ಆದರೆ ಅದರಲ್ಲಿ ಹೆಚ್ಚು ಪರಿಣತಿಯನ್ನು ಪಡೆಯಲು ಆಗಲಿಲ್ಲ.

ಮಾರನೆಯ ವರ್ಷವೇ ಭಟ್ಟರು ಶಾಲೆಯಲ್ಲಿ ಸ್ಕೂಲ್ ಡೇಗೆ ಹಳೆ ವಿದ್ಯಾರ್ಥಿಗಳಿಂದ ಯಕ್ಷಗಾನದ ಪ್ರದರ್ಶನವಿಟ್ಟುಕೊಂಡರು. ಪ್ರಸಂಗ 'ಶ್ವೇತ ಕುಮಾರ ಚರಿತ್ರೆ.' ಅವರೇ ಶ್ವೇತ ಕುಮಾರ. ನನ್ಗೆ ಕುಣಿತ ಬರುತ್ತಿರಲಿಲ್ಲ. ಕಲಿಸಲು ಗುರುಗಳು ಬಂದರು. ಭಟ್ಟರು ನಾನು ಏನು ಹೇಳಿದರೂ ಕೇಳಲಿಲ್ಲ. ನನ್ನನ್ನು ರಂಭೆಯ ವೇಷವನ್ನೇ ಮಾಡುವಂತೆ ಸೂಚಿಸಿದರು. ರಾತ್ರಿಯಿಡೀ ಕುಣಿತದ ತರಗತಿಗಳು, ಶಾಲೆಯಲ್ಲಿ ಗ್ಯಾಸುಲೈಟು ಉರಿಸಿಕೊಂಡು ಕುಣಿಯುತ್ತಿದ್ದೆವು. ಭಟ್ಟರು ಶ್ವೇತ ಕುಮಾರ. ಅವರಿಗೆ ರಿಹರ್ಸಲ್ ಅಗತ್ಯವಿರಲಿಲ್ಲ. ನನಗೆ ಕುಣಿತ ಸರಿ ಬಾರದೆ ಒದ್ದಾಡುವ ಪರಿಸ್ಥಿತಿ. ರಾತ್ರಿ ಹತ್ತು ಗಂಟೆಯಿಂದ ಕುಣಿಯಲು ಪ್ರಾರಂಭಿಸಿದರೆ, ಬೆಳಗಿನ ಜಾವದ ತನಕ ಸಿಮೆಂಟು ನೆಲದಲ್ಲಿ ಕುಣಿದು ಕಾಲು ಒಡೆದು ರಕ್ತ ಬರಲು ಶುರುವಾಯಿತು. ಮತ್ತೆ ಮತ್ತೆ ಭೇತಾಳದ ರೀತಿ ಕುಣಿತದ ಲಯ ಹಿಡಿಯುವುದು, ತಾಳಕ್ಕೆ ಸರಿಯಾಗಿ ಕುಣಿಯಲು ಅಭ್ಯಾಸ ಮಾಡುವುದು ನಡೆಯಿತು.

ಆ ದಿನ ಬೆಳಗಿನಿಂದ ಎದೆಯಲ್ಲಿ ಏನೋ ಒಂದು ರೀತಿಯ ನಡುಕ. ಹಿಂದಿನ ದಿನವೇ ಭಟ್ಟರು ಗಡ್ಡ ಮೀಸೆ ಬೋಳಿಸಲು ಹೇಳಿದ್ದರು. ಆದರೂ ಆದಿನ ಬೆಳಿಗ್ಗೆ ಗಡ್ಡ ತೆಗೆಯಲು ಮನಸ್ಸು ಬರಲಿಲ್ಲ. ರಾತ್ರಿ ಹೋಗಿ ಗಡ್ಡ ತೆಗೆಸಿಕೊಂಡು ಬಂದೆ. ನನ್ಗೆ ಮೇಕಪ್ ಆಗುವ ತನಕವೂ ಏನೂ ಅನಿಸಿರಲಿಲ್ಲ.

ಮೇಕಪ್ ಆಗಿ ಎದೆಕಟ್ಟು ಕಟ್ಟುವಾಗ, ಲಂಗ ಹಾಕುವಾಗ ಮಾತ್ರ ಸಂಕೋಚವಾಯಿತು. ಆದರೆ ಆ ದಿನ ನನಗೆ ಆ ವೇಷದಿಂದ ಹೊಸದೊಂದು ಪ್ರಪಂಚಕ್ಕೆ ಕಾಲಿಟ್ಟಿದ್ದೆ. ಅದುವೇ ನನಗೆ ಮುಂದಿನ ದಿನಗಳಿಗೆ ಒಂದು ಚಿಕ್ಕ ಮುನ್ನುಡಿಯನ್ನು ಬರೆಯುತ್ತದೆಯೆಂದು ಭಾವಿಸಿಕೊಂಡಿರಲಿಲ್ಲ. ರಂಗಸ್ಥಳವೇ ನನಗೆ ಅನ್ನವನ್ನು ಬಟ್ಟೆಯನ್ನು ಕೊಡುತ್ತದೆಯೆಂದು ಭಾವಿಸಿಕೊಂಡಿರಲಿಲ್ಲ.

* * * * *

**ರಂಗಸ್ಥಳದ ಮಾಯಾ ಜಗತ್ತು ಕರೆಯಿತು, ನನ್ನನ್ನು ಸೆಳೆದು ಕೊಂಡೊಯ್ಯಿತು. ಆ ಬಣ್ಣದಿಂದ ಅನೇಕವನ್ನು ಪಡೆದೆ. ಮುಂದೆ ಏನು ಆಗಲಿದೆ ಎಂದು ಆಗ ತಿಳಿದಿರಲಿಲ್ಲ.**

## 1992
## ಸೆಪ್ಟೆಂಬರ್
## 10

ಆ ದಿನ ಮಂಗಳವಾರ ಅಮವಾಸ್ಯೆ ಬೇರೆ. ಮಂಗಳವಾರಕ್ಕೂ ಅಮವಾಸ್ಯೆ ಬಂದುದಕ್ಕೂ ಜನರು ಒಂದು ಸಂಬಂಧ ಕಲ್ಪಿಸುತ್ತಾ ಇದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಅಡಿಕೆ ತೋಟ ಇದ್ದವರಿಗೆ ಅಮವಾಸ್ಯೆಯೆಂದರೆ ಕೊಂಚ ಭಯ ಬೇರೆ. ಅದರಲ್ಲಿಯೂ ಗಂಡಸರು ಮನೆಯಲ್ಲಿ ಒಬ್ಬೊಬ್ಬರೇ ಇದ್ದರಂತೂ ಕತೆ ಮುಗಿಯಿತು. ತೋಟವನ್ನು ನೋಡಲು ಹೋದರೆ ಮನೆಯ ಅಂಗಳದಲ್ಲಿ ಒಣಗಲು ಹಾಕಿರುವ ಅಡಿಕೆಯ ಭಯ. ಅಂಗಳದ ಅಡಿಕೆಯನ್ನು ನೋಡಲು ಮನೆಯಲ್ಲಿಯೇ ಮಲಗಿದರೆ ತೋಟದಲ್ಲಿರುವ ಹಣ್ಣಡಿಕೆಯು ಉಳಿಯುತ್ತದೆಯೆಂಬ ಖಾತ್ರಿಯಿಲ್ಲ. ಅಡಕೆಯ ತೋಟವನ್ನು ಮಾಡಿರುವವರು ಬ್ರಾಹ್ಮಣರು. ಗದ್ದೆಗಳು ಸಾಮಾನ್ಯವಾಗಿ ಶೆಟ್ಟರದು. ಈ ಮಧ್ಯೆ ಶೂದ್ರರಲ್ಲಿ ಕೆಲವರಿಗೆ ಒಂದು ಮುಡಿಯೋ ಅರ್ಧ ಮುಡಿಯೋ ಗದ್ದೆಯು ಇತ್ತು. ಶೂದ್ರರಲ್ಲಿಯೂ ಕೆಲವರು ಮಾತ್ರ ಗದ್ದೆಯನ್ನು ಮಾಡುತ್ತಿದ್ದರು. ಗದ್ದೆಯೆಂದರೇನು ಎಲ್ಲರೂ ಭಾವಿಸುವ ರೀತಿಯದಲ್ಲ. ಅದು ಮಳೆಗಾಲದ ನೀರನ್ನು ಆಶ್ರಯಿಸಿರುವ ಗದ್ದೆಗಳು. ಬೇಸಿಗೆಯಲ್ಲಿ ಗದ್ದೆಯನ್ನು ಕೆಲವರು ಏನೂ ಮಾಡದೆ ಬಿಟ್ಟುಬಿಡುತ್ತಿದ್ದರು. ಅದರಲ್ಲಿ ದನ ಕರುಗಳನ್ನು ಕಟ್ಟಿಹಾಕಿ ಮೇಯಿಸುತ್ತಿದ್ದರು. ಕೆಲವರು ಬೇಸಿಗೆಯಲ್ಲಿ ಗೇರು ಮರದ್ದೋ ಮಾವಿನ ಮರದ್ದೋ ತರಗೆಲೆಯನ್ನು ರಾಶಿ ಹಾಕಿ ಬಿಡುತ್ತಿದ್ದರು. ಮಳೆಗಾಲ ಪ್ರಾರಂಭವಾದ ಕೂಡಲೇ ತರಗೆಲೆಯನ್ನು ಗದ್ದೆಯಿಡೀ ಚೆಲ್ಲಿ ಬೇಸಾಯ ಮಾಡಿದರೆ ಆಯಿತು. ಅದುವೇ ಒಂದು ಒಳ್ಳೆಯ ಗೊಬ್ಬರವಾಗಿ ಬಿಡುತ್ತದೆ. ಬೇಸಿಗೆಯಲ್ಲಿ ಬೆಳೆಯನ್ನು; ಅದರಲ್ಲಿಯೂ ಭತ್ತವನ್ನು ಬೆಳೆಯುವುದು ಅನೇಕರಿಗೆ ಕಷ್ಟಸಾಧ್ಯವಾಗಿತ್ತು. ಗದ್ದೆಯಲ್ಲಿ ಮೂರು ಬೆಳೆಯನ್ನು ಮಾಡುವವರು ಭಾರೀ ಅಪರೂಪ. ಮಳೆಗಾಲದಲ್ಲಿಯೂ ಕೆಲವರು ಮಾತ್ರ ಭತ್ತವನ್ನು ನೆಡುತ್ತಿದ್ದರು. ಉಳಿದವರು ಗದ್ದೆಯನ್ನು ಹೂಟೆ ಮಾಡಿ ಭತ್ತವನ್ನು ಚೆಲ್ಲಿ ಬಿಟ್ಟರೆ ಆಯಿತು. ಭತ್ತಕ್ಕೂ ಅಷ್ಟೆ ದಿನಕ್ಕೊಂದು ರೋಗ ಬಂದಿರುವುದು ಕಡಿಮೆ. ಮಳೆಗಾಲದ ಕೊಯ್ಲು ಆದ ತಕ್ಷಣ ಅದಕ್ಕೆ ಸೌತೆ; ಬದನೆ; ಮೆಣಸಿನ ಸಸಿಯನ್ನು ಹಾಕಿ ಬೆಳೆಸುತ್ತಿದ್ದರು. ಅವುಗಳನ್ನು ಕೊಯ್ದು ಮುಗಿದರೆ ಗದ್ದೆಗೆ ಬೆಂಕಿಯಿಟ್ಟು ಇಡೀ ಗದ್ದೆಯನ್ನು ಸುಡುಮಣ್ಣು ಮಾಡಿ ಪರಿವರ್ತನೆ ಮಾಡಿಬಿಡುತ್ತಿದ್ದರು. ಇವುಗಳಿಂದಾಗಿ ಗದ್ದೆಗಳ ಫಲವತ್ತತೆಯು ಹೆಚ್ಚುತ್ತಿತ್ತು. ಇಳುವರಿಯೂ ಜಾಸ್ತಿಯಾಗುತ್ತಿತ್ತು. ಮಳೆಗಾಲ ದಾಟಿ ಬೇರೆ

ತರಕಾರಿಗಳನ್ನು ಹಾಕಿದವರು ಏತದ ಮೂಲಕ ನೀರು ಹಾಯಿಸುತ್ತಿದ್ದರು. ಆ ದಿನಗಳಲ್ಲಿ ನೀರೆತ್ತಲು ಪಂಪುಗಳನ್ನು ಹಾಕಿಸಿಕೊಳ್ಳುತ್ತಿದ್ದವರು ಕಡಿಮೆ. ಬ್ರಾಹ್ಮಣರು ಮತ್ತು ಶೆಟ್ರುಗಳು ಈ ವಿಷಯದಲ್ಲಿ ಭಾರೀ ಲೆಕ್ಕಚಾರದವರು. ಮನೆಯ ಉಪಯೋಗಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ತರಕಾರಿ ಹಾಕುವುದು ಅವರ ಉದ್ದೇಶ. ಉಳಿದದ್ದು ವ್ಯಾವಹಾರಿಕ ಜಗತ್ತಿಗೆ ಸಂಬಂಧಿಸಿದ್ದು. ಬ್ರಾಹ್ಮಣರಿಗೆ ಅಡಿಕೆ ತೋಟವನ್ನು ಕಾಪಾಡುವುದು ಒಂದು  ಜಾಗತಿಕ ಚಿಂತೆ. ಅಡಿಕೆಯ ವಿಷಯವನ್ನು ಬಿಟ್ಟು ಬೇರೆ ವಿಷಯ ಅವರಿಗೆ ಮಾತಾಡಿ ಗೊತ್ತಿಲ್ಲ. ಈ ವರ್ಷ ಎಷ್ಟು ಅಡಿಕೆ ಹಿಡಿಯಬಹುದು? ಧಾರಣೆ ಹೇಗೆ? ಮಳೆಗಾಲದ ಕೊಳೆ ರೋಗಕ್ಕೆ ಮೈಲು ತುತ್ತು ಬಿಟ್ಟಾಯಿತಾ ಇತ್ಯಾದಿ. ಅದು ಶ್ರಾದ್ಧವಿರಲಿ; ಮದುವೆಯಿರಲಿ; ಉಪನಯನವಿರಲಿ ಅದರಾಚೆಗೆ ಅವರು ಮಾತಾಡುವುದಿಲ್ಲ. ಶೆಟ್ರುಗಳಿಗೆ ಮತ್ತು ಬ್ರಾಹ್ಮಣರಿಗೆ ಒಳಗಿಂದೊಳಗೆ ಒಂದು ಸ್ಪರ್ಧೆಯಿರುತ್ತಿದ್ದುದರಿಂದ ಪರಸ್ಪರ ಹಿಂದುಗಡೆಯಿಂದ  ಜಾತಿಗೆ ಸಂಬಂಧಿಸಿದ ಜೋಕುಗಳನ್ನು ಹೇಳಿಕೊಂಡು ನಗಾಡುತ್ತಿದ್ದರು ಕೂಡಾ. "ಶೆಟ್ರಿಗೆ  ಅಬ್ಬರ; ಕೆಸುವಿಗೆ ಗೊಬ್ಬರ ಎರಡೂ ಒಂದೆ" ಎನ್ನುವುದು ಬ್ರಾಹ್ಮಣರ ವಾದ. "ಭಟ್ರುಗಳು ಊಟಕ್ಕೆ ಸೈ" ಎನ್ನುವುದು ಶೆಟ್ರುಗಳ ವಾದ. ಬ್ರಾಹ್ಮಣ ಹೆಂಗಸರು, 'ಶೆಟ್ರ ಹೆಂಗಸರಿಗೆ ಮಡಿ ಮೈಲಿಗೆ ಒಂದೂ ಗೊತ್ತಿಲ್ಲ'ವೆಂದರೆ, 'ಬ್ರಾಹ್ಮಣ ಹೆಂಗಸರಿಗೆ ಸರಿಯಾಗಿ ಹೊಟ್ಟೆ ತುಂಬಾ ತಿಂದು ಗೊತ್ತಿಲ್ಲ: ಗಂಡನ ಎಂಜಲು ತಿಂದು ಒಳ್ಳೆ ಕಡ್ಡಿ ಪೊರಕೆಯಂತೆ ಇರ್ತಾರೆ' ಅಂತ ಹೇಳಿಕೊಳ್ಳುತ್ತಿದ್ದರು. ಒಳಗೊಳಗೆ ಇವೆಲ್ಲಾ ತಮಾಷೆಯ ವಿಷಯವಾಗಿತ್ತು. ಬ್ರಾಹ್ಮಣರಿಗೆ ಹುಳಿ; ಖಾರ ತಿಂದು ಗೊತ್ತಿಲ್ಲ; ಬರೀ ಬಸಳೆ ಸೊಪ್ಪು ತಿಂದು ಅವರ ನಾಲಿಗೆ ಜಡ್ಡು ಹಿಡಿದುಕೊಂಡಿರುತ್ತದೆ. ಒಂದೊಂದು ಕುಡ್ತೆ ತುಪ್ಪ ತಿಂದು ಅವರ ಹೊಟ್ಟೆ ಒಳ್ಳೆಯ ಕಡಾಯಿ ಥರ ಆಗಿರುತ್ತದೆಯೆಂದು ಶೂದ್ರರು ಹೇಳಿದರೆ: ಕೋಳಿ; ಮೀನು ತಿಂದು ಶೂದ್ರರಿಗೆ ತಲೆಯೋಡುವುದಿಲ್ಲವೆಂದು ಬ್ರಾಹ್ಮಣರು ಹೇಳುತ್ತಿದ್ದರು. ಬ್ರಾಹ್ಮಣರ ಪಕ್ಕಾ  ವ್ಯಾವಹಾರಿಕ ಜಗತ್ತು ಮತ್ತು ಶೆಟ್ಟರ ಪಕ್ಕಾ ಆಡಂಬರದ ಜಗತ್ತಿನ ನಡುವೆ ಮಾತ್ರ ಅನೇಕ ಸಂಗತಿಗಳು ಅಡಕವಾಗಿದ್ದವು. ಅಡಿಕೆಯ ಕೃಷಿಯು ಬ್ರಾಹ್ಮಣರಿಗೇ ಹೊರತು; ಬೇರೆ ಯಾರಿಗೂ ಅಲ್ಲವೆಂದು ಸಾಮಾನ್ಯ ಜನರು ತಿಳಿದುಕೊಂಡದ್ದಂತೂ ನಿಜ. ಇದರ ನಡುವೆ ಅಡಿಕೆಯ ಧಾರಣೆಯಿಂದಾಗಿ ಮತ್ತು ತೆಂಗಿನಕಾಯಿಯ ಕಳ್ಳ ವ್ಯಾಪಾರದಿಂದಾಗಿ ಕಳ್ಳರ ಅಪಾಯ ತಪ್ಪಿರಲಿಲ್ಲ. ಮಳೆಗಾಲದಲ್ಲಿ ಬೇಲಿಯನ್ನು ಸವರಿ ಬೇಲಿಗೆ ಕಳ್ಳಿ ಗಿಡಗಳನ್ನು ಮತ್ತೆ ಮತ್ತೆ ನೆಡಿಸುವ ಕೆಲಸವನ್ನು ಮಾಡಿಸುತ್ತಿದ್ದರು. ಬೇಲಿಯಲ್ಲಿ ಎಷ್ಟು ಕಳ್ಳಿ ಗಿಡಗಳಿದ್ದರೂ ಕಳ್ಳರು ಕದಿಯುವ ಕೆಲಸವನ್ನು ಹೇಗಾದರೂ ಪೂರೈಸಿಕೊಂಡು ಬಿಡುತ್ತಿದ್ದರು. ಕೆಲವು ಕಳ್ಳರು ಕಣ್ಣಿಗೆ ಅಂಜನ ಹಾಕಿಕೊಂಡು ಬಂದರೆ ಕಣ್ಣಿಗೆ

ಕಾಣಿಸುವುದು ಸಾಧ್ಯವಿಲ್ಲವೆಂದು ತೋಟದವರ ಪ್ರಚಾರವಿತ್ತು. ಹೆಚ್ಚಾಗಿ ಇಂಥ ಕಳ್ಳರನ್ನು ಹಿಡಿಯಲು ಸಾಮಾನ್ಯ ಮನುಷ್ಯನಿಗೆ ಸಾಧ್ಯವಿಲ್ಲವೆಂದು ತಿಳಿದುಕೊಂಡು ಗುಳಿಗ; ಪಂಜುರ್ಲಿಗಳಿಗೆ ಹರಕೆ ಹೊರುತ್ತಿದ್ದರು. ತೆಂಗಿನಕಾಯಿ ಕಳವಾದರೆ ಗುಳಿಗ; ಪಂಜುರ್ಲಿಯವರಿಗೆ ತೆಂಗಿನಕಾಯಿ ಒಡೆಯುತ್ತಿದ್ದರು. ತೋಟ ಕಾಯುವ ಮಹತ್ಕಾರ್ಯ ಮಾಡುತ್ತಿರುವ ಗುಳಿಗ - ಪಂಜುರ್ಲಿಯರು ಬರಿಯ ತೆಂಗಿನಕಾಯಿಯಿಂದ ತೃಪ್ತಿ ಹೊಂದುವುದು ಸಾಧ್ಯವಿರಲಿಲ್ಲ. ವರ್ಷಕ್ಕೊಮ್ಮೆಯಾದರೂ ಶೂದ್ರ ಪೂಜಾರಿಗಳು ಕೋಳಿ ಬಲಿ ಕೊಟ್ಟು ಕೋಳಿ ರೊಟ್ಟಿ; ಸೇಂದಿ ಅರ್ಪಿಸಿ ಧನ್ಯರಾಗುತ್ತಿದ್ದರು.

ಇಂಥದೊಂದು ವಿಷಮ ಪರಿಸ್ಥಿತಿಯಲ್ಲಿ ಬ್ರಾಹ್ಮಣರು ತೋಟಕಾಯಲು ಜನ ಮಾಡುತ್ತಿದ್ದರು. ಬೇರೆ ಬೇರೆ ತಂತ್ರೋಪಾಯಗಳನ್ನು ಹುಡುಕುತ್ತಿದ್ದರು. ಕಳ್ಳರೂ ಪ್ರತಿ ತಂತ್ರ ಹುಡುಕಿಕೊಳ್ಳುತ್ತಲೇ ಕದಿಯುವ ಕೆಲಸವನ್ನು ಯಶಸ್ವಿಯಾಗಿ ಪೂರೈಸುತ್ತಿದ್ದರು.

ಮಂಗಳವಾರ ಅಮಾವಾಸ್ಯೆಯಾಗಿದ್ದುದರಿಂದ ತೋಟದ ಬಗ್ಗೆ ವಿಶೇಷ ಗಮನವಿರಿಸಬೇಕಾದ ಅಗತ್ಯವಿತ್ತು. ಬಡ್ಡಿ ಸುಬ್ಬಣ್ಣನಿಗೂ ಒಂದು ಚಿಂತೆಯಿತ್ತು. ಮಹಾನ್ ಪಿಸುಣಾರಿಯಾದ ಅವನಿಗೆ ತೋಟ ಕಾಯಲು ಜನ ಹಾಕಿಕೊಂಡರೆ ಅವರಿಗೆ ಸಂಬಳ ಕೊಡಬೇಕಲ್ಲ ಎಂಬ ಭಾವನೆಯಿತ್ತು. ಅದಕ್ಕಾಗೇ ಒಂದೊಂದು ದಿನ ಮನೆಯಲ್ಲಿಯೂ ಮತ್ತೆ ಒಂದೊಂದು ದಿನ ತೋಟ ಕಾಯಲು ಹಾಕಿಕೊಂಡಿದ್ದ ಮಾಳದಲ್ಲಿಯೂ ಮಲಗುತ್ತಿದ್ದ. ರಾತ್ರಿ ಕೆಲವು ಗಳಿಗೆ ಅಲ್ಲಿಯೂ ಮತ್ತೆ ಕೆಲವು ಗಳಿಗೆ ಮನೆಯ ಜಗುಲಿಯಲ್ಲಿಯು ಕಾಲ ಕಳೆಯುತ್ತಿದ್ದ. ಉದ್ದಕಾಲು ಲಕ್ಷ್ಮಿಯು ರಾತ್ರಿಯ ವೇಳೆ ಹಿಂಬಾಗಿಲ ಕೊಂಡಿ ಸಿಕ್ಕಿಸಿದರೆ ಮತ್ತೆ ಬಾಗಿಲು ತೆಗೆಯುವ ಜಾತಿಯಲ್ಲ. ಹಿತ್ತಲಿನ ಬಾಗಿಲು ತೆಗೆದು ಹೊರಗಡೆ ಹೋಗಿ ಮೂತ್ರ ವಿಸರ್ಜನೆಯನ್ನು ಮಾಡಲು ಅವಳಿಗೆ ಭಯ. ಅದಕ್ಕೆ ಅವಳು ಯಾವುದೇ ಕಾರಣಕ್ಕೆ ಹಿಂಬಾಗಿಲಿನ ಬಾಗಿಲು ತೆಗೆಯುತ್ತಿರಲಿಲ್ಲ.

ಸುಬ್ಬಣ್ಣ ತೋಟ ಕಾಯಲು ಹೋಗುತ್ತಾನೆಂದು ಗೊತ್ತಾದರೆ ಜಗುಲಿಯೊಂದರ ಹೊರತು ಉಳಿದೆಲ್ಲಾ ಕಡೆಗೆ ಅಗುಳಿ ಹಾಕಿಕೊಂಡಿರುತ್ತಿದ್ದಳು. ಹಲ್ಲಿ ಮೈಮೇಲೆ ಬಿದ್ದರೆ ಶಕುನ ನೋಡುವ: ಜಿರಳೆ ಓಡಾಡಿದರೆ ಹೆದರಿಕೊಳ್ಳುವ ಅವಳು ಒಬ್ಬಂಟಿಯಾದ ದಿನಗಳಲ್ಲಿಯಂತೂ ರಾತ್ರಿಯ ಮೇಲೆ ಚಿಮಿಣಿ ದೀಪ ಹಿಡಿದುಕೊಂಡು ಹೊರ ಬರುತ್ತಿದ್ದಳು. ಅವಳು ಕೆಲವು ವಿಷಯಗಳನ್ನು ಮಾತ್ರ ಮುಚ್ಚಿಡುತ್ತಿದ್ದುದರಿಂದ ಯಾರಿಗೂ ಅವಳ ನಡೆ ನುಡಿಯ ಬಗ್ಗೆ ಯಾವ ಸಂಶಯವು ಬರುತ್ತಿರಲಿಲ್ಲ. ಸುಬ್ಬಣ್ಣ ಮನೆಯೊಳಗೆ ಇದ್ದರೆ ರಾತ್ರಿಯು ಮೂತ್ರ

ವಿಸರ್ಜನೆಯವಸರಕ್ಕೆ ಅವನನ್ನು ಎಬ್ಬಿಸುತ್ತಿದ್ದಳು. ಆದರೆ ಅದೆಲ್ಲಾ ಮದುವೆಯಾದ ಹೊಸತರಲ್ಲಿ. ಮದುವೆಯಾಗಿ ಎರಡು - ಮೂರು ವರ್ಷ ದಾಟಿದ ಮೇಲೆ, ಅದರಲ್ಲಿಯೂ ಅವರಿಬ್ಬರ ಯಶಸ್ವಿ ದಾಂಪತ್ಯಕ್ಕೆ ಪುರಾವೆಯು ದೊರೆತ ಫಲವಾಗಿ; ಮಗಳು ಹುಟ್ಟಿದ ಮೇಲೆ ಬಡ್ಡಿ ಸುಬ್ಬಣ್ಣನಿಗೂ ಮಧ್ಯರಾತ್ರಿಯೆದ್ದು ಹೆಂಡತಿಯ ರಕ್ಷಣೆಗೆ ಹೊರಡುವುದು ಸಹನೀಯ ಕಾರ್ಯವೆಂದು ಅನಿಸಲಿಲ್ಲ. ಅವನ ಅಸಾಧ್ಯವೂ ಕರ್ಕಶವೂ ಆದ ಗೊರಕೆ ಮತ್ತು ಆಗಾಗ ಬಿಡುವ ವಾಯುದೋಷದ ಎಂಜಿನ್ ಅವಳಿಗೆ ಇಷ್ಟವಾಗುವುದು ಸಾಧ್ಯವಿರಲಿಲ್ಲ. ಅದೆಲ್ಲಕ್ಕಿಂತ ಎಂಕ್ಟನ ಜೊತೆಯಲ್ಲಿ ಸ್ಥಾಪಿಸಿದ ಸುಂದರ ಸಂಬಂಧದಿಂದ ಉದ್ದಕಾಲು ಲಕ್ಷ್ಮಿ ಮತ್ತು ಬಡ್ಡಿ ಸುಬ್ಬಣ್ಣ ಬೇರೆ ಬೇರೆ ಮಲಗತೊಡಗಿದರು. ಸುಬ್ಬಣ್ಣನಿಗೂ ಅಷ್ಟೆ: ಲಕ್ಷ್ಮಿಯ ಜೊತೆಗೆ ತುಂಬಾ ಬೇಕೂಂತ ಅನಿಸಿದರೆ ಮಾತ್ರ ಅವಳ ಮೈಮೇಲೆ ಬಿದ್ದು ಎದ್ದು ಬರುತ್ತಿದ್ದ. ಹೀಗಾಗಿ ಉದ್ದಕಾಲು ಲಕ್ಷ್ಮಿಯ ಮಧ್ಯರಾತ್ರಿಯೆದ್ದು ಮೂತ್ರ ವಿಸರ್ಜನೆಯ ಕೆಲಸಕ್ಕೆ ಒಂದು ಉಪಾಯವನ್ನು ಕಂಡುಕೊಂಡಿದ್ದಳು. ಅವಳು ಕಂಡುಕೊಂಡ ತಂತ್ರಜ್ಞಾನ ಸ್ವತಃ ವಿಶ್ವೇಶ್ವರಯ್ಯರಿಗೂ ಹೊಳೆಯುವುದು ಸಾಧ್ಯವಿರಲಿಲ್ಲ. ಅದೇನೆಂದರೆಃ ಹಸಿ ಅಡಿಕೆಯ ಹಾಳೆಯನ್ನು ಕತ್ತರಿಸಿ ಅದರ ಎಡಬಲಕ್ಕೆ ಬಾಳೆನಾರು ಕಟ್ಟುತ್ತಿದ್ದಳು. ಅದು ಗುಂಡಿಯಂತೆ ಇದ್ದು ಅದರಲ್ಲಿಯೇ ಮೂತ್ರ ವಿಸರ್ಜನೆ ಮಾಡಿ ಬೆಳಗಿನ ಹೊತ್ತು ಚೆಲ್ಲಿ ಬಿಡುತ್ತಿದ್ದಳು. ಈ ಉಪಾಯದಿಂದಾಗಿ ಮನೆಯಿಂದ ಹೊರಗೆ ಹೋಗುವ ಅಥವಾ ಕತ್ತಲೆಯಲ್ಲಿ ಕೋಣೆಯಿಂದ ಹೊರಗೆ ಬರುವ ಯಾವ ಆವಶ್ಯಕತೆಯು ಇರುತ್ತಿರಲಿಲ್ಲ. ಬೆಳಗಿನ ಮುಂಚೆ ಇದನ್ನು ಚೆಲ್ಲಿ ಬಿಡುವುದರಿಂದ ಯಾರಿಗೂ ಈ ವಿಷಯ ತಿಳಿಯುತ್ತಿರಲಿಲ್ಲ. ಒಂದು ದಿನ ಅದನ್ನು ಮರೆತು ಅಲ್ಲಿಯೇ ಬಿಟ್ಟುದರಿಂದ ನೆಲ ಒರಸಲು ಹೋದ ಕರಿಪರಮೇಸ್ವರಿಗೆ ತಿಳಿದು ಅದರಿಂದಾಗಿ ಉದ್ದಕಾಲು ಲಕ್ಷ್ಮಿಯ ಪುಕ್ಕಲುತನ ಜನರಿಗೆಲ್ಲಾ ಗೊತ್ತಾಯಿತು.

ಉದ್ದಕಾಲು ಲಕ್ಷ್ಮಿಯು ಪುಕ್ಕಲು ಸ್ವಭಾವದವಳೆಂದರೆ ಮಾತ್ರಕ್ಕೆ ಸುಬ್ಬಣ್ಣನೂ ಮಹಾನ್ ಧೈರ್ಯಸ್ಥನಾಗಿರಬೇಕೆಂದೇನೂ ಇಲ್ಲ. ತೀರಾ ಎಂದರೆ ತೀರಾ ಪುಕ್ಕಲುತನ ಅವನಿಗೆ ಇರಲಿಲ್ಲವಾದರೂ ಕೆಲವು ವಿಷಯಕ್ಕೆ ಪುಕ್ಕಲುತನವಿತ್ತು. ಅವನು ಹಾವಿಗೆ; ಚೇಳಿಗೆ ಹೆದರುತ್ತಿದ್ದ. ಹಾವನ್ನು ಕಂಡರೆ ಮಾರು ದೂರ ಹೋಗುತ್ತಿದ್ದ. ಒಂದು ಸಂದರ್ಭದಲ್ಲಿ ಅವನು ಸ್ನಾನ ಮಾಡುತ್ತಿದ್ದಾಗ, ಬಚ್ಚಲು ಮನೆಯ ಸ್ನಾನ ಮಾಡುವ ನೀರು ಹೋಗುವ ಸಂದಿಯಲ್ಲಿ ಯಾವುದೋ ಹಾವು ಮಲಗಿಕೊಂಡಂತೆ ಅನಿಸಿತು. ಅದು ಹಾವೇ ಇರಬೇಕೆಂದು ಕೊಂಡು ಹೆದರಿ ಅರ್ಧ ಸ್ನಾನದಲ್ಲಿಯೇ ಓಡಿ ಬಂದ. ಅವನ ಗೌಜಿ - ಗದ್ದಲ ಕೇಳಿ ಪರಮೇಶ್ವರಿ ಮತ್ತು ಲಕ್ಷ್ಮಿಯರು ಓಡಿಬಂದರು. ಹೆದರಿದ ಸುಬ್ಬಣ್ಣನ ಉಸಿರು

ಮೇಲೆ ಕೆಳಗೆ ಹೋಗುತ್ತಿತ್ತು. ಹಾವು ಎಂದು ಹೆಸರಿಡಿದು ಕರೆಯುವ ರೂಢಿಯಿಲ್ಲದ ಸುಬ್ಬಣ್ಣ ಕೈ ತೋರಿಸಿ; 'ಯಾವುದೋ ಹರಿದಾಡುವುದು ಕಾಣಿಸಿತು. ಎಂಥದ್ದೋ ಏನೋ? ದರಿದ್ರದ್ದು ಬಂದು ಸೇರಿಕೊಂಡಿದೆ. ನಾನು ನೋಡಿದ್ದಕ್ಕೆ ಬಚಾವು ಎಲ್ಲಿಯಾದರೂ ಕಚ್ಚಿ – ಗಿಚ್ಚಿ ಬಿಟ್ಟಿದ್ದರೆ ನನ್ನ ಕತೆಯೇನಾಗುತ್ತಿತ್ತು.?' ಎಂದ ಪರಮೇಶ್ವರಿಯು ಹೊರಗಿನಿಂದ ಒಂದು ಉದ್ದನೆಯ ಕೋಲು ತೆಗೆದುಕೊಂಡು ಬಂದಳು. "ಪರಮೇಶ್ವರಿ, 'ಜಾಗ್ರತೆ ಒಳ್ಳೆ ಜಾತಿ ಹಾವು ಆಗಿರಲಿಕ್ಕಿಲ್ಲ. ಜಾತಿ ಹಾವು ಯಾವತ್ತೂ ಬಚ್ಚಲು ಮನೆಯ ಮಿಂದ ನೀರಿನ ಹತ್ತಿರ ಇರುವುದಿಲ್ಲ. ಇದ್ಯಾವುದೋ ಕಾಟು ಇದ್ದೀತು. ಆದ್ರೂ ಜಾಗ್ರತೆ ಬೇಕಪ್ಪಾ" ಎಂದಳು ಲಕ್ಷ್ಮಿ ಪರಮೇಶ್ವರಿಯು ಮೆಲ್ಲನೆ ಕೋಲನ್ನು ಸಂಧಿಯಲ್ಲಿ ತಳ್ಳಿದಳು. ಅರೆ ಬರೆ ಕತ್ತಲೆಯ ದೆಸೆಯಿಂದ ಅವಳಿಗೂ ಯಾವುದೋ ಒಂದು ನೀರಲ್ಲಿ ಮಲಗಿದಂತೆ ಅನಿಸಿದ್ದು ನಿಜ. ಅದಕ್ಕೆ ಮತ್ತೊಮ್ಮೆ ದೂರದಿಂದಲೇ ಕೋಲನ್ನು ತಳ್ಳಿದಳು. ನೀರಲ್ಲಿ ಮಲಗಿದ್ದು ಒಂಚೂರು ಮಿಸುಕಿದ ಹಾಗೆ ಅನಿಸಲಿಲ್ಲ. 'ಏಯ್ ಸ್ವಲ್ಪ ಮೆಲ್ಲಗೆ, ಅಂದು ಎಂತದ್ದೋ ಏನೋ? ಕೊನೆಗೆ ಒಂದು ಹೋಗಿ ಇನ್ನೊಂದಾದೀತು. ಕೊಳಕು ಮಂಡಲವೋ ಏನು ಕರ್ಮವೋ? ಅದು ಕಚ್ಚಿದರೆ ಉಳಿಗಾಲ ಉಂಟು ಅಂತ ಭಾವಿಸಿದ್ದೀಯಾ? ಅದರ ಹಲ್ಲು ತಾಗಿದರೆ ಸಾಕಪ್ಪಾ – ಇಡೀ ಮೈ ಕೊಳೆತು ಹೋಗ್ತದಂತೆ ಗೊತ್ತುಂಟಾ?" ಎಂದ ಸುಬ್ಬಣ್ಣ, ಸ್ವಲ್ಪ ಹಿಂದಕ್ಕೆ ಸರಿದು ನಿಂತ. ಹಾವಿನ ಬಗ್ಗೆ ಅವನಿಗಿದ್ದ ಭಯ ಪರಮೇಶ್ವರಿಗೆ ಇರಲಿಲ್ಲ. "ನೀವು ಬಾಯಿ ಮುಚ್ಚಿಕೊಂಡು ಕುಳಿತುಕೊಳ್ತೀರಾ? ಕೊಳಕುಮಂಡಲ ಕಚ್ಚಿ ಸಾಯಲೇಬೇಕೂಂತ ಹಣೆಯಲ್ಲಿ ಬರೆದಿದ್ದರೆ ಯಾರೂ ಏನೂ ಮಾಡುವುದಕ್ಕೆ ಆಗುವುದಿಲ್ಲ" ಎಂದು ಬಗ್ಗಿ ಕುಳಿತು ಕೋಲನ್ನು ಒಂಚೂರು ಮೇಲಿನಿಂದ ಹಿಡಿದು ಅದರ ಹತ್ತಿರ ತಗೊಂಡು ಬಚ್ಚಲು ಮನೆಯೊಳಗೆ ಎಳೆದಳು. ಅದು ಮಿಸಕಾಡಲಿಲ್ಲ. ಎಲ್ಲಿಯೋ ಸತ್ತು ಹೋಗಿರಬಹುದೇನೋ ಎಂದುಕೊಂಡು ಬಚ್ಚಲು ಮನೆಯ ಬಾಗಿಲಿಗೆ ಅಡ್ಡವಾಗಿ ನಿಂತಿದ್ದ ಸುಬ್ಬಣ್ಣ ಮತ್ತು ಲಕ್ಷ್ಮಿಯರನ್ನು ಹೊರಗೆ ಕಳಿಸಿದಳು. ಕೋಲಿನಲ್ಲಿ ಎತ್ತಿಕೊಂಡು ಬಚ್ಚಲು ಮನೆಯ ಹೊರಗೆ ಬೆಳಕಿಗೆ ತಂದು ಹಿಡಿದಳು – ಅಲ್ಲಿಯೇ ಬಿಸಾಕಿ ಗೊಳ್ಳೆಂದು ನಗಾಡಿದಳು ಲಕ್ಷ್ಮಿಯ ಮುಖ ಕೆಂಪಾಯಿತು. ಸುಬ್ಬಣ್ಣ ಪೆದ್ದು ಪೆದ್ದಾಗಿ ನಗಾಡಿದ. ಆದದ್ದು ಇಷ್ಟು; ಉದ್ದಕಾಲು ಲಕ್ಷ್ಮಿಯು ಮುಟ್ಟಾದಾಗ ಇರಲಿ ಎಂದು ಹಳೆಯ ಸೀರೆಯ ಚೂರನ್ನು ಬಚ್ಚಲು ಮನೆಯ ಗೋಡೆಯ ಸಂಧಿಯಲ್ಲಿ ತುರುಕಿಸಿ ಇಟ್ಟಿದ್ದಳು ಅದರಲ್ಲಿ ಒಂದು ಬಟ್ಟೆಯ ತುಂಡು ಬಚ್ಚಲು ಮನೆಯ ನೀರಲ್ಲಿ ಬಿದ್ದುದು ಸುಬ್ಬಣ್ಣನಿಗೆ ಹಾವಿನಂತೆ ಕಾಣಿಸಿತು ಅಷ್ಟೆ! ಅಂಥ ಧೈರ್ಯವಂತ ಸುಬ್ಬಣ್ಣ ಮಂಗಳವಾರದ ಅಮವಾಸ್ಯೆಯ ದಿನ ತೋಟಕ್ಕೆ ಕಳ್ಳರು ನುಗ್ಗಬಹುದು ಎಂದು

ಊಹಿಸಿಕೊಂಡಿದ್ದ. ಅಡಿಕೆಯ ಮರದಲ್ಲಿ ಹಣ್ಣಡಿಕೆಯ ಗೊಂಚಲು ಯಾರ ಕಣ್ಣನ್ನಾದರೂ ಸೆಳೆಯುವಂತಿತ್ತು. ಬಿದ್ದ ಹಣ್ಣಡಿಕೆಯಲ್ಲಿ ಒಂದನ್ನೂ ಬಿಡದ ಸುಬ್ಬಣ್ಣ ಅಡಿಕೆಯ ಗೊನೆಯನ್ನು ಯಾರಾದರೂ ಕಳುವು ಮಾಡಿದರೆ ಸಹಿಸುವುದಂತೂ ಸಾಧ್ಯವಿರಲಿಲ್ಲ. ಕೃಷಿಕರ ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿದಂತೆ ಕೆಲವನ್ನು ಅವರು ಅರ್ಥಮಾಡಿಕೊಂಡಿರುತ್ತಾರೆ. ಕೃಷಿವಿಜ್ಞಾನಿಗಳ ಸಲಹೆಯಂತೂ ಕೃಷಿಕರಿಗೆ ಕೆಲವು ವಿಷಯದಲ್ಲಿ ಬೇಕಾಗಿಲ್ಲ. ಆದುದರಿಂದ ಎಂಟು ಗಂಟೆಗೆ ಊಟ ಮಾಡಿ ಸುಬ್ಬಣ್ಣ ತೋಟಕ್ಕೆ ಹೊರಟು ಹೋದ ಕಂಬಳಿ ಹೊದ್ದು ಕೈಯಲ್ಲೊಂದು ಟಾರ್ಚ್ ಮತ್ತೊಂದು ಕೈಯಲ್ಲಿ ಬಡಿಗೆ ಹಿಡಿದು.

ಕಾವಲು ಕಾಯುವ ಮಾಳದ ಮಂಚದಲ್ಲಿ ತಲೆದಿಂಬು ಇಟ್ಟು ಅದರ ಮೇಲೆ ಕಂಬಳಿ ಹೊದೆಸಿದ. ಪಕ್ಕದಲ್ಲಿಯೇ ಅಗ್ಗಿಷ್ಟಿಕೆಯನ್ನು ಹಚ್ಚಿದ. ಯಾರಾದರೂ ನೋಡಿದರೆ ಮಂಚದ ಮೇಲೆ ಮಲಗಿದಂತೆ ಭಾಸವಾಗುತ್ತಿತ್ತು. ಅಲ್ಲಿಂದ ಮೆಲ್ಲಗೆ ಸುಬ್ಬಣ್ಣ ಕತ್ತಲೆಯಲ್ಲಿ ದೂರ ಹೋಗಿ ಕುಳಿತ. ಅವನಿಗೂ ಒಳಗಿಂದೊಳಗೆ ಭಯವಾಗುತ್ತಿತ್ತು. ಒಂದು ಕಡೆ ಭಯ ಮತ್ತೊಂದು ಕಡೆ ಹಣ್ಣಡಿಕೆಯ ಮೇಲಿನ ವ್ಯಾಮೋಹ. ಅಡಿಕೆಯ ಹಾಳೆಯ ಮೇಲೆ ಕುಕ್ಕುರುಗಾಲಲ್ಲಿ ಕಾಯುತ್ತಾ ಕುಳಿತ, ಕಾಲು ಜೊಮ್ಮು ಹಿಡಿಯುತ್ತದೆಯೆಂದು ಅನಿಸಿದಾಗ ಕಾಲಿನ ಸಪ್ಪಳವಾಗದಂತೆ ನಡೆದು ಮತ್ತೆ ಕೂರುವುದು ಮಾಡತೊಡಗಿದ. ಇಷ್ಟು ಆಗುವಾಗ ಹೆಚ್ಚು ಕಡಿಮೆ ರಾತ್ರಿ ಹನ್ನೊಂದುವರೆ ಇರಬೇಕು. ಇದ್ದಕ್ಕಿದ್ದಂತೆ ಯಾರೋ ಇಬ್ಬರು ಅವನು ಹಾಕಿದ ಮಾಳದ ಹತ್ತಿರ ಬಂದು ನೋಡಿದಂತೆ ಮತ್ತು ಪಿಸಪಿಸನೆ ಮಾತಾಡಿದಂತೆ ಭಾಸವಾಯಿತು. ಬಡ್ಡಿ ಸುಬ್ಬಣ್ಣ ಮಾತ್ರ ಮನಸ್ಸಿನೊಳಗೆ ನಗಾಡಿದ. ತಾನು ಮಾಳದಲ್ಲಿಯೇ ಮಲಗಿದ್ದೇನೆಂದು ಇವರು ಭಾವಿಸಿದ್ದಾರೆಂದುಕೊಂಡ.

ಸ್ವಲ್ಪ ಹೊತ್ತಿಗೆ ಯಾರೋ ಒಬ್ಬ ಅಡಿಕೆಯ ಮರವೇರಿದಂತೆ ಮತ್ತು ಹಣ್ಣಡಿಕೆಯ ಗೊನೆಯಲ್ಲಿ ಒಂದನ್ನು ಬಾಯಲ್ಲಿ ಕಚ್ಚಿ ಬಿಸಾಕಿದಂತೆ ಸುಬ್ಬಣ್ಣನಿಗೆ ಅನಿಸಿತು. ಕತ್ತಲೆಯಲ್ಲಿ ಹಣ್ಣಡಿಕೆ ಯಾವುದು; ಹಸಿ ಅಡಿಕೆ ಯಾವುದೆಂದು ತಿಳಿಯಬೇಕಾದರೆ ಅದನ್ನು ಕಚ್ಚಿ ನೋಡಬೇಕು. ಹಣ್ಣಡಿಕೆಯ ಸಿಪ್ಪೆಯು ಕಚ್ಚಿದ ತಕ್ಷಣ ಒಗರೆಂದು ಅನಿಸುವುದಿಲ್ಲ. ಕೊಂಚ ಸಿಹಿಯಿರುತ್ತದೆ. ಕೆಲವೇ ಕ್ಷಣದಲ್ಲಿ ಅಡಿಕೆಯ ಗೊನೆಯನ್ನು ಚೂರಿಯಿಂದ ಕೊಯ್ದು ಸಣ್ಣನೆಯ ಸದ್ದು ಸುಬ್ಬಣ್ಣನ ಕಿವಿಗೆ ಬಿತ್ತು. ಇನ್ನು ತಡಮಾಡುವುದು ಉಚಿತವಲ್ಲವೆಂದು ಕೈಯಲ್ಲಿದ್ದ ಟಾರ್ಚಿನ ಬೆಳಕನ್ನು ಮರದ ತುದಿಗೆ ಬಿಟ್ಟು, "ಹೋ ಹೋ ಬನ್ನಿ ಕಳ್ಳರು ಬಂದಿದ್ದಾರೆ" ಎಂದ. ಅವನ ಕಿರುಚಾಟ ಕೇಳಿ ಕೆಳಗಿದ್ದವನು ಓಡಿದ. ಮರದ ಮೇಲಿದ್ದವನು ಸರ್ರನೆ ಜಾರಿ ಓಡಿ ಬೇಲಿ ಹಾರಿದ. ಇವು ಒಂದರ್ಥದಲ್ಲಿ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ನಡೆಯಿತು.

ಮರುದಿನ ಬೆಳಿಗ್ಗೆ ಸುಬ್ಬಣ್ಣ ತೋಟದ ಬೇಲಿಯ ಹತ್ತಿರ ನೋಡಿದ. ಕಾಲಿನ ಗುರುತು; ರಕ್ತದ ಕಲೆಗಳು! ಒಂದೆಡೆ ಬೇಲಿಗೆ ಹಾಕಿದ ಗಾಜಿನ ಚೂರುಗಳಲ್ಲಿ ಸಿಕ್ಕಿದ ಮಾಂಸದ ತುಣುಕು. ಸುಬ್ಬಣ್ಣ ಪೊಲೀಸರಿಗೆ ತಿಳಿಸಿದ. ಮತ್ತು ಅದೇ ದಿನ ಸಂಜೆ ಕಳ್ಳರು ಸಿಕ್ಕಿದರು. ಅವರಲ್ಲಿ ಒಬ್ಬ ಕಿಟ್ಟ ಮತ್ತೊಬ್ಬ ಲಿಂಗ! ಅವರು ಪೊಲೀಸರಿಂದ ತಿಂದ ಒದೆಗೆ ಮಾತ್ರ ಲೆಕ್ಕವಿಲ್ಲ. ಇಷ್ಟಿದ್ದರೂ ಅವರ ಕಸುಬಿನ ನಿಷ್ಠೆ ಕಡಿಮೆಯಾಗಲಿಲ್ಲ.

* * * * *

**ನಾಟಕ ನೋಡಿದ ಮೇಲೆ ನಾವು ಅದರ ಬಗ್ಗೆ ಯೋಚಿಸುವಂತಿರಬೇಕು.**

## 1992
## ಸೆಪ್ಟೆಂಬರ್
## 24

ಯಾರು ಏನೇ ಹೇಳಿದರೂ ಸೀನಪ್ಪ ಶೆಟ್ಟರ ಮನೆಯಲ್ಲಿ ಅವರ ಹೆಂಡತಿ ಅಬ್ಬಕ್ಕನದೇ ಕಾರುಬಾರು. ಸೀನಪ್ಪ ಶೆಟ್ಟರ ಊರು ಮೂಲತಃ ಕಾಸರಗೋಡಿನ ಸಮೀಪ. "ಅಳಿಯ ಸಂತಾನವ ಕಟ್ಟು ನಮ್ಮದು: ಏನಿದ್ದರೂ ನಮ್ಮಲ್ಲಿ ನಿಮ್ಮ ಹಾಗೆ ಗಂಡಸರ ಪಾರುಪತ್ಯವಿಲ್ಲ. ಏಳು ಅಂದರೆ ಏಳಬೇಕು. ಕೂರು ಅಂದರೆ ಕೂರಬೇಕು. ಗಂಡಸರನ್ನು ಕೈಗಂಟಿನಲ್ಲಿ ಹಿಡಿದಿಟ್ಟುಕೊಳ್ಳುವವರೆಂದರೆ ನಾವೇ ಸೈ. ಬ್ರಾಂಬ್ರ ಹೆಂಗಸರು ಹುಣಿಸೆ ಹಣ್ಣಿನ ಸಾರು ತಿಂದು ಸಾಯ್ತಾರೆ. ಗಂಡ ಮಲಗು ಅಂದ್ರೆ ಬಿಚ್ಚಿ ಮಲಗ್ತಾರೆ. ಏಳು ಅಂದ್ರೆ ಸೀರೆ ಹೊದ್ದುಕೊಂಡು ಏಳುತ್ತಾರೆ. ಮೈ ಬಗ್ಗಿಸಿ ರೂಢಿಯುಂಟಾ ಅವಕ್ಕೆ? ಅದಕ್ಕೆ ಸರಿಯಾಗಿ ಬ್ರಾಹ್ಮಣ ಗಂಡಸರೂ ಕೂಡಾ ಇದ್ದಾರೆ. ಒಂದು ಲೋಟ ನೀರು ಬೇಕಾದ್ರೂ ಹೆಂಡತಿ ತಂದು ಕೊಡಬೇಕು. ಎಣ್ಣೆ ಹಚ್ಚಿ ಸ್ನಾನ ಮಾಡಿಸಬೇಕು. ರಾತ್ರಿ ಮೆಲ್ಲಗೆ ಈ ಬ್ರಾಹ್ಮಣ ಗಂಡಸರು ತೋಟ ಕಾಯುವುದಕ್ಕೆ ಅಂತ ಹೋಗಿ ಯಾರ್‍ಯಾರ ಹತ್ತಿರವೆಲ್ಲಾ ಮಲಗಿ ಬರುತ್ತಾರೋ ಏನು ಕತೆಯೊ? ಅಲ್ಲದಿದ್ದರೂ ಈ ಬ್ರಾಹ್ಮಣರ ಮಡಿ ಮೈಲಿಗೆಯಲ್ಲಾ ಹಗಲಿಗೆ. ರಾತ್ರಿ ಅದೆಲ್ಲಾ ಎಲ್ಲಿ? ನಮ್ಮಲ್ಲಿಯಾದರೆ ಹಾಗಲ್ಲಪ್ಪ; ಮದುವೆಯಾದ್ರೆ ನಾವು ಗಂಡನ ಹಿಂದೆ ಹೋಗಬೇಕು ಅಂತ ಇಲ್ಲ. ಬೇಕಿದ್ದರೆ ಗಂಡು ಬಂದು ಹೆಂಡತಿಯ ಮನೆಯಲ್ಲಿ ಚಾಕ್ರಿ ಮಾಡಿಕೊಂಡು ಇರಬೇಕು ಅಷ್ಟೆ" ಎಂದು ಅಬ್ಬಕ್ಕ ಕನಿಷ್ಠವೆಂದರೂ ದಿನಕ್ಕೆ ಹತ್ತು ಸರ್ತಿ ಯಾರಾದರೂ ಸಿಕ್ಕಿದರೂ ಹೇಳಿಯಾಳು. ಅಬ್ಬಕ್ಕನ ದೊಡ್ಡ ಮತ್ತು ಗಡಸು ಧ್ವನಿಯು ಕಿವಿಯ ತಮಟೆಯನ್ನು ಬಡಿಯುವಷ್ಟು ಗಟ್ಟಿಯಾಗಿತ್ತು. 'ನನ್ನ ಮಾತು ಅಂದರೆ ಕಡ್ಡಿ ತುಂಡು ಮಾಡಿದ ಹಾಗೆ. ಪೆಟ್ಟೊಂದು ತುಂಡೆರಡು. ನನಗೆ ಹಿಂದೆ ಒಂದು; ಮುಂದೆ ಒಂದು ಮಾತಾಡಿ ಗೊತ್ತಿಲ್ಲ. ಮಸ್ಕಿರಿ – ಗಿಸ್ಕಿರಿ ಮಾಡಿ ಗೊತ್ತಿಲ್ಲ. ಏನಿದ್ದರೂ ಎದುರೆದುರು. ವೈಯ್ಯಾರ ನಾಟಕವೆಲ್ಲಾ ನನಗೆ ಗೊತ್ತಿಲ್ಲ' ಎಂದು ಕೊಚ್ಚಿಕೊಳ್ಳುವುದು ಅವಳ ಸ್ವಭಾವ. ಮೂರು ಹಲಸಿನ ಕಾಯಿಯಷ್ಟು ಎತ್ತರದ ಅಬ್ಬಕ್ಕ ಓಡಾಡುವುದು ಗುಜ್ಜೆ ಹಲಸಿನ ಕಾಯಿ ಉರುಳು ಸೇವೆ ಮಾಡಿದ ಹಾಗೆ ಕಾಣಿಸುತ್ತದೆ. ಅತ್ತ ಬಿಳಿಯೂ ಇಲ್ಲ; ಇತ್ತ ಕಪ್ಪೂ ಅಲ್ಲ ಎನ್ನುವ ರೀತಿಯ ಬಣ್ಣ ಅವಳದು. ಬೆಳಿಗ್ಗೆ ಹತ್ತು ಗಂಟೆಯಿಂದ ಪ್ರಾರಂಭ ಮಾಡಿದರೆ ಮಧ್ಯಾಹ್ನ ಒಂದು ಗಂಟೆಯವರೆಗೂ ಮನೆಯ ಚಾವಡಿಯಲ್ಲಿ ತಲೆ ಬಾಚಿ ಹೇನು ಒರೆಯುತ್ತಾ

ಕೂತುಕೊಂಡರೆ ಮುಗಿಯಿತು. ಅದೊಂದು ಅವಳ ಮಟ್ಟಿಗೆ ಘನ ಕಾರ್ಯ. ಜಗಲಿಯಲ್ಲಿ ಕಾಲುನೀಡಿ ಕುಳಿತುಕೊಂಡು ಬಾಚಣಿಗೆಯಲ್ಲಿ ಹೇನನ್ನು ಒರೆಯುವಾಗ ಮಾತಿಗೆ ಯಾರೂ ಸಿಗದಿದ್ದರೆ ಹೇನಿನ ಜೊತೆಗೆ, "ಹೂಂ ಎಲ್ಲಿ ಓಡಿಹೋಗ್ತಿಯಾ ನೋಡಿಯೇ ಬಿಡ್ತೇನೆ. ನಿನಗೆ ಇರುವ ಧಿಮಾಕು ಇಳಿಸಲು ನಾನೇ ಸರಿ. ಮುಂಡೆಗೆ ಹುಟ್ಟಿದವರಿಗೆ ಎಷ್ಟು ಬುದ್ಧಿ ಇದ್ದೀತು? ನಾನು ಯಾರಿಗೂ ತಲೆಬಾಗಿಸಿದವಳೇ ಅಲ್ಲ. ತಲೆಯೆತ್ತಿ ನಡೆದವಳ ಮೇಲೆ ನಿನ್ನ ಆಟ ನಡೆಯಲಿಕ್ಕಿಲ್ಲ ಗೊತ್ತಾಯ್ತಾ?" ಎಂದು ಹೇಳುವುದೂ ಉಂಟು. ಅಬ್ಬಕ್ಕನ ಮಾತು ಕತೆಯಲ್ಲಿ ಸ್ವ – ಪ್ರವರವು ಹೆಚ್ಚು. ಅಬ್ಬಕ್ಕ ಮನೆಯಲ್ಲಿ ಇಲ್ಲದಿದ್ದರೆ ಸೀನಪ್ಪ ಶೆಟ್ಟರೂ ಬಾಯಿ ಮುಚ್ಚಿಕೊಂಡು ಕೂರುವ ಪೈಕಿಯಲ್ಲ. ಆದರೆ ಹೆಂಡತಿಯ ಎದುರು ಅವರ ಆಟವಾಗಲೀ; ಅವರ ಮಾತಾಗಲೀ ನಡೆಯುವುದಿಲ್ಲ. ಗಂಡನನ್ನು ಎಡಗೈಯ ಭದ್ರ ಮುಷ್ಠಿಯಲ್ಲಿ ಇಟ್ಟುಕೊಂಡಿದ್ದೇನೆಂದು ಅಬ್ಬಕ್ಕನ ಆಂಬೋಣ. ಅಬ್ಬಕ್ಕನದು ಹರಕು ಬಾಯಿ. ಅವಳು ಲಡ್ಡು ಹಿಡಿದ ಮರದ ಹಾಗೆ ಅಂತ ಸೀನಪ್ಪ ಶೆಟ್ಟರ ತಿಳುವಳಿಕೆ. ಹಗಲು ಹೊತ್ತಿನಲ್ಲಿ ಅಬ್ಬಕ್ಕನ ದೊಡ್ಡ ಬಾಯಿಗೆ ಎದುರು ನಿಲ್ಲುವುದು ಕಷ್ಟವೆಂದು ಸೀನಪ್ಪಶೆಟ್ಟರು ಬೆಳಗ್ಗೆಯಿಂದ ಹಲ್ಲು ಉಜ್ಜುತ್ತಾ ಕೆರೆ ಕಡೆಗೆ ಹೋಗುತ್ತಾರೆ. ಮತ್ತೆ ಅಬ್ಬಕ್ಕ ಕೊಟ್ಟದ್ದನ್ನು ನುಂಗಿ ಹೊರಟರೆ ಮಧ್ಯಾಹ್ನ ಬಂದರೆ ಬರಬಹುದು; ಇಲ್ಲವೆಂದರೆ ಇಲ್ಲ. ಹೋಗಿ ಪೇಟೆಯಲ್ಲಿಯೋ; ಕೋಳಿ ಅಂಕದ ನಡುವೆಯೋ ಮತ್ತೆ ಎಲ್ಲಿಯೆಂದರೆ ಅಲ್ಲಿ ಕಾಲಕ್ಷೇಪ ಮಾಡಿ ರಾತ್ರಿ ಹೊಸ್ತಿಲು ಮೆಟ್ಟುವುದು ಹತ್ತು ಗಂಟೆಯ ಮೇಲೆ. "ಮನೆಗೆ ಒಂದು ಹಿಡಿ ಉಪ್ಪು ತಂದು ಕೊಟ್ಟರೆ ಕೇಳಿ: ನಾನು ತಲೆ ಬೇಕಿದ್ದರೆ ಬೋಳಿಸಿಕೊಂಡೇನು" ಅಂತ ಅಬ್ಬಕ್ಕ ಸಿಟ್ಟಿನಲ್ಲಿ ಹೇಳುವುದು ಉಂಟು. ಅವರು ಹಾಗೆ ಹೇಳುವಾಗ ಶೆಟ್ಟರು ಎರಡೂ ಕೈಗಳ ಕಿರುಬೆರಳನ್ನು ಕಿವಿಯೊಳಗೆ ಹಾಕಿ ತಿರುಗಿಸುವುದೂ ಹೌದು. ಗಂಡನ ನಿರ್ಲಕ್ಷ್ಯ ನೋಡಿ ಅಬ್ಬಕ್ಕ ಸಿಟ್ಟಿನಲ್ಲಿ ಕುದಿಯುತ್ತಾ ಮಡಕೆಯ ಬೆನ್ನಿಗೆ ಗುದ್ದುವುದೂ ಹೌದು. ಮಣ್ಣಿನ ಮಡಿಕೆಗಳು ಒಡೆದದ್ದೂ ನಿಜ. ಬಚ್ಚಲ ಮನೆಯ ತಾಮ್ರದ ಚೆಂಬು ಮುಖವನ್ನು ವಿಕಾರ ಮಾಡಿಕೊಂಡಿರುವುದೂ ಇದೇ ಕಾರಣಕ್ಕೆ ಎಂದು ಶೆಟ್ಟರ ಪಂಚಾಂಗ ಹೇಳುವುದು ಕೂಡಾ ಸೂರ್ಯನ ಬಿಸಿಲಿನಂತೆ ಸತ್ಯ.

'ಈ ಮಾರಿ ಮುಂಡೆಯನ್ನು ಕಟ್ಟಿಕೊಂಡು ಸುಖವುಂಟಾ? ಬೆಳಗ್ಗೆ ಎದ್ದರೆ ಪಾಡ್ದನ: ರಾತ್ರಿ ಮಲಗುವಾಗ ಪಾಡ್ದನ. ನಾನೆಲ್ಲಿಯಾದರೂ ತುಟಿ ಪಿಟಿಕ್ಕೆಂದೆನೋ ಮುಗಿಯಿತು ತಲೆಯನ್ನು ಗೋಡೆಗೆ ಜಜ್ಜಿಕೊಂಡಂತೆ ಸುಖ!' ಇದು ಸೀನಪ್ಪಶೆಟ್ಟರ ಅಹವಾಲು. ಕೆಲವು ಮಟ್ಟಿಗೆ ಅದು ನಿಜವೂ ಕೂಡಾ. ಮದುವೆಯಾಗುವ ಮೊದಲು ಸೀನಪ್ಪ ಶೆಟ್ಟರಿಗೊಂದು ಸಣ್ಣ ಬೀಡಾ – ಬೀಡಿ ಅಂಗಡಿಯಿದ್ದುದು ನಿಜ. ಅವರ

ಆಗಿನ ಪರಿಸ್ಥಿತಿ ಸ್ವಲ್ಪ ಕಠಿಣವಾಗಿತ್ತು. ಕಾಲಿಗೆಳೆದರೆ ತಲೆಗಿಲ್ಲ. ತಲೆಗೆಳೆದರೆ ಕಾಲಿಗಿಲ್ಲ ಎನ್ನುವಂಥ ಪರಿಸ್ಥಿತಿ. ಇದ್ದ ಮೂರ ಜನ ತಂಗಿಯರನ್ನು ಮದುವೆ ಮಾಡಿಸುವಾಗ ಆದ ಕಷ್ಟ ಅಷ್ಟಿಷ್ಟಲ್ಲ. ವರದಕ್ಷಿಣೆ; ಚಿನ್ನ: ಇದು ಅದು ಅಂತ ಆದ ಸಾಲ ಒಂದಕ್ಕೆರೆಡು ಏರಿತು. "ನಮ್ಮ ಶೆಟ್ರುಗಳಲ್ಲಿ ವರದಕ್ಷಿಣೆ ತೆಗೆದುಕೊಳ್ಳದ ಗಂಡಸಿದ್ದರೆ ಅವನೊಬ್ಬ ಪುಕ್ಸಟ್ಟೆ ಅಂತಲೆ ಲೆಕ್ಕ. ಒಂದು ಬೆಲೆಯೇ ಇಲ್ಲ. ಏನಿದ್ದರೂ ವರದಕ್ಷಿಣೆ ತೆಗೆದುಕೊಳ್ಳಬೇಕು. ಅದನ್ನು ತೆಗೆದುಕೊಂಡ ಗಂಡಸಿಗೆ ಒಂದು ಮರ್ಯಾದೆ. ನಿಮಗೆ ಇದು ಗೊತ್ತಿಲ್ಲ. ನಮ್ಮ ಜಾತಿಯಲ್ಲಿ ಗಂಡು ಮಗನನ್ನು ಹೆತ್ತ ಹೆಂಗಸಿಗೆ ಕೂಡಾ ಬೆಲೆಯಿಲ್ಲ. ಹೆಣ್ಣು ಮಗುವಿಗೇ ನಮ್ಮಲ್ಲಿ ಜಾಸ್ತಿ ಮರ್ಯಾದೆ; ಅವಳು ಕುಲದ ಮರ್ಯಾದೆ ಉಳಿಸುವವಳು. ಅದಕ್ಕೆ ಸರಿಯಾಗಿ ಮಿತಿಮೀರಿದ ವರದಕ್ಷಿಣೆ ಬೇರೆ. ಆಯ್ತಪ್ಪಾ – ಎಲ್ಲಾ ಆಗಿ ಮದುವೆ ಮಾಡಿದೆವು ಅಂತ ಇಟ್ಟುಕೊಳ್ಳಿ. ಅದರಿಂದ ಏನಾದರೂ ಸುಖವುಂಟಾ? ಏನೂ ಇಲ್ಲ ಕರ್ಮ – ಹೆಣ್ಣು ಮಕ್ಕಳೊಂದಿಗೆ ಅವರ ಗಂಡಂದಿರು ಬಂದು ಮನೆ ಸೇರಿಬಿಡ್ತಾರೆ. ನಾವು ಗಂಡು ಮಕ್ಕಳು ನಮ್ಮ ಗಂಟು ಮೂಟೆ ಕಟ್ಟಿಕೊಂಡು ಹೊರಡಬೇಕು. ಮಾವನ ಮನೆಯಲ್ಲಿ ಬಂದು ಚಾಕ್ರಿಗೆ ಬೀಳಬೇಕು" ಹೆಂಡತಿಯ ಕಿರಿಕಿರಿ ತುಂಬಾ ಜಾಸ್ತಿಯಾದ ದಿವಸ ಸೀನಪ್ಪ ಶೆಟ್ಟರು ಹೇಳಿಕೊಳ್ಳುತ್ತಾರೆ. ಮದುವೆಯಾದ ಮೇಲೆ ಶೆಟ್ಟರು ಅಂಗಡಿಯನ್ನು ತಂಗಿಗೆ ವಹಿಸಿ; ಹೆಂಡತಿಯ ಮನೆಯಲ್ಲಿ ಬಿಡಾರ ಹೂಡಿದ ಮೇಲೆ ಅವರ ಚಾವಡಿ ಪುರಾಣ ಪ್ರಾರಂಭವಾಯಿತು. ಎರಡು ಮುಡಿ ಭತ್ತ ಬೆಳೆಯುವ ಗದ್ದೆ; ಗದ್ದೆಯ ಹುಣಿಯಲ್ಲಿ ಎಂಟ್ಹತ್ತು ತಾಳೆಯ ಮರ; ನಡು ನಡುವೆ ತೆಂಗಿನ ಮರಗಳು; ಮನೆಯ ಹಿಂದೆ ಇರುವ ಗುಡ್ಡದಲ್ಲಿನ ಗೇರು ಬೀಜದ ಮರಗಳು; ಒಂದು ಜೊತೆ ಕೋಣ; ಬೆಳಗ್ಗೆಯೇ ಗೂಡಿನ ಬಾಗಿಲು ತೆರೆದರೆ ಓಡಾಡುವ ಕೋಳಿಗಳು – ಇವು ಯಾವುದೂ ಶೆಟ್ಟರ ಆಸಕ್ತಿಯನ್ನು ಕೆರಳಿಸುವ ಜೀವರಾಶಿ; ಸಸ್ಯ ರಾಶಿಗಳಾಗಿರಲಿಲ್ಲ. ಕೋಳಿ ಅಂಕದ ಹುಂಜ ಮಾತ್ರ ಅವರಿಗೆ ಅತ್ಯಂತ ಪ್ರಿಯವಾದುದು. ಅದು ಯಾವತ್ತೂ ಸೋಲನ್ನು ತಂದುಕೊಡಲಿಲ್ಲವೆಂದು ಅದರ ಬಗ್ಗೆ ಅವರಿಗೆ ಹೆಮ್ಮೆ. ಅದಕ್ಕೆ "ಕ್ಕೆಮ್ಮೆರ" ಎಂದೇ ಕರೆಯುತ್ತಿದ್ದರು. ಅದನ್ನು ಪ್ರೀತಿಯಿಂದ ತಡವಿದಷ್ಟು ಪ್ರೀತಿಯಿಂದ ಅಬ್ಬಕ್ಕನನ್ನು ಸವರಿರಲಿಲ್ಲವೆಂದು ಸ್ವತಃ ನಿಷ್ಠುರವಾದಿಯೆಂದು ಹೇಳಿಕೊಂಡ ಅಬ್ಬಕ್ಕನಿಗೆ ಅನಿಸಿತ್ತು. ಹುಂಜಕ್ಕಿರುವ ಗತ್ತು ಕೂಡಾ ಸೀನಪ್ಪ ಶೆಟ್ಟರಿಗೆ ತುಂಬಾ ಇಷ್ಟ. ಈ ನಮ್ಮ ಕ್ಕೆಮ್ಮೆರನಿಗೆ ಇರುವ ಗತ್ತು ಸ್ವತಃ ಶೆಟ್ಟರ ಕುಲದಲ್ಲಿ ಹುಟ್ಟಿದವರಿಗೂ ಇಲ್ಲವೆಂದು ಅವರು ಹೇಳುತ್ತಿದ್ದರು. ಪ್ರೀತಿಯು ತಡೆಯದಾಗ ಸೀನಪ್ಪ ಶೆಟ್ಟರು ಅದನ್ನು ಕಾಲಮೇಲೆ ಕೂರಿಸಿ ಅದರ ಕೊರಳನ್ನು ನೀವುತ್ತಿದ್ದರು. ಅರೆ ಕೆಂಪು ಬಣ್ಣದ ಪುಕ್ಕಗಳಿಂದ; ಅದರ ನಡೆ ನುಡಿಯಿಂದ ಅದಕ್ಕೆ ಸಹಜ ಗತ್ತು ಬಂದಿತು ಎನ್ನುವುದು

ಬೇರೆ ಮಾತು. ಕೋಳಿ ಅಂಕಕ್ಕೆ ಹೋದಾಗಲೆಲ್ಲಾ ಅದನ್ನು ಅಂಕಕ್ಕೆ ಬಿಡಲು ಅಂಥಾ ನಿಯಮವೇನೂ ಮಾಡಿಕೊಂಡಿರಲಿಲ್ಲ. ಮನಸ್ಸು ಸರಿಯೆಂದು ಕಂಡರೆ ಎದುರು ಕಟ್ಟುವ ಕೋಳಿಯು ಹೇಗೆ ಇದೆಯೆಂದು ನೋಡಿಕೊಂಡು ಮಾತ್ರ ಕೋಳಿ ಅಂಕದಲ್ಲಿ ತಮ್ಮ ಹುಂಜವನ್ನು ಬಿಡುತ್ತಿದ್ದರು.

ಕೋಳಿ ಅಂಕದ ವಿಷಯದಲ್ಲಿ ಲಿಂಗ ಮತ್ತು ಕಿಟ್ಟ ಇಬ್ಬರೂ ಶೆಟ್ಟರ ಸಂಗಾತಿಗಳು. “ಹೌದನಾ ಕಿಟ್ಟ, ನಮ್ಮ ಕ್ಕೆಮ್ಮೈರನನ್ನು ಬಿಡುವುದಾ ಹೇಗೆ?” ಎಂದು ಶೆಟ್ರು ಕೇಳಿದರೆ ‘ಈವತ್ತು ಸುಖವಿಲ್ಲ’ ಎಂದು ಕಿಟ್ಟ ಹೇಳಿದನೆಂದರೆ ಮತ್ತೆ ‘ಏಯ್, ಲಿಂಗ ಕ್ಕೆಮ್ಮೈರನನ್ನು ತೆಗೆದುಕೊಂಡು ಹೋಗಿ ಬಿಟ್ಟು ಬಾ” ಎಂದು ಶೆಟ್ರು ಹೇಳಿಬಿಡ್ತಾರೆ. ಕಿಟ್ಟ “ಈವತ್ತು ಕಟ್ಟಿಬಿಡುವಾ” ಎಂದರೆ ಶೆಟ್ಟರು ಕಾಯುತ್ತಾರೆ. ಸಂದರ್ಭ ನೋಡಿ ಹೇಳಿ ಬಿಡ್ತಾರೆ. “ನಾನು ಕ್ಕೆಮ್ಮೈರನನ್ನು ಬಿಡುವುದಕ್ಕೆ ತಯಾರು” ಅಷ್ಟು ಹೊತ್ತಿಗೆ ಲಿಂಗ ಗೆರಟೆಯಲ್ಲಿ ಹುಂಜಕ್ಕೆ ಗರ್ವದೆಣ್ಣೆ(ಸಾರಾಯಿ) ಒಂಚೂರು ಕುಡಿಸಿ ಅದರ ಕಾಲಿಗೆ ಬಾಳು(ಹರಿತವಾದ ಚಾಕು ತರಹದ ಆಯುಧ) ಕಟ್ಟುತ್ತಾನೆ. ಕ್ಕೆಮ್ಮೈರ ಶಸ್ತ್ರ ಸಜ್ಜಿತವಾಗಿ ತಯಾರಾಗುವುದೆಂದರೆ ಶೆಟ್ಟರಿಗೆ, ಲಿಂಗ, ಕಿಟ್ಟರಿಗೆ ಭಾರೀ ಹೆಮ್ಮೆ. ಹುಂಜವನ್ನು ಕಾಳಗಕ್ಕೆ ಬಿಡುವ ಕೆಲಸ ಏನಿದ್ದರೂ ಕಿಟ್ಟನಿಗೆ. ಮೊದ ಮೊದಲು ಶೆಟ್ಟರೇ ಬಿಡುತ್ತಿದ್ದರು. ಒಂದು ಸಾರಿ ಶೆಟ್ಟರು ಬಿಡುವಾಗ ಎದುರಾಳಿಯ ಹುಂಜ ಬಂದು ಇವರ ಎಡಗೈಯ ಮೇಲೇರಿತು. ಆವಾಗಲೇ ಅದರ ಬಾಳು ಅವರ ಎಡಗೈಯ ಹೆಬ್ಬೆರಳನ್ನು ಕೊಯ್ದಿತು. ಅಂದಿನಿಂದ ಅವರು ಕೋಳಿ ಅಂಕದಲ್ಲಿ ಹುಂಜವನ್ನು ಬಿಡುವ ಕೆಲಸಕ್ಕೆ ಹೋಗುವುದಿಲ್ಲ. ಆ ಕೆಲಸವನ್ನು ನಿರ್ವಹಿಸುವನು ಲಿಂಗ. ಕ್ಕೆಮ್ಮೈರ ಅಂಕದಲ್ಲಿ ಕಂಗಾಲಾದರೆ ಅದಕ್ಕೆ ಹೆಗಲಿನ ಬೈರಾಸಿನಿಂದ ಗಾಳಿ ಬೀಸುವವನು ಕಿಟ್ಟ. ಲಿಂಗ ಯಾವತ್ತೂ ಹೆಗಲಿನ ಬೈರಾಸಿನಿಂದ ಮುಂಡಾಸು ಕಟ್ಟಿಕೊಳ್ಳುವವನಲ್ಲ. ಕೋಳಿ ಅಂಕದ ದಿವಸ ಮಾತ್ರ ಮುಂಡಾಸು ಕಟ್ಟಿಕೊಳ್ಳುತ್ತಾನೆ. ಅವನು ಹೇಳುವ ಪ್ರಕಾರ, ಈ ಶೆಟ್ರುಗಳ ಎದುರು ಮುಂಡಾಸು ಕಟ್ಟಿಕೊಳ್ಳಬೇಕೂಂತ ಇದ್ದರೆ ಅದಕ್ಕೆ ಕೋಳಿ ಅಂಕವೇ ಸರಿ. ಕ್ಕೆಮ್ಮೈರನಿಗೆ ಗರ್ವದೆಣ್ಣೆಯನ್ನು ತರುವ ಜವಾಬ್ದಾರಿ ಕಿಟ್ಟನಿಗೆ. ಅವನು ತರುವಾಗ ಶೆಟ್ಟರಿಗೆ; ಲಿಂಗನಿಗೆ; ಅವನಿಗೆ ಮತ್ತು ಹುಂಜಕ್ಕೆ ಅಂತ ನಾಲ್ಕು ಪ್ರತ್ಯೇಕ ಲೆಕ್ಕದಲ್ಲಿ ತರುತ್ತಾನೆ. ಹುಂಜದ ಗರ್ವದೆಣ್ಣೆಯಲ್ಲಿ ಸ್ವಲ್ಪ ಭಾಗ ಕಿಟ್ಟನ ಹೊಟ್ಟೆಗೂ ಸೇರಿ ಸಂಜೆಯಾಗುವ ಹೊತ್ತಿಗೆ ಕೋಳಿ ಅಂಕದಲ್ಲಿ ಬಿದ್ದ ರಕ್ತದಂತೆ ಕಣ್ಣುಗಳು ಕೆಂಪೇರಿರುತ್ತಿದ್ದವು.

ಕ್ಕೆಮ್ಮೈರ ಸೋತಿಲ್ಲ. ಗೆದ್ದದ್ದು ಹೆಚ್ಚು. ಗೆದ್ದುದರಿಂದ ಅದಕ್ಕೆ ಹೆಚ್ಚು ಲಾಭವಾಗದಿದ್ದರೂ ಅದರ ಲಾಭ ಸೀನಪ್ಪ ಶೆಟ್ಟರಿಗೆ ಆಗಿದೆ. ಎದುರಾಳಿಯ ಸತ್ತಕೋಳಿಯನ್ನು ಕೈಯಲ್ಲಿ ಹಿಡಿದುಕೊಂಡು ಬರುವಾಗ ಅವರ ಮುಖ ತಾವರೆ

ಹೂ; ಕೋಳಿ ಅಂಕ ಮುಗಿದ ಮೇಲೆ ಶೆಟ್ಟರನ್ನು ಹಿಂಬಾಲಿಸಿ ಲಿಂಗ; ಕಿಟ್ಟ ಬರುವರು. ದಾರಿಯಲ್ಲಿ ಅತ್ಯಂತ ಪ್ರೀತಿಯಿಂದ ತಮ್ಮ ಕ್ಕೆಮ್ಮೆರವನನ್ನು ಸವರುತ್ತಾ; ಅದರ ಅಖಂಡವಾದ ಶೌರ್ಯವನ್ನು ಹೊಗಳುತ್ತಾ ಶೆಟ್ಟರು ಬರುವರು. ಸತ್ತಕೋಳಿಯನ್ನು ನೋಡಿದಾಗ ಮಾತ್ರ ಅಬ್ಬಕ್ಕನಿಗೆ ಅತೀವ ಸಂತೋಷವಾಗುವುದಿದೆ. ಕೋಳಿ ಸಾರು ಮತ್ತು ರೊಟ್ಟಿಯೆಂದರೆ ಅವಳಿಗೂ ಅತಿಯಾದ ಆಸೆ. ಬಾಯಲ್ಲಿ ನೀರೂರಿಸುವ ಪದಾರ್ಥವೆಂದರೆ ಕೋಳಿ ಸಾರು. ಅಬ್ಬಕ್ಕ ನನ್ನತ್ರ ಚೆನ್ನಾಗಿ ಮಾತಾಡಿದ ಗಳಿಗೆಯೆಂದರೆ ಕೋಳಿ ರೊಟ್ಟಿಯ ದಿವಸ ಮಾತ್ರ ಎಂದು ಶೆಟ್ಟರು ಹೇಳುವುದುಂಟು. ಕೋಳಿ ರೊಟ್ಟಿ ತಿಂದ ದಿವಸ ಗಂಡನ ಮುಖ ಸವರುವುದೂ ಅಬ್ಬಕ್ಕನ ಖಯಾಲಿ. ಮರುದಿನ ಮತ್ತೆ ಯಥಾ ಪ್ರಕಾರ ಕ್ಕೆಮ್ಮೆರನ ಮೇಲೆ ಸಿಟ್ಟು. ಗಂಡನ ಮೇಲೆ ಅಸಹನೆ! ಗಂಡನಿಗೆ ಕ್ಕೆಮ್ಮೆರನ ಮೇಲೆ ವಿಪರೀತ ಪ್ರೀತಿಯ ಪ್ರಾರಂಭವಾದ ಮೇಲೆ ಗಂಡನಿಗೆ ಬುದ್ಧಿ ಕಲಿಸಲೆಂದು ನಾಲ್ಕಾರು ಊರುಗಳಲ್ಲಿ ತಲಾಶು ಮಾಡಿ ಕೊನೆಗೊಂದು ದಿನ ಸುಬ್ರಹ್ಮಣ್ಯದ ಜಾನುವಾರು ಜಾತ್ರೆಯಿಂದ ಎಮ್ಮೆಯೊಂದರ ಗಂಡು ಕರುವನ್ನು ಸಾಕಿ ಬೆಳೆಸತೊಡಗಿದಳು. ಅದು ಬೆಳೆಯುತ್ತಾ ಬೆಳೆಯುತ್ತಾ ಬೀಜದ ಕೋಣವಾಯಿತು. ಅಬ್ಬಕ್ಕ ಸಾಮಾನ್ಯವಾದ; ಎಳಸು ಸ್ವಭಾವದ ಹೆಂಗಸಲ್ಲ ಮತ್ತು ಅವಳು ಹೇಳಿದ ಹಾಗೆ ವಾಸ್ತವ ಇರಲಿಲ್ಲ. ಒಳಗಿಂದೊಳಗೆ ಗಂಡನ ತಿರುಗಾಟ; ಅವನ ಬೇಜವಾಬ್ದಾರಿ; ಅವನ ಕೋಳಿ ಅಂಕದ ಹುಚ್ಚು ಬಗ್ಗು ಬಡಿಯಬೇಕೆಂದು ಅನಿಸುತ್ತಿತ್ತು. ಕನಿಷ್ಠ ವಾರಕ್ಕೊಮ್ಮೆಯಾದರೂ ಬೀಜದ ಕೋಣವನ್ನು ತಂದು ಮನೆಯೆದುರಿನ ತೆಂಗಿನಮರಕ್ಕೆ ಕಟ್ಟಿಹಾಕಿ ಅದರ ಬೆನ್ನಿಗೆ ಎಳ್ಳೆಣ್ಣೆಯನ್ನು ತಿಕ್ಕುತ್ತಿದ್ದಳು. ಗಂಡ ಎದ್ದು ಹಲ್ಲುಜ್ಜುವಾಗ ಗಂಡನ ಕಿವಿಗೆ ಕೇಳಿಸಲೆಂದು ಕೋಣನಲ್ಲಿ ಮಾತಾಡಿಸುವ ಕ್ರಮವುಂಟು. "ಈ ಮನೆಗೆ ನಾನೊಬ್ಬಳೇ ಸಾಯಬೇಕು. ಯಾರಿಗೂ ಮನೆಯ ಜವಾಬ್ದಾರಿಯಿಲ್ಲ. ಈ ಗಂಡಸರ ಜಾತಿಯೇ ಇಷ್ಟು! ಇನ್ನು ನೀನು ಏನು ಮಾಡ್ತಿಯೋ ಅಂತ ನೋಡಬೇಕು. ನಿನಗೆ ಹಾರಲಿಕ್ಕೆ ಎಮ್ಮೆ ಬೇಕು. ಮತ್ತೆ ಏನಾದರೂ ಆ ಎಮ್ಮೆಯ ನೆನಪು ಇದ್ದಿತಾ?" ಸೀನಪ್ಪ ಶೆಟ್ಟರಿಗೂ ಈ ಮಾತುಗಳು ಬಂದು ಕಿವಿಗೆ ಅಪ್ಪಳಿಸಿದರೆ ಮೆಲ್ಲನೆ ಅಲ್ಲಿಂದ ಜಾಗ ಖಾಲಿ ಮಾಡಿ ಹಿಂಬಾಗಿಲಿನ ಕಡೆಗೆ ಹೋದರೆ ಅಬ್ಬಕ್ಕನ ಆರ್ಭಟ ಮತ್ತಷ್ಟು ಹೆಚ್ಚಾಗಿ ಸೀರೆಯ ಸೆರಗಿನಲ್ಲಿ ಮೂಗೊರೆಸಿಕೊಳ್ಳುತ್ತಾ "ಈ ಗಂಡಸರ ಹಣೆ ಬರಹವೇ ಇಷ್ಟು. ನನ್ನ ಅಪ್ಪನಿಗೂ ಬುದ್ಧಿಯಿಲ್ಲ – ಗತಿ ಗೋತ್ರ ಒಂದೂ ತಿಳಿಯದೆ ಬೇಡಿ ತಿನ್ನುವವರಿಗೆ ನನ್ನನ್ನು ಮದುವೆ ಮಾಡಿಕೊಟ್ಟರು. ಮದುವೆಯಾದ ದಿನದಿಂದ ಇಂದಿನವರೆಗೆ ಸುಖ ನಾನು ಕಂಡಿದ್ದೇನಾ?" ಅಬ್ಬಕ್ಕ ಬೇಕೂಂತಲೇ ಗಂಡನನ್ನು ಕೆಣಕಿ ಕೋಣಕ್ಕೆ ಮೈಯೆಲ್ಲಾ ಎಣ್ಣೆಯನ್ನು ತಿಕ್ಕಿ ಸ್ನಾನ ಮಾಡಿಸುವಾಗ ಶೆಟ್ಟರು ತಿರುಗಿಯೂ ಆ

ಕಡೆ ನೋಡಲು ಹೋಗುವುದಿಲ್ಲ. 'ನನ್ನ ಕೋಣ ಹಾರಿದರೆ ಸಾಕು ಎಮ್ಮೆಗಳು ಗಬ್ಬವಾಗುವುದು ಖಾತ್ರಿ. ಹಾಗೆ ಬೆಳೆಸಿದ್ದೇನೆ' ಎಂದು ಕೊಚ್ಚಿಕೊಳ್ಳುವ ಅಬ್ಬಕ್ಕ ಸಾಧಾರಣವಾಗಿ ಅದು ಹಾರಲು ಕಾಸು ತೆಗೆದುಕೊಳ್ಳದೆ ಬಿಡುವವಳೂ ಅಲ್ಲ. ಎಮ್ಮೆಗಳು ಜೋರಾಗಿ ಕರೆಯುವಾಗ ಅವುಗಳ ಅರಚಾಟ ತಡೆಯಲಾಗದೆ ಜನರು ಅಬ್ಬಕ್ಕನ ಕೊಟ್ಟಿಗೆ ಕಡೆಗೆ ಎಮ್ಮೆಗಳನ್ನು ಹೊಡೆದುಕೊಂಡು ಹೋದರೆ ಅಬ್ಬಕ್ಕ ಸಮಯ ನಿಗದಿ ಮಾಡುವವರೆಗೆ ಕಾಯಬೇಕು.

ಪರ ಊರಿನವರೊಬ್ಬರು ಒಂದು ದಿನ ಎಮ್ಮೆಯನ್ನು ಹೊಡೆದುಕೊಂಡು ಅಬ್ಬಕ್ಕನ ಮನೆಯ ಹತ್ತಿರ ಬಂದರು. ಅಬ್ಬಕ್ಕ ಯಥಾ ಪ್ರಕಾರ ಕಾಸು ಕೇಳಿ ಪಡೆದುಕೊಂಡಳು. ಎಮ್ಮೆಯನ್ನು ಕೊಟ್ಟಿಗೆಯೊಳಗೆ ಬಿಟ್ಟಳು. ಸಾಮಾನ್ಯವಾಗಿ ಎಮ್ಮೆಯ ಕೆನೆತದ ವಯ್ಯಾರದ ಸಂಗೀತ ಕೇಳಿ ಕೋಣ ಹಾರಬೇಕಿತ್ತು. ಆ ಎಮ್ಮೆ ಮೂಗಿನ ಹೊಳ್ಳೆ ಅರಳಿಸಿ ಒಂಯ್ಯೋ ಎಂದು ಹೇಳಿತು. ಆದರೆ ಆ ದಿನ ಏನೂ ಮಾಡಿದರೂ ಎಮ್ಮೆಯ ಮೇಲೆ ಹಾರುವುದನ್ನು ಬಿಟ್ಟು ಕೋಣ ಕೊಟ್ಟಿಗೆಯ ಹೊರಗೆ ಬರಲು ಪ್ರಯತ್ನಿಸಿತು. ಅಬ್ಬಕ್ಕ ಕೊಟ್ಟಿಗೆಯ ಬಾಗಿಲು ಹಾಕಿಕೊಂಡಳು. ಕೊಟ್ಟಿಗೆಯೊಳಗೆ ಸುತ್ತು ಹೊಡೆಯಲು ಪ್ರಾರಂಭಿಸಿತೇ ವಿನಃ ಏನೇ ಮಾಡಿದರೂ ಅದು ಎಮ್ಮೆ ಮೇಲೆ ಹಾರುತ್ತಿಲ್ಲ. ಅದಕ್ಕೆ ಯಾವ ಉಮೇದೂ ಇರಲಿಲ್ಲ. ಅಬ್ಬಕ್ಕ ತಟಕ್ಕನೇ, 'ಓ ನಿನಗೂ ನನ್ನ ಗಂಡನ ರೋಗ ಬಂತೋ ಏನೋ? ನಿನ್ನ ಹತ್ತಿರ ಬಂದರೂ ಹಾರುವುದಕ್ಕೆ ಏನು ಸಂಕಟವೋ ಏನೋ? ನಿನ್ನ ಬೀಜ ಎಷ್ಟು ದೊಡ್ಡದಿದ್ದರೆ ಏನು ಪ್ರಯೋಜನ? ಶನಿ ಸಂತಾನ" ಎಂದು ಬಯ್ಯುತ್ತಾ ಹುಣಸೆಯ ಕೋಲಿನಿಂದ ಕೋಣಕ್ಕೆ ಬಡಿಯತೊಡಗಿದಳು. ಕೋಣ ಆ ಕಡೆ ಈಕಡೆ ಓಡಾಡಿತು. ಬಂದವರು ಮತ್ತು ಅಬ್ಬಕ್ಕ ಸೇರಿ ಕೋಣವನ್ನು ಎಮ್ಮೆಯ ಹತ್ತಿರ ತಂದು ನಿಲ್ಲಿಸಿದರು. ಅದು ಹಾರಿದ ಶಾಸ್ತ್ರ ಮಾಡಿತು. ಇದೇನೂ ಆಗುವ ಹೋಗುವ ಸಂಗತಿಯಲ್ಲ ಎಂದು ಸ್ವತಃ ಅಬ್ಬಕ್ಕನಿಗೆ ಅನಿಸಿ ಎರಡು ದಿನ ಆ ಎಮ್ಮೆಯನ್ನು ಕೊಟ್ಟಿಗೆಯಲ್ಲಿ ಕಟ್ಟಿ ಹಾಕಲು ಹೇಳಿದಳು. "ಈ ಗಂಡು ಸಂತಾನವೇ ಇಷ್ಟು: ಅವಕ್ಕೆ ಬೇಕೂಂತ ಇದ್ರೆ ಮೈ ಮೇಲೆ ಹಾರ್ತವೆ. ಹೆಣ್ಣು ಸಂತಾನಕ್ಕೆ ಬೇಕೂಂತ ಅನಿಸಿದರೆ ಗಂಡು ಅವರ ಹತ್ತಿರವೂ ಸುಳಿಯುವುದಿಲ್ಲ ಎಲ್ಲಾ ಕರ್ಮ! ಈ ಜಗತ್ತಿನಲ್ಲಿ ಗಂಡಸರೂ ಅಂತ ಇರಲೇಬಾರದಿತ್ತು. ಗಂಡಸರೆಂದರೆ ಇಷ್ಟೆ. ಸ್ವಯಾ ಅಂತ ಇದ್ದರೆ ತಾನೆ? ನನ್ನ ಗಂಡ ಸರಿಯಿದ್ದರೆ ನಾನ್ಯಾಕೆ ಹೀಗಿರುತ್ತಿದ್ದೆ? ಒಂಚೂರು ಪ್ರಯೋಜನ ಅಂತ ಇಲ್ಲ. ನಾನು ದುಡಿಯುವುದು. ಇವರು ಅದನ್ನೆಲ್ಲಾ ಕೋಳಿಯ ಪುಕುಳಿಗೆ ಹಾಕುವುದೇ ಆಗಿ ಹೋಯಿತು' ಎಂದು ಗೊಣಗಾಡತೊಡಗಿದಳು. ಸೀನಪ್ಪ ಶೆಟ್ಟರದು ಈ ವಿಷಯದಲ್ಲಿ ದಿವ್ಯ

ನಿರ್ಲಿಪ್ತ. ಆ ಮೌನಕ್ಕೆ ಎಷ್ಟು ಅರ್ಥವಿತ್ತು: ಎಷ್ಟೊಂದು ಧ್ವನಿಯಿತ್ತು ಎಂಬುದು ಅಬ್ಬರದ ಮಾತಿನ ಅಬ್ಬಕ್ಕನಿಗೆ ತಿಳಿಯುವುದು ಸಾಧ್ಯವಿರಲಿಲ್ಲ.

ಸೀನಪ್ಪ ಶೆಟ್ಟರು ಮಹಾನ್ ಖಯಾಲಿಯ ಮನುಷ್ಯನೆಂದು ಅಬ್ಬಕ್ಕನಿಗೆ ಅನಿಸಿದ್ದರೂ: ಅವರ ಕೋಳಿ ಅಂಕದ ಹುಚ್ಚು ಮನೆಯಿಂದ ಹೊರಗೆ ತೊಡಗಿಸಿಕೊಳ್ಳುವ ಪ್ರಕ್ರಿಯೆಯಾಗಿತ್ತು. ಜೀವನದ ದುಷ್ಟ ಗಳಿಗೆಯೇ ಬಂದು ನನ್ನನ್ನು ಈ ಅಬ್ಬಕ್ಕನಿಗೆ ಗಂಟು ಹಾಕಿತು ಎಂದು ಭಾವಿಸಿಕೊಂಡಿದ್ದರು. ಮದುವೆಯಾದ ಒಂದೆರಡು ವರ್ಷ ಒಂದು ರೀತಿಯಿಂದ ಸುಖವಾಗಿ ಕಳೆದ ಶೆಟ್ಟರಿಗೆ ಅದೇ ಮಹಾನ್ ವಿಷಯ. ಅನಂತರ ಕಿರಿಕಿರಿಯು ಬಂದು ತನ್ನ ದೇಹ ಮನಸ್ಸುಗಳನ್ನು ನುಂಗುತ್ತಿದೆಯೆಂದು ಅನಿಸಿದ್ದು ನಿಜ. ಲಿಂಗ ಮತ್ತು ಕಿಟ್ಟ ಅವರ ಸಹಾಯಕರಾಗಿದ್ದು ಅವರಿಗೆ ಅನುಕೂಲವಾಯಿತು. ಇದಂತೂ ಅಬ್ಬಕ್ಕನ ವಿಪರೀತವಾದ ಸಿಟ್ಟಿಗೆ ಕಾರಣವಾಯಿತು. ಕೈಮ್ಯೆರ; ಲಿಂಗ ಮತ್ತು ಕಿಟ್ಟ; ಕೋಳಿ ಅಂಕ ಎಲ್ಲವೂ ಸೇರಿಕೊಂಡು ಗಂಡ ತನ್ನನ್ನು ನಿರ್ಲಕ್ಷಿಸುತ್ತಿದ್ದಾರೆಂದುಕೊಂಡು ಕೋಣವನ್ನು ತಂದುಕೊಂಡ ಮೇಲೆ ಗಂಡನ ಜೊತೆಗೆ ಮಲಗುವುದು ಕೂಡಾ ಬೇರೆಯಾಗಿತ್ತು. ತಾನು ಅಬ್ಬಕ್ಕನ ಹಂಗಿಗೆ ಬಿದ್ದೆನೆಂದು ಸ್ವತಃ ಅವಳ ಗಂಡನಿಗೆ ಅನಿಸಿದರೆ ಗಂಡ ನಿಷ್ಪ್ರಯೋಜಕ ಎಂದು ಅಬ್ಬಕ್ಕನಿಗೆ ಅನಿಸಿತು. ಎಲ್ಲಾ ಅಧಿಕಾರವನ್ನು ಅಬ್ಬಕ್ಕನೇ ಇರಿಸಿಕೊಂಡದ್ದರಿಂದ ಹುಟ್ಟುವಳಿ; ತೆಂಗಿನಕಾಯಿ ಮಾರಾಟ; ಬೇಸಾಯ ಎಲ್ಲವನ್ನು ಅವಳೇ ನೋಡಿಕೊಂಡಿದ್ದಳು. ಕೈಯನ್ನು ಬಿಗಿ ಮಾಡಿಕೊಂಡು ಮನೆಯ ವ್ಯವಹಾರವನ್ನೆಲ್ಲಾ ನೋಡಿಕೊಂಡಿದ್ದ ಅಬ್ಬಕ್ಕನೆದುರು; ಸೀನಪ್ಪ ಶೆಟ್ಟರು ಅದರ ಬಿಸಿಯಿಂದ ತಪ್ಪಿಸಿಕೊಳ್ಳಲು ಕೂಡಾ ಒಂದು ಸುರಂಗ ಮಾರ್ಗವನ್ನು ಹುಡುಕಿಕೊಂಡರು. ಅದರ ರಹಸ್ಯ ಮೊದ ಮೊದಲು ಅಬ್ಬಕ್ಕನಿಗೆ ತಿಳಿಯಲಿಲ್ಲ. ಮೊದ ಮೊದಲು ಇದು ಪ್ರಾರಂಭವಾದದ್ದು ತನ್ನ ಸಣ್ಣ ಪುಟ್ಟ ಖರ್ಚನ್ನು ನಿಭಾಯಿಸಲು. ಹರಕು ಬಾಯಿಯ ಅಬ್ಬಕ್ಕನ ಎದುರು ಬೀಳದ ವ್ಯವಹಾರವದು. ಗೇರು ಬೀಜದ ಸಮಯದಲ್ಲಿ ಎರಡು ವ್ಯಾಪಾರವನ್ನು ಸೀನಪ್ಪ ಶೆಟ್ಟರು ಪ್ರಾರಂಭಿಸಿದರು. ಅಬ್ಬಕ್ಕ ಸ್ನಾನಕ್ಕೆಂದು ಹೊರಟ ಸಮಯದಲ್ಲಿ ಗೇರು ಬೀಜವನ್ನು ಕದ್ದು ಮಾರುವುದು. ಗೇರು ಬೀಜದ ಹಣ್ಣನ್ನು ಲಿಂಗನ ಮನೆಗೆ ಸಾಗಿಸಿ ಅದನ್ನು ಮಡಿಕೆಯಲ್ಲಿಟ್ಟು ಭೂಮಿಯೊಳಗೆ ಹೂತು ಹಾಕಿ ಕೊಳೆಯಿಸಿ ಅದರಿಂದ ಸಾರಾಯಿಯನ್ನು ತೆಗೆಸಿ ಅದನ್ನು ಸಾರಾಯಿ ಅಂಗಡಿಗೆ ಕಳಿಸುವುದು. ಗೇರು ಬೀಜದಿಂದ ತೆಗೆಯುವ ಸಾರಾಯಿ ಉಳಿದೆಲ್ಲಾ ಸಾರಾಯಿಗಿಂತ ಹೆಚ್ಚು ಸ್ಟ್ರಾಂಗೆಂದು ಸೀನಪ್ಪ ಶೆಟ್ಟರ ಅಭಿಪ್ರಾಯ. ಬಾಟಲಿಯೊಳಗಿನ ಸಾರಾಯಿಯನ್ನು ತೆಗೆದು ಅದರ ಪಸೆಯಿಂದ ಬಾಟಲಿಗೆ ಬೆಂಕಿ ಕಡ್ಡಿ ಗೀರಿ ಹಾಕಿದರೆ ಅದು

ಭಗ್ಗನೆ ಉರಿಯುವುದನ್ನು ನೋಡಿ ಸಾರಾಯಿಯು ಸರಿಯಾಗಿದೆಯೇ ಇಲ್ಲವೇ ಎಂದು ಅವರು ಪರೀಕ್ಷಿಸುವರು. ಗೇರು ಬೀಜವಿಲ್ಲದ ಸಮಯದಲ್ಲಿ ಅಕ್ಕಿ ಮುಡಿಯನ್ನು ತೂತು ಕೊರೆದು ಅದರಲ್ಲಿನ ಅಕ್ಕಿಯನ್ನು ಒಂದು ಸೇರು ಎರಡು ಸೇರು ಮಾರುವ ದಂಧೆಯನ್ನು ಬೆಳೆಸಿಕೊಂಡರು. ಒಂದೆರಡು ಸಾರಿ ಅಕ್ಕಿ ಮುಡಿಯಲ್ಲಿ ತೂತು ಬಿದ್ದುದನ್ನು ನೋಡಿ ಅಬ್ಬಕ್ಕ ಕಿರುಚಾಡಿದಕ್ಕೆ ಮೆಲ್ಲನೆ ಸೀನಪ್ಪ ಶೆಟ್ಟರು, "ಇಲಿ ಗಿಲಿಯ ಕಾಟವಿರಬಹುದು" ಅಂತ ಅಂದಿದ್ದರೂ ಕೂಡಾ. ಇದೆಲ್ಲಾ ವಿಷಯಗಳು ಮಾಮೂಲಿನಂತೆ ನಡೆಯುತ್ತಿದ್ದರೂ ಅವರ ಜೀವನದಲ್ಲಿ ಒಂದು ದಿನ ಮತ್ತೊಂದು ತಿರುವು ಬಂತು. ಆ ದಿನವೂ ಸೀನಪ್ಪ ಶೆಟ್ಟರು ಸಂಜೆ ಬರುವಷ್ಟು ಹೊತ್ತಿಗೆ ಮನೆಯ ಹೊಸ್ತಿಲು ಯಾವುದು; ಮನೆಯ ಅಂಗಳ ಯಾವುದು ಎಂದು ತಿಳಿಯದಷ್ಟು ಕುಡಿದಿದ್ದರು. ಚಾವಡಿಗೆ ಬಂದವರು ಜೋರಾಗಿ ಸಿಟ್ಟಿನಿಂದ, 'ಅಬ್ಬಕ್ಕಾ ಏಯ್ ಅಬ್ಬಕ್ಕಾ' ಎಂದು ಜೋರಾಗಿ ಕಿರುಚಿದರು. ಗಂಡನ ಸ್ಥಿತಿಯ ಅರಿವಾದ ಅಬ್ಬಕ್ಕ ಚಾವಡಿಗೆ ಬಂದು ನಿಂತರು. ಶೆಟ್ಟರು, 'ಇವತ್ತು ಯಾವುದಾದರೂ ಒಂದು ಇತ್ಯರ್ಥವಾಗಲಿ, ನಾನು ಈ ಮನೆಯಲ್ಲಿರಬೇಕಾ ಬೇಡವಾ? ಎಂದರು. ಅಬ್ಬಕ್ಕ ಇದಕ್ಕೆಲ್ಲಾ ಹೆದರುವ ಪೈಕಿಯಲ್ಲ. ಸೀರೆಯ ಸೆರಗನ್ನು ಸೊಂಟಕ್ಕೆ ಚುಚ್ಚಿ "ಬೇಕಿದ್ದರೆ ಬೇಯಿಸಿದ ಅನ್ನ ತಿಂದುಕೊಂಡು ಇರಬಹುದು. ಬೇಡವಾದರೆ....., ಎಂದು ನಿಲ್ಲಿಸಿದಳು. "ಏನು ಹೇಳು ಮುಂಡೆ ಬೇಡವಾದರೆ ನಾನು ಏನು ಮಾಡಬೇಕು?" ಎಂದು ಸೀನಪ್ಪ ಶೆಟ್ಟರು ಅಬ್ಬಕ್ಕ ಏನು ಹೇಳುತ್ತಾಳೆಂದು ಕೇಳದೆ ತಡೆದರು. "ನಾನು ನಿಮ್ಮ ಅಬ್ಬರಕ್ಕೆಲ್ಲಾ ಹೆದರುವ ಪೈಕಿಯಲ್ಲ. ನನಗೂ ಸಾಕಾಗಿದೆ. ನಿಮ್ಗೆ ಬೇಡವಾದ್ರೆ ಮನೆ ಬಿಟ್ಟು ಹೊರಟು ಹೋಗಿ" ಎಂದು ಅಬ್ಬಕ್ಕ ಹೇಳಿದವಳು ಕಣ್ಣು ಕೆಕ್ಕರಿಸಿಕೊಂಡು ಗಂಡನನ್ನು ನೋಡಿದಳು. ಅವಳ ಕಣ್ಣುಗಳಲ್ಲಿ ಗಂಡನ ಬಗ್ಗೆ ಒಂದು ಅಸಹ್ಯ ಭಾವವಿತ್ತು. ಅವರ ಎತ್ತಿದ ಕೈ ಅಬ್ಬಕ್ಕನ ಬೆನ್ನಿಗೆ ಬೀಳುವ ಮೊದಲು ಅಬ್ಬಕ್ಕ ಕ್ಯಾಕರಿಸಿ ಗಂಡನ ಮುಖಕ್ಕೆ ಉಗುಳಿದಳು. ಶೆಟ್ಟರಿಗೆ ತಡೆಯಲಾಗಲಿಲ್ಲ. ಅವಳಿಗೆ ಹೊಡೆಯಲೆಂದು ಎತ್ತಿದ ಕೈಯನ್ನು ಪಟ್ಟನೆ ಬೀಸಿದರು. ಅಬ್ಬಕ್ಕ ಆ ಏಟನ್ನು ತಪ್ಪಿಸಿಕೊಂಡಳು. ಶೆಟ್ಟರ ಕೈ ಪಟ್ಟನೆ ಗೋಡೆಗೆ ಹೊಡೆಯಿತು. ಅವರು ನೋವಿಂದ, 'ಅಯ್ಯೋ' ಎನ್ನುವಾಗಲೇ ಅಬ್ಬಕ್ಕ ಅವರ ಬೆನ್ನಿಗೆ ಎರಡು ಗುದ್ದು ಬಿಟ್ಟೂ ಆಯಿತು. ಹೆಂಡತಿಯಿಂದ ಬಿದ್ದ ಪೆಟ್ಟು ಮತ್ತು ಅವಳು ಮುಖಕ್ಕೆ ಉಗುಳಿದ್ದು ಮಾತ್ರ ಶೆಟ್ರಿಗೆ ತಡೆಯಲಾಗಲಿಲ್ಲ. ಆ ಕ್ಷಣದಲ್ಲಿ ಅಬ್ಬಕ್ಕ ಅಡುಗೆಯ ಮನೆ ಹೊಕ್ಕವಳು ಮತ್ತೆ ರಾತ್ರಿಯಾಗುವ ತನಕವೂ ಹಟ್ಟಿಯಲ್ಲಿ ಕುಳಿತು ಒಬ್ಬಳೇ ಅಳುತ್ತಿದ್ದಳು. ಶೆಟ್ಟರು ರಾತ್ರಿಯೆಂದರೇನು ಮಧ್ಯರಾತ್ರಿಯಾಗುವ ತನಕವು ಚಾವಡಿಯಲ್ಲಿ ಕುಳಿತೇ ಇದ್ದರು.

ಮರುದಿನ ಬೆಳಿಗ್ಗೆ ಅಬ್ಬಕ್ಕ ಬಂದು ಚಾವಡಿ ನೋಡುತ್ತಾಳೆ; ಶೆಟ್ಟರಿಲ್ಲ ಅವರ ಬಟ್ಟೆಗಳೂ ಇಲ್ಲ. ಅಬ್ಬಕ್ಕನಿಗೆ ಅಂದಾಜಾಯಿತು. ಶೆಟ್ಟರು ಓಡಿಹೋಗಿದ್ದಾರೆ. ಅಬ್ಬಕ್ಕ ಹುಡುಕುವ ಗೋಜಿಗೂ ಹೋಗಲಿಲ್ಲ. ಯಾರಾದರೂ ಕೇಳಿದರೆ ಮಾತ್ರ ಅಬ್ಬಕ್ಕ ಹೇಳುತ್ತಿದ್ದಳು, "ಅವರು ಓಡಿಹೋದರು ಅಂತ ನಾನು ಓಡಿ ಹೋಗುವುದಕ್ಕೆ ಆಗುತ್ತದಾ? ಪಟೇಲರ ಮಗಳು ನಾನು. ಅದಕ್ಕೆಲ್ಲಾ ಹೆದರುವುದಿಲ್ಲ. ನನಗೆ ಗಂಡನ ಅಗತ್ಯವೇ ಇಲ್ಲ. ಅವರಿಗೆ ಪುಕ್ಕಲು ಅಂತ ನನಗೇನು ಪುಕ್ಕಲೆ? ಹೆಂಡ್ತಿ ಬೇಕಿದ್ದರೆ ಬರುತ್ತಾರೆ. ಇಲ್ಲಾಂದ್ರೆ ಯಾವುದಾದರೂ ಸೂಳೆಯ ಸೀರೆ ಹೊದ್ದುಕೊಂಡು ಮಲಗುತ್ತಾರೆ" ಕೊನೆಗೆ, 'ಈ ಗಂಡಸರ ಜಾತಿಯೇ ಇಷ್ಟು. ಗಂಡಸರು ಅಂತ ಇಲ್ಲದಿದ್ರೆ ಎಷ್ಟು ಸುಖವಿತ್ತು?' ಎಂದು ಮುಕ್ತಾಯಗೊಳಿಸಿ ಯಥಾಪ್ರಕಾರ ಬೆಳಗಿನ ಹೊತ್ತು ಹೇನು ಒರೆಯುತ್ತಾ ಕೂರುತ್ತಿದ್ದಳು – ನಿಶ್ಚಿಂತೆಯಿಂದ ಹೇನಿಗೆ; ಗಂಡನಿಗೆ ಬಯ್ಯುತ್ತಾ!

* * * * *

**ಎಲ್ಲರಂಥಲ್ಲ ನನಗಂಡ**
**ಮಡದಿಯ ಬಡಿಲಾರ**
**ಮನದಲ್ಲಿ ಮರುಗಲಾರ**
**ಇರುಳಲಿ ಬಂದು ಮುತ್ತನು ಸುರಿಸಲಾರ**

## 1992 ಅಕ್ಟೋಬರ್ 15

ಅಬ್ಬಕ್ಕನ ತಂದೆ ಪಟೇಲರು ಸಂಧಿಕಾಲದ ವ್ಯಕ್ತಿ. ಪಟೇಲರು ಮೂಲತಃ ಹಾಸ್ಯ ಮನೋಭಾವವನ್ನು ಇಟ್ಟುಕೊಂಡವರು ಅಂತ ಹೇಳುತ್ತಿದ್ದರು. ಅವರಿಂದ ಸಹಾಯ ಪಡೆದವರು ತಂಪು ಹೊತ್ತಿನಲ್ಲಿ ಅವರನ್ನು ನೆನಸಿಕೊಳ್ಳಬೇಕು ಅಂತಲೂ ಹೇಳುತ್ತಿದ್ದರು. ಪಟೇಲರಾದರೂ ಗತ್ತು ತೋರಿಸುವಂತೆ ಒಮ್ಮೊಮ್ಮೆ ನಡೆದು ಕೊಳ್ಳುತ್ತಿದ್ದರಾದರೂ ಅವರಿಗೆ ಎಲ್ಲಾ ಕಾಲದಲ್ಲಿಯೂ ಗತ್ತು ಉಳಿಸಿಕೊಂಡು ಹೋಗುವುದಕ್ಕೆ ತಿಳಿಯುತ್ತಿರಲಿಲ್ಲ. ಒಂದು ಅರ್ಧ ತೋಳಿನ ಅಂಗಿ. ಬಿಳಿಯ ಶಾಲಿನಿಂದ ಒಂದು ಮುಂಡಾಸು ಕಟ್ಟಿಕೊಂಡು ಹಿತ್ತಾಳೆಯ ಕಟ್ಟು ಹಾಕಿಸಿದ ಒಂದು ಬೆತ್ತವನ್ನು ಹಿಡಿದುಕೊಂಡು ಗದ್ದೆಯ ಬದುವಿನ ಮೇಲೆ ಕಾಲಿಟ್ಟರು ಎಂದರೆ ಅವರು ಬೆತ್ತ ಕುಟ್ಟುವುದು ಮತ್ತು ಅವರ ಕಾಲಿನ ಚರ್ಮದ ಮೆಟ್ಟಿನ ಜೋಡಿನ ಜಿರಿ ಜಿರಿ ಶಬ್ದ ಒಂದು ಮೈಲು ದೂರದವರೆಗೆ ಕೇಳುತ್ತಿತ್ತು ಎಂದು ಹಿರಿಯರು ಹೇಳುತ್ತಿದ್ದರು. ಹೊರಗಡೆ ಪೇಟೆಗೆ ಹೋಗುವಾಗ; ಅರಸರನ್ನು ಮಾತಾಡಿಸಲು ಹೊರಟಾಗ; ಬಿಳಿಯರು ಮೊಕ್ಕಾಂ ಹೂಡಿದ ಸಂದರ್ಭದಲ್ಲಿ ಪಟೇಲರು ತಪ್ಪದೆ ಅಂಗಿಗೆ ನಾಲ್ಕು ಚಿನ್ನದ ಗುಂಡಿಯನ್ನು, ಕೈ ಬೆರಳುಗಳಿಗೆ ಉಂಗುರವನ್ನು ಹಾಕಿಕೊಳ್ಳುತ್ತಿದ್ದರು. ಊರೊಳಗಿನ ಸುತ್ತಾಟಕ್ಕೆ ಈ ರೀತಿಯ ಶೋಕಿಯ ಅಗತ್ಯವಿರಲಿಲ್ಲ. ಊರೊಳಗಿನ ಸುತ್ತಾಟಕ್ಕೆಂದು ಒಂದೆರಡು ಮಾಮೂಲಿ ಗೆರೆ ಗೆರೆ ಅಂಗಿ ಮತ್ತು ಅದಕ್ಕೆ ತಕ್ಕ ಮುಂಡಾಸು ಹಾಕಿಕೊಳ್ಳುತ್ತಿದ್ದರು. ತೀರ್ವೆಯ ವಸೂಲಿಗೆ ಹೋಗುವಾಗ; ಜೊತೆಗೆ ಶಾನುಭೋಗರನ್ನು ಕರೆದುಕೊಂಡು ಹೋಗುವಾಗ ಹಿಂದಿನಿಂದ ಉಗ್ರಾಣಿಯನ್ನು ಒಟ್ಟಿಗೆ ಕರೆದೊಯ್ಯುತ್ತಿದ್ದರು. ತೀರ್ವೆ ವಸೂಲಿಗೆ ಹೊರಡುವಾಗ ಮಾತ್ರ ಸಾಧ್ಯವಾದಷ್ಟು ಗತ್ತಿನಲ್ಲಿ ಇರುವ ಪ್ರಯತ್ನ ಮಾಡುತ್ತಿದ್ದರೂ ಯಾರಾದರೂ ಒಂದು ಸಣ್ಣ ಹಾಸ್ಯ ಪ್ರಸಂಗ ಹೇಳಿದರೂ ಸಾಕು – ಇಡೀ ಮೈಯನ್ನು: ಹೆಗಲನ್ನು ಕುಣಿಸಿ ಗಹ ಗಹಿಸಿ ನಗುತ್ತಿದ್ದರು. ಇಡೀ ದಿನ ದುಡಿದುದಕ್ಕೆ ನಮ್ಮ ದೇಹ ಗಟ್ಟಿ ಮುಟ್ಟಾಗಿರುವುದು. 'ಈಗಿನ ಹುಡುಗರು ನಮ್ಮೆದುರು ಬರೀ ಸಪ್ಪೆ' ಎಂದು ಹೇಳುತ್ತಿದ್ದರು. ಪ್ರತಿಯೊಂದು ತಲೆಮಾರಿನವರೂ ಹೇಳಿಕೊಂಡು ಬರುವ ಮಾತಿದು. ಪರಂಪರಾಂಗತವಾಗಿ ಬಂದಿರುವ ಈ ತರಹದ ಮಾತುಗಳನ್ನು ಪಟೇಲರಿಗೆ ಅವರ ಹಿರಿಯರು ಹೇಳಿದ್ದನ್ನು ಅವರು ದಾಟಿಸುತ್ತಾರೆಂದು ಕಿರಿಯರು ಭಾವಿಸಿಕೊಳ್ಳುತ್ತಿದ್ದರು.

ಇಷ್ಟಿದ್ದರೂ ಪಟೇಲರ ಒಳ್ಳೆಯ ಗುಣವೆಂದರೆ - ಯಾರಾದರೂ ಬಡಪಾಯಿ ಬಂದು ಅವರ ಕಾಲು ಹಿಡಿದರೆ - ತೀರ್ವೆ ಹಣವನ್ನು ಮಾಫಿ ಮಾಡುತ್ತಿದ್ದರು. ಅವರೇ ಕಂದಾಯ ಕಟ್ಟುತ್ತಿದ್ದರು. ಯಾರಾದರೂ ಸತ್ತರೆ ಸುಡುವುದಕ್ಕೆ ಸೌದೆ ಒಡೆಸುವುದರಿಂದ ಪ್ರಾರಂಭಿಸಿದರೆ ಅವರ ಸಾವಿನ ಪ್ರತಿಯೊಂದು ಕರ್ಮ ಮುಗಿಯುವ ತನಕದ ಎಲ್ಲಾ ಕೆಲಸಗಳನ್ನು ಪೂರೈಸುತ್ತಿದ್ದರು. ಶೂದ್ರರಿಗೆ ಯಾವುದಾದರೂ ಜಾಗ ತೋರಿಸಿ ಅದರಲ್ಲಿ ಮನೆ ಕಟ್ಟಿಕೊಟ್ಟು ಬೇಕಾದ್ದು ಬೆಳೆದು ಕೊಳ್ಳುವುದಕ್ಕೆ ಅವಕಾಶ ಕಲ್ಪಿಸುತ್ತಿದ್ದರು. ನಲಿಕೆಯವರು ಊರಿನಲ್ಲಿರಲಿ ಎಂದು ಒಂದು ಜಾಗವನ್ನು ಕೊಟ್ಟರು. ಊರಿನಲ್ಲಿ ಸತ್ತ ದನಗಳನ್ನು ಕೊಂಡೊಯ್ಯುವುದಕ್ಕೆ: ಬೆತ್ತದ ಬುಟ್ಟಿ ಪೂರೈಸುವುದಕ್ಕೆ ಕೊರಗರಿರಲಿ ಎಂದು ಕೊರಗರ ಕೊಪ್ಪಕ್ಕೆ ಒಂದು ಜಾಗ ತೋರಿಸಿ, ಅವರಿಗೆಂದು ಬಾವಿಯನ್ನು ತೋಡಿಸಿಕೊಟ್ಟರು. ಈ ಎರಡು ವಿಷಯದಲ್ಲಿ ಅವರಿಗೂ ಶಾನುಭೋಗರಿಗೂ ಸ್ವಲ್ಪ ಕಹಿಯೂ ಆಯಿತು. ಆದರೆ ಒಬ್ಬರನ್ನು ಬಿಟ್ಟು ಮತ್ತೊಬ್ಬರು ಕೆಲಸ ನಿರ್ವಹಿಸುವುದು ಸಾಧ್ಯವಿರಲಿಲ್ಲವಾದ್ದರಿಂದ ಒಬ್ಬರಗೊಬ್ಬರು ಹೊಂದಾಣಿಕೆ ಮಾಡಿಕೊಂಡು ಮುಂದುವರಿದರು. ನಲಿಕೆಯವರಿಗೆ ಒಂದು ಜಾಗ ಕೊಡದೆ ಬೇರೆ ನಿರ್ವಾಹವೂ ಇರಲಿಲ್ಲ. ಅದಕ್ಕೆ ಕಾರಣವಾದ ಘಟನೆಯು ಮಾತ್ರ ಪಟೇಲರಿಗೆ ಕಸಿವಿಸಿಯನ್ನು; ಉಂಟುಮಾಡಿತು. ಊರಿನ ಹಿತ ಸಂರಕ್ಷಣೆಯ ಕುರಿತು ಆಲೋಚಿಸಬೇಕಾದ ಪ್ರಮೇಯನ್ನು ತಂದುಕೊಟ್ಟಿತು. ತೋಟ ಗದ್ದೆಯಿಟ್ಟು ಕೊಂಡವರಿಗೆ ಅದು ಅಗತ್ಯದ ಪ್ರಸಂಗವಾಗಿ ಬಂದು ಬಿಟ್ಟಿದ್ದು ಒಂದು ಅಮವಾಸ್ಯೆಯಲ್ಲಿ. ಆ ದಿವಸ ಉಗ್ರಾಣಿ ಗುರುವಪ್ಪ ರಾತ್ರೆಯ ಹೊತ್ತು ಸಾರಾಯಿಯನ್ನು ಗಂಟಲಿಗೆ ಇಳಿಸಿ ಒಂದೆರಡು ಹರಳುಪ್ಪು ಬಾಯಿಗೆ ಹಾಕಿಕೊಂಡು ಹೊರಟಿದ್ದ. ಉಗ್ರಾಣಿ ಗುರುವಪ್ಪನಿಗೆ ಬಯಲಾಟದ ಹುಚ್ಚು. ಪ್ರಸಂಗಗಳ ಕೆಲವು ಸಾಲುಗಳು ಅವನಿಗೆ ಬಾಯಿ ಪಾಠ. ಸಾರಾಯಿ ಕುಡಿದು ಹೊರಟಾಗ ದಾರಿ ಖರ್ಚಿಗೆಂದು ಕಡಲೆಯನ್ನು ಜೇಬಿಗೆ ಹಾಕಿಕೊಂಡಿದ್ದ ಉಗ್ರಾಣಿ ಗುರುವಪ್ಪ ಆದಿನ ಸಾರಾಯಿಗಾಗಿಯೇ ಎರಡು ಮೈಲು ದೂರ ನಡೆದಿದ್ದ. ಪೂಜಾರಿಯು ಕೂಡಾ ಉಗ್ರಾಣಿಗೆ ಯಾವತ್ತಿಗಿಂತ ಸ್ವಲ್ಪ ಹೆಚ್ಚು ಸಾರಾಯಿಯನ್ನು ಕೊಟ್ಟಿದ್ದ. ಪೂಜಾರಿಗೆ ಉಗ್ರಾಣಿಯಿಂದ ಕೆಲವು ಉಪಕಾರಗಳಾಗ ಬೇಕಿದ್ದವು. ಲೆಕ್ಕಕ್ಕಿಂತ ಹೆಚ್ಚು ಸಾರಾಯಿಯು ಹೊಟ್ಟೆಗೆ ಸೇರಿದ್ದರಿಂದ ಅಮಲು ಹೆಚ್ಚಾಯಿತು. ದಾರಿಯಲ್ಲಿನ ಕತ್ತಲು ಉಗ್ರಾಣಿಯನ್ನು ಹೆದರಿಸುವಂತೆ ಇದ್ದವು. ಉಗ್ರಾಣಿಗೆ ಕೊಂಚ ಭಯವು ಆವರಿಸಿಕೊಂಡಿತ್ತು. ಕತ್ತಲೆಯಲ್ಲಿ ಕಾಲಿಡುವುದು ಭಯವೆನಿಸಿದ್ದರಿಂದ ಮತ್ತು ದಾರಿಯು ನಿರ್ಜನವಾದುದರಿಂದ ಯಾರ ಜೊತೆಗಾದರೂ ತಾನು ಮಾತಾಡಿಕೊಂಡು ಹೋಗುವಂತೆ ಭಾಸವಾಗಲಿಯೆಂದು ನಾಲ್ಕು ಹೆಜ್ಜೆ ಮುಂದೆ

ಹೋಗುವುದು; ಪದವನ್ನು ಹಾಡುವುದು ಪ್ರಾರಂಭಿಸಿದ. ಅವನಿಗೆ ಹೆಚ್ಚು ಇಷ್ಟವಾದ ಯಕ್ಷಗಾನ ಹಾಡುಗಳೆಂದರೆ – 'ಮದಗಜ ಗಾಮಿನಿ ಪಾಂಚಾಲೆ – ಕಾಮುಕರು ಭೂಕಾಂತನ ನಿಲಯಕೆ ಸ್ವಾಮಿಯ ಸಂಧಿಗೆ ಧರ್ಮಜ ಕಳುಹುವ.' ಇದರಲ್ಲಿ ಯಾವ ಪದಗಳು ಸರಿ ಯಾವ ಪದಗಳು ತಪ್ಪಾಗಿವೆಯೆಂದು ಅವನಿಗೆ ತಿಳಿಯುತ್ತಿರಲಿಲ್ಲ. ಪುನಃ ಪುನಃ ಮದಗಜ ಗಾಮಿನಿ ಪಾಂಚಾಲೆ ಎನ್ನುವುದು – ತನಗೆ ತಾನೇ 'ಸರಿಯಾಗಿ ನಡೆ,' ಎನ್ನುವುದು ಮಾಡುತ್ತಿದ್ದ. ಗುಡ್ಡ ಹತ್ತಿ ಇಳಿಯುವ ಹೊತ್ತಿನಲ್ಲಿ ದೂರದಿಂದ ನಾಲ್ಕೈದು ಸೂಟೆಯ ಬೆಳಕು ಅವನಿಗೆ ಕಾಣಿಸಿದಂತಾಯಿತು. ಅದರೊಂದಿಗೆ ಹತ್ತಿರದಿಂದ ಯಾರೋ ಕರೆದಂತಾಯಿತು. ಉಗ್ರಾಣಿ ಗುರುವಪ್ಪ ತುಂಬಾ ಹೆದರಿಕೊಂಡ. ಮತ್ತೊಮ್ಮೆ ಹಿಂದಿನಿಂದ ಗುರುವಪ್ಪ ತಿರುಗಿನಿಂತು – 'ಮಾಡ್ತೇನೆ ನಿನಗೆ' ಅಂದು ಹೇಳುತ್ತಾ ನಿಂತುಕೊಂಡು ಒಂದು ಸುತ್ತು ಉಚ್ಚೆ ಹೊಯ್ದ. ಸುತ್ತು ಉಚ್ಚೆ ಹೊಯ್ದರೆ ಭೂತ ಪ್ರೇತಾದಿಗಳು ಅದರೊಳಗೆ ಕಾಲಿಡುವುದಿಲ್ಲ. ಅವನನ್ನು ಕರೆಯುವ ಧ್ವನಿಯು ನಿಂತಂತೆ ಕಾಣಿಸಿತು. ಅಲ್ಲಿಂದ ತಕ್ಷಣ ಓಡಿದವನು ನಿಂತದ್ದು ಮನೆಸೇರಿದ ಮೇಲೆ. ಮನೆ ಸೇರುವ ವೇಳೆಗೆ ಮೈಪೂರ್ತಿ ಬೆವರಿನಿಂದ ಒದ್ದೆಯಾಗಿತ್ತು. ಕುಡಿದ ಅಮಲು ಇಳಿದಿತ್ತು. ಮರುದಿನ ಬೆಳಗ್ಗೆಯೇ ಪಟೇಲರಲ್ಲಿಗೆ ಓಡಿ ವಿಷಯವನ್ನು ತಿಳಿಸಿದ. ಇದಕ್ಕಾಗಿಯೇ ಪಟೇಲರು ಊರಿಗಿರುವ ಗುಳಿಗನ ಉಪದ್ರಕ್ಕೆ ಕೋಲ ಕಟ್ಟಲು ನಲಿಕೆಯವರನ್ನು ಕರೆಸಿದರು. ದೂರದ ಊರಿನಿಂದ ಬಂದ ನಲಿಕೆಯವರ ಮುಖಂಡ – ಕುಂಡನಲಿಕೆ ಎಂಬಾತ, 'ಊರಿನಲ್ಲಿ ನೆಲೆಯೂರಲು ಅಂಗೈಯಗಲದ ಜಾಗ ಕೊಡಿ' ಎಂದು ಪಟೇಲರನ್ನು ವಿನಂತಿಸಿದ. ಇದಕ್ಕಾಗಿಯೇ ಪಟೇಲರು ಇಳಿಜಾರು ಗುಡ್ಡದ ಒಂದು ಜಾಗವನ್ನು ತೋರಿಸಿ – 'ಹೋಗಿ ಮನೆ ಕಟ್ಟಿಕೊಳ್ಳಿ' ಎಂದರು. ಅಲ್ಲಿಂದ ಪ್ರತಿ ವರ್ಷ ಗುಳಿಗನ ಸೇವೆಯು ಊರಿಗೆ ಮಾಮೂಲಿಯಾಯಿತು. ಮತ್ತು ಪ್ರತಿಯೊಬ್ಬನ ತೋಟ – ಗದ್ದೆಯ ರಕ್ಷಣೆಯು ಗುಳಿಗನ ಕರ್ತವ್ಯವಾಯಿತು. ಅದಕ್ಕೆ ಒಂದೊಂದು ಕಡೆ ಒಂದೊಂದು ಗುಳಿಗನ ಕಲ್ಲು ಹಾಕಿದರು. ಗುಳಿಗನ ಕಲ್ಲು ಇಲ್ಲದ ಜಾಗವಿಲ್ಲ ಹಾಗೂ ಕಲ್ಲುಗಳಿಗೆ ಬಲಿಯಾಗದ ಕೋಳಿಯ ಜಾಗವೂ ಇಲ್ಲ.

ಇದೇ ಪಟೇಲರಿಗೆ ಒಂದು ದಿನ ತಮ್ಮೂರಲ್ಲಿಯೂ ಒಂದು ಶಾಲೆ ತೆರೆಯಬೇಕೆಂಬ ಆಲೋಚನೆಯು ಬಂತು. ಇದಕ್ಕೆ ಕಾರಣ – ಅಬ್ಬಕ್ಕ. ಅಬ್ಬಕ್ಕನಿಗೆ ಆರು ವರ್ಷ ತುಂಬಿದ ಹೊತ್ತು. ಪಟೇಲರಿಗೆ ತಮ್ಮ ಮಗಳು ಅಪ್ಪಟ ಪ್ರತಿಭಾವಂತೆಯೆಂದು ಅನಿಸಿತು. ಅಬ್ಬಕ್ಕ ಮನೆಯ ಜಗುಲಿಯಲ್ಲಿ ಕುಣಿಯುವುದು; ಹಾಡು ಹೇಳುವುದು ಕೇಳಿ ಅಡ್ಡಿಯಿಲ್ಲ ಎಂದು ಅನಿಸಿದ್ದು ನಿಜ. ಮಾತೆತ್ತಿದ್ದರೆ – ನಮ್ಮ ಮಗಳು ಅಬ್ಬಕ್ಕ ನಾಕಕ್ಷರ ಕಲಿತರೆ ಸಾಕು – ಎಲ್ಲರನ್ನೂ ಮೀರಿಸಿ

ಬಿಡುತ್ತಾಳೆ ಎಂದು ಬಂದವರ ಹತ್ತಿರ – ಹೋದವರ ಹತ್ತಿರ ಹೇಳತೊಡಗಿದರು. ಅವರ 'ನಮ್ಮ ಮಗಳು' ಎನ್ನುವ ಪದಪ್ರಯೋಗವು ತಮಾಷೆಗೂ ಕಾರಣವಾಗಿತ್ತು. ಅಪ್ಪಿತಪ್ಪಿಯೂ ಪಟೇಲರು ಮಗಳನ್ನು ಕರೆಯುವಾಗ ಏಕವಚನ ಬಳಸಿದ್ದೇ ಇಲ್ಲ. 'ಅಬ್ಬಕ್ಕ ಇಲ್ಲಿ ಬನ್ನಿ. ನೀರು ತನ್ನಿ' – ಇತ್ಯಾದಿಗಳು ನಿಜವಾಗಿಯೂ ಎಲ್ಲರಿಗೂ ಆಶ್ಚರ್ಯವನ್ನು ಉಂಟು ಮಾಡಿರುವುದು ನಿಜ. ಒಂದು ದಿನ ಶಾನುಭೋಗರು – 'ಮಕ್ಕಳಿಗೆ ಸಲುಗೆಯಿಂದ ಹೋಗು – ಬಾ ಅಂತ ಕರೆಯಬಾರದಾ ಪಟೇಲರೆ; ಅದು ಬಿಟ್ಟು ಹೋಗಿ ಬನ್ನಿ ಅಂತ ಕರೆದರೆ ಏನು ಚೆಂದ?'. ಎಂದು ಕೇಳಿದ್ದಕ್ಕೆ – "ಅದು ನಮ್ಮ ಸಂಪ್ರದಾಯ" ಎಂದು ಪಟೇಲರು ಹೇಳಿದರು.

ಪಟೇಲರಿಗೆ ಒಂದೇ ಒಂದು ಆಸೆಯೆಂದರೆ ಮಗಳನ್ನು ಹೆಚ್ಚು ಓದಿಸುವುದು; ಸಾಧ್ಯವಾದರೆ ಅವಳನ್ನು ಕಲೆಕ್ಟರ್ ಗಿಲೆಕ್ಟರ್ ಅಂತ ಏನಾದರೂ ಮಾಡುವುದು. ಅಧಿಕಾರ ನಡೆಸುವ ವಿಷಯದಲ್ಲಿ ಅವಳಿಗೆ ಸರಿಯಾದ ತಾಕತ್ತು ಇದೆಯೆಂದು ಪಟೇಲರ ಅಂಬೋಣ. ಪಟೇಲರಿಗೆ ಶಾಲೆಯೊಂದನ್ನು ತೆರೆದರೆ ಅನುಕೂಲವೆಂದು ಅನಿಸಿದರೂ ಮಗಳಿಗಾಗಿ ಪಟೇಲರು ಶಾಲೆಯನ್ನು ತೆರೆಸಿದರೆಂಬ ಅಪಖ್ಯಾತಿ ಬರುವುದು ಬೇಕಿರಲಿಲ್ಲ. ಅದಕ್ಕಾಗಿಯೇ ಒಂದು ಸಂಜೆ ಶಾನುಭೋಗರ ಮನೆಯ ಹತ್ತಿರ ಹೆಜ್ಜೆ ಹಾಕಿದರು. ಸುತ್ತು ಬಳಸಿ ಊರಿನ ಹಿತ ದೃಷ್ಟಿಯಿಂದ ಒಂದು ಶಾಲೆ ತೆರೆಯುವುದೆಂದೂ ಅದಕ್ಕೆ ಖಾಲಿ ಜಾಗವನ್ನು ಬಿಡುವುದೆಂದು ಸದ್ಯಕ್ಕೆ ಒಂದು ಸೋಗೆ ಹಾಕಿದ ಕಟ್ಟಡ ಎಬ್ಬಿಸುವುದೆಂದು ಇಬ್ಬರೂ ತೀರ್ಮಾನಿಸಿದರು. ಊರಿನವರನ್ನು ಕರೆಸಿ ಮರುದಿನ ಮಾತಾಡುವುದೆಂದು ತೀರ್ಮಾನಿಸಿದ ಶಾನುಭೋಗರ ಮನೆಯಿಂದ ಪಟೇಲರು ಹೊರಡುವಾಗ ಮಾತ್ರ ತುಂಬಾ ಖುಷಿಯಿಂದಲೇ ಇದ್ದರು, ಪಟೇಲರಿಗೆ ಅಬ್ಬಕ್ಕ ನಾಕಕ್ಷರ ಕಲಿತು ದೊಡ್ಡವಾಳಾಗುತ್ತಾಳೆ. ಅಕ್ಷರ ಕಲಿತವರಿಗೆ ಸಿಗುವ ಗೌರವ ದೊಡ್ಡದೆಂದೂ, ಅದರ ಮುಂದೆ ತಮ್ಮಂಥವರ ಜಬರದಸ್ತು ನಡೆಯುವುದಿಲ್ಲವೆಂದೂ ಭಾವಿಸಿಕೊಂಡು ಹೆಜ್ಜೆ ಹಾಕಿದರು. ಶಾನುಭೋಗರಿಗೆ ಓದಲು ಬರೆಯುಲು ಬರುವುದರಿಂದ ಅವರಿಗೆ ಗೌರವ ಹೆಚ್ಚು. ಅವರೆದುರು ತಮ್ಮ ಬೆತ್ತ ಯಾವ ಕೆಲಸವನ್ನು ಮಾಡುವುದಿಲ್ಲವೆಂದೇ ಪಟೇಲರ ತಿಳುವಳಿಕೆ. ರಾತ್ರಿ ಮನೆಗೆ ಬಂದ ತಕ್ಷಣ ಒಂದು ಚಿಟಿಕೆ ನಶ್ಯ ಮೂಗಿಗೆ ಏರಿಸಿಕೊಂಡು ಹೆಗಲ ವಸ್ತ್ರದಲ್ಲಿ ಮೂಗೊರಸಿ ಅಬ್ಬಕ್ಕನನ್ನು ತೊಡೆ ಮೇಲೆ ಕೂರಿಸಿಕೊಂಡು. 'ನಿಮ್ಗೆ ಒಂದು ಶಾಲೆ ತೆರೆಯುತ್ತೇನೆ ನೀವು ಶಾಲೆಗೆ ಹೋಗಿ ಕಲಿಯಬೇಕು. ಶಾಲೆ ಕಲಿತರೆ ವ್ಯವಹಾರ ಸುಲಭ' ಎಂದು ಮುದ್ದು ಮಾಡಿದರು. ಅಬ್ಬಕ್ಕನಿಗೆ ಈ ವಿಷಯವೆಲ್ಲಾ ಅರ್ಥವಾಗಲಿಲ್ಲ 'ನಾನು ಯಾಕೆ ಶಾಲೆಗೆ ಹೋಗಬೇಕು? ಮನೆಯಲ್ಲಿಯೇ ಇರುತ್ತೇನೆ' ಎಂದಳು.

ಆ ದಿವಸ ಕನಸಿನಲ್ಲಿಯೂ ಪಟೇಲರಿಗೆ ಅಬ್ಬಕ್ಕ ಅಕ್ಷರ ಕಲಿಯುವ ಚಿತ್ರಗಳು ಬಂದವು.

ಮರುದಿನ ಊರವರೆಲ್ಲರೂ ಶಾನುಭೋಗರ ಚಾವಡಿಗೆ ಬಂದು ಕುಳಿತರು. ಪಟೇಲರು ಬರುವಾಗ ಸ್ವಲ್ಪ ತಡವಾಯಿತು. ಊರಿನಲ್ಲಿ ಶಾಲೇ ತೆರೆಯುವ ಒಂದು ಮಹತ್ವದ ಕಾರ್ಯಕ್ಕೆ ತಾನೇ ಮೊಟ್ಟ ಮೊದಲು ಪ್ರಸ್ತಾಪ ನೀಡಿ ಅದರ ಮುಖಾಂತರ ದೊಡ್ಡ ಕೆಲಸದ ಹಿರಿಮೆಯನ್ನು ತಾನೇ ಪಡೆದುಕೊಳ್ಳಬೇಕೆಂಬ ಏಕೈಕ ಉದ್ದೇಶದಿಂದ; ಬಂದವರ ಎದುರು ಶಾನುಭೋಗರು ವಿಷಯ ಪ್ರಸ್ತಾಪಿಸಿದರು. ಅವರು 'ಗ' ಎಂದರೆ ಗಣಪತಿಯೆಂತಲೂ 'ಕಾ' ಎಂದರೆ ಕಾಗೆಯೆಂತಲೂ ವಿಷಯವನ್ನು ಮುಂದುವರಿಸುವಷ್ಟು ಹೊತ್ತಿಗೆ ಕೋಸು ಕಣ್ಣಿನ ಈಚಣ್ಣ ಹೆಗಲಿನಲ್ಲಿದ್ದ ಬೈರಾಸಿನಿಂದ ಕಣ್ಣೊರೆಸಿಕೊಂಡು ಅದನ್ನೇ ಮೂಗೊಳಗೆ ತೂರಿಸಿ ತೆಗೆದು, ತನ್ನ ದೃಷ್ಟಿಯನ್ನು ಸುತ್ತ ಹರಿಸಿದ. ಅವನ ಕಣ್ಣುಗಳು ಒಂದು ಪೂರ್ವಕ್ಕೂ ಮತ್ತೊಂದು ಪಶಿಮಕ್ಕೂ ನೋಡುತ್ತಿದ್ದುದರಿಂದ ಅವನಿಗೆ ಕೋಸು ಕಣ್ಣಿನ ಈಚಣ್ಣನೆಂಬ ಹೆಸರು ಬಂತು. ಶಾನುಭೋಗರಿಗಿಂತಲು ಒಂದೆರಡು ವರ್ಷ ವಯಸ್ಸಿನಲ್ಲಿ ಚಿಕ್ಕವನು. ಆಸೆ ಪಿನಾರಿ; ಹೇಲಿನಲ್ಲಿ ನಾಣ್ಯ ಬಿದ್ದರೆ ನಾಲಿಗೆಯಲ್ಲಿ ನೆಕ್ಕ ಬಲ್ಲಂಥ ದುಡ್ಡಿನ ಆಸೆಯಿರುವವನು. ಮುಂತಾದ ಎಲ್ಲಾ ಬಿರುದುಗಳು ಅವನಿಗಿತ್ತು. ಕೋಸು ಕಣ್ಣಿನ ಈಚಣ್ಣನ ಮಗ ಬಡ್ಡಿ ಸುಬ್ಬಣ್ಣ ದುಡ್ಡಿನ ವಿಷಯದಲ್ಲಿ ಮತ್ತು ಹೆಂಗಸರ ವಿಷಯದಲ್ಲಿ ಅಪ್ಪನದೇ ತದ್ರೂಪು ಅಂತ ಅನಂತರ ತಲೆಮಾರಿನವರು ಹೇಳುತ್ತಿದ್ದರು. ಕೋಸು ಕಣ್ಣಿನ ಈಚಣ್ಣ ಶಾನುಭೋಗರ ಮಾತಿಗೆ ಕೋಸು ಕಣ್ಣಲ್ಲಿ ನೋಡುತ್ತಾ 'ಅಲ್ಲಾ, ನಿಮಗೇನು ತಲೆ – ಗಿಲೆ ಕೆಟ್ಟಿದೆಯೋ ಹೇಗೆ? ಮೊದಲೇ ಈ ಪಟೇಲರು ಬೇರೆ ಅದು – ಇದು ಹಾಳು ಮೂಳು ಅಂತಾರೆ. ತೋಟದ ಕೆಲಸಕ್ಕೆ; ಗದ್ದೆಯ ನಾಟಿಗೆ ಜನ ಬರುವುದು ಕಷ್ಟ. ಈ ಶೂದ್ರರಿಗೆ ಅಕ್ಷರ ಕಲಿಸಿ ಆಗುವ ಉದ್ಧಾರ ಅಷ್ಟರಲ್ಲಿಯೇ ಇದೆ. ನಿಮ್ಗೆ ಬುದ್ಧಿ ಅನ್ನುವುದು ಇಲ್ಲ. ಮಡಿ – ಮೈಲಿಗೆ ಅಂತಲೇ ಗೊತ್ತಿಲ್ಲ.' ಹೆಗಲಿನ ಜನಿವಾರ ಮುಟ್ಟಿ ತೋರಿಸುತ್ತಾ, 'ಈ ಜನಿವಾರ ಬೇರೆ ಯಾರಿಗಾದರೂ ಇದೆಯೊ ಹೇಳಿ? ಗಾಯಿತ್ರಿ ಮಂತ್ರಕ್ಕಿರುವ ಶಕ್ತಿಯೆಂದರೆ ಏನೂಂತ ತಿಳಿದುಕೊಂಡಿರಿ? ಮೈಲಿಗೆಯಾದರೆ ಜನಿವಾರ ಬದಲಿಸುವುದು ಯಾಕೆಂತಾ ತಿಳಿದುಕೊಂಡಿದ್ದೀರಾ?" ಅವನ ಕಪ್ಪು ಕಪ್ಪಾದ ಜನಿವಾರ; ಅವನ ಕಪ್ಪು ಕಪ್ಪಾದ ಬೈರಾಸ ಮತ್ತು ಪದೇ ಪದೇ "ತಿಳಿದುಕೊಂಡಿದ್ದೀರಿ?" ಅಂತ ಅವನು ಹೇಳಿದ ಶೈಲಿ ಕೇಳಿ ಅಲ್ಲಿಯವರಿಗೆ ನಗೆ ಬಂತು. ಅದೇ ವೇಳೆಗೆ ಪಟೇಲರು ಶಾನುಭೋಗರ ಮನೆಯ ಮೆಟ್ಟಿಲು ಹತ್ತಿದರು. ಅವರು ಬಂದ ತಕ್ಷಣ ಈಚಣ್ಣ ಕೆಲಸದ ನೆವ ಎತ್ತಿಕೊಂಡು ಜಾಗ

ಖಾಲಿ ಮಾಡಿದ: ಯಾಕೆಂದರೆ ಪಟೇಲರ ಬಾಯಿಗೆ ಅವನ ಹತ್ತಿರ ಉತ್ತರ ಕೊಡುವುದು ಸಾಧ್ಯವಿರಲಿಲ್ಲ. ಕೋಸು ಕಣ್ಣಿನ ಈಚಣ್ಣನ ಜನ್ಮ ಜಾತಕವನ್ನು ಜಾಲಾಡಿಸಲು ಪಟೇಲರು ಹಿಂತೆಗೆಯುತ್ತಿರಲಿಲ್ಲ. ಅವನು ಎದ್ದು ಹೋಗಿರುವುದನ್ನು ಗಮನಿಸಿದ ಪಟೇಲರು, "ಹ್ಹೂಂ ಏನಂತೆ ಈಚಣ್ಣನಿಗೆ?" ಎಂದರು ಶಾನುಭೋಗರು ಸಾದ್ಯಾಂತವಾಗಿ ವಿಷಯ ತಿಳಿಸಿದರು. ಅವರು ತಿಳಿಸಿದ ವಿಷಯ ಕೇಳಿ ಪಟೇಲರು ಗಹ ಗಹಿಸಿ ನಕ್ಕು. "ಈಚಣ್ಣನವರ ಮಡಿ – ಮೈಲಿಗೆಯ ಬಗ್ಗೆ ಇಡೀ ಊರಿಗೆ ಗೊತ್ತು. ಆ ಸಂಗತಿ ಮಾತಾಡಿದರೆ ನಮ್ಮ ನಾಲಿಗೆ ಮೈಲಿಗೆಯಾಗುತ್ತದೆ" – ಎಂದು ಶಾಲೆ ಯಾಕೆ ಪ್ರಾರಂಭಿಸಬೇಕೆಂದು ಸಣ್ಣ ಉಪನ್ಯಾಸ ಕೊಟ್ಟರು. "ನಮ್ಮ ಜನರು ಕಲೆಕ್ಟರ್ ಆಗಬೇಕಾದರೆ: ಶಿರಸ್ತೇದಾರ ಆಗಬೇಕಾದರೆ ಅಕ್ಷರ ಕಲಿಯಬೇಕು. ಊರು ಉದ್ಧಾರ ಆಗ್ತದೆ. ಅದು ಬಿಟ್ಟು ಹಾಗೆ – ಹೀಗೆ ಅಂದರೆ ಯಾವ ಪ್ರಯೋಜನ ಇಲ್ಲ" ಎಂದು ಪಟೇಲರು ಹೇಳಿದರು. ಅವರ ಮಾತು ಎಲ್ಲರಿಗೂ ಅಪ್ಯಾಯ ಮಾನವೆನಿಸಿತು. ಶಾನುಭೋಗರಿಗೆ ಮಾತ್ರ ಪಟೇಲರ ಮಾತು ಕಸಿವಿಸಿಯನ್ನು ಉಂಟುಮಾಡಿತು. ಎಲ್ಲ ತಮ್ಮ ಉದ್ಯೋಗಕ್ಕೆ ಸಂಚಕಾರ ಬರುತ್ತದೋ ಎಂದು ಅವರಿಗೆ ಅನಿಸಿತು. ಪಟೇಲರು – "ಶಾಲೆ ಪ್ರಾರಂಭಿಸುವುದು ಪ್ರಾರಂಭಿಸುವುದೇ ಸೈ, ಈ ವಿಷಯದಲ್ಲಿ ಯಾರು ಅಡ್ಡ ಬಂದರೂ ಬಿಡುವುದು ಬೇಡ, ನಾನೇ ಜಿಲ್ಲಾ ಕಲೆಕ್ಟರನ್ನು ಕಂಡು ಬರುತ್ತೇನೆ. ಜೊತೆಗೆ ಶಾನುಭೋಗರು ಬರಲಿ" ಎಂದರು. ಶಾಲೆ ಎಲ್ಲಿ ಪ್ರಾರಂಭಿಸುವುದು ಎಂಬುದರ ಕುರಿತು ಚರ್ಚಿಸಿದರು. ಅಂತೂ – ಇಂತೂ ಶಾಲೆಯು ಪ್ರಾರಂಭವಾಯಿತು.

ಶಾಲೆಗೆ ಮೇಷ್ಟ್ರಾಗಿ ಬಂದವರು ದೂರದಲ್ಲಿ ಪಟೇಲರಿಗೆ ಸಂಬಂಧವಾಗುವ ಜತ್ತಪ್ಪಶೆಟ್ಟರು. ಆ ಕಾಲದಲ್ಲಿ ಮಂಗಳೂರಿನಲ್ಲಿ ಹೋಗಿ ಕಲಿತವರು ಎಂಬ ಹೆಗ್ಗಳಿಕೆ ಅವರದು. ಜತ್ತಪ್ಪಶೆಟ್ಟರು ಬಂದು ಶಾಲೆಯನ್ನು ಪ್ರಾರಂಭಿಸುವ ಮೊದಲು ಹತ್ತು ದಿನವಿಡೀ ಊರೂರು; ಮನೆ ಮನೆ ಸುತ್ತಿ ಬಂದರು. ಜತ್ತಪ್ಪಶೆಟ್ಟರಿಗೆ ಗತ್ತುಗಾರಿಕೆ ಕಡಿಮೆಯೆಂದು ಪಟೇಲರಿಗೆ ಅನಿಸಿತ್ತು. ಕಲಿತವರಿಗೆ ಗತ್ತು ಇಲ್ಲದಿದ್ದರೆ ಪ್ರಯೋಜನವಿಲ್ಲವೆಂದು ಪಟೇಲರ ಅಭಿಪ್ರಾಯ. ಜತ್ತಪ್ಪಶೆಟ್ಟರದು ಸ್ವಲ್ಪ ಸಪೂರಾದ ದೇಹ, ಬಿಳಿಯ ಅಂಗಿ ಮತ್ತು ಪಂಚೆ – ಅವರ ವೇಷ ಭೂಷಣ. ಕಿವಿಗೆ ಕೆಂಪು ಹರಳಿನ ಒಂಟಿ. ಬಲಗಾಲಿಗೆ ಹರಕೆಯ ಬಾಬ್ತು ಹಾಕಿಕೊಂಡ ಕಾಲ್ಬಳೆ. ಮಧ್ಯ ಬೆರಳಿನಲ್ಲಿಯೂ ಒಂದು ಕೆಂಪು ಹರಳಿನ ಉಂಗುರ. 'ನಮ್ಮ ಜತ್ತಪ್ಪನಿಗೆ ಮಧು ಮಾಂಸ ಮುಟ್ಟಿ ಗೊತ್ತಿಲ್ಲ. ಎಲೆಯಡಿಕೆ ಹಾಕಿ ಗೊತ್ತಿಲ್ಲ. ಅವನಷ್ಟು ಒಳ್ಳೆಯ ಸಾಧು ಸ್ವಭಾವದವರನ್ನು ನಾನು ನೋಡಿಲ್ಲ. ನಾನೇ ಅವನಿಗೆ ಹೇಳಿದೆ. ಕಲಿತವರು ಗತ್ತು ಉಳಿಸಿಕೊಂಡಿಲ್ಲಾಂದ್ರೆ ಜನ ನಮಗೆ ಮರ್ಯಾದೆ ಕೊಡುವುದಿಲ್ಲಾಂತ. ಆದ್ರೆ

ಅವನು ಅದನ್ನೆಲ್ಲಾ ಎಲ್ಲಿ ಕಿವಿಗೆ ಹಾಕಿಕೊಳ್ತಾನೆ? ಮೇಷ್ಟ್ರಾದ ಪುಣ್ಯಕ್ಕಾದರೂ ಊರಿನವರು ಮರ್ಯಾದೆ ಕೊಡುವ ಹಾಗಿರಬೇಕಪ್ಪ. ಅವನ ಬಿಳಿ ಪಂಚೆ ಸಂಜೆ ಹೊತ್ತಿಗೆ ಕೆಂಪಾದರೂ ಆಯಿತು. ಅವನಿಗೆ ಅದರ ಮೇಲೆ ಲಕ್ಷ್ಯವೂ ಇಲ್ಲ.' ಎಂದು ಪಟೇಲರೇ ಜತ್ತಪ್ಪನ ಕುರಿತು ಪ್ರಚಾರ ಮಾಡಿದರು. ಪಟೇಲರ ವ್ಯಾಪಕ ಪ್ರಚಾರದಿಂದ ಜತ್ತಪ್ಪ ಶೆಟ್ಟರಿಗೆ ಅನುಕೂಲವಾಯಿತು. ಅವರ ಅಸ್ತವ್ಯಸ್ತ ಕ್ರಾಪ್: ಅವರ ಸರಳವಾದ ನಡವಳಿಕೆಯು ಶೂದ್ರರಿಗೆ ಅನುಕೂಲಕರವಾಗಿ ಕಂಡು ಜತ್ತಪ್ಪಶೆಟ್ಟರನ್ನು ತಮ್ಮವರನ್ನಾಗಿ ನೋಡುವಂತಾಯಿತು. ಜತ್ತಪ್ಪ ಶೆಟ್ಟರೂ ಅಷ್ಟೇ – ಅವರಿವರು ಅಂತ ನೋಡದೆ ಎಲ್ಲರ ಮನೆಯಂಗಳದಲ್ಲಿ ನಿಂತುಕೊಂಡು ಮನೆಯವರನ್ನು ಚೆಂದದಲ್ಲಿ ಮಾತಾಡಿಸಿ; ಅವರನ್ನು ಒಲಿಸಿಕೊಂಡು ಅವರ ಸಣ್ಣ ಮಕ್ಕಳನ್ನು ಶಾಲೆಗೆ ಕಳಿಸುವಂತೆ ಪ್ರೇರೇಪಿಸಿದರು. ಬ್ರಾಹ್ಮಣರ ಮತ್ತು ಶೆಟ್ರುಗಳ ಮನೆಯಲ್ಲೂ ಅಷ್ಟೆ. ಅವರ ಸುಖ ದುಃಖ ವಿಚಾರಿಸಿಕೊಂಡು ಅವರ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ಮಾಡಿದರು. ಆದರೆ ಶಾಲೆಗೆ ಮಾತ್ರ – ಜತ್ತಪ್ಪಶೆಟ್ಟರ ಶಾಲೆ ಅಂತಲೆ ಹೆಸರು ಬಂತು. ಪರಮೇಶ್ವರನಿಗೆ ಆಗ ಹನ್ನೆರಡು ವರ್ಷ. ದುಗ್ಗಮ್ಮನಿಗೆ ಹತ್ತುವರ್ಷ, ಸುಬ್ಬಣ್ಣನಿಗೆ ಎಂಟು ವರ್ಷ, ಚಂದು ನಾಯ್ಕನಿಗೂ ಹದಿಮೂರು ವರ್ಷ; ಅಬ್ಬಕ್ಕನಿಗೆ ಐದು ವರ್ಷ. ಎಲ್ಲರಿಗೂ ಒಂದೇ ಶಾಲೆಯ ಒಂದೇ ತರಗತಿಯಲ್ಲಿ ಓದುವ ಅಪೂರ್ವ ಅವಕಾಶವು ಸಿಕ್ಕಿತು. ಎಲ್ಲರೂ ಜತ್ತಪ್ಪಶೆಟ್ಟರ ವಿದ್ಯಾರ್ಥಿಗಳು. ಒಂದನೆಯ ತರಗತಿಯಲ್ಲಿ ಇದ್ದ ಏಳೆಂಟು ಜನ ವಿದ್ಯಾರ್ಥಿಗಳಲ್ಲಿ ಎಲ್ಲರಿಗೂ ಕೂತುಕೊಳ್ಳಲು ಒಂದು ಚಾಪೆಯನ್ನು ಹಾಸಿದ್ದರು. ಮೊದಲದಿನ ಸುಬ್ಬಣ್ಣ – ಏನು ಮಾಡಿದರೂ ಕುಳಿತುಕೊಳ್ಳಲಿಲ್ಲ. ತಾನು ಚಂದು ನಾಯ್ಕ ಮತ್ತು ಪರಮೇಶ್ವರನ ಜೊತೆಗೆ ಕುಳಿತುಕೊಳ್ಳುವುದಿಲ್ಲ ಎಂದು ಹಟವಿಡಿದ. ಕೊನೆಗೆ ಕುಳಿತುಕೊಂಡ.

* * * * *

ಈ ಜಗತ್ತಿನಲ್ಲಿ ಅಕ್ಷರ ಕಲಿತವರು ಮಾತ್ರವೇ ಇಲ್ಲ. ಅಕ್ಷರ ತಿಳಿಯದಿದ್ದವರು ಕೂಡಾ ತುಂಬಾ ಜನ ಇದ್ದಾರೆ. ಅದಕ್ಕೆ ಅಕ್ಷರ ಕಲಿತವರು ಎಂಬ ಧಿಮಾಕು ಬೇಡ. ಸ್ವಲ್ಪ ಯೋಚಿಸಿ"

## 1992
## ಅಕ್ಟೋಬರ್
## 10

ಶಾಂಭವಿಯ ತುಂಬಾ ಸುದೀರ್ಘವಾದ ಪತ್ರ ಬಂತು:– ಪೋಸ್ಟ್ ಮೆನ್ ಬಂದಾಗ ನಾನು ಕಾಲೇಜಿನ ಕ್ಯಾಂಟೀನಿನಿಂದ ಪುರುಷೋತ್ತಮನ ಜೊತೆಗೆ ಬರುತ್ತಿದ್ದೆ. ನಟ್ಟನಡು ಮಧ್ಯಾಹ್ನದ ಹೊತ್ತು. ಜೇಬಲ್ಲಿ ದುಡ್ಡಿದ್ದರೆ ನಾನೂ ಪುರುಷೋತ್ತಮ ಊಟ ಮಾಡುತ್ತಿದ್ದೆವು – ಇಲ್ಲವೆಂದರೆ ಉಪವಾಸ. ಊಟ ಮಾಡಬೇಕೆಂಬ ಹಟ ನಮಗಿಬ್ಬರಿಗೂ ಇರುತ್ತಿರಲಿಲ್ಲ. ಊಟಕ್ಕೆ ಒಂದೊಂದು ದಿನ ಪುರುಷೋತ್ತಮನೇ ಖರ್ಚು ಮಾಡುತ್ತಿದ್ದ. ಮತ್ತೆ ಕೆಲವು ದಿನ ಬೋಪಯ್ಯ; ನಿಶಾ ಕೊಡಿಸುತ್ತಿದ್ದರು. ನನಗೆ ಈಗಲೂ ನೆನಪಿದೆ – ಶಾಂಭವಿಯ ಪತ್ರ ಬಂದದ್ದು ನನಗೆ ಗುರುವಾರ ಮಧ್ಯಾಹ್ನ. ಪತ್ರ ಕವರಿನಲ್ಲಿತ್ತು. ಹಿಂದುಗಡೆ ಒಂದು ಚಿತ್ರ ಬರೆದು? ಎಂದು ಬರೆದಿತ್ತು. ಆ ಚಿತ್ರ ಮತ್ತು ಅವಳ ಅಕ್ಷರ ನೋಡಿ ಅದನ್ನು ಊಹಿಸದೆ ಇರಲು ಸಾಧ್ಯವಿರಲಿಲ್ಲ. ಪತ್ರ ಬಂದ ತಕ್ಷಣ ಪುರುಷೋತ್ತಮನಿಗೂ ಗೊತ್ತಾಯಿತು. 'ಹೋಗು ಹೋಗು ಲೆಟರ್ ಓದಿ ಬಾ. ಹೇಗೂ ಮಧ್ಯಾಹ್ನ ಫಸ್ಟ್ ಅವರ್ ಪೊಲಿಟಿಕಲ್ ಸೈನ್ಸ್' ಅಂದ. ಮಧ್ಯಾಹ್ನ ಊಟದ ಹೊತ್ತಿನಲ್ಲಿ ಊಟದ ಬದಲು ಟೀ ಕುಡಿಯುವುದನ್ನು ರೂಢಿಮಾಡಿಕೊಂಡ ಮೇಲೆ ಹಸಿವೆಯನ್ನು ನಿಯಂತ್ರಿಸಲು ಬೇರೆ ಉಪಾಯ ಬೇಕಿರಲಿಲ್ಲ. ಊಟದ ನಿಯಂತ್ರಣದಿಂದ ಸಂಜೆಯ ಹೊತ್ತಿಗೆ ಒಮ್ಮೊಮ್ಮೆ ಹಸಿವೆಯು ಹೊಟ್ಟೆಯಲ್ಲಿ ಪಟ ಪಟವೆಂದು ರೆಕ್ಕೆ ಬಡಿಯುತ್ತಿತ್ತು. ಹಸಿವೆಯಾದ ಕ್ಷಣದಲ್ಲಿ ಟೀ ಕುಡಿಯುವುದು; ಒಂದು ರೂಢಿಯಾಗತೊಡಗಿತ್ತು. ಈಗ ನನ್ನ ರಕ್ತದಲ್ಲಿ ಅರ್ಧಕ್ಕರ್ಧ ಟೀ ಮಾತ್ರವೇ ಇದೆಯೆಂದು ಕಾಣುತ್ತದೆ. ಹಸಿವೆಯಾಗಾದಾಗ ಟೀ ಕುಡಿಯುವುದು. ಅಥವಾ ನೀರು ಕುಡಿಯುವುದು – ಅನಂತರ ದಿನಗಳಲ್ಲಿ ನನ್ನ ಜೀವನದ ಮಟ್ಟಿಗೆ ಅದು ಒಂದು ಸಾಧನೆಯಾಯಿತು. ಹಸಿವೆಯೆಂಬ ಹೆಬ್ಬಾವು ಟೀಯೆಂಬ ವಿಷ – ಎರಡನ್ನು ಜೊತೆ ಜೊತೆ ಸೇರಿಸಿಕೊಂಡ ದೇಹವಿದು. ಆ ಮೇಲೆ ನನ್ನ ಇಪ್ಪತ್ತರ ವರ್ಷದಲ್ಲಿ ತುಟಿ ನಡುವೆ ಸಿಗರೇಟು ಬಂತು. ಕರುಳಿಗೆ ಕುಡಿತ; ಶ್ವಾಸಕೋಶಕ್ಕೆ ಸಿಗರೇಟಿನ ಹೊಗೆ ತುಂಬಿಕೊಂಡಿದೆ. ಕಪ್ಪಾಗಿ ಹೋಗಿದೆ – ಶ್ವಾಸಕೋಶ ಕೂಡಾ ನನ್ನ ಮನಸ್ಸಿನಂತೆ! ಈಗ ಕಣ್ಣು ಸರಿ ಕಾಣುವುದಿಲ್ಲ. ಕಣ್ಣು ಮಂಜಾಗತೊಡಗಿದೆ. ರಕ್ತದೊಡನೆ ಸದಾ ಏರಿಳಿತದ ಆಟ. ಕಡಿಮೆಯಾಗತೊಡಗಿದ ರಕ್ತದೊತ್ತಡದಿಂದ ಮೈ ಒಮ್ಮೊಮ್ಮೆ ಶೀತಲವೆನಿಸುತ್ತದೆ. ನನ್ನ ಜೀವನ ಪಕ್ಷಿಯ ಗರಿಗಳನ್ನು

ಒಂದೊಂದಾಗಿ ಕಿತ್ತು ಬಿಸಾಡ ತೊಡಗಿದ್ದೇನೆ, ಇನ್ನು ಹೆಚ್ಚು ದಿನ ಬದುಕುವೆನೋ – ಇಲ್ಲವೋ ತಿಳಿಯದು. ಕಾಯಿಲೆಯು ದೇಹವನ್ನು ಸುತ್ತಿವೆಯೆಂದು ಅನಿಸಿದಾಗ ಒಬ್ಬನೇ ಹೋಗಿ ನರ್ಸಿಂಗ್ ಹೋಂ ಸೇರಿಸಿಕೊಳ್ಳುತ್ತೇನೆ. ಸರಿಯಾಯಿತು ಎಂದು ಅನಿಸಿದಾಗ ಹೊರಟು ಬಂದು ಬಿಡುತ್ತೇನೆ. ನನ್ನ ಮೂಗಿನ ತುದಿಗೆ ಫಿನಾಯಿಲ್‌ನ ವಾಸನೆ, ಕಿವಿಗಳಿಗೆ ನರ್ಸ್‌ಗಳ ಬೂಟಿನ ಸದ್ದು ಸದಾ ಕೇಳಿಸಿದಂತೆ ಭಾಸವಾಗುತ್ತದೆ. ಡಾಕ್ಟರರು ಬರೆದು ಕೊಟ್ಟ ಚೀಟಿಗಳನ್ನು ಮಾತ್ರ ಜೋಡಿಸಿ ಇಟ್ಟುಕೊಂಡಿದ್ದೇನೆ. ಒಂದೊಂದು ಚೀಟಿಯಲ್ಲಿಯೂ ನನ್ನ ಹೆಸರು, ವಯಸ್ಸು, ಕಾಯಿಲೆಯ ಬಗ್ಗೆ – ಏನೇನೋ ಗುರುತುಗಳು. ನಾನು ಏಳನೆಯ ತರಗತಿ ಇರುವ ತನಕ ಇದ್ದ ಹೆಸರಲ್ಲ ಅದು. ಆದರೆ ನನಗೆ ನನ್ನ ಹೆಸರು ತುಂಬಾ ಕೆಟ್ಟದಾಗಿದೆಯೆಂದು ಅನಿಸಿತ್ತು. ಅದಕ್ಕೆ ನಾನು ಹೆಸರು ಬದಲಾಯಿಸಿಕೊಂಡೆ. ಹೆಸರು ಬದಲಾದರೂ ನನ್ನ ಚಹರೆಗಳು ಗುಣ ಬದಲಾಗಲಿಲ್ಲ. ಬದಲಾಗುವುದಿಲ್ಲ. ಅದಕ್ಕೆ ದೇಹದ ಮತ್ತು ಮನಸ್ಸಿನ ವಾಸನೆಯಿದೆ. ಆ ವಾಸನೆಯನ್ನು ಬದಲಾಯಿಸುವುದು ಎಷ್ಟು ಕಷ್ಟ? ಈಗ ಅನಿಸುತ್ತಿದೆ.: ಜೀವನದಲ್ಲಿ ನಾನು ನನಗಾಗಿಯೇ ಮರುಕಪಟ್ಟು ಸ್ವ ಮರುಕದಲ್ಲಿ; ಸ್ವಹಿಂಸೆಯಲ್ಲಿ ನರಳಿದೆನೆ? ಯಾಕಾಗಿ? ಅರ್ಥವಾಗುತ್ತಿಲ್ಲ. ಏನೂ ಆಗಬೇಕಾಗಿಲ್ಲ. ಶಾಂಭವಿ ನಾನು ತುಂಬಾ ಪ್ರೀತಿಸಿದ ಹುಡುಗಿ. ಅವಳಿಗೂ ಈಗಲೂ ಕೂಡಾ ನನ್ನನ್ನು ದ್ವೇಷಿಸಲು ಸಾಧ್ಯವಾಗುವುದಿಲ್ಲ. ಅವಳಿಗೀಗ ಈಗ ಇಬ್ಬರೂ ಮಕ್ಕಳಂತೆ! ಆಗ – ನಾನು ಮನಸಾರೆ ಪ್ರೀತಿಸಿದ ಹೊತ್ತು. ಅವಳ ಕಣ್ಣುಗಳಲ್ಲಿ ಮುಗ್ಧತೆಯ ತೇವದಿತ್ತು. ಅವಳು ಮತ್ತು ನಾನು ಎಷ್ಟೊಂದು ದಿನ ಹರಟಿದ್ದೆವು ಎಂಬುದಕ್ಕೆ ಲೆಕ್ಕವಿಲ್ಲ. ಅವಳು ನನ್ನ ಹತ್ತಿರಬಂದು – 'ನಾನು ನಿಮ್ಮನ್ನು ಪ್ರೀತಿಸುತ್ತೇನೆ' ಎಂದು ಒಂದೇ ಉಸಿರಿನಲ್ಲಿ ಹೇಳಿಬಿಟ್ಟಿದ್ದಳು. ಅವಳ ಮಾತಿಗೆ ಬೇರೆ ಯಾವ ಪ್ರತಿಕ್ರಿಯೆಯನ್ನು ಕೊಡಲು ಸಾಧ್ಯವಾಗದೆ ಮೆಲ್ಲನೆ ಅವಳ ಕಡು ಕೆಂಪಾದ ಅಂಗೈಯನ್ನು ಸವರಿದ್ದೆ. ಒಂದು ಹೂವನ್ನು ಮುಟ್ಟುವಂತೆ, ಜೋರಾಗಿ ಅದುಮಿದರೆ ಎಲ್ಲಿ ಅವಳ ಹೂವಿನಂಥ ಅಂಗೈ ನೋಯುವುದೋ ಎಂದು ಕೊಂಡಿದ್ದೆ. ಅವಳ ಗಲ್ಲ ಕೊಂಚ ಕೆಂಪೇರಿತ್ತು. ಆವಾಗ ನಮ್ಮಿಬ್ಬರದು ತುಂಬಾ ಹುಡುಗಾಟಿಕೆಯ ವಯಸ್ಸಾಗಿತ್ತು – ಅನ್ನುವುದು ನಿಜವಾದರೂ ಅವಳಿಗೆ ನನ್ನ ಬಗ್ಗೆ ಅಪರಿಮಿತವಾದ ಪ್ರೀತಿಯಿತ್ತು. ಹೆಮ್ಮೆಯಿತ್ತು. ತುಂಬಾ ಅಭಿಮಾನ ಮತ್ತು ಗೌರವವಿತ್ತು. ಅವಳು ನನಗೆ ತುಂಬಿದ ಆತ್ಮಸ್ಥೈರ್ಯವನ್ನು ಅನಂತರ ನಾನು ಕಳೆದುಕೊಂಡೆ. ಅವಳ ನಿಷ್ಕಲ್ಮಶವಾದ ಪ್ರೀತಿ ಕಳೆದುಕೊಂಡಿದ್ದೇನೆ ಎಂದು ಅನಿಸಿದ ದಿನ ನಾನು ಒಬ್ಬನೇ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಿದ್ದೆ, ನನಗೆ ಹದಿನಾರು ತುಂಬಿದ ಅನಂತರ ನಾನು ಅತ್ತುದು–ಎರಡು–ಮೂರು ಬಾರಿ ಎನ್ನಬಹುದು. ಆ ದಿನವೂ ಅದರಲ್ಲಿ ಒಂದು. ನನಗಿದು ಗೊತ್ತು: ನಾನೀಗ ನಾಯಕನಲ್ಲ.

ಖಳನಾಯಕ. ನನಗೀಗ ಒಳ್ಳೆಯ ಹೃದಯವಿಲ್ಲ: ಒಳ್ಳೆಯ ಮನಸ್ಸಿಲ್ಲವೆಂದು ಅವರಿವರು ಹೇಳುತ್ತಾರೆ.

ಮುಂಜಾವಿನ ಇಬ್ಬನಿಯು ಬೀಳುವ ಮೊದಲೇ ಎದ್ದು ಕೂರುತ್ತೇನೆ – ಒಂದು ಪೆಗ್ ಹಾಕಿ ಒಂದೆರಡು ಸಿಗರೇಟು ಸೇದಿ ಮತ್ತೆ ಮಲಗುತ್ತೇನೆ – ಕೊಂಚ ನಿದ್ದೆಗಾಗಿ ಹಂಬಲಿಸುತ್ತೇನೆ. ನಡುವಿರುಳಿನ ತನಕ ಕೈಯಲ್ಲಿ ಒಂದು ಲೋಟ ಹಿಡಿದು ಕೊಂಡಿರುತ್ತೇನೆ. ಮೌನ ಹಾಗೂ ಆಕಾಶ ಎರಡರ ಹೊರತು ಯಾವುದೂ ಇಲ್ಲ. ಕತ್ತಲೆಯಲ್ಲಿ ಸಿಗರೇಟು ಹಚ್ಚಿ–ಕುಡಿಯುತ್ತಾ ಕೂರುವುದು ಕೂಡಾ ಸುಖವೆನ್ನಿಸುತ್ತದೆ ನನಗೆ.!

ಶಾಂಭವಿ ನನ್ನ ಮನಸ್ಸಿನಲ್ಲಿ ಬಿತ್ತಿದ್ದು ಪ್ರೀತಿಯ ಬೀಜವನ್ನಾದರೂ ಅದು ಮೊಳಕೆಯೊಡೆಯಿತು. ಅದು ನನ್ನ ಅಂಗಾಂಗದಲ್ಲಿ ಚಿಗುರೊಡೆಯಿತು. ಅದು ಕಲುಷಿತವಾಗದಂತೆ ಪ್ರಾಯಶಃ ಅವಳು ಎಚ್ಚರ ವಹಿಸಿದಳು. ಬೇಕೆಂದು ಅನಿಸಿದ್ದರೆ – ನಾವಿಬ್ಬರೂ ಚಿಗುರುರೂಪದ ನಮ್ಮ ನಡುವಣ ಪ್ರೇಮವನ್ನು ಒಡೆದು ಪಿಂಗಾಣಿ ಪಾತ್ರೆಯಲ್ಲಿ ಹಾಕಿಡಬಹುದಿತ್ತು. ದೇಹಸುಖದ ಕುದುರೆಯನ್ನು ಏರಿಕೊಂಡು ಇಬ್ಬರೂ ಅಮಲೇರುವಂತೆ ಪ್ರಯಾಣಿಸಬಹುದಿತ್ತು. ಒಂದು ದಿನ ನನ್ನ ಪಕ್ಕದಲ್ಲಿ ಕುಳಿತುಕೊಂಡು ಅವಳ ಪುಟ್ಟ ಅಂಗೈಯನ್ನು ತೋರಿಸಿಕೊಂಡು, 'ನೋಡು – ಈ ಗೆರೆಗಳು ಹೇಗೆ ಒಂದಕ್ಕೊಂದು ಬೆಸೆದುಕೊಂಡಿವೆ. ಕೆಳಗಿನಿಂದ ಮೇಲ್ಮುಖವಾಗಿ ಬಂದಿರುವ ಗೆರೆಯು ನನ್ನ ವ್ಯಕ್ತಿತ್ವದ ಹಾಗೆ ಇದೆ. ಇನ್ನೊಂದು ಗೆರೆ ನೋಡು – ಅಡ್ಡ ಬಂದಿದೆ. ಅಡ್ಡಗೆರೆ ಮತ್ತು ಉದ್ದಗೆರೆ ಒಂದಕ್ಕೊಂದು ಎಷ್ಟು ಪ್ರೀತಿಯಿಂದ ಪರಸ್ಪರ ಹಚ್ಚಿಕೊಂಡಿವೆ. ಅಲ್ಲ? ನೋಡು ನಿಶಿ, ನಿಜವಾಗಿಯೂ ನೀನು ದೊಡ್ಡ ನಶೆಯಂಥವನು. ನಾನು ನಿನಗಾಗಿ ತುಂಬಾ ಹಂಬಲಿಸುತ್ತೇನೆ. ನಿನಗಾಗಿ ಕನಸು ಕಾಣುತ್ತೇನೆ. ನಿನ್ನನ್ನು ನನ್ನ ತೊಡೆಯಲ್ಲಿ ಮಲಗಿಸಿಕೊಂಡು ನಿನ್ನ ತುಂಬು ಕೂದಲ ಮೇಲೆ ಕೈಯಾಡಿಸಬೇಕು – ನೀನು ತುಂಬಾ ಓದಿ ಕೆಲಸ ಹಿಡಿದುಕೊಂಡು ಏನಿಲ್ಲವೆಂದರೂ ಕೈ ಕಾಲು ಚಾಚುವಷ್ಟು ಸಂಬಳ ತರುವಾಗ ನಾನು ನಿನಗಾಗಿ ಕಾಯುತ್ತಿರಬೇಕು. ಎಷ್ಟು ಚೆಂದ ಅಲ್ವಾ?" ಈ ಮಾತುಗಳನ್ನು ಹೇಳುವಾಗ ನಾನು ಅವಳ ಮುಖವನ್ನೇ ನೋಡಿದ್ದೆ. ಅವಳ ಕಣ್ಣುಗಳಲ್ಲಿ ತುಂಬಾ ಹೊಳಪಿತ್ತು. ಮುಂದಿನ ಜೀವನದ ಬಗೆಗಿನ ಉರಿಸಿಟ್ಟ ಕನಸುಗಳ ಹಣತೆಯನ್ನು ನಾನು ಸುಮ್ಮನೆ ನೋಡಿದೆ. ಬಹಳ ಹೊತ್ತು ಅವಳ ಕೈಯನ್ನು ಹಿಡಿದುಕೊಂಡೇ ಇದ್ದೆ. ಆಗ ಮಾತುಗಳಿಗಿಂತ ಒಬ್ಬರ ಕೈಯ ಮೇಲೆ ಮತ್ತೊಬ್ಬರು ಕೈಯಿರಿಸಿಕೊಂಡು ಮೌನವಾಗಿರುವುದು ಎಷ್ಟು ಚೆಂದವೆಂದು ಅನಿಸಿತ್ತು. ಆ ದಿನದ ಗುರುವಾರ

ಬರೆದ ಪತ್ರದಲ್ಲಿ ಅವಳು ಬರೆದ ಸಾಲುಗಳು ನನ್ನನ್ನು ಒಂದು ಹಾದಿಗೆ ಕರೆದೊಯ್ದುವು:

* * * * *

"ಪ್ರೀತಿಯ ನಿಶಿ,

ಇನ್ನೇನು ನಿನ್ನ ಡಿಗ್ರಿ ಮುಗಿಯುತ್ತದೆ. ಆದರೆ ಡಿಗ್ರಿ ಮುಗಿಸಿ ಎಲ್ಲಿಯೋ ಇರಬೇಡ. ನಮ್ಮ ಕನಸುಗಳಿಗೆ ಆಕಾರಕೊಡಲು ನೀನು ತುಂಬಾನೇ ಶ್ರಮಿಸಬೇಕು. ತುಂಬಾನೇ ದುಡಿಯಬೇಕು. ಓದು ಮುಂದುವರಿಸು. ಅನವಶ್ಯಕ ಕೀಳರಿಮೆ ಇಟ್ಟುಕೊಳ್ಳಬೇಡ. ಆದ ಅವಮಾನಗಳನ್ನು ಗೆಲ್ಲಲು ಯತ್ನಿಸು. ಬಡತನವು ನಾಚಬೇಕಾದ ಸಂಗತಿಯಲ್ಲ. ಸೋಲು ಕೂಡಾ ಜೀವನದಲ್ಲಿ ಶಾಶ್ವತವಲ್ಲ. ಎಲ್ಲವನ್ನು ಗೆಲ್ಲಲು ಯತ್ನಿಸು–ನನಗಾಗಿ: ಕೇವಲ ನನಗಾಗಿ" ಉಳಿದ ಸಂಗತಿಗಳು ನೆನಪಿಗೆ ಬರುತ್ತಿಲ್ಲ. ಅವಳ ಪತ್ರದ ಸಾಲುಗಳು ನನಗೆ ಹಂಬಲಗಳನ್ನು ಮೂಡಿಸಿದವು. ಮುಂದೆ ಎರಡು–ಮೂರು ವರ್ಷ ನಾವಿಬ್ಬರೂ ಬೇರೆ ಬೇರೆ ಕಡೆಗೆ ಹೋಗಬೇಕಾಗಿ ಬಂತು. ಡಿಗ್ರಿ ಮುಗಿದ ತಕ್ಷಣ ನಾನು ಓದಲೆಂದು ಹೋದೆ. ಅವಳು ಓದಲೆಂದು ಲೇಡಿಸ್ ಕಾಲೇಜಿಗೆ ಸೇರಿದಳು. ಆದರೂ ಅವಳ ಬಗ್ಗೆ ನಂಬಿಕೆಯಲ್ಲಿದ್ದೆ, ಓದು ಮುಗಿಸಿ ಮರಳಿ ಊರಿಗೆ ಬಂದಾಗ–ಪುರುಷೋತ್ತಮ ಹೇಳಿದ, 'ನಿನ್ನ ಶಾಂಭವಿ ನಿನಗೆ ಕೈ ಕೊಟ್ಟಳು.' "ನಾನು ಸಾಧ್ಯವೇ ಇಲ್ಲ"ವೆಂದೆ, ಅದು ನಿಜವೆಂದು ಅವನು ಸಾಕ್ಷಿಸಮೇತ ತೋರಿಸಿದ. ಆಗ ನಡೆದ ಸಂಗತಿಗಳನ್ನು ಈಗ ಬರೆಯಲಾರೆ.

## 1992
## ನವೆಂಬರ್
## 1

ನಿಖಿತಾ ಹೆಚ್ಚುತ್ತಿರುವ ತಲೆ ನೋವು, ಸುಸ್ತು, ಹೊಟ್ಟೆಯ ಸಂಕಟ; ವಾಂತಿ ಬಂದಂತಾಗುವ ಸಮಸ್ಯೆಯಿಂದ ತಪ್ಪಿಸಿಕೊಳ್ಳುವುದು ಹೇಗೆಂದು ತಿಳಿಯದೇ ಒದ್ದಾಡಿದಳು. ಮೊದ ಮೊದಲು ಈ ಸಮಸ್ಯೆಯು ಬಂದಾಗ ಕೆಳತುಟಿಯನ್ನು ಕಚ್ಚಿಕೊಂಡು ಸಹಿಸುವ ಪ್ರಯತ್ನ ಮಾಡುತ್ತಿದ್ದಳು. ಅಪ್ಪನಿಗೆ ಕುಡಿದ ಅಮಲಿನಲ್ಲಿ ಏನೆಂದರೆ ಏನೂ ತಿಳಿಯುತ್ತಿರಲಿಲ್ಲ. ಕುಡಿದರೆ ಇಡೀ ಜಗತ್ತನ್ನು ಮರೆಯುತ್ತಿದ್ದವನಿಗೆ ಮನೆಯಲ್ಲಿ ಏನಾಗುತ್ತಿದೆ; ಏನಾಗುತ್ತಿಲ್ಲವೆಂದು ತಿಳಿಯುವುದು ಸಾಧ್ಯವಿರಲಿಲ್ಲ. ಇಡೀ ಊರು ಅಪ್ಪನನ್ನು ನೋಡುತ್ತಿದ್ದ ಕ್ರಮ ಬೇರೆಯಿತ್ತು. ಅಪ್ಪನ ಬಗ್ಗೆ ಭಯವಿತ್ತು. ಕೆಲವರು ಅವನನ್ನು ನೋಡಿ ಹೆದರುತ್ತಿದ್ದರು. ಜಾತಿಯವರಿಗೆ ಅವನು ಜಾತಿ ಬಿಟ್ಟಿದ್ದಾನೆಂದು ಅನಿಸುತ್ತಿತ್ತು. ಕೊಲೆಗಾರ ಮತ್ತು ಕುಡುಕ ಎರಡೂ ಬಿರುದು ಸೇರಿ ಅಪ್ಪ ಜಾತಿ ಭ್ರಷ್ಟನಾದನೆ ಅಥವಾ ಅಪ್ಪನೇ ಸ್ವತಹ ತಾನೇ ಜಾತಿಯಿಂದ ಹೊರಗೆ ನಿಂತನೆ? ಯಾವುದೂ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಅಪ್ಪನನ್ನು ಜನರು ಹೆದರಿ ಬೆಂಬಲಿಸಿರಬಹುದೆ? ಅದಕ್ಕಾಗಿಯೇ ಮನೆಯಲ್ಲಿ ಸದಾ ನಡೆಯುತ್ತಿದ್ದ ಕುರುಕ್ಷೇತ್ರದಲ್ಲಿ ಇಡೀ ಊರು ಬೆಂಬಲಿಸಿ ಮೌನ ವಹಿಸಿರಬಹುದೆ? ನಿಖಿತಾಗೆ ಯಾವುದೂ ಹೊಳೆಯದಿದ್ದರೂ ಅಪ್ಪನಿಗೆ ಇಡಿಯ ಊರು ಬೆಂಬಲಿಸುತ್ತಿದೆಯೆಂದೇ ನಿಖಿತಾ ಭಾವಿಸಿದ್ದಳು. ಕುಡಿದಾಗ ಮಾತ್ರ ವಿಪರೀತವಾಗಿ ಗೋಳಾಡಿಸುತ್ತಿದ್ದ. ಅಮ್ಮನ ಜೀವ ತಿನ್ನುತ್ತಿದ್ದ. ಅಪ್ಪ ಕುಡಿದ ಅಮಲು ಇಳಿಯುತ್ತಾ ಬಂದಂತೆ ಮಲಗಿಕೊಂಡು ಒರಗುತ್ತಿದ್ದ. ತನ್ನಷ್ಟಕ್ಕೆ ತಾನೇ ಮಾತಾಡುತ್ತಿದ್ದ. ಮಧ್ಯೆ ಮಧ್ಯೆ ಅಮ್ಮನನ್ನು ಕರೆಯುತ್ತಿದ್ದ. ಮಧ್ಯರಾತ್ರಿ ಎದ್ದು ಕೂತು ಏನೇನೋ ಹೇಳುತ್ತಿದ್ದ. ತಂದೆ ಆ ಸಮಯದಲ್ಲಿ ಪ್ರೀತಿಯಿಂದ ಕರೆದು ತಿನ್ನುವುದಕ್ಕೆ ಕೊಡುತ್ತಿದ್ದುದು ಹುರಿದ ನೆಲಗಡಲೆ. ಅಪ್ಪನ ವರ್ತನೆಯು ನಿಗೂಢವಾಗಿತ್ತು. ಅಪ್ಪ ಅಮ್ಮನಿಗೆ ಯಾಕೆ ಹೊಡೆಯಬೇಕು? ರಾತ್ರಿ ಚಿಮಿಣಿ ದೀಪದ ಬೆಳಕಿನಲ್ಲಿ ಕುಡಿದ ಅಮಲಿನಲ್ಲಿದ್ದ ಅಪ್ಪನನ್ನು ಉಚ್ಚೆ ಹೊಯ್ಯಲು ಅಮ್ಮ ಅವನ ಕೈ ಹಿಡಿದು ಕರೆದುಕೊಂಡು ಯಾಕೆ ಹೋಗಬೇಕು? ಅಪ್ಪನ ಬಾಯಿಂದ ಬರುತ್ತಿದ್ದ ವಿಪರೀತವಾದ ವಾಸನೆ, ಅವನ ಕೆಂಪು ಉರಿಯುತ್ತಿದ್ದ ಕಣ್ಣು ಅವರಿಂದ ತನ್ನನ್ನು ದೂರ ಇರಿಸಿತ್ತು. ಮುದ್ದಿಸಿ ಗೊತ್ತಿಲ್ಲದ; ಪ್ರೀತಿಯಿಂದ ಮಾತಾಡಿಸದ ತಂದೆಯನ್ನು

ಕಂಡರೆ ಭಯ. ರಾತ್ರಿ ಕುಡಿದ ಅಮಲಿನಲ್ಲಿ ಪ್ರೀತಿಯಿಂದ ಎಂಬಂತೆ ತನ್ನ ಅಂಗೈಗಳಿಗೆ ಅವನು ನೀಡುತ್ತಿದ್ದ ಹುರಿಗಡಲೆ, ನೆಲಗಡಲೆ ಹಗಲು ಹೊತ್ತಿಗೆ ಸಿಗುತ್ತಿರಲಿಲ್ಲ. ಒಂದು ದೊಡ್ಡ ಲೋಟಕ್ಕೆ ನೀರು ಬೆರಸಿ ಗಟಗಟನೆ ಕುಡಿಯುತ್ತಿದ್ದಾಗ ಅಪ್ಪನ ಬಾಯಿಂದ ಬರುತ್ತಿದ್ದ ಪಚಪಚ ಸದ್ದು; ಕುಡಿದವನು ಮೀಸೆಯೊರಸಿಕೊಂಡು ಹುರಿಕಡ್ಲೆ ಹಾಕಿಕೊಳ್ಳುತ್ತಿದ್ದ ಕ್ರಮ; ಅನಂತರ ಅನೇಕ ವರ್ಷಗಳ ತರುವಾಯ ಅವಲೋಕಿತನದಲ್ಲಿ ಹಾಜರಾಗಿತ್ತು. ಅವಲೋಕಿತನೂ ಅಷ್ಟೆ: ಕುಡಿಯಲು ಕೂತನೆಂದರೆ ಪಕ್ಕದಲ್ಲಿ ಹುರಿಗಡಲೆ, ಶೇಂಗಾಬೀಜ, ಸೌತೆ, ಕ್ಯಾರೆಟ್ ತುಂಡುಗಳ ರಾಶಿ. ಒಂದು ಲೋಟ ಪೂರ್ತಿಯಾಗಿ ಕುಡಿದು, ಲುಂಗಿಯ ತುದಿಯಲ್ಲಿ; ಬಾಯನ್ನು ಒರಸಿಕೊಂಡು ಒಂದು ಸಿಗರೇಟು ಹಚ್ಚಿಕೊಳ್ಳುತ್ತಿದ್ದ, ಮತ್ತೆ ಹೇಳುತ್ತಿದ್ದ: 'ನಿಖಿತಾ ನೋಡು ಎಷ್ಟು ಕುಡಿದರೂ ಜಗ್ಗುವ ಕುಳವಲ್ಲ. ಅಷ್ಟು ವರ್ಷಗಳಿಂದ ಕುಡಿಯುವ ಮತ್ತು ತಿನ್ನುವ ವಿಷಯದಲ್ಲಿ ಹೇಗೆ ಶಿಸ್ತು ರೂಪಿಸಿಕೊಂಡಿದ್ದೇನೆ. ಅಲ್ವಾ?'

"ಹ್ಞೂಂ" ಗುಟ್ಟದೆ ವಿಧಿಯಿರಲಿಲ್ಲ.

ಅವಲೋಕಿತನ ಆಟಕ್ಕೆ; ಅವನ ಹೊಡೆತಕ್ಕೆ; ಅವನ ಹಿಂಸಾರತಿಯ ಹುಚ್ಚಿಗೆ, ಅವನ ಅಹಂಕಾರಕ್ಕೆ; ಉದ್ದಗಲಕ್ಕೂ ಅವನ ಎಲ್ಲಾ ಚಹರೆಗಳಿಗೂ ತಾನು ಅಂದಿದ್ದು ಬರೀ "ಹ್ಞೂಂ" ಅನ್ನುವುದು ಮಾತ್ರ. ಸಾರ್ವಜನಿಕರ ಅವಲೋಕಿತ ಮನೆಯೊಳಗಿನ ಅವಲೋಕಿತ ಇಬ್ಬರೂ ಬೇರೆ ಬೇರೆ. ತಾಳ್ಮೆಯಿಲ್ಲದೆ ಬದುಕುತ್ತಿರುವ ಅವನ ಜಗತ್ತು ವಿಕಾರವಾದದ್ದು, ಮದುವೆಯಾದ ಎರಡನೆಯ ದಿನದ ತನಕ ಬರಿಯ ಹಿಡಿ ಪ್ರೀತಿಯೊಂದು ನಮ್ಮ ನಡುವೆ ಇರುತ್ತದೆಯೆಂದು ಹೇಳುತ್ತಿದ್ದ ಅವಲೋಕಿತನ ಬಣ್ಣ ತಿಳಿಯಿತು. ಬಿ.ಎಡ್ ಓದದಿದ್ದರೆ ನಾನು ಅವನ ಹೆಂಡತಿಯಾಗಿರುತ್ತಿದ್ದೆನೆ? ಅಥವಾ ಬಿ.ಎಡ್ ಕಾಲೇಜಿನಲ್ಲಿ ನಾನು ಅವನ ವಿದ್ಯಾರ್ಥಿನಿಯಾಗಿಲ್ಲದಿದ್ದರೆ? ಅವಲೋಕಿತ ನನ್ನನ್ನು ತೀವ್ರವಾಗಿ ಹಂಬಲಿಸುತ್ತಾನೆ ಎಂಬುದು ತರಗತಿಗೆ ಸೇರಿದ ಕೆಲವು ದಿನಗಳಲ್ಲಿಯೇ ಅರ್ಥವಾಗಿತ್ತು. ಗಂಡಿನ ಕಣ್ಣು ಬರಿಯ ಕಣ್ಣನ್ನು ಮಾತ್ರವಲ್ಲ. ಇಡಿಯ ದೇಹವನ್ನು ಹಿಂಬಾಲಿಸುವುದು; ಕುತ್ತಿಗೆಯಿಂದ ಕೆಳಗೆ ಇಳಿಯುವುದು, ಸೊಂಟದ ಸುತ್ತ ಗಿರಕಿ ಹೊಡೆಯುವುದು. ಕಾಲಿನ ಬೆರಳುಗಳನ್ನು ನೋಡುತ್ತಾ ತೊಡೆಯನ್ನು ಅಳತೆ ಮಾಡುವುದು ಹೆಣ್ಣಿಗೆ ಅರ್ಥವಿಸಿಕೊಳ್ಳುವುದು ಕಷ್ಟ ಸಾಧ್ಯವಲ್ಲ. ಬೇಡವೆಂದರೂ ದೇಹ ಹಂಬಲಿಸುತ್ತದೆ. ಕಣ್ಣು ಹಂಬಲಿಸುತ್ತದೆ. ಸಕಲ ಇಂದ್ರಿಯಗಳು ಹಂಬಲಿಸುತ್ತದೆ. ಅವಲೋಕಿತನ ಕಣ್ಣು ಹೀಗೆಯೇ ಒಂದೊಂದೆ ಸೆಂಟಿ ಮೀಟರು ತನ್ನ ದೇಹವನ್ನು ಅಳೆಯುವಾಗ ಮನಸ್ಸಿನಲ್ಲಿ ಮುಳ್ಳು ಎದ್ದಿರಲಿಲ್ಲ. ಅವನು ಸಂಭಾವಿತ. ವಿವೇಕವಂತ. ಕಿವಿ

ಮುಚ್ಚಿಕೊಳ್ಳುವಂತೆ ಇಳಿಬಿಟ್ಟ ತಲೆಗೂದಲು, ಮೈ ಕೊಂಚ ಕಪ್ಪು ಬಣ್ಣ. ಲಿಂಗಾಯಿತನಾದರೂ ಯಾವ ಜಾತಿಯ: ಯಾವುದೇ ಮಠದ ಹಂಗಿಲ್ಲ; ಪ್ರತಿ ತರಗತಿಯಲ್ಲಿಯೂ ಹೇಳುತ್ತಾ ಹೋದವನ ಕಣ್ಣು –ಗಳಿಗೆ ಗಳಿಗೆಯಲ್ಲಿ ತನ್ನನ್ನು ವೀಕ್ಷಿಸುತ್ತಿತ್ತು. ಸಂಜೆ, ಐದು ಗಂಟೆಯ ಮೇಲೆ ತನ್ನನ್ನು ಅವನ ಛೇಂಬರ್‌ಗೆ ಕರೆಸಿ ಏನೇನೋ ಮಾತಾಡಿದ. ಅವನ ಬಲೆಗೆ ಬಿದ್ದೆ.

ಅಮ್ಮ ಸತ್ತ ಮೇಲೆ ಕಣ್ಣೀರಿನ ಹನಿಯು ಗಲ್ಲದಿಂದ ಮಾಯವಾಗುವ ಮೊದಲು ಚಿಕ್ಕಮ್ಮನನ್ನು ಕರೆದು ತಂದ ಅಪ್ಪ; ಲೆಕ್ಕ ಚುಕ್ತಾ ಮಾಡಿ ದೊಡ್ಡಮ್ಮನ ಮನೆಗೆ ಕಳಿಸಿದ ಚಿಕ್ಕಮ್ಮ; ಪ್ರೀತಿಯಿಂದ ಸಾಕಿದ ದೊಡ್ಡಮ್ಮ ಎಲ್ಲವನ್ನು ಮರೆತು ಅವಲೋಕಿತನನ್ನು ಮದುವೆಯಾದೆ. ಮದುವೆಯಾದ ಎರಡನೆಯ ದಿನಕ್ಕೆ ಅವಲೋಕಿತ ರಾತ್ರಿ ಕುಡಿದು ಬಂದ. ಕುಡಿದ ಅಮಲಿನಲ್ಲಿ ಕೈಯನ್ನು ಚಾಚಿದ, ಬೆನ್ನಿಗೆ ಉಗುರಿನ ಗೆರೆಯೆಳೆದ. ಅವನ ದುರಹಂಕಾರದ ಹೆಡೆ ಬಿಚ್ಚತೊಡಗಿತು. ಒಂದೇ ಒಂದು ವರ್ಷಕ್ಕೆ ಅವಲೋಕಿತನಿಗೆ ಸಂಬಂಧದಲ್ಲಿ ಹಳಸಿದ ವಾಸನೆ ಬಂತು. ಮಹಾನ್ ಕ್ರಾಂತಿಕಾರನಂತೆ ಅಂತರ್ಜಾತೀಯ ವಿವಾಹವಾದುದ್ದಕ್ಕೆ ಪತ್ರಿಕೆಯಲ್ಲಿ ಫೋಟೋ ಹಾಕಿಸಿಕೊಂಡವನು ಅನಂತರದಲ್ಲಿ, 'ನಿನ್ನನ್ನು ಮದುವೆಯಾಗಿ ಜೀವನ ಹಾಳುಮಾಡಿಕೊಂಡೆ' ಎಂದು ಹಲುಬತೊಡಗಿದ. ಶುರು ಅವನ ಬುಗುರಿಯಾಟ. ಮದುವೆಯಾದ ಎರಡನೆಯ ವರ್ಷದಲ್ಲಿಯೇ ಪುಷ್ಪಾವತಿಯನ್ನು ಕರೆದುಕೊಂಡು ಮನೆಗೆ ಬಂದ. ಮೂರನೆಯ ವರ್ಷದಲ್ಲಿಯೇ ಸುಧಾರಾಣಿ ನಾಲ್ಕನೆಯ ವರ್ಷ ಕೀರ್ತನ ಮತ್ತೊಂದು ವರ್ಷ ಉಷಾ. ಹೀಗೆ ಪ್ರತಿವರ್ಷ ಒಂದೊಂದು ವರಸೆ. ಯಾರು ಅವನ ಜೊತೆ ಮಲಗಿದ್ದಾರೋ ಆ ಹುಡುಗಿಯರಿಗೇ ಹೆಚ್ಚು ಅಂಕ. ಪದೇ ಪದೇ 'ನೀನು ಹೆತ್ತಿಲ್ಲ ಬಂಜೆ' ಎಂಬ ಅರಚಾಟ ಕೇಳಿ ಕೇಳಿ ಅವನೊಂದಿಗಿನ ಜೀವನ ಸಾಕಾಗಿ ಹೋಯಿತು. ಕೊನೆಗೆ ಆದುದೇನು –ವಿಚ್ಛೇದನ!

ನಿಖಿತಾ ಹಳೆಯ ನೆನಪುಗಳಿಂದ ಹೊರಬರಲಾರದೆ–ಅದೂ ನಡು ಹಗಲು ತಲೆಗೆ ಬಿಗಿಯಿಂದ ಬಟ್ಟೆಯನ್ನು ಬಿಗಿದುಕೊಂಡು ಅಳುತ್ತಾ ಮಲಗಿದ್ದಳು–ತನಗೆ ಯಾರೂ ಇಲ್ಲ. ಎಂದು ಭಾವಿಸಿಕೊಂಡು ಹೊರಳಿ ಮಲಗಿದಳು. ಹೆಂಗಸರು ಮುಟ್ಟಾಗುವುದೆಂಬ ಚಕ್ರಸುತ್ತಿಗೆ ಸಿಕ್ಕ ಬಾರದಿತ್ತು ಎಂದುಕೊಂಡಳು. ಯಾರೆಂದರೆ ಯಾರೂ ಇಲ್ಲವೆಂಬ ಸ್ಥಿತಿಯಲ್ಲಿ ಮಲಗಿದ್ದ ನಿಖಿತಾಗೆ ಈ ಚಕ್ರವ್ಯೂಹದಿಂದ ಹೊರ ಬರುವ ದಾರಿಯು ತಿಳಿಯಲಿಲ್ಲ. ಅದು ಭಾನುವಾರ. ಒಂಟಿ ಜೀವಕ್ಕೆ ಬೇಕಾದ ಒಂಟಿ ಕೊಠಡಿ–ನಡು ಹಗಲಿನ ದಟ್ಟ ಬೇಗೆ! ಕಣ್ಣೀರು ಮಾತ್ರ ಅವಳೊಂದಿಗಿನ ಸಂಗಾತಿ. ಆಗಲೇ ಕೇಳಿ ಬಂದದ್ದು–ಕೊಠಡಿಯ ಬಾಗಿಲಿನ

ಕಟಕಟ ಸದ್ದು. ಒಂದೆರಡು ಸಲ ಬಾಗಿಲಿನ ಸದ್ದು ಕೇಳಿದ ಮೇಲೆ ನಿಖಿತಾ ಬಾಗಿಲು ತೆರೆದಳು. ಎದುರಲ್ಲಿ ತಂದೆ 'ಎಂಥ ನಾರಾಯಣ!' ನಿಖಿತಾ 'ಅಪ್ಪಾ' ಎಂದಳು. ಬೆನ್ನು ಬಾಗಿದೆ. ಬಿಳಿಯ ಗಡ್ಡ. ಮಾಸಿದ ಪಂಚೆ, ಗುಳಿಬಿದ್ದ ಕಣ್ಣು, ಕೈಯಲ್ಲಿ ಒಂದು ಬಟ್ಟೆಯ ಕೈ ಚೀಲ. ಒಂದು ಸಾರಿ ನಿಖಿತಾಳನ್ನು ನೋಡಿದವನು ಮತ್ತೆ ತಲೆತಗ್ಗಿಸಿ, 'ನಿನ್ನನ್ನು ನೋಡುವಾ ಅಂತ ಬಂದೆ. ಆ ರಾಕ್ಷಸಿಯ ಮಾತು ಕೇಳಿ ಹಾಳಾದೆ. ನನ್ನ ಮನೆಯಿಂದ ಹೊರ ಹೋದಳು.' ಎಂದ. ನಿಖಿತಾ ಏನೂ ಪ್ರತಿಕ್ರಿಯಿಸದೆ "ಒಳಗೆ ಬಾ ಅಪ್ಪಾ" ಅಂದಳು. ಅವಳ ಮಾತಿನಲ್ಲಿ ನೋವಿತ್ತು. ನಾರಾಯಣನ ಕಣ್ಣಲ್ಲಿಯೂ ಯಾತನೆಯಿತ್ತು. ಕೆಲವೇ ಕೆಲವು ಕ್ಷಣ ಅಪ್ಪನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ ನಿಖಿತಾ ಅಳುತ್ತಿದ್ದಳು. ಮಗಳ ತಲೆಯನ್ನು ನೇವರಿಸುತ್ತಾ ಇದ್ದ ಅಪ್ಪನ ಕಣ್ಣಿಂದ ಧಾರಾಕಾರ ನೀರು ಮಗಳ ತಲೆಯ ಮೇಲೆ ತೊಟ್ಟಿಕ್ಕುತ್ತಿತ್ತು. ನಾರಾಯಣ ಅಳುತ್ತಾ ಹೇಳಿದ, "ನನ್ನ ಹಣೇಬರ ಇಷ್ಟು ಮಗಳೆ. ನಾನು ಅಂದು ಕೊಲೆ ಮಾಡಿದ್ದು ನಿಜ. ಕೋರ್ಟಿನಲ್ಲಿ ದೊರೆಯದ ಶಿಕ್ಷೆಯನ್ನು ಈವತ್ತು ಅನುಭವಿಸುತ್ತಿದ್ದೇನೆ. ಸಾಯುವ ಧೈರ್ಯ. ಊರಿನಲ್ಲಿ ಉಳಿಯುವ ಧೈರ್ಯ ಎರಡೂ ಇಲ್ಲದೆ ಇಲ್ಲಿಗೆ ಬಂದೆ. ನಾನು ತಪ್ಪು ಮಾಡಿದ್ದು ನಿಜ." ನಿಖಿತ ಅವನ ಮುಖ ನೋಡಿ ಅವನ ಪಂಚೆಯಲ್ಲಿ ಕಣ್ಣೊರೆಸಿಕೊಂಡಳು–ಬಾಲ್ಯದಲ್ಲಿ ಸಿಗದಿದ್ದುದು ಸಿಕ್ಕಿದಂತೆ!

ಎಂಥಾ ನಾರಾಯಣ ಅಲ್ಲಿಗೆ ಬರಲು ಕಾರಣವೇ ಬೇರೆ!

* * * * *

**ಮನಸು ಅತ್ತಿಯ ಹಣ್ಣೆ? ಬಿಚ್ಚಿ ತೋರುವುದಕ್ಕೆ?**

# 1992
# ನವೆಂಬರ್
# 26

ಮಧ್ಯರಾತ್ರಿಯು ಕಳೆದ ಹೊತ್ತು ಸರಿ ಸುಮಾರು ಎರಡು ಗಂಟೆಯಿರಬಹುದು. ಪಕ್ಕದಲ್ಲಿರುವ ನೀರಿನ ಚೆಂಬಿನಿಂದ ಒಂದಿಷ್ಟು ಗಟಗಟನೆ ನೀರು ಕುಡಿದ. ಹೊಟ್ಟೆಯ ಸಂಕಟವನ್ನು  ತಡೆಯಲಾಗುವುದಿಲ್ಲ. ಎಂದನ್ನಿಸಿತು. ಅವನಿಗೆ. ಮತ್ತೆ ನಿದ್ದೆ ಬರುವ  ಸಂಭವವಂತೂ ತುಂಬಾ ಕಡಿಮೆ. ರಾತ್ರಿ –ಅದೂ ನಟ್ಟನಡುರಾತ್ರಿಯ ವೇಳೆ ನಿಶಾಚರಿಗಳಂತೆ ಎದ್ದು ಕುಳಿತವನು ಯಾಂತ್ರಿಕವಾಗಿ ತಲೆದಿಂಬಿನ ಕೆಳಗೆ ಇರಿಸಿದ್ದ ಗಣೇಶ ಬೀಡಿ ಮತ್ತು ಬೆಂಕಿ ಪೆಟ್ಟಿಗೆಯನ್ನು ಕೈಗೆತ್ತಿಕೊಂಡ. ಒಂದು ಗಣೇಶ ಬೀಡಿಯನ್ನು ಬಾಯಿಗೆ ಕಚ್ಚಿಕೊಂಡು ಅದನ್ನು ಉರಿಸಲು ನೋಡಿದ. ಅದು ಸರಿಯಾಗಿ ಉರಿಯಲಿಲ್ಲವೆಂಬ ಸಿಟ್ಟಿನಲ್ಲಿ ಅದನ್ನು ಮುರಿದು ಬಿಸಾಡಿದ. ಮತ್ತೊಂದನ್ನು ಬಾಯಿಗೆ ಕಚ್ಚಿಕೊಂಡ. ತಲೆಯು ಧಿಮ್ಮೆಂದು ಅನಿಸಿತು. ರಾತ್ರಿ ಕುಡಿದದ್ದು ಹೆಚ್ಚಾಯಿತೇನೋ ಅಂತ ಅನಿಸಿತು. ಜಗುಲಿಯಲ್ಲಿ ಕುಳಿತವನು ಆ ಕತ್ತಲೆಯಲ್ಲಿ ಅಂಗಳವನ್ನು ನೋಡಿದ. ಈಚೆಗೆ ಕತ್ತಲೆಯಲ್ಲಿ ಎದ್ದು ಕೂರುವುದು ತನಗೆ ಅಭ್ಯಾಸವಾಗಿ ಹೋಗಿದೆಯೆಂದು ಅನಿಸಿತು. ಸರಿಯಾಗಿ ಎರಡು ಗಂಟೆಯಾಗುವಾಗ ಅವನಿಗೆ ತಟ್ಟನೆ ಎಚ್ಚರವಾಗುತ್ತದೆ. ಮತ್ತೆ ಉಪ್ಪಿನಕಾಯಿ: ಅಥವಾ ಉಪ್ಪಿನ ಹರಳು; ಒಂದು ಪಾಕೀಟು ಸಾರಾಯಿಯನ್ನು ಗಟಗಟನೆ ಕುಡಿಯಬೇಕು. ಬಾಯಿಗೆ ಬೀಡಿಯನ್ನು ಹಚ್ಚಿಕೊಳ್ಳಬೇಕು. ಸಾರಾಯಿ ಕುಡಿದ ಕೆಲವು ಗಳಿಗೆಯಲ್ಲಿ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತೆ ಆಗುತ್ತದೆ. ಹೊಟ್ಟೆಯೆಲ್ಲಾ ಉರಿಯ ತೊಡಗುತ್ತದೆ. ಹೊಟ್ಟೆ ಹಾಗೆಯೇ ಉರಿಯುತ್ತಿರಬೇಕು. ಅದು ಉರಿಯುತ್ತಿದ್ದರೆ: ಕಣ್ಣು ಮಂಜು ಮಂಜಾದರೆ ಎಲ್ಲವೂ ಮರೆತು ಹೋದಂತೆ! ತುಂಬಾ ಕುಡಿದರೆ ನಡೆಯಲಾಗುವುದಿಲ್ಲ. ಅಂಬೆಗಾಲಿಕ್ಕಿಕೊಂಡು ತೆವಳುತ್ತಾ ಜಗುಲಿಯ ಮೆಟ್ಟಿಲಲ್ಲಿ ಕುಳಿತು ಅಲ್ಲಿಯೇ ಉಚ್ಚೆ ಮಾಡುತ್ತಾನೆ. ಬೇಸಿಗೆಯ ದಿನಗಳಲ್ಲಿ ಅವನ ಮನೆಯ ಮೆಟ್ಟಿಲು ಹತ್ತಿದರೆ ಅದೇ ವಾಸನೆ! ಮನೆಯ ಜಗುಲಿಗೆ ಸಗಣಿ ಸಾರಿಸದೆ ವರ್ಷಗಳಾದವು. ಅದು ಏನೂ ಅನಿಸುವುದಿಲ್ಲ. ಹೊದಿಕೆಯನ್ನು ತೊಳೆಯದೆಯೂ ಕೂಡಾ! ಅದರದೂ ಕಮಟು ವಾಸನೆ. ಆದರೆ ನಾರಾಯಣನಿಗೆ ಅದೆಲ್ಲಾ ಅಭ್ಯಾಸವಾಗಿದೆ. ಅವನ ಮೂಗು ಅದಕ್ಕೆ ಒಗ್ಗಿ ಹೋಗಿದೆ. ತಲೆಯು ಧಿಮ್ಮೆಂದು ಅನಿಸುತ್ತಿದೆಯೆಂದು ನಾರಾಯಣ ಮತ್ತೆ ಸಾರಾಯಿಯನ್ನು ಸುರಿದುಕೊಂಡ. ನಾರಾಯಣ 'ಏಯ್ ನಾರಾಯಣ' ಎಂದು ಕರೆದಂತೆ ಕೇಳಿಸಿತು.

ಇದು ಅವನಿಗೆ ಪದೇ ಪದೇ ಆಗುತ್ತಿರುವ ಅನುಭವ. ಪುನರಾವರ್ತನೆಯಾಗುತ್ತಿದೆ. ಸ್ವರ ಕೇಳಿದರೆ ಅದು ತಿಮ್ಮಪ್ಪಯ್ಯನ ಸ್ವರದಂತೆ ಭಾಸವಾಗುತ್ತಿದೆ. ಮತ್ತೆ ಸ್ವಲ್ಪ ಹೊತ್ತಿಗೆ ತಿಮ್ಮಪ್ಪಯ್ಯನ ಸಾವು ಕಣ್ಣೆದುರು ಬಂದು ನಿಲ್ಲುತ್ತದೆ. ಹಾಗೇನಾದರೂ ಆಯಿತೆಂದರೆ ಮತ್ತೆ ನಿದ್ದೆಯೇ ಬರುವುದಿಲ್ಲ. ಮಧ್ಯರಾತ್ರಿ ಎದ್ದು ಕೂರುವುದು ಮತ್ತು ಅವನಿಗೆ ತನ್ನನ್ನು ಯಾರೋ ಕರೆಯುತ್ತಿದ್ದಾರೆ ಎಂದು ಭಾಸವಾಗುವುದು ಹೆಚ್ಚಾಗುತ್ತಲೇ ಹೋಯಿತು. ಹಗಲು ಕೂಡಾ ಬೆಳಿಗ್ಗೆ ಎದ್ದ ತಕ್ಷಣ ಸಾರಾಯಿಯಲ್ಲಿಯೇ ಬಾಯಿ ಮುಕ್ಕುಳಿಸುವಷ್ಟು ಸಾರಾಯಿ ಅವನಿಗೆ ಅಭ್ಯಾಸವಾಯಿತು. ಸುಬ್ಬಣ್ಣನಂಥವರು ಮೊದಮೊದಲು ಎಂಥ ನಾರಾಯಣನ ಕತೆ ನೋಡಿ – ಬ್ರಾಹ್ಮಣರ ಕುಲಕ್ಕೆ ಅವಮಾನ ಎಂದು ತಿಳಿಯುತ್ತಿದ್ದರು. ಬ್ರಾಹ್ಮಣ ಜಾತಿ ಮರ್ಯಾದೆಯು ಎಂಥ ನಾರಾಯಣನಿಂದ ಹೋಗುತ್ತದೆಯೆಂದು ಮಠಕ್ಕೆ ಅರ್ಜಿ ಬರೆದ: ಸಣ್ಣ ಮಠಕ್ಕೆ ಹೋಗಿ ಕಿರಿಯ ಸ್ವಾಮಿಗಳತ್ತ ಅವನಿಗೆ ಜಾತಿ ಬಹಿಷ್ಕಾರ ಹಾಕುವಂತೆ ತುತ್ತೂರಿಯೂ ಊದಿದ್ದ. ಕಿರಿಯ ಸ್ವಾಮಿಗಳು ಅದನ್ನು ತಲೆಗೆ ಹಾಕಿಕೊಂಡಂತೆ ಕಾಣಿಸಲಿಲ್ಲ. ಸುಬ್ಬಣ್ಣನಿಗೆ ದೊಡ್ಡ ಮಠಕ್ಕೆ ಹೋಗಲು ಧೈರ್ಯ ಬರಲಿಲ್ಲ. ನಾರಾಯಣನ ವಿಷಯಕ್ಕೆ ಹೆಚ್ಚು ಕೈ ಹಾಕಿದರೆ ಅದು ಹಸಿಹೇಲಿಗೆ ಕಲ್ಲು ಬಿಸಾಡಿದಂತೆ ಎಂದು ಅವನ ಅಂಬೋಣವಾಗಿತ್ತು. ಅದಕ್ಕೂ ಕಾರಣವಿಲ್ಲದೆ ಇಲ್ಲ. ಎಂಥ ನಾರಾಯಣ ಒಂದು ದಿನ ಬೆಳಿಗ್ಗೆ ಸಾರಾಯಿ ಅಂಗಡಿಗೆ ಎಲ್ಲರ ಎದುರಿನಲ್ಲಿ ನುಗ್ಗಿ ಸಾರಾಯಿ ಕುಡಿದು, ಒಂದು ಬಾಟ್ಲಿಯಲ್ಲಿ ಒಳ್ಳೇ ಗೇರು ಹಣ್ಣಿನ ಸಾರಾಯಿ ತುಂಬಿಸಿಕೊಂಡು ನಡುಬೀದಿಯಲ್ಲಿ ಬಂದ. ಅವನನ್ನು ಕೇಳುವ ತಾಕತ್ತು ಆ ಸಂದರ್ಭದಲ್ಲಿ ಯಾರಿಗೂ ಇರಲಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಸುಬ್ಬಣ್ಣ ಅಂಗಡಿಯ ಬೆಂಚಲ್ಲಿ ಕೂತಿದ್ದ. "ನೋಡಿ – ನಿಮ್ಮ ನಾರಾಯಣನ ಕತೆ – ಹಾಡು ಹಗಲೆ ಸಾರಾಯಿ ಕುಡಿಯುತ್ತಾನೆ. ನೀವು ಬ್ರಾಹ್ಮಣರು – ಮಧುಮಾಂಸ ಮುಟ್ಟೋಲ್ಲ ಅಂತ ಕೊಚ್ಚಿಕೊಳ್ಳುವುದು ಅದು ದೊಡ್ಡ ಸುಳ್ಳು" ಎಂದು ಸೆಟ್ರ ಜಾತಿಯವರು ಕಿಚಾಯಿಸಿದರು. 'ಎಲ್ಲಾ ಅವರವರ ಹಣೇ ಬರಹ ಅದಕ್ಕೆ ಏನೂ ಮಾಡಲಾಗುವುದಿಲ್ಲ" ಎಂದು ಮಂಕು ಹಿಡಿದವನಂತೆ ಸುಬ್ಬಣ್ಣ ಹೇಳಿದ. ಸುಬ್ಬಣ್ಣನ ಪುಕ್ಕಲು ಸ್ವಭಾವಗೊತ್ತಿದ್ದ ಒಬ್ಬರು, 'ನಾನಾದ್ರೆ – ಈಗ ಹೋಗಿ ಕೇಳುತ್ತಿದ್ದೆ. ಯಾರಾದರೂ ಜಾತಿ ಮರ್ಯಾದೆ ತೆಗೆಯುತ್ತಾರಾ? ಜಾತಿಗೆ ಜಾತಿ ಮರ್ಯಾದೆ ಅಂತ ಒಂದುಂಟು ಭಟ್ರೆ. ಅದು ತಿಥಿ ಊಟದಲ್ಲಿ ವಡೆ ತಿಂದ ಹಾಗಲ್ಲ" ಎಂದರು. ಸುಬ್ಬಣ್ಣನಿಗೆ ಇನ್ನು ಅವರೆದುರು ಕೂರುವುದು ಕಷ್ಟವೆಂದು ಅನಿಸಿತು. ಅಲ್ಲಿಂದಲೇ, 'ಏಯ್ – ನಾರಾಯಣ' ಅಂತ ಕರೆದ. ನಾರಾಯಣ ಅವನ ಜನ್ಮಕಾಲದಲ್ಲಿ ಬೇರೆಯವರಿಗೆ ಮರ್ಯಾದೆ ಕೊಟ್ಟು ಬಂದವನಲ್ಲ. ಅದರ ತಿಳುವಳಿಕೆಯೂ ಅವನಿಗೆ ಬೇಕಿರಲಿಲ್ಲ. 'ಏನು ಸುಬ್ಬಣ್ಣ – ಏನ್ಸಮಾಚಾರ?

ಕರಿಪರಮೇಶ್ವರಿ ಹೇಗಿದ್ದಾಳೆ? ಮಠಕ್ಕೆ ಪಿರ್ಯಾದಿ ಕೊಟ್ಟದ್ದು ಏನಾಯಿತು?" ಎಂದು ಮುಖಕ್ಕೆ ಹೊಡೆದಂತೆ ಕೇಳಿದ. ಅಲ್ಲಿಯವರು ಗೊಳ್ಳನೆ ನಕ್ಕರು. ಅವರ ನಗು ಬಂದಿರುವುದು ಮತ್ತು ಸುಬ್ಬಣ್ಣನಿಗೆ ಹುಳಿ ತೇಗು ಬಂದಿರುವುದು ಸರಿಯಾಯಿತು. ಅಂಗಡಿಯ ಮೆಟ್ಟಿಲಿನ ಹತ್ತಿರ ಬಂದ 'ಅದೆಂಥ ನಾರಾಯಣ' – ಬೀಡಿ ಕಚ್ಚಿಕೊಂಡು ಪುಸಪುಸನೆ ಎರಡು ಸಾರಿ ಹೊಗೆ ಬಿಟ್ಟು ಹೇಳಿದ: "ಸುಬ್ಬಣ್ಣ – ಯಾಕೆ ಕರೆದದ್ದು?" ಸುಬ್ಬಣ್ಣ ಒಂದು ಕ್ಷಣ ಆಲೋಚಿಸಿ, 'ಇದೆಲ್ಲಾ ಎಂಥ ಮಾರಾಯ? ಈ ಸಣ್ಣ ವಯಸ್ಸಿನಲ್ಲಿ. ಕುಡಿಯುವುದು –ಬಿಡುವುದೊಳ್ಳೆಯದು. ನಿನ್ನದು ಸಣ್ಣ ವಯಸ್ಸು. ಇನ್ನೂ ಬಾಳಿ ಬದುಕಬೇಕಾದವನು. ಅದಕ್ಕಿಂತ ನಮ್ಮ ಜಾತಿ ಮರ್ಯಾದೆ ಮುಖ್ಯ" ಅಂದ. ಆದರೂ ಅವನಿಗೇ ಅನಿಸಿತ್ತು: ತನ್ನ ಮಾತು ತನಗೇ ಕೇಳಿಸುತ್ತಿಲ್ಲ. ಕೊಂಚ ಕುಡಿದ ನಿಶೆಯೇರಿದ 'ಎಂಥ ನಾರಾಯಣ', 'ಜಾತಿಯವರಿಂದ ನನಗೆ ಯಾವ ಉಪಯೋಗವೂ ಇಲ್ಲ. ನಿಮ್ಮ ಸ್ವಾಮಿಗಳು ಕೂಡಾ ನನಗೆ ಏನೂ ಮಾಡಲಿಕ್ಕಿಲ್ಲ. ಗೊತ್ತಾಯ್ತಾ? ನೀವೆಲ್ಲ ನನ್ನನ್ನು ಏನೂ ಅಂತ ತಿಳಿದುಕೊಂಡಿದ್ದೀರಿ? ನನ್ನ ಅಪ್ಪ ಪ್ರೇತ ಭಟ್ಟನಾಗಿ ಓಡಿಹೋಗುವಾಗ ನೀವು ಹುರಿಕೆ ಬಿಟ್ಟುಕೊಂಡು ಕೂತಿರುತ್ತಿದ್ದಿರಿ. ನನಗೆ ಬುದ್ಧಿವಾದ ಹೇಳಬೇಡಿ. ಅಂದ ಹಾಗೆ ಸುಬ್ಬಣ್ಣ–ನಿಮ್ಮ ಮಗ ನಿಮ್ಮ ಬೀಜದಿಂದ ಹುಟ್ಟಿದ್ದು ಅಲ್ಲವಂತೆ. ಅದ್ಯಾರೋ ವೆಂಕ್ಟ ಅನ್ನುವವನಿಗೆ ನಿಮ್ಮ ಹೆಂಡ್ತಿ ಸೆರಗು ಬಿಚ್ಚಿದ್ದಳಂತೆ ಅದು ಹೌದಾ? ಸದ್ಯ ನಾನಂತೂ ನಿಮ್ಮ ಹೆಂಡತಿಯ ರವಿಕೆ ಬಿಚ್ಚಲು ಬರಲಿಲ್ಲ ಗೊತ್ತಾಯ್ತೊ–ತೂ–ತೂ. ಈ ಹಾಳು ಬೀಡಿ ಬೇರೆ ಸರಿಯಾಗಿ ಉರಿಯುವುದಿಲ್ಲ. ಎಲ್ಲಾ ಅಪ್ಪನಿಗೆ ಹುಟ್ಟಿದವುಗಳೇ ಅಲ್ಲ" ಎಂದ. ಅವನ ಮಾತಿಗೆ ಉಗುಳಿ ಹೊರಟು ಹೋದ ಸುಬ್ಬಣ್ಣ. ಜನ ಅವನ ಸುದ್ದಿಗೆ ಯಾರೂ ಹೋಗಬಾರದು ಎಂದು ಭಾವಿಸಿಕೊಂಡಿದ್ದರು. ಅವನ ಸುದ್ದಿಗೆ ಹೋದರೆ ನಮ್ಮ ಮುಖಕ್ಕೆ ನಾವೇ ಉಗುಳಿಕೊಂಡಂತೆ ಎಂದೂ ತಿಳಿದುಕೊಂಡರು. 'ಎಂಥ ನಾರಾಯಣ'ನ ಬಗ್ಗೆ ಬ್ರಾಹ್ಮಣರಲ್ಲಿ ಚರ್ಚೆಯಾಯಿತು. ಯಾರೂ ಅವನನ್ನು ಯಾವುದಕ್ಕೂ ಕರೆಯಬಾರದು ಎಂದು ಒಳಗಿಂದೊಳಗೆ ತೀರ್ಮಾನ ಮಾಡಿದರು. ಆ ನಾರಾಯಣ ಆ ದಿನಗಳಲ್ಲಿ ಕೊಂಚ ತಲೆ ಕೆಡಿಸಿಕೊಂಡರಲಿಲ್ಲ. ಅನಂತರ ಅದರ ಅಗತ್ಯವು ಅವನಿಗೆ ಇದ್ದಂತೆ ಅನಿಸಲಿಲ್ಲ. ಆದರೆ ಈ ವಾಸನೆಯು ನಾರಾಯಣನಿಗೆ ತಗುಲಿತ್ತು. ಈ ಪ್ರಕರಣ ಅವನಿಗೆ ಎಷ್ಟು ಸಿಟ್ಟು ತರಿಸಿತ್ತೆಂದರೆ ಒಂದು ದಿನ ಇದಕ್ಕೆ ಸಂಬಂಧಿಸಿದಂತೆ ಇಡಿಯ ಬ್ರಾಹ್ಮಣ ಕುಲವೇ ತಲೆ ತಗ್ಗಿಸುವಂತೆ ಮಾಡಬೇಕೆಂದು ಅವನಿಗೆ ಅನಿಸಿತ್ತು. ಕರುಳಿನಾಳದಲ್ಲಿ ಕುದಿಯುತ್ತಿರುವ ಸಿಟ್ಟು; ಕಣ್ಣುಗಳಲ್ಲಿ ಉರಿಯುತ್ತಿರುವ ಸಿಟ್ಟು; ಸಕಲವನ್ನು ನಾಶ ಮಾಡಬೇಕೆಂಬ ಪರಶುರಾಮನ ಕ್ರೋಧವಿತ್ತು. ಅವನ ಅಡಗಿಸಿಟ್ಟಿದ್ದ ಆಕ್ರೋಶವು ಒಂದು ದಿನ ಸ್ಫೋಟವಾಗುವ ಗಳಿಗೆ ಹತ್ತಿರ ಬಂತು.

ಅದು ನಡೆದದ್ದು ಸಾವಿತ್ರಿ ಜೋಯಿಸಳ ಮದುವೆಯ ದಿನ – ಅದೇ ನನ್ನ ಮತ್ತು ಪುರುಷೋತ್ತಮನ "ಬೆಕ್ಕಿನ ಮದುವೆ'. ಆ ದಿನ ಅವಳ ಮದುವೆಯು ನಡೆದುದು, ಮಾತ್ರ ಎಲ್ಲರೂ ಜನಿವಾರ ಮುಟ್ಟಿಕೊಳ್ಳುವಂತೆ ಮಾಡಿತು. ಜಾತಕವೆಲ್ಲಾ ಕೂಡಿ ಬಂದ ಮೇಲೆ ಜೋಯಿಸರು ಮಗಳನ್ನು ಮದುವೆಮಾಡಿಸಲು ಅಣಿಯಾದರು. ಆಷಾಢ ಕಳೆದ ಮೇಲಿನ ಒಳ್ಳೆಯ ಮುಹೂರ್ತಕ್ಕಾಗಿ ಕಾದರು. ಅದರಿಂದ ಅವರಿಗೆ ಅನುಕೂಲವೂ ಹೆಚ್ಚು. ಮಳೆಗಾಲದ ಮುಹೂರ್ತವೆಂದರೆ ಅತ್ಯಂತ ಅನುಕೂಲವೆಂದು ಅವರ ಭಾವನೆಯಾಗಿತ್ತು. ಮಳೆಗಾಲದಲ್ಲಿ ಹೇಳಿಕೆಕೊಟ್ಟರೂ ಯಾರೂ ಹೆಚ್ಚು ಜನ ಬರುವುದಿಲ್ಲವೆಂಬುದು ಅವರ ಲೆಕ್ಕಚಾರವಾಗಿತ್ತು. ಮಗಳ ಮದುವೆಯ ಖರ್ಚಿನಲ್ಲಿ ಒಂದಷ್ಟು ಉಳಿಸಬಹುದೆಂದು ಅವರ ಊಹೆ. ಕೆಲವರಿಗೆ ಖುದ್ದಾಗಿ ತಾವೇ ಹೋಗಿ ಆಮಂತ್ರಣ ಕೊಟ್ಟರು. ಮತ್ತೆ ಕೆಲವರಿಗೆ ಆಳಿನ ಕೈಯಲ್ಲಿ ಹೇಳಿಕೆಯನ್ನು ಕೊಟ್ಟು ಕಳಿಸಿದರು. ಒಂದು ದಿನ ಸುಬ್ಬಣ್ಣನ ಮನೆಗೆ ಆಮಂತ್ರಣ ಕೊಡಲು ಹೋಗುವ ಅವರಿಗೆ ದಾರಿಯಲ್ಲಿ 'ಎಂಥ ನಾರಾಯಣ' ಸಿಕ್ಕ. ಅವನಿಗೆ ಹೇಳಿಕೆ ಕೊಟ್ಟ ಹಾಗೂ ಆಗಬೇಕು; ಬಿಟ್ಟ ಹಾಗೂ ಆಗಬೇಕೆಂದು ಜೋಯಿಸರು–"ನಾರಾಯಣ. ಮಗಳು ಸಾವಿತ್ರಿಗೆ ಮದುವೆ ನಿಶ್ಚಯವಾಗಿದೆ. ದೇವಸ್ಥಾನದಲ್ಲಿ ಮದುವೆ. ಪುರುಸೊತ್ತಿದ್ದರೆ ಒಂದು ಗಳಿಗೆ ಬಂದು ಹೋಗು" ಎಂದರು. ನಾರಾಯಣನಿಗೆ ಅದು ಅರ್ಥವಾಗದ್ದೇನೂ ಅಲ್ಲ. ಆದರೆ, ಅವರು ಹೇಳಿದ ಧಾಟಿಯಲ್ಲಿ ನೀನು ಬಾರದಿದ್ದರೆ ಹೆಚ್ಚು ಒಳ್ಳೆಯದು ಎಂಬ ಭಾವನೆಯಿತ್ತು. ಅವರ ಧೋರಣೆಯು ಅವನಿಗೆ ಸಿಟ್ಟು ಬರಿಸಿತು. ಹಟಕ್ಕೆಂಬಂತೆ ಮದುವೆಗೆ ಹೋಗಲು ನಿಶ್ಚಯಿಸಿದ.

ಮದುವೆಗೆ ಹೋದರೆ ಏನಾಗುತ್ತದೆ ನೋಡಿಯೇ ಬಿಡೋಣವೆಂದು ಅವನು ಮದುವೆಯ ದಿನ ಸ್ವಲ್ಪ ಗಂಟಲಿಗೆ ಸುರಿದುಕೊಂಡು ಹೋದ. ಅವನು ಮದುವೆಯ ಅಂಗಳಕ್ಕೆ ಕಾಲಿಟ್ಟ ಕೂಡಲೇ ಗುರಿಕಾರರ ಸಮೇತ ಎಲ್ಲರೂ ತಿರುತಿರುಗಿ ನೋಡಿದರು. ಜೋಯಿಸರ ಮುಖ ಕಪ್ಪಾಯಿತು. ಎಂಥ ನಾರಾಯಣ ರಾಜಾರೋಷವಾಗಿ ಸಭೆಯ ಮಧ್ಯೆಯೇ ಕುಳಿತುಬಿಟ್ಟ. ಹೆಣ್ಣಿನ ಕಡೆಯವರು ಬಲಗಡೆಯಲ್ಲಿ ಕುಳಿತುಕೊಂಡರೆ ಗಂಡಿನವರ ಮರ್ಯಾದೆ ಕಡಿಮೆಯೆಂದು ಭಾವಿಸುತ್ತಾರೆ. ಎಂಥ ನಾರಾಯಣ ಕುಳಿತದ್ದು ಗಂಡಿನ ಕಡೆಯವರು ಕುಳಿತ ಸಾಲಿನಲ್ಲಿ. ಅದು ಮಂಟಪದ ಪಕ್ಕದಲ್ಲಿ ಗುರಿಕಾರರ ಪಕ್ಕದಲ್ಲಿಯೇ. ಚಕ್ಕಳಮಕ್ಕಳ ಹಾಕಿಕೊಂಡು ಕುಳಿತು ಸುತ್ತ ನೋಡಿದ. ಅವನಿಗೂ ತಾನು ಬಂದುದು ಎಲ್ಲರಿಗೂ ಸಹನೀಯವಾಗಲಿಲ್ಲವೆಂದು ತಿಳಿಯಿತು. ವಾಸ್ತವವಾಗಿ ಅದುವೇ ಅವನಿಗೆ ತುಂಬಾ ಖುಶಿಯನ್ನು ಕೊಟ್ಟಿತು. ಬೇರೆಯವರಿಗೆ ಉಂಟಾಗುತ್ತಿರುವ ಅಸಹನೆಯೇ ತನ್ನ

ಮಹತ್ವವನ್ನು ಸೂಚಿಸುತ್ತದೆಯೆಂದು ಅವನು ಭಾವಿಸಿಕೊಂಡ. ಆಗ ಹೆಣ್ಣಿನ ಕಡೆಯ ಗುರಿಕಾರರಾದ ಗೋಪಣ್ಣನವರು, "ಅದೇನೋ ನಾರಾಯಣ ಅಲ್ಯಾಕೆ ಕುಳಿತುಕೊಂಡೆ: ಈ ಕಡೆಗೆ ಬಾ. ಹೆಣ್ಣಿನ ಕಡೆಯವರಿಗೆಂತಾ ಈ ಕಡೆ ಚಾಪೆ ಹಾಸಿರುವಾಗ ನೀನು ಅಲ್ಲಿ ಕುಳಿತುಕೊಳ್ಳುವುದು ಮರ್ಯಾದೆಯಲ್ಲ" ಎಂದರು: "ನಮ್ಮಲ್ಲಿ ಮರ್ಯಾದೆಯೆಲ್ಲಾ ಗುರಿಕಾರರಿಗೆ; ಪುರೋಹಿತರಿಗೆ; ಕಟ್ಟಿಟ್ಟಿದ್ದು. ನಮ್ಮಂಥ ಪರದೇಶಿಗಳಿಗೆ ಮರ್ಯಾದೆ ಎಂಥದ್ದು. ಕುಂಡೆ ಊರಲು ಜಾಗ ಸಿಕ್ಕಿದರೆ ಸಾಕು. ಎಲ್ಲಿ ಯಾವ ಕಡೆಯಾದರೇನು?" ಎಂದು ಎಂಥ ನಾರಾಯಣ ಒರಟಾಗಿ ಹೇಳಿದ. ಅವನ ಪಕ್ಕದಲ್ಲಿ ಕುಳಿತ ಗಂಡಿನ ಕಡೆಯ ಗುರಿಕಾರರು ಅವನು ಬಾಯಿ ತೆರೆದಾಗ ಬಂದ ಅವನ ಬಾಯಿ ವಾಸನೆಯಿಂದಾಗಿ ಹೆಗಲಿಗೆ ಹಾಕಿಕೊಂಡ ಶಾಲಿನಿಂದ ಒಂದು ಕ್ಷಣ ಮೂಗು ಮುಚ್ಚಿಕೊಂಡರು. ಅದೇ ಸಮಯಕ್ಕೆ ಪುರೋಹಿತರು, 'ಧಾರೆಯ ಮುಹೂರ್ತ ಆಯಿತು. ಹೇಗೆ ಹೆಣ್ಣೊಪ್ಪಿಸಿಕೊಡುವುದಾ ಅಂತ ಎರಡೂ ಕಡೆಯ ಗುರಿಕಾರರಲ್ಲಿ ಹೆಣ್ಣಿನ ತಂದೆ ಕೇಳಿ" ಎಂದರು. ಒಂದು ಹರಿವಾಣದಲ್ಲಿ ಎಲೆ ಅಡಿಕೆ ಇಟ್ಟು 'ಗುರಿಕಾರರು ಒಪ್ಪಿಗೆ ಕೊಡಲಿ;' ಎಂದು ಜೋಯಿಸರು ಹರಿವಾಣವನ್ನು ಎರಡೂ ಕಡೆಯ ಗುರಿಕಾರರ ಎದುರು ಹಿಡಿದರು. ಎರಡೂ ಕಡೆಯ ಗುರಿಕಾರರು ತಟ್ಟೆಯನ್ನು ಮುಟ್ಟಿ, 'ಹ್ವಾ, ಒಪ್ಪಿಗೆ. ಧಾರೆಯೆರೆಯಬಹುದು" ಎಂದರು. ಧಾರೆಯ ಕಾರ್ಯ ಮುಗಿಯುತ್ತಿರುವಾಗ ನಾರಾಯಣ ಅಲ್ಲಿಯೇ ಅಡ್ಡಾದ. "ಇಂಥ ಜಾತಿ ಮರ್ಯಾದೆ ತೆಗೆಯುವವರನ್ನು ನೀವು ಯಾಕೆ ಕರೆಯಬೇಕಿತ್ತು?' ಎಂದು ಗೋಪಣ್ಣ ಗುರಿಕಾರರು ಹೇಳಿದರು. ನಾರಾಯಣನಿಗೇನೂ ಇದು ಕೇಳಿಸದೆ ಇರಲಿಲ್ಲ. ಉದ್ದೇಶಪೂರ್ವಕವಾಗಿ ಮಲಗಿದಲ್ಲಿಂದಲೇ 'ಜಾತಿ ಮರ್ಯಾದೆ, ಗಿರ್ಯಾದೆ ಅಂದ್ರೆ ಸುಮ್ಮನಿರುವುದಿಲ್ಲ. ರಾತ್ರಿ ಕುಡ್ದು, ಮಾಂಸ ತಿಂದು; ಹಾದರ ಮಾಡಿ ಹಗಲು ವೇಷ ಹಾಕುವವರಿಗಿಂತ ನಾನೇ ಸರಿ. ಕುಡೀತೇನೆ ಅಂದ್ರೆ ಕುಡೀತೇನೆ. ತಿಂತೇನೆ ಅಂದ್ರೆ ತಿಂತೇನೆ. ಮಲಗ್ತೇನೆ ಅಂದ್ರೆ ಮಲಗ್ತೇನೆ. ನನಗೆ ಯಾವ ಮುಲಾಜೂ ಇಲ್ಲ ಹಂಗೂ ಇಲ್ಲ" ಎಂದ. ಅವನ ಮಾತಿನಲ್ಲಿ ಜಗಳಕ್ಕೆ ಕಾಲು ಕೆರೆಯುವ ಧೋರಣೆಯಿತ್ತು. ಗೋಪಣ್ಣ ಗುರಿಕಾರರು, 'ಎಂತದು ನಾರಾಯಣ ಸುಮ್ಮನಿರೋ ಮಾರಾಯ.........ಎಂದರು. ಅದಕ್ಕೆ ಎದ್ದು ಕುಳಿತು –''ಗುರಿಕಾರ್ರೆ, ಆ ಎಲೆ ಅಡಿಕೆ ತಟ್ಟೆ ಇಲ್ಲಿ ಕೊಡಿ. ನಾನು ಹೇಳ್ತೇನೆ ಕೇಳಿ – ನಾನು ಅಪ್ಪನಿಗೆ ಹುಟ್ಟಿದ ಮಗ. ಕಳ್ಳ ಬಸುರಿಗೆ ಹುಟ್ಟಿ ಗುರಿಕಾರನಾದವನಲ್ಲ" ಎಂದ. ಅವನು ಒಂದು ಸರ್ತಿ ಸುಬ್ಬಣ್ಣನ ಮುಖವನ್ನು ನೋಡಿದ. ನಾರಾಯಣನ ಮಾತು ಎಲ್ಲರೂ ಕೇಳುವ ರೀತಿಯದಾಗಿರಲಿಲ್ಲ. ಅದೇ ಸಮಯಕ್ಕೆ ವಾಲಗದವರ ಧ್ವನಿಯು ಜೋರಾಯಿತು. ಅದರೊಂದಿಗೆ ಪುರೋಹಿತರ ಮಂತ್ರವೂ ಕೂಡಾ. ಆದರೆ ನಾರಾಯಣನ ಮಾತು ಗುರಿಕಾರರಿಗೆ

ನಾಟಿತು. ಸುಬ್ಬಣ್ಣನ ಕುಂಡೆಗೆ ಬಿಸಿ ಮುಟ್ಟಿದಂತಾಯಿತು. "ಕೆಲವರು ಮಠಕ್ಕೆ ಮೂಗರ್ಜಿ ಬರೆದರು. ಏನಾಯಿತು? ಏನೂ ಆಗಲಿಲ್ಲ. ನೀವೆಲ್ಲಾ ತಿಳ್ಕೊಂಡಿರಬಹುದು ಜಾತಿಯಿಂದ ತೆಗೆದು ಹಾಕಿದೆವು ಅಂತ. ಅದರಿಂದ ಯಾವ ಉಪಯೋಗವೂ ಇಲ್ಲ. ನೀವು ತೆಗೆದುಹಾಕಿದರೆ ನನ್ನ ಜಾತಿ ಹೋಗುವುದಿಲ್ಲ ಗೊತ್ತಾಯ್ತಾ. ಜಾತಿಯನ್ನು ಬಿಡುವುದು ಅಥವಾ ಇಟ್ಟುಕೊಳ್ಳುವುದು ನನಗೆ ಸೇರಿದ್ದು. ಅದು ನಿಮಗೆ ಸೇರಿದ್ದಲ್ಲ" ಎಂದ. ಅಷ್ಟು ಹೊತ್ತಿಗೆ ಧಾರೆಯು ಮುಗಿದಿತ್ತು. ವಾಲಗದವರು ವಾದ್ಯ ನಿಲ್ಲಿಸಿದರು. "ಇವನನ್ನು ಹೊರಗೆ ಕಳಿಸಿ" ಎಂದು ಗುಟ್ಟಾಗಿ ಸುಬ್ಬಣ್ಣ ಬಂದು ಗೋಪಣ್ಣನ ಹತ್ತಿರ ಹೇಳಿದ. ಅವರಿಬ್ಬರು, ಮಾತಾಡಿದ್ದು ನಾರಾಯಣನಿಗೂ ಅರ್ಥವಾಯಿತು. ನಾರಾಯಣ ಎದ್ದು ನಿಂತವನು ವಿಕ್ಷಿಪ್ತನಂತೆ – ಶರ್ಟು ಬಿಚ್ಚಿ ಹಾಕಿ ಹೆಗಲಲ್ಲಿದ್ದ ಜನಿವಾರವನ್ನು ತುಂಡು ಮಾಡಿ ಅದನ್ನು ಕಾಲಲ್ಲಿ ಒದ್ದು, "ಓಂ ಭೂರ್‌ಭುವಸ್ವಾಃ" ಎಂದು ಹೇಳುತ್ತಾ ಹೊರಟು ಹೋದ. ಅನೇಕರು ಅವಕ್ಕಾದರು. ಆದರೆ ಅದೊಂದು ನಾಟಕೀಯ ಸನ್ನಿವೇಶದಂತೆ ಅನಿಸಿತು. ಅಂದಿನಿಂದ ಮಾತ್ರ ಅದೆಂಥ ನಾರಾಯನ ಯಾರ ಮನೆಗೂ ಹೋಗುತ್ತಿರಲಿಲ್ಲ. ಅದರ ಆವಶ್ಯಕತೆಯೂ ಅವನಿಗೆ ಇದ್ದಂತೆ ಕಾಣಿಸಲಿಲ್ಲ. ಆದರೂ ಅವನು ಊಟ – ತಿಂಡಿಗೆ; ಕುಡಿತಕ್ಕೆ ಬೇಕಾದ ಸಂಪಾದನೆ ಅಗತ್ಯವಿದ್ದಾಗ ಮಾಡಿಕೊಂಡು ಬಿಡುತ್ತಿದ್ದ. ಕೂಲಿ ಕೆಲಸವಾದರೆ ಅದು. ಅಡುಗೆ ಕೆಲಸವಾದರೆ ಅದು: ಏನಿಲ್ಲವೆಂದರೆ ಪೇಟೆಗೆ ಹೋಗಿ ಹೊಟೇಲ್‌ನಲ್ಲಿ ನಾಕು ದಿನ ಚಾಕರಿ. ಅಂಥ ಯಾವ ಕೆಲಸವೂ ಇಲ್ಲವೆಂದರೆ ಹಿತ್ತಲಲ್ಲಿ ಹಾಕಿದ ಮರಗೆಣಸು ಬೇಯಿಸಿ ತಿನ್ನುವುದು. ಹಲಸಿನ ಕಾಯಿ ತಂದು ತಿನ್ನುವುದು. ಅವನು ಅತ್ಯಂತ ನಿಯತ್ತಿನಿಂದ ಬೀಡಿ ಮತ್ತು ಸಾರಾಯಿ ಮಾತ್ರ ಪಾಲಿಸಿಕೊಂಡು ಬಂದ. ಬ್ರಾಹ್ಮಣರಂತೂ ಅವನನ್ನು ತಿರುಗಿಯೂ ನೋಡುತ್ತಿರಲಿಲ್ಲ. ಯಾರ ಮನೆಯಲ್ಲಿ ಯಾವ ಕೆಲಸವಾದರೂ ಹಂಗಿಲ್ಲದೆ ಮಾಡಿದ. ಹಂಗಿಲ್ಲದಿದ್ದರೆ ನಮ್ಮ ದೋಣಿಯನ್ನು ನಾವು ನಡೆಸಬಹುದು. ಅಂಬಿಗನೇತಕ್ಕೆ?

ಎಂಥ ನಾರಾಯಣ ರಾತ್ರಿ ಎದ್ದು ಕುಳಿತರೆ ಮುಗಿಯುತು. ಭೂತಕಾಲ ಬಂದು ಕಣ್ಣೆದುರು ಕುಣಿಯುತ್ತದೆ. ಅದು ಅವನಿಗೆ ಚೇತರಿಸಲಾಗದಷ್ಟು ಯಾತನೆಯನ್ನು ಕೊಡುತ್ತದೆ. ಗೋಡೆಗೆ ಒರಗಿ ಕುಳಿತುಕೊಳ್ಳುತ್ತಾನೆ. ಕರೆಯುತ್ತಿರುವ ಹೆಣ. ಅದು ತಾನು ಕೊಂದ ಜೀವ. ಒಂದಿಷ್ಟು ರಕ್ತವಿಲ್ಲದೆ ಅವನು ಸತ್ತ. ಕೊರಳಿನಿಂದ ಒಂದು ಕ್ಷಣ ಸೊರ ಸೊರ ಸದ್ದು ಬಿಟ್ಟರೆ ಮತ್ತೆ ಏನೆಂದರೆ ಏನೂ ಉಳಿದಿರಲಿಲ್ಲ. ಎರಡು ಕ್ಷಣ ಮುಂಚೆ ಜೀವಂತವಾಗಿದ್ದ ಜೀವವೊಂದು ಕೊರಳಿಗೆ ಹಾಕಿಕೊಂಡ ಶಾಲಿನಿಂದಲೇ ಉರುಳು ಬಿದ್ದು ಸಾಯುವಾಗ; ತನಗಿನ್ನು ಸಾವು

ಬರಲಿದೆಯೆಂಬುದರ ಅರಿವು ಆ ದೇಹಕ್ಕೆ ಇರಲಿಲ್ಲ. ತನ್ನ ಕೈಯಾರೆ ಹಾರಿಹೋದ ಜೀವದ ಬಗ್ಗೆ: ಪೊಲೀಸರ ಒದೆತ ಯಾವುದೂ ತನಗೆ ಚಿಂತೆಯನ್ನು ತಂದಿರಲಿಲ್ಲ. ಅದರ ಬಗ್ಗೆ ಆತಂಕವಿರಲಿಲ್ಲ. ರಾತ್ರಿ ಯಾವಾಗಲೋ ಹೆಣ ಕರೆಯುತ್ತದೆ – 'ನಾರಾಯಣ' 'ನಾರಾಯಣ' ಅಂಥ. ಒಮ್ಮೊಮ್ಮೆ ಕುಡಿದ ಅಮಲಿನಲ್ಲಿ 'ಎಂಥ ನಾರಾಯಣ' 'ಹ್ಹೂಂ,' ಅನ್ನುವುದಿದೆ. ಮತ್ತೆ ಕೆಲವೊಮ್ಮೆ ಏನು? ಅಂತ ಹೇಳುವುದಿದೆ. ಅಂಗಳಕ್ಕೆ ಬಂದು ಕುಳಿತು. ಏನು ಮಾಡಲಿಯಿನ್ನು ಅಂತಲೋ "ವಿಧಿ ಬರೆದ ಆದಿ ಅಕ್ಷರಗಿಂತು ಸೀದು ಹೋಗಲಿ ಜಯ ಸಿರಿಯು" ಅಂತಲೋ ಗೊಣಗಾಡುವುದಿದೆ. ಸೊಂಟಕ್ಕೆ ಸುತ್ತಿದ ಸಣ್ಣ ಬೈರಾಸು ಬಿಟ್ಟರೆ ಬೇರೆ ಏನೂ ಇಲ್ಲ. ಅರ್ಧರ್ಧ ಬೆಳೆದ ಗಡ್ಡ. ಕತ್ತರಿಸಿದ ತಲೆಗೂದಲು. ಒಂದು ದೃಷ್ಟಿಯಿಂದ ಎಲ್ಲಾ ಬಿಟ್ಟವನಂತೆ ಇದ್ದ. "ಅದೆಂಥ ನಾರಾಯಣನ ಮಾತು ಕೇಳಿಸಿಕೊಳ್ಳುವವರು ಯಾರೂ ಇರಲಿಲ್ಲ. ಅವನ ಮಾತು ಅವನಿಗೆ. ಅವನ ವರ್ತನೆಯೂ ಅವನಿಗೆ. ತನ್ನ ಕೈಯೇಟಿನಿಂದ ಸತ್ತ ತನ್ನ ಹೆಂಡತಿ; ಅವಳ ಅಕ್ಕನ ಮನೆಯಲ್ಲಿರುವ ಮಗಳು ನಿಖಿತಾ; ಹಿಂಸೆ ತಾಳಲಾರದೆ ಓಡಿ ಹೋದ ಎರಡನೆಯ ಹೆಂಡತಿ, ಕೆರೆಮಜಲು ತಿಮ್ಮಪ್ಪಯ್ಯ – ಚಕ್ರ ಸುಳಿಯಂತೆ ನೆನಪಿಗೆ ಬಂದರು.

ದಿನೇದಿನೇ ಕುಗ್ಗುತ್ತಾ ಹೋದ. ಕುಗ್ಗುತ್ತಾ ಹೋದವನ ಕಣ್ಣುಗಳಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಒಂದು ದಿನ ಮನೆಯ ಬಾಗಿಲು ಹಾಕಿ ಎಲ್ಲಿಯೋ ಹೊರಟು ಹೋದ. ಕೆಲವರು ಸತ್ತನೆಂದರು. ಮತ್ತೆ ಕೆಲವರು ಅವನು ಘಟ್ಟಕ್ಕೆ ಹೋದರು ಎಂದನು. ಆದರೂ ಏನಾಯಿತು ಅಂತ ಯಾರಿಗೂ ತಿಳಿಯಲಿಲ್ಲ. ಆದರೆ ಅವನು ಹೋಗಿರುವುದು ಮಗಳು ನಿಖಿತಾನಲ್ಲಿಗೆ!

* * * * *

ನಾರಾಯಣನ ತೊಡೆಯಲ್ಲಿ ಮಲಗಿದ ನಿಖಿತಾ ಅಪ್ಪನ ಕೈಬೆರಳುಗಳನ್ನು ಗಟ್ಟಿ ಹಿಡಿದುಕೊಂಡು ನಿದ್ದೆ ಹೋಗಿದ್ದಳು.

* * * * *

ಊರಿನಲ್ಲಿ ವರ್ಷಕ್ಕೊಂದು ಸರ್ತಿ ಬರುವ ದೊಡ್ಡ ಭೂತ ಕೋಲ ಆಗುವುದು ವಿಷು ಸಂಕ್ರಾಂತ್ರಿಯ ಮರುದಿನ. ಈ ದೊಡ್ಡ ಭೂತವೆಂದರೆ ಎಲ್ಲರಿಗೂ ಹೆದರಿಕೆ. ಸಣ್ಣಪುಟ್ಟ ಭೂತಗಳಿಗೆ. ದೆವ್ವಗಳಿಗೆ ಈ ದೊಡ್ಡ ಭೂತ ಅಧಿದೈವವೆಂದು ಎಲ್ಲರೂ ಭಾವಿಸಿಕೊಂಡಿದ್ದರು. ಈ ದೊಡ್ಡಭೂತದ ಆವಾಸ ಸ್ಥಾನಕ್ಕೆ ಅಶ್ವತ್ಥಮರದ ಕೆಳಗೆ ಕಟ್ಟಲಾಗಿರುವ ಕಟ್ಟೆ ಮತ್ತು ಒಂದು ಭೂತಸ್ಥಾನವಿದ್ದರೆ, ಅದರ ಪಕ್ಕದಲ್ಲಿರುವ ಮತ್ತೊಂದು ಸಣ್ಣ ದೈವವಾದ ಪಂಜುರ್ಲಿಗೆ ಒಂದು ಸಣ್ಣ ಕಲ್ಲಿನ ಕಟ್ಟೆಯಿತ್ತು.

ಅದು ವಾಸ್ತವವಾಗಿ ಬಾಂದಿನ ಕಲ್ಲಿನ ಹಾಗೆ ಕಾಣಿಸುತ್ತಿದ್ದುದು ಕೂಡಾ ಅಷ್ಟೇ ನಿಜ. ಬಾಂದಿನ ಕಲ್ಲಿಗೆ ಅರಿಶಿನ, ಕುಂಕುಮ ಹಚ್ಚಿದರೆ ಹೇಗೆ ಕಾಣಿಸಲು ಸಾಧ್ಯವೋ ಹಾಗೆ ಪಂಜುರ್ಲಿ ಕಲ್ಲು. ಆದರೆ ಮಳೆಗಾಲದಲ್ಲಿ ದೊಡ್ಡ ಭೂತ, ಒದ್ದೆಯಾಗಿ ಚಳಿಗೆ ನಡುಗುವ ಪ್ರಮೇಯ ಇರಲಿಲ್ಲ. ಯಾಕೆಂದರೆ ಅದಕ್ಕೆ ಗುಡಿಯಿತ್ತು. ಅದು ಬಹಳ ಗಂಭೀರವಾದ ಭೂತವೂ ಹೌದು, ಅದಕ್ಕೆ ಸಣ್ಣ ಪುಟ್ಟ ಆಸೆಗಳು ಇರಲಿಲ್ಲ. ಮತ್ತು ಸಣ್ಣ ಸಣ್ಣ ಕೋಳಿಗಳು ಅದಕ್ಕೆ ಲೆಕ್ಕವಿರಲಿಲ್ಲ. ಬಲಿತೆಗೆದುಕೊಂಡರೂ ಅದು ತೆಗೆದುಕೊಳ್ಳುತ್ತಿದ್ದುದು ದೊಡ್ಡ ದೊಡ್ಡ ಹಂದಿಗಳನ್ನು. ಪೊಟ್ಟು ದೆವ್ವಗಳ ಹಾಗೆ ಸಣ್ಣ ಪುಟ್ಟ ವ್ಯವಹಾರಕ್ಕೆ ಕೈ ಹಾಕಿ. ಊರಿನವರಿಗೆ ಕಾಟ ಕೊಡುವುದೋ, ಸಿಟ್ಟು ಬಂದರೆ ತೆಂಗಿನಮರ ಹತ್ತಿ ತೆಂಗಿನ ಕಾಯಿಯಲ್ಲಿ ನೀರಿಲ್ಲದ ಹಾಗೆ ಮಾಡುವುದು ಇತ್ಯಾದಿ ಕೆಲಸಕ್ಕೆ ಅದು ಕೈ ಹಾಕುತ್ತಿರಲಿಲ್ಲ. "ದೊಡ್ಡ ಭೂತ"ವನ್ನು ಅದರ ಎದುರುಗಡೆಯಿರುವ ಹಾದಿಯಲ್ಲಿ ನಿಂತುಕೊಂಡು ಯಾರೂ ಭೂತವೆಂದು ಹೇಳುತ್ತಲೂ ಇರಲಿಲ್ಲ. ಅದನ್ನು 'ಕಾರ್ನಿಕದ ದೈವ' ಎಂದೋ, 'ವಿಷ್ಣುಮೂರ್ತಿದೈವ' ಎಂದೋ ಕರೆಯುತ್ತಿದ್ದರು. ಪಟೇಲರು ಈ ದೊಡ್ಡ ದೈವವನ್ನು ಊರಿಗೆ ಒಳ್ಳೆಯದಾಗಲಿ ಎಂದು ಪ್ರತಿಷ್ಠಾಪಿಸಿದರೆಂದೂ; ಅದಕ್ಕೆ ಗುಡಿ ಕಟ್ಟಿಸಿದರೆಂದು ಹೇಳುತ್ತಾರೆ. ಮತ್ತೆ ಕೆಲವರು ಪಟೇಲರ ಕಾಲದಲ್ಲಿ ಉಂಟಾದ ಊರಿನ ತಾಪತ್ರಯಕ್ಕೆ ಪರಿಹಾರಾರ್ಥವಾಗಿ ಈ ಗುಡಿ ಕಟ್ಟಲಾಯಿತು ಎಂದು ಹೇಳುತ್ತಾರೆ. ಹೋಗುತ್ತಾ ಬರುತ್ತಾ ಊರಿಗೆ ಎದುರಾಗುತ್ತಿದ್ದ ಸಮಸ್ಯೆಗಳು ಒಂದೆರಡಲ್ಲ. ಪಟ್ಟೆಹುಲಿಯು ರಾತ್ರಿಯ ವೇಳೆ ಊರಿನಲ್ಲಿ ತಿರುಗಾಡುತ್ತಿದೆಯೆಂಬ ವರ್ತಮಾನವು ಪಟೇಲರಿಗೆ ತಲುಪಿತ್ತು. ಎಲ್ಲೋ ಕುಡಿದು ಬಂದವರು ಹಬ್ಬಿಸಿದ ಸುದ್ದಿಯಿದು ಎಂದು ಪಟೇಲರು ಕುಡಿದು ಬರುವವರನ್ನು ಕರೆದು, 'ಮೂಗಿನ ತನಕ ಕುಡಿದು ಬಂದರೆ – ಹುಲಿಯೂ ಕಾಣಿಸುತ್ತದೆ – ಹೆಬ್ಬುಲಿಯೂ ಕಾಣಿಸುತ್ತದೆ. ಸುಮ್ಮನೆ ಮನೆಗೆ ಬಂದು ಕುಡಿದು ಬಿದ್ದುಕೊಳ್ಳಬಾರದಾ?' ಎಂದು ಬೈದಿದ್ದರು. ಒಂದು ದಿನ ರಾತ್ರಿ ಪಟ್ಟೆ ಹುಲಿಯು ಪಟೇಲರ ಮನೆಯಂಗಳಕ್ಕೆ ಬಂತು. ಪಟೇಲರಿಗೆ ಮಂಪರು ನಿದ್ದೆ ಆಗ. ಮನೆಯಂಗಳದಲ್ಲಿ ಸದ್ದು ಕೇಳಿಸಿತು ಎಂದು ಎದ್ದು ಲಾಟೀನು ಉರಿಸಿಕೊಂಡು ಬರುವಷ್ಟರಲ್ಲಿ ಆ ಪಟ್ಟೆಹುಲಿಯು ತುಳಸಿಕಟ್ಟೆಯಲ್ಲಿ ತಲೆಯಿಟ್ಟು ಮಲಗಿದಂತೆಯೂ, ಅದರ ಹಣೆಯಲ್ಲಿ ಉದ್ದನಾಮ ಇರುವಂತೆಯೂ ಕಾಣಿಸಿತು. ಮರುದಿನವೇ ಪಟೇಲರು ಶಾನುಭೋಗರೊಂದಿಗೆ ಕೇರಳದ ಚೆರಿಯ ಕಾನದ ಮಹಾ ಮಂತ್ರವಾದಿ ತಂತ್ರಿಗಳ ಹತ್ತಿರ ಓಡಿ ಹೋದರು. ತಂತ್ರಿಗಳು ಕವಡೆ ಮಗುಚಿ ಹಾಕಿ, 'ಪಟೇಲರೆ ಅದು ವಿಷ್ಣು ಮೂರ್ತಿ ದೈವ. ಅದಕ್ಕೆ ಗುಡಿ ಕಟ್ಟಿಸಿ. ವರ್ಷಕ್ಕೊಂದು ಕೋಲ ಮಾಡಿಸಿ' ಎಂದರು. ಈ ಭೂತ ಕಟ್ಟುವುದಕ್ಕೆ ಕೇರಳದಿಂದ ಬಂದರು. ದೈವ ಮೈಮೇಲೆ ಬಂದರೆ ಅದು ಮಾತಾಡುವುದು ಮಲೆಯಾಳಂನಲ್ಲಿ.

ಮಲೆಯಾಳ ಗೊತ್ತಿದ್ದವರು ಅದನ್ನು ಅನುವಾದ ಮಾಡುತ್ತಿದ್ದರು. ದೊಡ್ಡ ದೈವದ ಭೂತ ಕಟ್ಟುವವರೆದುರು – ಊರಿನ ಭೂತ ಕಟ್ಟುವವರು ತುಂಬಾ ಸಣ್ಣವರೆನಿಸಿಕೊಂಡರು. ಅದನ್ನು ಸ್ಥಾಪಿಸಿದ ವರ್ಷವೇ ಪಟೇಲರು ಅದಕ್ಕೆ ಖಡ್ಗ.(ಕಡ್ತಲೆ) ಒಪ್ಪಿಸಿದರು. ಗುಡಿಗೆ ಕಂಚಿನ ಗಂಟೆ ಒಪ್ಪಿಸಿದರು. ಕಾಲಾಂತರದಲ್ಲಿ ವರ್ಷಕ್ಕೆ ಒಂದು ಸರ್ತಿ ಭೂತ ಬಳಸಿಕೊಳ್ಳುವ ಖಡ್ಗವು ಕಪ್ಪು ಕಪ್ಪಾಗಿ ತುಕ್ಕು ಹಿಡಿದು ವಿಕಾರವಾದ ಶಬ್ದವನ್ನು ಹೊರಡಿಸುತ್ತಿತ್ತು. ಅದರ ಹಿಡಿಯು ಕಟಕಟವೆನ್ನುತ್ತಿತ್ತು – ಅದಕ್ಕೂ ಪ್ರಾಯವಾಯಿತು!

ವಿಷ್ಣುಮೂರ್ತಿ ದೈವದ ಎದುರು ನಿಂತು ಜನರು ತಮ್ಮ ಕಷ್ಟಗಳನ್ನು ನಿವಾರಣೆ ಮಾಡೆಂದು ಭಕ್ತ್ಯಾನುಸಾರ ಎಳನೀರನ್ನೋ; ದುಡ್ಡನ್ನೋ ಕಾಣಿಕೆ ಅರ್ಪಿಸುತ್ತಿದ್ದರು. ಭಾರೀ ಕಾರಣಿಕ ದೈವವಾದ ವಿಷ್ಣುಮೂರ್ತಿ ಎದುರು ಸಾಧಾರಣ ವ್ಯಕ್ತಿಗಳು ನಿಲ್ಲುವುದಕ್ಕೆ ಅಂಜುತ್ತಿದ್ದರು. ಭೂತ ಕೋಲದ ದಿನ ಪಟೇಲರಿಗೆ; ಅವರು ತೀರಿ ಹೋದ ಮೇಲೆ ಅವರ ಮನೆತನದವರಿಗೆ ವಿಶೇಷ ಮರ್ಯಾದೆ. ಸಿಟ್ಟು ಬಂದರೆ ವಿಷ್ಣುಮೂರ್ತಿ ದೈವ ಓಡುತ್ತಿತ್ತು. ಅದನ್ನು ಹಿಡಿದುಕೊಂಡು ಬರಲು ಸಾಮಾನ್ಯ ಮನುಷ್ಯರ ಶಕ್ತಿಯು ಸಾಕಾಗುತ್ತಿರಲಿಲ್ಲ. ಈ ದೈವದ ಕೋಲದ ದಿವಸ ಊರಿನಲ್ಲಿ ಮಾತ್ರ ಸಂಭ್ರಮ. ಸಂತೆಯೂ ಅದೇ ದಿನ. ಪೀಪಿ, ಬೆಲೂನು: ಬಾಚಣಿಕೆ, ಮಡಿಕೆ ವ್ಯಾಪಾರ; ಸೂಜಿ, ರಿಬ್ಬನ್, ಹೀಗೆ ಜಾತ್ರೆಯಲ್ಲಿ ಸಿಗದಿರುವ ಸಂಗತಿಗಳು ಇರಲಿಲ್ಲ. ಸಂಜೆಯ ಹೊತ್ತಿಗೆ ಭೂತಕೋಲ ಮುಗಿಸಿದರೆ ಅಲ್ಲಿಂದ ಕೆಲವರು ಅಲ್ಲಿಯೇ ಹತ್ತಿರವಿದ್ದ ಬಯಲಿನಲ್ಲಿ ಜರುಗುತ್ತಿದ್ದ ಬಯಲಾಟಕ್ಕೆ ಹೋಗುತ್ತಿದ್ದರು. ವಿಷು ಸಂಕ್ರಾಂತಿ ಮತ್ತು ಅದರ ಮರುದಿನ ಊರಿನಲ್ಲಿ ಗೌಜಿಯೋ ಗೌಜಿ. ಕಾಲಿಡಲು ಸಾಧ್ಯವಾಗದಷ್ಟು ಜನಜಾತ್ರೆ. ಇದರ ನಡುವಿನಲ್ಲಿ ಹೆಂಗಸರು ಓಡಾಡುತ್ತಿದ್ದರು. ಅವರ ಹಿಂದೆ ಕೆಲವು ಪೋಲಿ ಹುಡುಗರು ಅನಾವಶ್ಯಕವಾಗಿ ಓಡಾಡುತ್ತಿದ್ದರು. ಕುಂಟು ಕಾಲಿನ ಮೂಸೆಯೂ, ಲಿಂಗ, ಕಿಟ್ಟ ಮುಂತಾದವರು ಇಂಥ ಸಮಯಕ್ಕೆ ಕಾಯುತ್ತಿದ್ದರು. ಆ ಜಾತ್ರೆಯಲ್ಲಿ ಹೆಚ್ಚು ಜನ ಜಂಗುಳಿಯಿದ್ದ ಸಂತೆಯ ಅಂಗಡಿಗಳೆಂದರೆ ಬಳೆ ಮತ್ತು ಹೇರ್ ಪಿನ್ನುಗಳ ಅಂಗಡಿ. ಅಲ್ಲಿ ಹೊಸ ರೀತಿಯ ಗಾಜಿನ ಬಳೆಗಳು, ರಿಬ್ಬನ್; ಹೇರುಪಿನ್ನುಗಳು ತಲೆಗೂದಲನ್ನು ಸೂಡಿಕಟ್ಟಲು ಬೇಕಾದ ಚೌರಿ; ಈ ಮುಡಿಗೆ ಬೇಕಾದ ಬಲೆ ಸಿಗುತ್ತಿದ್ದುದರಿಂದ ವೀರವನಿತೆಯರು ಮುತ್ತಿಗೆ ಹಾಕಿಕೊಳ್ಳುತ್ತಿದ್ದರು. ಯುವತಿಯರು ಗಾಜಿನ ಬಳೆಯನ್ನು ಹಾಕಿದಾಗ ಅದು ತುಂಡಾಗ ಬಾರದೆಂದು ಅಂಗಡಿಯ ಪಕ್ಕದಲ್ಲಿ ಒಂದು ಮಡಕೆಯಲ್ಲಿ ನೀರು ಮತ್ತು ಬಟ್ಟೆಗೆ ಹಾಕುವ ಸೋಪಿನ ತುಂಡನ್ನು ಇಡಲಾಗಿತ್ತು. ಆ ನೀರಿಗೆ ಕೈ ಅದ್ದಿ ಅನಂತರ ಕೈಗಳಿಗೆ ಸೋಪ್ ಹಚ್ಚಿ ಹೆಂಗಸರು ಬಳೆಯನ್ನು ಹಾಕುತ್ತಿದ್ದರು. ಬಳೆ ಅಂಗಡಿಯನ್ನು ಪ್ರತಿವರ್ಷವೂ ಇಡುತ್ತಿದ್ದುದು

ಬಳೆಗಾರ ಗೋಪಣ್ಣ. ಗೋಪಣ್ಣನಿಗೆ ಆಗ ವರ್ಷ ಇಪ್ಪತ್ತೈದೋ –ಇಪ್ಪತ್ತಾರೋ ಇರಬಹುದು. ಕುಂಟುಕಾಲಿನ ಮೂಸೆ – ಗೋಪಣ್ಣನಿಗೆ ಒಂದು ಸಾರಿ ಹೇಳಿದ್ದ: "ನಿನ್ನ ಹಾಗೆ ಯಾರೂ ಚಾನ್ಸ್ ಹೊಡೆಯುವವರಿಲ್ಲ".

'ಏಯ್ ಮೂಸೆ, ನಿನ್ನ ಬುದ್ದಿಯನ್ನು ನೀನು ಬಿಡುವ ಹಾಗೆ ಕಾಣಿಸುವುದಿಲ್ಲ". ಗೋಪಣ್ಣ ತನ್ನ ಕಸುಬು ಮಾತ್ರ ಬಿಟ್ಟಿರಲಿಲ್ಲ. ಆ ಅಂಗಡಿಯ ಪಕ್ಕದಲ್ಲಿ ನಿಂತು ಗೋಪಣ್ಣ ಮತ್ತು ಬಳೆ ಹಾಕಿಸಿಕೊಳ್ಳುವವರ ನಡುವಣ ಮಾತುಗಳು ಕೇಳಿಸಿಕೊಂಡವರಿಗೆ ಮಾತ್ರ ಅನೇಕ ಅರ್ಥಗಳನ್ನು ಕೊಡುವಂತೆ ಇರುತ್ತಿದ್ದವು."

ಗೋಪಣ್ಣ: 'ಸ್ವಲ್ಪ ಈ ಕಡೆಗೆ ಮುಂದೆ ಹಿಡಿಯಿರಿ'

"ಸಾಕಾ"

"ಸಾಕು ಎತ್ತಿ ಹಿಡಿದುಕೊಳ್ಳಿ"

"ಹ್ಞೂಂ"

"ಈಗ ಹಾಕ್ತೇನೆ"

"ಅಯ್ಯೋ ನೋಯ್ತದೆ"

"ನೋವಾಗುತ್ತದೆ ಎಂದಾದರೆ ಕಣ್ಣು ಮುಚ್ಚಿಕೂಳ್ಳಿ. ಅರೆ ಕ್ಷಣದಲ್ಲಿ ಹಾಕಿಬಿಡ್ತೇನೆ"

"ಹ್ಞೂಂ ಅಯ್ಯೋ ನೋಯ್ತದೆ"

"ತುಂಬಾ ಬಿಗಿಯಾಗ್ತದಾ? ಸಡಲ ಬಿಡ್ಕೊಳ್ಳಿ"

"ಬೇಗ ಹಾಕಿ"

"ಒಮ್ಮೆ ಹಾಕಿದರೆ ಸಾಕು. ಅನಂತರ ಸಲೀಸಾಗಿ ಹಾಕಿ ತೆಗೆಯಬಹುದು"

"ಸ್ವಲ್ಪ ಬಿಗಿಯಾಗಿದ್ದರೆ ಅನುಕೂಲ. ಒಡೆಯುವುದಿಲ್ಲ."

ಇದರ ದ್ವಂದ್ವಾರ್ಥ ಊರಿನ ಗಂಡಸರಲ್ಲಿ ಒಂದು ತಮಾಷೆಯ ವಿಷಯವಾಗಿ ಪರಿವರ್ತನೆಯಾಗುತ್ತಿತ್ತು.

ಈ ಅಂಗಡಿಯ ಎದುರು ಒಮ್ಮೆ ಕುಂಟು ಕಾಲಿನ ಮೂಸೆಯು ಹೆಂಗಸರಿಂದ ಸರಿಯಾಗಿ ಒದೆ ತಿಂದು ಓಡಿಹೋಗಬೇಕಾಯಿತು. ಆದದ್ದು ಇಷ್ಟು:

ಮೂಸೆಯ ಆ ಜನ ಜಂಗುಳಿಯಲ್ಲಿ ಹೆಂಗಸರ ಕುಂಡೆಗೆ ಜಿಗುಟುವುದು. ಎದೆಯನ್ನು ಸವರುವುದು ಮಾಡುತ್ತಿದ್ದ. ಹಾಗೆ ಮಾಡಿದರೂ ಹೆಂಗಸರು ತಿರುಗಿ

ನೋಡುವ ಹೊತ್ತಿಗೆ ಅಲ್ಲಿಂದ ಕಣ್ಮರೆಯಾಗಿ ಬಿಡುತ್ತಿದ್ದ. ಒಬ್ಬಳು ಹೆಂಗಸು (ಆ ಜನ ಜಂಗುಳಿಯಲ್ಲಿ ಯಾರೆಂದು ತಿಳಿಯಲಿಲ್ಲ.) ಇದ್ದಕ್ಕಿದ್ದಂತೆ ಕಾಲಿನಲ್ಲಿದ್ದ ಚಪ್ಪಲಿಯಿಂದ ಪಟಾರನೆ ಮೂಸೆಗೆ ಹೊಡೆದಳು. ಮತ್ತು ಅವನು ಓಡಿ ಹೋಗುತ್ತಿರುವುದನ್ನು ನೋಡಿ – ಅವನನ್ನು ಕೆಲವರು ಗಟ್ಟಿಯಾಗಿ ಹಿಡಿದುಕೊಂಡರು. ಜಾತ್ರೆಗೆ ಬಂದವರೆಲ್ಲ ತದುಕಿದ್ದೇ ತದುಕಿದ್ದು – ಮೂಸೆಯು ಆ ಹೆಂಗಸಿನ ಕ್ಷಮೆ ಕೇಳುವ ತನಕ ಸೇರಿದವರು ಬಿಡಲಿಲ್ಲ. ಕೊನೆಗೆ ಬಿಟ್ಟರು. ಕುಂಟ ಮೂಸೆಯ ಈ ವ್ಯವಹಾರವನ್ನು ಬ್ಯಾರಿಗಳು ಕೂಡಾ ಖಂಡಿಸಿದರು. ಅದು ಸರಿಯಲ್ಲವೆಂದು ಬ್ಯಾರಿಗಳು ನಾಕು ಗುದ್ದಿದ್ದರಿಂದ ಅವನು ಮತ್ತೆ ಯಾವತ್ತೂ ಆ ಕಡೆಗೆ ಸುಳಿಯಲಿಲ್ಲ. ಆದರೆ ಆ ದಿನ ಮಾತ್ರ ಅಬ್ಬರದ ವಿಷ್ಣುಮೂರ್ತಿ ದೈವಕ್ಕೆ ಈ ವಿಷಯ ತಿಳಿದು ಅದಕ್ಕೂ ತಪ್ಪು ದಂಡ ಕಟ್ಟುವಂತೆ ಕುಂಟ ಮೂಸೆಗೆ ಹೇಳಿತ್ತು. ಕುಂಟು ಮೂಸೆಯು ಸಾರ್ವಜನಿಕರ ಎದುರು ಕ್ಷಮೆ ಯಾಚಿಸುವ ಹೊತ್ತಿನಲ್ಲಿ ಮಾತ್ರ ಅವನ ಮುಖ ಹುಣಿಸೆ ಕಿವುಚಿದಂತೆ ಆಗಿತ್ತು. ದೈವದ ಎದುರು ತಪ್ಪುದಂಡ ಕಟ್ಟುವಾಗ ಅವನ ಪರಿಸ್ಥಿತಿಯು ಯಾರಿಗೂ ಬೇಡ ಎಂಬಂತಾಗಿತ್ತು. ದೂರದಲ್ಲಿ ಹಲ್ಲಿಗೆ ಕಡ್ಡಿ ಹಾಕುತ್ತಾ ನಿಂತಿದ್ದ ಬಡ್ಡಿ ಸುಬ್ಬಣ್ಣ ಮಾತ್ರ: 'ಈ ಬ್ಯಾರಿಗಳಿಗೆ ಮಾತ್ರ ಕುಂಡೆ ಸೊಕ್ಕು ಮಾರಾಯ,' ಅಂತ ಪಕ್ಕದಲ್ಲಿ ನಿಂತವರಿಗೆ ಹೇಳುತ್ತಿದ್ದ. ದೈವದ ಎದುರು ನಡೆಯುತ್ತಿದ್ದ ಈ ದೃಶ್ಯವನ್ನು ನೋಡುತ್ತಾ ನಿಂತವರು ಈ ಮಾತಿನ ಕಡೆಗೆ ಗಮನ ಕೊಡಲಿಲ್ಲ. ದೈವದ ಅಪ್ಪಣೆಯಾದ ಬಳಿಕ ಕುಂಟ ಮೂಸೆಯು ಜಾಗ ಖಾಲಿ ಮಾಡಿದ. ಇಷ್ಟು ನಡೆದರೂ ಅವನು ಈ ವಿಷಯಗಳ ಬಗ್ಗೆ ಆ ತಲೆ ಬಿಸಿಮಾಡಿಕೊಳ್ಳಲಿಲ್ಲ. ಯಾಕೆಂದರೆ ಅವನ ತಲೆ ಬಿಸಿಯು ಬೇರೆ ವಿಷಯಗಳ ಕಡೆಗಿತ್ತು.

ಕುಂಟು ಮೂಸೆಯು ಈ ಘಟನೆಯನ್ನು ಮರೆಯುವಂತಿರಲಿಲ್ಲ. ಇದು ತನಗಾದ ದೊಡ್ಡ ಅವಮಾನವೆಂದು ಭಾವಿಸಿಕೊಂಡ. ತನ್ನ ಜಾತಿಯವರು ತನಗೆ ಬೆಂಬಲಿಸದೆ ಬೆನ್ನಿಗೆ ಬಿಟ್ಟದ್ದು, ಬುದ್ಧಿವಾದ ಹೇಳಿದ್ದು ಅವನಿಗೆ ಸರಿಯೆನಿಸಲಿಲ್ಲ. ಅವನ ತರ್ಕವು ಅವನ ಮಟ್ಟಿಗೆ ಸರಿಯಾದುದು. "ನಾನು ಕೈ ಹಾಕಿದ್ದು ಯಾರೋ ಸಭ್ಯ ಹೆಂಗಸಿಗೆ ಆದ್ರೆ ಜನ ಹೊಡೆಯಬಹುದಿತ್ತು. ಅವಳಿಗೆ ಮೈಯೆಲ್ಲಾ ಸೊಕ್ಕು. ಅವಳ ಮನೆಯ ಕೆಳಗಿನ ಹಾದಿಯಲ್ಲಿ ಯಾರಾದರೂ ಹೋಗುವಾಗ ಅವಳ ಹೆಗಲ ಮೇಲೆ ಸೆರಗು ನಿಂತದ್ದೆ ಇಲ್ಲ. "ಅವಳ ಅಮ್ಮನೇ ಸಾಚಾ ಅಲ್ಲ. ಅಮ್ಮನಿಗೆ ತಕ್ಕ ಮಗಳು. ಒಂದಲ್ಲ ಒಂದು ದಿನ ಅವಳ ಧಿಮಾಕು ಇಳಿಸದೆ ಹೋದರೆ ನಾನು ಮೂಸೆಯೇ ಅಲ್ಲ. ನನ್ನನ್ನು ಏನೂಂತ ತಿಳಿದುಕೊಂಡಿದ್ದಾಳೆ? ಅವಳನ್ನು ನಾನು ಎತ್ತಿಕೊಂಡು ಹೋಗುವುದಂತೂ ನಿಜ"ವೆಂದು ತನ್ನ ರಾತ್ರಿ ವ್ಯವಹಾರದ ಲಿಂಗ – ಕಿಟ್ಟರ ಜೊತೆಗೆ ಹೇಳಿಕೊಂಡ.

ಕುಂಟ ಮೂಸೆಯು ಹೇಳಿದ್ದರಲ್ಲಿ ಪೂರ್ತಿ ಸತ್ಯವಿಲ್ಲದಿದ್ದರೂ ಅರ್ಧ ಸತ್ಯವಿತ್ತು. ಅವನು ಕೈ ಹಾಕಿದ ಹೆಂಗಸು ವ್ಯವಹಾರದಲ್ಲಿ ಚೊಕ್ಕ ಹೆಂಗಸಲ್ಲ. ಊರಿನ ಜನರು ಹೇಳುವ ಹಾಗೆ ಅವಳಮ್ಮ ಲಕ್ಷ್ಮಮ್ಮನಿಗೂ ಪಟೇಲರಿಗೂ ಸಂಬಂಧವಿತ್ತು. ಪಟೇಲರು ಪದೇ ಪದೇ ಅಲ್ಲಿಗೆ – ಇಲ್ಲಿಗೆ ಅಂತ ಓಡಾಡುವ ಸಮಯದಲ್ಲಿ ಲಕ್ಷ್ಮಮ್ಮ ಪಟೇಲರಿಗೆ ಅಂಟಿಕೊಂಡಳು. ಆವಾಗ ಲಕ್ಷ್ಮಮ್ಮ ದಿಕ್ಕು ದೆಸೆಯಿಲ್ಲದ ಹೆಂಗಸು. ಅವಳ ಗಂಡ ಛತ್ರಕ್ಕೆ ಹೋಗುವ ಹಾದಿಯ ಬದಿಯಲ್ಲಿ ಒಂದು ಸಣ್ಣ ಮನೆ ಮಾಡಿಕೊಂಡಿದ್ದ. ಅವನದು ಬಳೆ ವ್ಯಾಪಾರ. ಬಳೆ ವ್ಯಾಪಾರದ ಪುರುಷಣ್ಣನೆಂದೇ ಅವನು ಖ್ಯಾತಿ. ಬೆಳಗೆದ್ದು ಬಳೆಯ ಮೂಟೆಯನ್ನು ಒಂದು ಹೆಗಲಿಗೇರಿಸಿ, ಒಂದು ದೊಡ್ಡ ಛತ್ರಿ ಹಿಡಿದುಕೊಂಡು ಹೊರಟರೆ ಮತ್ತೆ ವಾಪಾಸು ಯಾವಾಗ ಎಂದು ಅವನಿಗೆ ಖಾತ್ರಿಯಿಲ್ಲ. ಜಾತ್ರೆಯಲ್ಲಿ; ಊರೂರು ಅಲೆದು ಬಳೆ ವ್ಯಾಪಾರ ಮಾಡಬೇಕು. ರಾತ್ರಿಯಾದರೆ ಯಾರದಾದರೂ ಮನೆಯಲ್ಲಿ ಆಶ್ರಯ ಕೇಳಬೇಕಿತ್ತು. ಅಲ್ಲಿಂದ ಮರುದಿನ ಮತ್ತೆ ತಿರುಗಾಟ. ಕಾಲುನಡಿಗೆಯಲ್ಲಿ ಮನೆಯಿಂದ ಹೊರಟರೆ ಎಷ್ಟು ದೂರ ಬೇಕಾದರೂ ಸುತ್ತ ಬಲ್ಲಷ್ಟು ತಾಕತ್ತು ಅವನಿಗಿತ್ತು. ಬಳೆ ವ್ಯಾಪಾರದೊಂದಿಗೆ ಕಾಲುಂಗುರ: ತಲೆಗೂದಲಿಗೆ ಚುಚ್ಚುವ ಮುಳ್ಳು, ಕುಂಕುಮ, ಬಾಚಣಿಗೆ ಮುಂತಾದವುಗಳನ್ನು ಕೊಂಡೊಯ್ಯುತ್ತಿದ್ದ. ಸರಕು ಮುಗಿಯದೆ ವಾಪಾಸು ಮನೆಗೆ ಬರುವ ಅಸಾಮಿಯಲ್ಲ. ಪುರುಷನ ವ್ಯಾಪಾರವೆಂದರೆ ಅದಕ್ಕೆ ಒಂದು ನಿಯಮವಿಲ್ಲ ಮತ್ತು ಅದಕ್ಕೆ ಹೊತ್ತು ಅಂತಲೂ ಇಲ್ಲ. ಬಳೆಯ ಜೊತೆಗಿನ ಅವನ ಮತ್ತೊಂದು ಚೀಲ ಭರ್ತಿಯಾದರೆ ಆಯಿತು ಅಷ್ಟೆ! ಪುರುಷ ಸುಮ್ಮನೆ ಕೂರುವ, ಸುಮ್ಮನೆ ಅನಗತ್ಯವಾದ್ದನ್ನು ಮಾತಾಡುತ್ತಾ ಕೂರುವವನೂ ಅಲ್ಲ. ಅವನಿಗೆ ವ್ಯಾಪಾರದ ಸಕಲ ಬುದ್ಧಿವಂತಿಕೆಗಳಿದ್ದವು. ಎಲ್ಲಿಯಾದರೂ ರಾತ್ರಿ ಉಳಿಯುವ ಪ್ರಸಂಗ ಬಂದರೆ ಸರಿಗೆ ತಂತಿಗಳನ್ನು ಬೇಕಾದ ಹಾಗೆ ಒಂದೇ ಆಕಾರದಲ್ಲಿ ತೆಗೆದುಕೊಂಡು, ಚಿಮಿಣಿ ದೀಪದ ಬೆಳಕಿನಲ್ಲಿ ಮಡಿಸಿ ಹೆಂಗಸರು ಮುಡಿಗೆ ಚುಚ್ಚಿಕೊಳ್ಳುವ ಮುಳ್ಳು ಮಾಡಿಕೊಂಡು ಬಿಡುತ್ತಿದ್ದ. ಅವನ ಬಳೆ ವ್ಯಾಪಾರದ ಜೊತೆಗಿನ ಈ ಕಸುಬು ಎಲ್ಲರಿಗೂ ಆಶ್ಚರ್ಯವುಂಟು ಮಾಡುತ್ತಿತ್ತು. ತಲೆಗೂದಲಿಗೆ ಚುಚ್ಚಿಕೊಳ್ಳುವ ಮುಳ್ಳನ್ನು ಅವನು ತಂತಿಯಲ್ಲಿ ಬಗ್ಗಿಸಿ ಮಾಡುವ ಕ್ರಮವನ್ನು ಹೆಂಗಸರು, ಮಕ್ಕಳು ನೋಡುತ್ತಿದ್ದರು. ಆದರೆ ಅದನ್ನು ಅನುಕರಿಸಲು ಬೇಕಾದ ಹತ್ಯಾರವಾಗಲಿ, ಕೌಶಲವಾಗಲಿ ಯಾರಿಗೂ ಸಿಗಲಿಲ್ಲ. ಗಂಡಸರು ಮನೆಯಲ್ಲಿದ್ದರೆ ಬಳೆಗೆ ದುಡ್ಡು ತೆಗೆದುಕೊಳ್ಳುತ್ತಿದ್ದ. ಇಲ್ಲವಾದರೆ ಬಳೆಯ ಬದಲಿಗೆ ಗೋಟಡಿಕೆ, ಗೇರುಬೀಜ, ಸೀಗೆಕಾಯಿ, ನೊರೆಕಾಯಿ ಯಾವುದನ್ನಾದರೂ ಪಡೆದುಕೊಳ್ಳುತ್ತಿದ್ದ. ಇಂಥ ಪುರುಷಣ್ಣ ಒಮ್ಮೆ ಸರಕು

ತರಲು ಮಂಗಳೂರಿಗೆ ಹೋದವನು ಮರಳಿ ಬರಲಿಲ್ಲ. ಯಾವುದೋ ಹೆಣ್ಣು ಹುಲಿಯೇ ಅವನನ್ನು ಹಿಡಿದುಕೊಂಡಿರಬೇಕು ಎಂದು ಜನ ಮಾತಾಡಿಕೊಂಡರು. ಅವನು ಘಟ್ಟಕ್ಕೆ ಹೋಗಿರಬಹುದೆಂದೂ ಮತ್ತೆ ಕೆಲವರು ಅವನು ಮಂಗಳೂರಿನ ಪಣಂಬೂರಿನಲ್ಲಿ ಇದ್ದಾನೆಂದೂ ಹೇಳುತ್ತಿದ್ದರು. ಆದರೆ ಅವನು ಎಲ್ಲಿದ್ದಾನೆಂದು ಯಾರಿಗೂ ಗೊತ್ತಾಗಲಿಲ್ಲ. ಆ ಸಮಯದಲ್ಲಿ ಸಣ್ಣ ಮನೆಯಲ್ಲಿ ಗತಿ ಗೋತ್ರವಿಲ್ಲದಂತೆ ಇದ್ದವಳು ಲಕ್ಷ್ಮಮ್ಮ. "ಬಳೆಗಾರ್ತಿ ಲಕ್ಷ್ಮಮ್ಮ" ಎಂದು ಹೆಸರು ಬಂದುದು ಅನಂತರ. ಅದು ಅವಳ ಗಂಡನಿಂದ ಅಂಟಿಕೊಂಡಿತು. ಅವಳು ಹೆಸರಿಗೆ ಬಳೆ ವ್ಯಾಪಾರವನ್ನು ಮನೆಯಲ್ಲಿಯೇ ಮುಂದುವರಿಸಿದ್ದು ನಿಜ. ಸರಕು ತರಲು ಹೋದ ಗಂಡ ಮರಳಿ ಬರಲಿಲ್ಲವೆಂದು ಕೆಲವು ದಿನ ಅವನ ಹಾದಿಯನ್ನು ಕಾದಳು. "ಹಾದಿ ಕಾಯುತ್ತಾ ಕೂರಬಹುದು. ಹೊಟ್ಟೆಯ ಹಸಿವು ಕಾಯುತ್ತಾ ಕೂರುತ್ತದಾ? ಹೊಟ್ಟೆ ಕೇಳಬೇಕಲ್ಲಾ? ಹಸಿವೆ ಅಂತ ಹೊಟ್ಟೆಗೆ ತಣ್ಣೀರು ಪಟ್ಟೆ ಎಷ್ಟು ದಿನ ಇರಬಹುದು?" ಇದು ಅವಳ ವೇದಾಂತ. ಪುರುಷ ಹೋದೆನೆಂದು ಅವಳಿಗೆ ಬೇಸರವೂ ಆಗಲಿಲ್ಲ. ಅವನಿಗೆ ಯಾವ ರಂಡೆ ಸಿಕ್ಕಿದಳೋ ಏನು ಕತೆಯೋ? ಅವನಿಗೆ ಇಲ್ಲದ್ದು ನನಗ್ಯಾಕೆ ಬೇಕು? ಅವನು ನನ್ನ ಕೂದಲಿಗೆ ಸರಿ. ಗಂಡ ಆದ್ರೇನು ಹೆಂಗಸಾದ್ರೇನು ನ್ಯಾಯ ಎಲ್ಲರಿಗೂ ಒಂದೆ. ನಾನು ಚಿಟಿಕೆ ಹೊಡೆದರೆ ಸಾಕು ಎಷ್ಟು ಜನ ಗಂಡಸರು ಬಂದು ಮನೆ ಬಾಗಿಲಲ್ಲಿ ನಿಲ್ಲುತ್ತಾರೆ? ಈ ಗಂಡಸರ ಪೌರುಷವೆಲ್ಲಾ ಗೊತ್ತು ನನಗೆ. ಸುಖ ಬೇಕು ಇವರಿಗೆ, ನಮ್ಮ ಸುಖ ನೋಡ್ತಾರಾ? ಒಮ್ಮೆಗೆ ಮುಗಿಯುತ್ತದೆ ಇವರ ಕತೆ. ಮತ್ತೆ ಏನಿದ್ದರೂ ಗೊರಕೆಯೇ. ಆದ್ರೆ – ನಾವು ಹಾಗೆಯೇ?" ಅಂತ ಒಂದು ವಾರ ಲಕ್ಷ್ಮಮ್ಮ ಹಾರಾಡಿದಳು. ಗಂಡನ ಮೇಲಿನ ಸಿಟ್ಟನ್ನು ಸಕಲ ಗಂಡಸರ ಮೇಲೂ, ತನ್ನ ಅಸಹಾಯಕತೆಯನ್ನು ಸಕಲ ಹೆಂಗಸರ ರೊಚ್ಚಾಗಿಯೂ ಪರಿವರ್ತಿಸಿಕೊಂಡಳು. ಲಕ್ಷ್ಮಮ್ಮನಿಗೆ ವರ್ಷ ಇಪ್ಪತ್ತು ಮೂರೋ – ಇಪ್ಪತ್ತನಾಲ್ಕೂ ಇರಬಹುದು. ಸ್ವಲ್ಪ ಕೋಲುಮುಖ. ಮಧ್ಯಮಗಾತ್ರ. ಎಣ್ಣೆ ಮೈ ಬಣ್ಣ. ತುಂಬಿ ನಿಂತ ಯೌವನ ಅವಳದು. ಗಂಡ ಹೋದ ಕೆಲವು ದಿನದಿಂದ ಕಸುಬು ಶುರುಮಾಡಿಕೊಂಡಳು – ಯಾರ ಹಂಗೂ ಇಲ್ಲದೆ. 'ಆ ಕಾಲದಲ್ಲಿ ನನಗೆ ನನ್ನ ಮೈಗೆ ಕಸುವು ಇತ್ತು. ಇದರಲ್ಲಿ ಏನು ಮುಚ್ಚುಮರೆ.? ಒಂದು ಸತ್ಯ ಸಂಗತಿಯೆಂದರೆ ನನ್ನ ಮೈ ನನಗೆ ಒಂದು ಆಸ್ತಿ. ಈ ಆಸ್ತಿಗೆ ಎಷ್ಟು ಜನ ಕಣ್ಣು ಕಟ್ಟಿದ್ದರು? ಪಂಚಲಿಂಗೇಶ್ವರನ ಜಾತ್ರೆಯ ಸಮಯದಲ್ಲಿ ನನ್ನನ್ನು ಮುಟ್ಟಲು ಎಷ್ಟು ಜನ ಹಂಬಲಿಸಿದರು? ಆದರೆ ನಾನು ಎಷ್ಟು ಬೇಗ ಯಾರಿಗೂ ಮರುಳಾಗಲಿಲ್ಲ. ಹೆಂಗಸರಿಗೆ ಮರುಳಾಗಿ ಬರುವ ಜನ ಎಷ್ಟು ಸಾಚಾ? ಒಂದೊಂದು ದಿನ ರಾತ್ರಿ ತಲೆಗೆ ಮುಸುಕು ಹಾಕಿಕೊಂಡು ಬಂದು ಬಾಗಿಲು ತಟ್ಟಿದವರು ಕಡಿಮೆಯಾ? ಸೀಮೆಗೆ ದೊಡ್ಡವರು; ಜಾತಿಗೆ ದೊಡ್ಡವರು ಅಂತ

ನಾವು ಹೇಳ್ತೇವೆ. ಅವೆಲ್ಲಾ ಪುಸ್ಕುಗಳು. ಅಡಿಕೆಯ ದಬ್ಬೆಗೆ ಸುರಿ ಬಿದ್ದಹಾಗೆ. ಎಲ್ಲರ ಜನ್ಮ ಜಾತಕವು ನನ್ನ ಹತ್ರ ಉಂಟು. ಬಾಯಿ ಮತ್ತು ಮೈ ಇದ್ದದ್ದಕ್ಕೆ ನಾನು ಬದುಕಿದೆ. ಇಲ್ಲದಿದ್ದರೆ ನಾನು ಉಳಿಯುತ್ತಿದ್ದೆನಾ?" ತನ್ನ ವೃದ್ಧಾಪ್ಯದ ಸಮಯದಲ್ಲಿ ಅವಳು ಬಾಯಿಗೆ ಹಾಕಿಕೊಂಡಿದ್ದ ಎಲೆಯಡಿಕೆ ಉಗುಳಿ ಹೇಳುತ್ತಿದ್ದಳು. ಕೆಲವರು ಅವಳಿಗಾಗಿ ಪ್ರಯತ್ನಿಸಿದ್ದು ನಿಜ. ಆದರೆ ಜನ ನೋಡಿ ಕೊಂಡು ಅವರನ್ನು ಮನೆಯೊಳಕ್ಕೆ ಬಿಟ್ಟುಕೊಂಡಳು. ಅಲ್ಲಲ್ಲಿ ಹೋಗಿ ಬರುವ ಕಾಯಕವನ್ನು ಇಟ್ಟುಕೊಂಡ ಪಟೇಲರು ರಾತ್ರಿಯ ವೇಳೆಗೆ ಲಕ್ಷ್ಮಮ್ಮನ ಮನೆಯಲ್ಲಿ ಉಳಿಯತೊಡಗಿದರು. 'ಬರೀ ಕಟ್ಟಿಕೊಂಡವಳನ್ನು ಮಾತ್ರ ನೋಡಿಕೊಂಡರೆ ಅದನ್ನು ಗಂಡಸುತನ ಅಂತ ಹೇಳುತ್ತಾರಾ? ಅದು ಬರಿ ಉಪ್ಪುಕಾರ ಹಾಕದ ಬಸಳೆ ತಿಂದ ಹಾಗೆ. ಅದರಿಂದ ಉಪಯೋಗವಿಲ್ಲ. ದಿನಾ ಮನೆಯ ಊಟ ಯಾವ ರುಚಿ ಕೊಟ್ಟಿತು? ಹೊರಗಿನ ಊಟಕ್ಕೆ ಒಂದು ರುಚಿ ಅಂತ ಉಂಟು. ಅದನ್ನು ತೆಗೆದುಕೊಳ್ಳುವುದಕ್ಕೇನು? ಕಟ್ಟಿಕೊಂಡವಳ ಸುಖ – ದುಃಖ ತಿಳಿದರೆ ಸಾಕು. ಅವಳು ಹಾಕಿದ ಗೂಟಕ್ಕೆ ಕೊರಳು ಸಿಕ್ಕಿಸಿಕೊಂಡು ಸಾಯಬೇಕಾ? ಅಷ್ಟೆ. ಒಂದು ರಾತ್ರಿಯಲ್ಲಿ ಎರಡು ಮೂರು ಜನ ಹೆಂಗಸರಿಗೆ ಸುಖ ಕೊಡುವುದಕ್ಕೆ ಗೊತ್ತಿದ್ದರೆ ಕಟ್ಟಿಕೊಂಡವಳು ಬಾಯಿಮುಚ್ಚಿಕೊಂಡು ಮನೆಯಲ್ಲಿರುವುದಿಲ್ಲವಾ? ಇದು ಪಟೇಲರ ಹೇಳಿಕೆಯಾಗಿತ್ತು. ಪಟೇಲರು ಲಕ್ಷ್ಮಮ್ಮನ ಮನೆಯಲ್ಲಿ ಉಳಿಯುವುದರ ಕುರಿತು ಯಾವ ಮುಚ್ಚು ಮರೆಯನ್ನು ಮಾಡಲಿಲ್ಲ. ಕೊನೆಗೆ ಒಂದು ದಿವಸ ಅವಳನ್ನು ಕರೆದುಕೊಂಡು ತಂದು ಊರಿನಲ್ಲಿ ಸ್ಥಾಪಿಸಿದರು. ಅವಳ ಮನೆಯಿದ್ದುದು ಮೇಲ್ಭಾಗದಲ್ಲಿ. ಅವಳ ಮನೆಯ ಕೆಳಗಿನ ಭಾಗದಲ್ಲಿ ಕಾಲು ಹಾದಿ. ಮನೆಯ ಎಡಭಾಗದ ಕಿಟಕಿಯನ್ನು ತೆರೆದರೆ ಹಾದಿಯಲ್ಲಿ ಹೋಗುವವರಿಗೆ ಅವಳ ಮನೆಯೊಳಗಿನ ವ್ಯವಹಾರ ಕಾಣಿಸುವುದು ಸಾಧ್ಯವಿತ್ತು. ಪಟೇಲರ ಮತ್ತು ಲಕ್ಷ್ಮಮ್ಮನ ಸಂಬಂಧದಲ್ಲಿ ಹುಟ್ಟಿದವಳು ಮಲ್ಲಿಗೆ. ಎಲ್ಲರೂ ಓಡಾಡುವ ದಾರಿಯು ಯಾರಪ್ಪನ ಗುತ್ತಿಗೆ? ಹಾದಿಯು ಯಾರದೂ ಅಲ್ಲ. ಮಲ್ಲಿಗೆ ಯಾರ ಮಗಳೋ ಏನು ಕತೆಯೋ ಯಾರಿಗೆ ಗೊತ್ತು? ಅಂತ ಜನ ಕುಹಕವಾಡುತ್ತಿದ್ದುದು ನಿಜ. ಅವಳ ಮನೆಯ ಹತ್ತಿರ ಹೋಗುವಾಗ ತಲೆ ಎತ್ತಿ ನೋಡಬೇಡಿ ಎಂದು ಹುಡುಗರಿಗೆ ಹಿರಿಯರು ಹೇಳುತ್ತಿದ್ದರು. ಹಿರಿಯರ ಮಾತಿನಿಂದ ಅದು ಅತ್ಯಂತ ರಹಸ್ಯವೂ ರೋಚಕವೂ ಆದ ಮನೆಯೆಂದು ಅನಿಸುತ್ತಿತ್ತು. "ಸೂಳೆಯರು ಅಂದರೆ ಏನು?" ಅಂತ ಕೇಳಿ ಮಕ್ಕಳು ಬೈಸಿಕೊಳ್ಳುತ್ತಿದ್ದರು. ಹಾದಿಯಲ್ಲಿ ಹೋಗುವವರ ಕಣ್ಣು ಆಕಡೆಗೆ ನೋಡುತ್ತಿದ್ದುದು ಅಷ್ಟೆ ಸತ್ಯ. ಕುಂಟ ಮೂಸೆಯು ಜಾತ್ರೆಯ ದಿನ ಕೈ ಹಾಕಿದ್ದು ಈ ಮಲ್ಲಿಗೆಗೆ. ಮಲ್ಲಿಗೆಯನ್ನು ಹೆಂಗಸರು ಮಾತ್ರ ಕರಿಮಲ್ಲಿಗೆ ಎಂದು ಕರೆದು ತಮ್ಮ ಅಸೂಯೆಯನ್ನು

ವ್ಯಕ್ತಪಡಿಸುತ್ತಿದ್ದರು. ಅಮ್ಮನಿಂದ ಬಂದ ಕಸುಬನ್ನು ಬಳುವಳಿಯಾಗಿ ಪಡೆದುಕೊಂಡ ಮಲ್ಲಿಗೆಯು ಅಮ್ಮನ ಹಿತೋಪದೇಶವನ್ನು ಮರೆತಿರಲಿಲ್ಲ. ಅದನ್ನು ತನ್ನ ಶಕ್ತಿಗೆ ಅನುಸಾರವಾಗಿ ಪಾಲಿಸಿಕೊಂಡು ಬಂದಿದ್ದಳು. ಅವಳ ಮನಸ್ಸಿನಲ್ಲಿ ಲಕ್ಷ್ಮಮ್ಮನ ಅಣಿಮುತ್ತುಗಳು ಆಣಿಯಂತೆ (ಮೂಳೆಯಂತೆ)ಚುಚ್ಚಿ ನಿಂತಿದ್ದವು. ಲಕ್ಷ್ಮಮ್ಮ ಒಂದು ಸಲ ಮಾತ್ರವಲ್ಲ ಬೇರೆ ಬೇರೆ ಸಂದರ್ಭದಲ್ಲಿ ಮಗಳಿಗೆ ಮಾತುಗಳನ್ನು ಉಸುರಿದ್ದಳು.

"ದೇಹದಲ್ಲಿ ತಾಕತ್ತಿರುವ ತನಕ ಮಾತ್ರ ದುಡಿಮೆ ಸಾಧ್ಯ. ರಾತ್ರಿಯ ಆಟದಲ್ಲಿ ಗಂಡಸನ್ನು ಸೋಲಿಸಬೇಕು. ಗಂಡಸರಿಗೆ ಸೋತಾಗ ಖುಶಿಯಾಗುತ್ತದೆ. ಅವರು ತಣಿಯುವುದಕ್ಕೆ ಕಾಯುತ್ತಾರೆಯೇ ಹೊರತು ಬಿಸಿಯಾಗಿ ಇರುವುದಕ್ಕೆ ಹಂಬಲಿಸುವುದಿಲ್ಲ. ಕೆಲವು ಗಂಡಸರಿಗೆ ಎದೆಯೆಂದರೆ ಮರುಳು. ಅವರಿಗೆ ಅಷ್ಟು ಸಾಕು! ಅಂಥವರನ್ನು ಅದರಲ್ಲಿ ಅದ್ದಿ ತೆಗೆದುಬಿಡು. ಕೆಲವರಿಗೆ ಕಾಯುವುದಕ್ಕೆ ಪುರುಸೊತ್ತು ಅಂತ ಇರುವುದಿಲ್ಲ. ಕೆಲವರು ಬಾಯಿ ಮಾತಿನಲ್ಲಿ ಸೋತು ಬಿಡ್ತಾರೆ. ಅಂಥವರಿಗೆ ಸೆರಗು ಒಂಚೂರು ಜಾರಿಸಿ ಮನಃ ಶಾಂತಿ ಮಾಡಿಬಿಟ್ಟರೆ ಸರಿ. ಹೀಗಿದ್ದರೆ ಮಾತ್ರ ಒಂದು ದಿನದಲ್ಲಿ ನಾಕು ಗಂಡಸರನ್ನು ಸುಧಾರಿಸಬಹುದು. ನಿನಗೆ ಗೊತ್ತಿಲ್ಲ ಒಂಚೂರು ಸೆರಗು ಜಾರಿಸಿದರೆ ಜೊಲ್ಲು ಸುರಿಸದ ಗಂಡಸರೇ ಇಲ್ಲ. ಸೆರಗು ಜಾರಿಸಬೇಕು; ಸೆರಗು ಜಾರಿಸಿದ್ದೇವೆ ಅಂತ ಗೊತ್ತಾಗಬಾರದು. ನೋಡು: ಎಲ್ಲರಿಗೂ ಸೆರಗು ಹಾಸಿದರೆ ನಾವು ಸದರ ಆಗ್ತೇವೆ. ಅದಕ್ಕೇ ನಾನು ಮನೆಯೊಳಗೆ ಎಲ್ಲರಿಗೂ ಬಿಡುವುದಿಲ್ಲ. ಕೆಲವು ಹೆಂಗಸರು ದಡ್ಡರು. ಅವರಿಗೆ ಏನೂ ಗೊತ್ತಿಲ್ಲ. ಅದಕ್ಕೆ ಗಂಡಸರು ಮನೆಯ ಬೇಲಿ ದಾಟಿ ಬರ್ತಾರೆ. ಗುಮ್ಮನ ಗುಸ್ಕನ ಥರ ಇರುವ; ಮುಟ್ಟಿದರೆ ನೋಯ್ತದೆ ಅನ್ನುವ, ಗಂಡ ಹೇಳಿದರೆ ಎಲ್ಲಾ ಬಿಚ್ಚಿ ಹಾಕಿ ಬಿದ್ದುಕೊಳ್ಳುವ. ಸದಾ ಕಿರಿ ಕಿರಿ ಮಾಡುವ, ಒಮ್ಮೆ ಎಲ್ಲಾ ಮುಗಿದರೆ ಸಾಕು ಅಂತ ಹೊರಳಾಡುವ ಹೆಂಗಸರಿಗೆ ಬೇಸರಪಟ್ಟು ಗಂಡಸರು ಬರುತ್ತಾರೆ. ಗಂಡಿನ ಯಾವ ಮೂಲೆಯಲ್ಲಿ ಸುಖವಿದೆ ಅಂತ ಗೊತ್ತಿಲ್ಲದೆ ಹೆಂಗಸರು ಇರುವ ಮನೆಯಿಂದ ಈ ಮನೆಗಾಗಿ ಬರ್ತಾರೆ. ಅವರಿಗೆ ಅಷ್ಟು ಸಾಕು. ಅದರಿಂದ ಆಚೆಗೆ ಅವರು ಏನೂ ಹೇಳುವುದಿಲ್ಲ. ಜನ ಹೇಳಬಹುದು – ಆದರೆ ಅಷ್ಟು ಸುಲಭ ಅಲ್ಲ. ನೋಡು ಗಂಡನನ್ನು ಮನೆಯಲ್ಲಿಟ್ಟುಕೊಂಡು ಸೂಳೆಗಾರಿಕೆ ಮಾಡುವ ಹೆಂಗಸರು ಎಷ್ಟಿಲ್ಲ? ಅವರಿಗೆ ಹಸಿವೆಯಾಗ್ತದೆ. ಉಣ್ತಾರೆ. ಹಸಿವೆಗೆ ಏನು ಮಾನ ಮರ್ಯಾದೆ ಉಂಟಾ? ಸತ್ಯ–ಧರ್ಮ ಅಂತ ಉಂಟಾ? ಯಾರು ಯಾರು ಜೊತೆಗೆ ಮಲಗಿದ್ದಾರೆ ಅನ್ನುವುದಕ್ಕೆ ನಮ್ಮ ಮೈಯಲ್ಲಿ ಏನಾದರೂ ಬರೆ ಎಳೆದಿರಿಸಿಲ್ಲ. ಆದ್ರೆ ನಮ್ಮ ಜಾಗ್ರತೆಯಲ್ಲಿ ನಾವಿರಬೇಕು." ಲಕ್ಷ್ಮಮ್ಮನು ಈ ಮಾತುಗಳನ್ನು

ಗುಟುಗು-ಗುಟುಕಾಗಿ ಮಗಳ ತುಟಿಗೆ ಎರೆದಳು. ಮಲ್ಲಿಗೆಯೂ ಅಷ್ಟೆ - ನಿಧಾನವಾಗಿ ತನಗೆ ಜೀರ್ಣವಾಗುವ ಹಾಗೆ; ಒಂದೊಂದು ಹನಿಯೆಂಬಂತೆ ಅಮ್ಮನ ಮಾತುಗಳನ್ನು ತುಟಿಯಲ್ಲಿ, ಎದೆಯಲ್ಲಿ; ಸೊಂಟದ ತಿರುವಿನಲ್ಲಿ; ಕಿವಿಯ ಹಾಲೆಯಲ್ಲಿ; ತೊಡೆಯಲ್ಲಿ ಎರಕ ಹೊಯ್ದುಕೊಂಡಳು. ಮಗಳನ್ನು ಕಸುಬುಗೆ ಎಳೆಯಬೇಕೆಂಬ ಆಸಕ್ತಿಯು ತಾಯಿಗೆ ಇರಲಿಲ್ಲ. ತಾಯಿಯ ಅನುಭವವೇ ಮಗಳಿಗೆ ಆದ ಮೇಲೆ ನಿರ್ವಾಹವಿರಲಿಲ್ಲ. ಅದು ನಡೆದಿರುವುದು ತಾಯಿ ಮತ್ತು ಮಗಳಿಗೆ ಮಾತ್ರ ಗೊತ್ತು. ಪಟೇಲರು ತೀರಿ ಹೋದ ಮೇಲೆ ಲಕ್ಷ್ಮಮ್ಮನಿಗೆ ಕೊಂಚ ಕಷ್ಟವಾದದ್ದು ನಿಜ! ಲಕ್ಷ್ಮಮ್ಮ ಹೇಳುವ ಹಾಗೆ - ಪಟೇಲರದು ರಾಜಮರ್ಜಿ. ಈ ಊರಿನಲ್ಲಿ ಮನೆ ಕಟ್ಟಿಸಿ ಕೊಟ್ಟರು. ಒಂದು ನೆರಳಾಯಿತು. ಸರಿಯಾಗಿಯೇ ಉಣ್ಣುವ ಜೀವ ಅವರದು. ಊಟ ಹೇಗೆಯೋ ಹಾಗೆಯೇ ಅವರ ಕೈ ಕೂಡಾ. ಮುಷ್ಟಿ ಬಿಗಿ ಹಿಡಿದು ಅವರಿಗೆ ಗೊತ್ತಿಲ್ಲ. ಬಂದರೆ ಬೆಳಗಿನ ತನಕ. ಹೋದರೆ ಮತ್ತೆ ಯಾವಾಗ ಬರ್ತೇನೆ ಅಂತ ಹೇಳಿ ಕಳಿಸುವವರು. ಮುಲಾಜು ಇಲ್ಲದೆ ಇರುವವರು. ಅವರು ಹೋದ ಮೇಲೆ ಕಷ್ಟವಾಯಿತು. ಗೂಟವಿಲ್ಲದ ಚಪ್ಪರದ ಹಾಗಾಯಿತು. ಬಂದವರು ತುತ್ತು ತಿಂದರೆ ಹೆಚ್ಚು. ಸಣ್ಣ ಕೈ ಬೆರಳಿನ ಮನುಷ್ಯರು ಸುಖವಿಲ್ಲ. ಎಲ್ಲಾ ನಾರು ಅಂದರೆ ನಾರು. ಹಿಂಡಿದರೆ ರಸವಿಲ್ಲದವರು. ಎದುರು ಕೂತು ಎಲೆಯಡಿಕೆ ತಿಂದರೆ ಏನು ಪ್ರಯೋಜನ ಅಂತ ಬೇಕಲ್ಲಾ? ಅಂತ ಲಕ್ಷ್ಮಮ್ಮ ವಯಸ್ಸಿನಲ್ಲಿ ಗೊಣಗಾಡುತ್ತಿದ್ದಳು. ಮಲ್ಲಿಗೆಯ ಮದುವೆಯ ಪ್ರಸಂಗಗಳನ್ನು ಯಾರೊಂದಿಗೆ ಅಂದರೆ ಯಾರೊಂದಿಗೂ ಹೇಳಿದವಳಲ್ಲ. ಅಷ್ಟರ ಮಟ್ಟಿಗೆ ಅಮ್ಮ ಮಗಳು ಇಬ್ಬರೂ ತುಟಿ ಬಿಗಿದಿಟ್ಟುಕೊಂಡು ಊರಿಗೆ ಯಾವುದೂ ತಿಳಿಯದ ಹಾಗೆ ನೋಡಿಕೊಂಡರು. ಮಲ್ಲಿಗೆಗೆ ಆಗ ಹದಿನೈದು ವರ್ಷ. ಮೈ ತುಂಬಿದಂತೆ ಅವಳಲ್ಲಿ ಯೌವನ ಬೇಡವೆಂದರೂ ಯಾರ ಕಣ್ಣನ್ನಾದರೂ ಕೆಣಕುವಂತೆ ಇತ್ತು. ಆ ಸಮಯದಲ್ಲಿಯೇ-ಅದೂ ಕೂಡಾ ವಿಶು ಸಂಕ್ರಮಣದ ಮರುದಿನದ ಬಯಲಾಟದ ದಿನವೇ ಒಂದು ಘಟನೆ ನಡೆಯಿತು. ಮೇಳದ ಕ್ಯಾಂಪ್ ಇದ್ದರೆ ಆ ದಿವಸದ ಮಟ್ಟಿಗೆ ವೇಷಧಾರಿ ಕಿಟ್ಟಪ್ಪ ಲಕ್ಷ್ಮಮ್ಮನ ಮನೆಯಲ್ಲಿ ಹಾಜರು. ಕಿಟ್ಟಪ್ಪನಿಗೆ ಆಗ ತುಂಬು ಯೌವನ. ಲಕ್ಷ್ಮಮ್ಮನಿಗೆ ದೂರದ ಸಂಬಂಧಿ. ಅವನ ವೇಷವೆಂದರೆ ಸಾಮಾನ್ಯವಾಗಿ, - ಇಂದ್ರಜಿತು ಕಾಳಗದ ಇಂದ್ರಜಿತು: ಮಕರಾಕ್ಷ ಕಾಳಗದ ಮಕರಾಕ್ಷ. ದೇವಿ ಮಹಾತ್ಮೆಯ ರಕ್ತಾ ಬೀಜಾಸುರ. ವೇಷ ಮಾಡಿ ರಂಗಸ್ಥಳ ಪ್ರವೇಶ ಮಾಡಿದರೆ ಅವನ ಹೆಜ್ಜೆಗಾರಿಕೆಯ ಲಯಕ್ಕೆ ಚಂಡೆ ಬಾರಿಸುವುದು ಕಷ್ಟವೆಂಬಂಥ ಖ್ಯಾತಿ ಇತ್ತು. ಹೇಗೂ ಸಂಬಂಧವೆಂದು ಅವನು ಬಂದವನು ಲಕ್ಷ್ಮಮ್ಮ ಮನೆಯಲ್ಲಿ ಉಳಿಯುತ್ತಿದ್ದ. ಆ ದಿನ ಮಧ್ಯಾಹ್ನ ಲಕ್ಷ್ಮಮ್ಮ ಮಧ್ಯಾಹ್ನ ನಿದ್ದೆ ಮಾಡಿ ಎದ್ದು ಬಂದು ನೋಡುತ್ತಾಳೆ. ಮಲ್ಲಿಗೆ ಮತ್ತು ಕಿಟ್ಟಪ್ಪ

ಕೋಣೆಯಲ್ಲಿದ್ದಾರೆ. ಮರುದಿನವೇ ಯಾರಿಗೂ ಹೇಳದೆ ಲಕ್ಷ್ಮಮ್ಮ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಮದುವೆ ಮಾಡಿಸಿದಳು. ಅವರಿಬ್ಬರೂ ಒಂದೆರಡು ವರ್ಷ ಜೊತೆಗೆ ಇದ್ದರು. ಕಿಟ್ಟಪ್ಪನಿಗೆ ತಿರುಗಾಟದಲ್ಲಿಯೇ ಹತ್ತಿಕೊಂಡ ಚಾಳಿಯನ್ನು ಮಲ್ಲಿಗೆಗೆ ಬಿಡಿಸುವುದು ಸಾಧ್ಯವಾಗಲಿಲ್ಲ. ಇಸ್ಪೀಟು; ಕುಡಿತ; ಬೀಡಿ ಮೂರು ಅವನ ನಿತ್ಯ ಜೀವನದ ಸಂಗಾತಿಗಳು, ಮದುವೆಯಾದ ಎರಡನೆಯ ವರ್ಷಕ್ಕೆ ತಿರುಗಾಟ ಮುಗಿಸಿ ಬರುವಾಗ ಅರಿಶಿಣಮುಂಡಿಗೆ (ಹಳದಿ ಕಾಮಾಲೆ ರೋಗ) ತಂದ. ಮೈಯೆಲ್ಲಾ ಅರಿಶಿಣ ತುಂಡಿನಂತಾಯಿತು. ಒಂದು ದಿನ ಹೆಂಡತಿ ಕಣ್ಣು ತಪ್ಪಿಸಿ ಕುಡಿದ ಅಷ್ಟೆ–ಅಲ್ಲಿಗೆ ಅವನ ಕತೆ ಮುಗಿಯಿತು. ಮಲ್ಲಿಗೆಯ ಕತೆಯು ಮಾತ್ರ ಹೊಸ ಪ್ರಸ್ತಾವನೆಯೊಂದಿಗೆ ಪ್ರಾರಂಭವಾಯಿತು. ಮಲ್ಲಿಗೆ ಆಗ ಬಸುರಿ. ಆರು ತಿಂಗಳು ದಾಟಿದ ಮಲ್ಲಿಗೆ ಮತ್ತೆ ಬಂದಳು ಊರಿಗೆ. ಲಕ್ಷ್ಮಮ್ಮನಿಗೆ ಮೊಮ್ಮಗುವನ್ನು ಕೊಟ್ಟಳು. ಯಾಕೋ ಏನೋ ಲಕ್ಷ್ಮಮ್ಮ ಹಟ ಹಿಡಿದು ಮೊಮ್ಮಗುವಿಗೆ ಪುರುಷ ಎಂದೇ ಹೆಸರಿಟ್ಟಳು. ಮಗುವಿಗೆ ಒಂದು ವರ್ಷ ತುಂಬುವವರೆಗೆ ಮಲ್ಲಿಗೆಯು ಅಮ್ಮನ ಜೊತೆಗೆ ಇದ್ದು ಅನಂತರ ಉಡುಪಿ ಬದಿಗೆ ಕೆಲಸಕ್ಕೆ ಹೋಗುತ್ತೇನೆ ಎಂದು ಹೊರಟಳು. ಉಡುಪಿಗೆ ಹೋದವಳು ಅಲ್ಲಿಂದ ಬೊಂಬಾಯಿಗೆ ಹೋಗಿ ಬಂದಳು ಅಂತ ಸುದ್ದಿಯಾಯಿತು. ಲಕ್ಷ್ಮಮ್ಮ ಹೊಟ್ಟೆಪಾಡಿಗೆ ಬಳೆ ವ್ಯಾಪಾರವಲ್ಲದೆ ಜೊತೆಗೆ ಅಗತ್ಯ ಬಿದ್ದರೆ ಇರಲಿ ಎಂದು ಹಳೆಯ ನೆನಪುಗಳ ವ್ಯಾಪಾರಕ್ಕೆ ದೂರದ ಸಂಬಂಧಿ ಹುಡುಗಿಯನ್ನು ಕರೆಸಿಕೊಂಡಳು. ನಾಲ್ಕೈದು ವರ್ಷವಾಗುವಷ್ಟರಲ್ಲಿ ಹಲವು ಕೆರೆಯ ನೀರು ಕುಡಿದು ಮಲ್ಲಿಗೆ ಬಂದಳು. ಬರುವಾಗ ತೆಳುವಾದ ನೈಲಾನ್ ಸೀರೆ; ಸೊಂಟ ಕಾಣುವುದಕ್ಕೆ ಅನುಕೂಲವಾದ ಫ್ಯಾಷನ್ ಲೋಕವನ್ನು ತಂದಳು. ಎದೆಯು ಎತ್ತರವಾಗಿ: ಚುಚ್ಚುವ ಬಾಣದಂತೆ ಕಾಣಿಸಲಿ ಎಂದು ಪ್ಯಾಡ್ ಇರುವ ಬ್ರಾವನ್ನು ಹಾಕಿಕೊಂಡಳು. ಕಣ್ಣು ದೊಡ್ಡ ಕಾಣಿಸಲಿ ಎಂದು ಕಣ್ಣ ಕಪ್ಪು ಎಲ್ಲಾ ತಂದಳು. ಅದಕ್ಕೆ ಅವಳು ನಡೆಯುವಾಗ ಭೂಮಿಯು ಅದುರಿದಂತೆ ಆಗುತ್ತದೆಯೆಂದು ಜನರಿಗೆ ಅನಿಸಿತು. ಹೊಸ ಹೊಸ ವರಸೆಯನ್ನು ರೂಢಿಗೆ ತಂದಳು. ಮಲ್ಲಿಗೆಯ ಹೊಸ ಕ್ರಮ ಊರಿನವರ ನಾಡಿ ಬಡಿತ ಹೆಚ್ಚಿಸಿತು. ಅದಾದ ಮೇಲೆ ಅಮ್ಮನ ಹಿತವಚನದ ಒಗ್ಗರಣೆಯು ಮಲ್ಲಿಗೆಗೆ ಯಾವ ಅರ್ಥವನ್ನು ಉಳಿಸಿರಲಿಲ್ಲ. ಅವಳನ್ನು ಕೆಣಕಿ – ಏಟು ತಿಂದದ್ದು ಕುಂಟ ಮೂಸೆಯೇ. ಕುಂಟ ಮೂಸೆ ಮಾತ್ರ ಆ ಸಮಯದಲ್ಲಿ ಆದ ಅಪಮಾನಕ್ಕೆ ಪ್ರತಿಯಾದ ಕಾಲವನ್ನು ನಿರೀಕ್ಷಿಸುತ್ತಿದ್ದ. ಈ ಸಂದರ್ಭದಲ್ಲಿಯೇ ಹೇಳಬೇಕು – ಲಕ್ಷ್ಮಮ್ಮನ ಮೊಮ್ಮಗ: ಮಲ್ಲಿಗೆಯ ಮಗ 'ಪುರುಷ'ನೇ ನನ್ನ ಸ್ನೇಹಿತ ಪುರುಷೋತ್ತಮ. ಯಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದವನು. –ಹುಟ್ಟು: ಬಾಲ್ಯ: ಅಪ್ಪನ ಬಗ್ಗೆ ಚಿಂತಿಸಿದವನು!

## 1992 ಡಿಸೆಂಬರ್ 10

"ಅದು ಸಾಧ್ಯವೇ ಇಲ್ಲ. ಅವಳು ನನ್ನನ್ನು ಅಪಾರವಾಗಿ ಪ್ರೀತಿಸುತ್ತಾಳೆ. ಅವಳಿಗೆ ನನ್ನನ್ನು ಬಿಟ್ಟು ಬೇರೆ ಯಾವನನ್ನೂ ಊಹಿಸುವುದೂ ಸಾಧ್ಯವೇ ಇಲ್ಲ. ಯಾರಾದರೂ ಅವಳ ಬಗ್ಗೆ ಕನಸು ಕಂಡರೆ ಅದು ಕನಸು ಕಂಡವರ ಹುಚ್ಚೇ ಹೊರತು ಅವಳ ಮನಸ್ಸು ಚಂಚಲಗೊಳ್ಳಲು ಸಾಧ್ಯವೇ ಇಲ್ಲ."– ಟೀ ಕುಡಿಯುತ್ತಾ ತುಂಬಾ ಖಚಿತವಾದ ಧ್ವನಿಯಲ್ಲಿ ಹೇಳಿದೆ. ನನ್ನ ಅನೇಕ ವರ್ಷಗಳ ಸ್ನೇಹಿತ; ನನ್ನ ಕಷ್ಟ-ಸುಖದಲ್ಲಿ ಭಾಗಿಯಾದವನು; ಅದೆಲ್ಲಕ್ಕಿಂತ ಹೆಚ್ಚಾಗಿ ನನ್ನ ಬಗ್ಗೆ ಸರಿಯಾಗಿಯೇ ತಿಳಿದುಕೊಂಡವನು ಈ ಪುರುಷೋತ್ತಮ. ಶಾಂಭವಿಯ ಕುರಿತು ಯಾಕೆ ಹೀಗೆ ಹೇಳುತ್ತಾನೆಂದು ಮೊದಲು ಸರಿಯಾಗಿ ಅರ್ಥವಾಗಲಿಲ್ಲ. 'ಶಾಂಭವಿ ನಿನಗೆ ಕೈ ಕೊಟ್ಟಳು.' ಎಂದ ಕೂಡಲೇ ನನ್ನ ಮನಸ್ಸಿನಲ್ಲಿ ಬಂದದ್ದು ಅವಳ ಸುಂದರ ಚಿತ್ರ. ಅದಕ್ಕೆ ಪುರುಷೋತ್ತಮ ಮಸಿಯ ಗೆರೆಯನ್ನು ಎಳೆಯುತ್ತಾನೆಂದು ಅನಿಸಿ ನಾನು ನನ್ನ ಮಾತುಗಳನ್ನು ಖಚಿತವಾಗಿ ಹೇಳಬೇಕಾಗಿ ಬಂತು. ನಾವು ಊಹಿಸದೆ ಇದ್ದ ಘಟನೆಯು ನಮ್ಮೆದುರು ಮುಖಾ ಮುಖಿಯಾದಾಗ ಆಗುವ ಸಂಗತಿಯೆಂದರೆ ಅದರ ನಿರಾಕರಣೆ. ಅದಕ್ಕೆ ನಾನು ಪುರುಷೋತ್ತಮನ ಹತ್ತಿರ ಖಡಾ ಖಂಡಿತವಾಗಿ ಹೇಳಿದ್ದೆ – ಅವಳು ನನ್ನ ಬಿಟ್ಟು ಬೇರೊಬ್ಬನ ಜೊತೆ ಸಂಸಾರ ಹೂಡುವುದು: ಅವನಿಗಾಗಿ ಮಕ್ಕಳನ್ನು ಹೆತ್ತು ಅವನ ಕೈಗೆ ಕೊಡುವುದು ನನ್ನ ಮಟ್ಟಿಗೆ ಅನೂಹ್ಯವಾದ ಸಂಗತಿಯಾಗಿತ್ತು. ನನ್ನ ಹುಟ್ಟಿಗೆ ಅವಳು ಜೀವಂತ ಶಕ್ತಿಯಾಗಿದ್ದಳು. ಅವಳ ಪ್ರೇಮ ನನ್ನ ಹೊದಿಕೆಯಾಗಿತ್ತು. ಆ ಹೊದಿಕೆಯಲ್ಲಿ ಬೆಚ್ಚಗೆ ಮಲಗಿದ್ದ ನನಗೆ ಅವಳನ್ನು ಮದುವೆಯಾಗುವುದು ಒಂದು ಏಕಮೇವ ಗುರಿಯಾಗಿತ್ತು. ಅವಳು ನನ್ನ ಕನಸು. ಅವಳು ನನ್ನ ಜೀವನದಲ್ಲಿ ಬಂದ ಮಮತೆ. ಅವಮಾನಗಳನ್ನು ಗೆಲ್ಲುವುದಕ್ಕೆ; ಕನಸು ಕಾಣುವುದಕ್ಕೆ; ದಡ ಸೇರುವುದಕ್ಕೆ ಸಹಾಯ ಮಾಡುವ ಜೀವವೆಂದು ಭಾವಿಸಿದ್ದೆ. ಪುರುಷೋತ್ತಮ ಹೇಳಿದ ಮಾತುಗಳನ್ನು ಜೀರ್ಣಿಸಿಕೊಳ್ಳುವುದು ಆ ಗಳಿಗೆಯಲ್ಲಿ ಕಷ್ಟವಾಯಿತು. "ಪುರುಷೋತ್ತಮ ನೀನು ಯಾರ ಕುರಿತಾದರೂ ಹೇಳಬಹುದು ಆದರೆ ನನ್ನ ಶಾಂಭವಿ ಹಾಗಿಲ್ಲ. ಅವಳಿಗೆ ಪ್ರೇಮವೆಂದರೆ ಆಟವಲ್ಲ. ನನಗೆ ಅದು ಗೊತ್ತು – ಅವಳು ಹೃದಯ ಪೂರ್ವಕವಾಗಿ ಬೊಗಸೆ ತುಂಬಾ ನನಗೆ ಪ್ರೀತಿಯನ್ನು ಧಾರೆ ಎರೆದಿದ್ದಾಳೆ. ನನಗೆ ಕನಸು ಕಾಣುವುದಕ್ಕೆ ಹೇಳಿಕೊಟ್ಟಳು. ಅವಳ ಕಣ್ಣುಗಳಿಗೆ ನಾನು ಕನಸು ಕೊಟ್ಟೆ. ಈಗ

ಅದು ಒಡೆಯುವುದಿಲ್ಲ. ಮುಂದೆಯೂ ಒಡೆಯಲಾರದು. ನಿನಗೆ ಪ್ರೀತಿಸಿ ಗೊತ್ತಿಲ್ಲ. ನೀನು ಯಾವತ್ತೂ ಯಾವ ಹುಡುಗಿಯನ್ನು ಪ್ರೀತಿಸಲಾರೆ. ಇಷ್ಟು ವರ್ಷಗಳ ನಿನ್ನೊಂದಿಗಿನ ಸ್ನೇಹದಿಂದ ಅರ್ಥಮಾಡಿಕೊಂಡಿದ್ದೇನೆ. ಹುಡುಗಿಯರನ್ನು ನೋಡುವಾಗ ನಿನ್ನ ಕಣ್ಣು ಅವರ ಮೇಲೆ ಹುಳ ಓಡಾಡುವಂತೆ ಓಡಾಡುತ್ತದೆ. "ಯಾವ ಹುಡುಗಿಯರನ್ನು ನೋಡಿದರೂ ನಿನಗೆ ಉಕ್ಕಿ ಬರುವುದು ತೀವ್ರವಾದ ಬಯಕೆ ಮಾತ್ರ. ಹುಡುಗಿಯರೆಂದರೆ ನಿನಗೆ ಅಷ್ಟೆ. ಆದುದರಿಂದ ನೀನು ಯಾವತ್ತೂ ಹುಡುಗಿಯ ಪ್ರೀತಿಯನ್ನು ಒಂದು ಆಧ್ಯಾತ್ಮಿಕ ಲೋಕವೆಂಬಂತೆ ಅರ್ಥಮಾಡಿ ಕೊಳ್ಳಲಾರೆ." ನಾನು ಉದ್ವೇಗದಿಂದಲೇ ಹೇಳಿದೆ. ಅವನಿಗೆ ನನ್ನ ಬಲ ಅಂಗೈಯನ್ನು ತೋರಿಸಿ ಹೇಳಿದೆ – 'ಈ ಅಂಗೈಯ ಮೇಲೆ ಭಾಷೆಯಿಟ್ಟು ಹೇಳಿದ್ದಾಳೆ. ಆ ಆಣೆಯನ್ನು ಅವಳು ಮುರಿಯುವುದಿಲ್ಲ. ಅವಳ ಮಾತು ಸುಳ್ಳಾಗುವುದಿಲ್ಲ. ನಾನು ಅವಳನ್ನು ನಂಬಿದ್ದೇನೆ. ಅವಳು ನನ್ನನ್ನು ನಂಬಿದ್ದಾಳೆ. ನಮಗಿಬ್ಬರಿಗೂ ಇರುವ ಕನಸುಗಳಿಗೆ ಆಧಾರ ನಮ್ಮ ನಡುವಣ ನಂಬಿಕೆ ಮಾತ್ರ.' ಪುರುಷೋತ್ತಮ ತನ್ನ ನಾಲ್ಕು ಕೈ ಬೆರಳನ್ನು ಚಾಚಣಿಕೆಯಂತೆ ಮಾಡಿ ತಲೆಗೂದಲನ್ನು ಸರಿಪಡಿಸಿಕೊಂಡ. ನನ್ನ ಮುಖವನ್ನು ಒಂದು ಕ್ಷಣ ನೋಡಿದ. ಮತ್ತೆ ಸಣ್ಣ ನಗಾಡಿದ. ಅವನ ನಗೆಯಲ್ಲಿ ವ್ಯಂಗ್ಯ ಮತ್ತು ನನ್ನ ಬಗ್ಗೆ ಒಂದು ಕರುಣೆಯ ತುಂಬಿದಂತೆ ಅನಿಸಿತು.

"ನೀನು ಅವಳನ್ನು ಕಂಡು ಎಷ್ಟು ದಿನವಾಯಿತು?" ನಾನು "ಸದ್ಯ ಅವಳನ್ನು ಭೇಟಿಯಾಗಲಿಲ್ಲ" ಎಂದೆ.

ನಾನು – "ಅಂದರೆ?"

ಪುರುಷೋತ್ತಮ "ಅಂದರೆ ಲೈಂಗಿಕ ಸಂಬಂಧ?"

ನಾನು, "ನೀನು ಅದನ್ನು ಬಿಡುವುದಿಲ್ಲ. ಆದರೆ–ನಿಜ ಹೇಳ್ತೇನೆ. ನನ್ನದು ಅವಳದು ಲೈಂಗಿಕ ಸಂಬಂಧಗಳ ಮೂಲಕ ರೂಪುಗೊಂಡ ಪ್ರೇಮವಲ್ಲ. ಅದರ ಮೇಲೆ ಕಮಲ ಅರಳಬಾರದು ಅಂತ ಅವಳು ಹೇಳುತ್ತಿದ್ದಳು." ಎಂದೆ.

ಪುರುಷೋತ್ತಮನೆಂದ 'ಅವಳು ನಿನ್ನ ಶಾಂಭವಿ ನಿಜ. ಆದರೆ ನೀನು–ಊಹಿಸಿದ ಥರ ಇಲ್ಲ. ಈಗ ಅವಳನ್ನು ಪ್ರೀತಿಸುವ ದೇವದಾಸ ಒಂದಿನ ಬಂದು ಅವಳನ್ನು ತೋರಿಸಿ ಹೇಳಿದ, ನಾನು ಮದುವೆಯಾಗುವ ಹುಡುಗಿ ಎಂದು. ಆದರೆ ನಿನ್ನ–ಅವಳ ನಡುವಣ ಅಮರ ಪ್ರೇಮ ನನಗೆ ಗೊತ್ತಿತ್ತು. ಅನಂತರ ಅವಳನ್ನು ಅವನು ಪರಿಚಯಿಸಿದ. ನಾನು ನಂಬದೇ ಇರುವುದಕ್ಕೆ ಕಾರಣವಿರಲಿಲ್ಲ. ನೀನು ನಂಬುವುದಿದ್ದರೆ ನಂಬು. ಬಿಟ್ಟರೆ ಬಿಡು. ಇದು ಸತ್ಯ'

ನನ್ನ ಕೈಯಲ್ಲಿ ಇದ್ದ ಟೀ ಲೋಟ ಜಾರಿಬಿತ್ತು. ಅದರಲ್ಲಿನ ಟೀ ನನ್ನ ಪ್ಯಾಂಟಿನ ಮೇಲೆ ಚೆಲ್ಲಿತ್ತು. ನಾನು ವಿವರ್ಣನಾದೆ. ನನಗೆ ಏನು ಹೇಳುವುದೆಂದು ಗೊತ್ತಾಗಲಿಲ್ಲ. ಒಂದು ಕ್ಷಣ ನನ್ನ ಕೈ ನಡುಗಿತು. ಮಾತು ಹೊರಡಲಿಲ್ಲ. ಆಕಸ್ಮಿಕವಾಗಿ ಎದುರಾದ ಸನ್ನಿವೇಶವಿದು. ಪುರುಷೋತ್ತಮನಿಗೂ ಅದು ಗೊತ್ತಾಯಿತು. ಅವನು ಎದ್ದು ಬಂದು ನನ್ನ ಬೆನ್ನು ತಟ್ಟಿ, "ತಲೆಬಿಸಿ ಮಾಡಿಕೊಳ್ಳಬೇಡ." ಎಂದ. ಅವನು ನನ್ನ ಪ್ಯಾಂಟಿನ ಮೇಲೆ ಬಿದ್ದ ಟೀಯ ಕಲೆಯನ್ನು ತೆಗೆಯಲು ಲೋಟದ ನೀರಿಂದ ಕೈ ಬೆರಳು ಅದ್ದಿ ಒರಸಿದ.

"ಬಾ ಹೋಗೋಣ" ಎಂದ. ಮೌನವಾಗಿದ್ದೆ. ನನ್ನ ಕಾಲುಗಳನ್ನು ಸರಿಯಾಗಿ ಇಡಲು ಆಗುತ್ತಿಲ್ಲವೆಂದು ಅನಿಸಿ ಅವನ ಹೆಗಲ ಮೇಲೆ ಕೈಯಿಟ್ಟು ಕೊಂಡೇ ಕ್ಯಾಂಟೀನಿನಿಂದ ಹೊರಬಂದೆ. ಅವನಿಗೆ ಅಂದೆ: "ನೀನು ಹೋಗು ನಾ ಆಮೇಲೆ ಬರ್ತೇನೆ" ಆಗ ಸರಿಸುಮಾರು ಹನ್ನೊಂದೂವರೆ. ಪುರುಷೋತ್ತಮ, 'ಏನೂ ತಲೆ ಬಿಸಿ ಮಾಡಿಕೊಳ್ಳಬೇಡವೊ ಮಾರಾಯ" ಅಂದ. ನಂಬಿದ್ದನ್ನು ಕಳೆದುಕೊಂಡೆ. ನಾನು ಬೇರೆ ಏನನ್ನೂ ಹೇಳದೆ ಒಬ್ಬ ಅನಾಥನಂತೆ; ಅವನ ಮುಖ ನೋಡಿದೆ. ನನ್ನ ಹೃದಯದಲ್ಲಿ ನೋವಿತ್ತು. ನನ್ನ ನೋವುಗಳನ್ನು ಹೇಳುವುದಕ್ಕೆ ನನ್ನಲ್ಲಿ ಶಬ್ದವಿರಲಿಲ್ಲ. ನೋವುಗಳಿಗೆ ಇರುವ ರುಚಿ – ಯಾತನೆಯೊಂದೇ. ಹೃದಯದಲ್ಲಿ ಒಂದು ಮುಳ್ಳು ಚುಚ್ಚಿದಂತೆ ಆಯಿತು. ಕನ್ನಡಿಯು ಒಡೆದು ಗಾಜಿನ ಚೂರುಗಳು ಮನಸ್ಸಿನ ತುಂಬಾ ಅಂಟಿಕೊಂಡಂತೆ ಅನಿಸಿತು.

"ಪುರುಷೋತ್ತಮ ನೀನು ಹೋಗು ಯಾರಾದರೂ ಕೇಳಿದರೆ ನಾನು ರೂಮಿಗೆ ಹೋಗಿದ್ದೇನೆ ಅಂತ ಹೇಳು. ನಾಳೆ ನಿನ್ನನ್ನು ಕಾಣುತ್ತೇನೆ. ಆದರೂ ಈಗಲೂ ಅನಿಸುತ್ತದೆ. – ಶಾಂಭವಿ ಯಾವತ್ತೂ ನನಗೆ ಮೋಸ ಮಾಡುವುದಿಲ್ಲ." ಪುರುಷೋತ್ತಮ ಏನೂ ಮಾತಾಡಿದೆ ನನ್ನ ಬೆನ್ನಿಗೆ ತಟ್ಟಿ, 'ತಣ್ಣಗಿರು. ನಿನ್ನ ಆಸೆ ಏನಿದೆಯೋ ಅದು ನಿಜವಾದರೆ ನನಗೂ ಖುಷಿಯಾಗುತ್ತದೆ. ಶಾಂಭವಿ ನಿನ್ನವಳಾದರೆ ನಾನೂ ಅದಕ್ಕೆ ಹೆಮ್ಮೆ ಪಡುತ್ತೇನೆ" ಎಂದ.

ಹೆಚ್ಚಾದ ನನ್ನ ಆತಂಕ ಸಮುದ್ರದಂತೆ ಮೊರೆಯತೊಡಗಿತು. ಆ ಹೊತ್ತಿನಲ್ಲಿ ಏನು ಮಾಡುವುದೆಂದು ತಿಳಿಯಲಿಲ್ಲ. ಸೀದಾ ಗೂಡಂಗಡಿ ಹತ್ತಿರ ಹೋಗಿ ಒಂದು ಕಟ್ಟು ಬೀಡಿ ತೆಗೆದುಕೊಂಡೆ. ಕಿಸೆಯನ್ನು ನೋಡಿದೆ. ಕಿಸೆಯಲ್ಲಿ ನಲುವತ್ತೈದು ರೂಪಾಯಿಗಳಿದ್ದವು. ಸೀದಾ ವೈನ್ ಶಾಪಿಗೆ ಹೋಗಿ ಒಂದೇ ಒಂದು ಯು.ಬಿ. ತೆಗೆದುಕೊಂಡು ನನ್ನ ರೂಮಿಗೆ ಹೋದೆ. ರೂಮಿನ ಬೋಲ್ಟ್ ಹಾಕಿಕೊಂಡು ಬಿಯರ್ ಬಾಟಲಿ ತೆರೆದೆ. ಮಧ್ಯಾಹ್ನದ ಹನ್ನೆರಡೂವರೆ ಆಗ. ಬಿಯರ್ ಕುಡಿಯುತ್ತಾ

ಆ ದಿನಗಳನ್ನು ಈಗ ನೆನಪಿಸಿಕೊಳ್ಳುತ್ತೇನೆ: ಶಾಂಭವಿ ನನ್ನನ್ನು ಪ್ರೀತಿಸುತ್ತೇನೆ ಅಂದ ದಿನಗಳು: ಅವಳ ಚಿತ್ರ ನನ್ನ ಮನಸ್ಸಿನಲ್ಲಿ ಮೂಡಿಬಂತು.

ಆ ದಿನ ಶನಿವಾರ. ಮಧ್ಯಾಹ್ನದ ಅನಂತರ ನಮಗೆ ಕ್ಲಾಸು ಇರಲಿಲ್ಲ. ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಕ್ಲಾಸು ಬಿಟ್ಟು ಹೊರಬಂದೆ. ನಾನು ಪಿ. ಯು. ಸಿಯಲ್ಲಿದ್ದೆ. ನಾನು ಒಂದು ಬಿಳಿಯ ಪಂಚೆ ಮತ್ತು ಒಂದು ಗೀಟುಶರ್ಟು ಹಾಕಿಕೊಳ್ಳುತ್ತಿದ್ದೆ. ಆ ದಿನ ನನ್ನದು ನೀಲಿ ಗೀಟು ಶರ್ಟ್. ಬಿನ್ನಿ ಕಂಪೆನಿಯ ಹತ್ತಿಯ ಬಟ್ಟೆ ಅದು. ನಾನು ಯಾವಾಗಲೂ ದೊಗಳೆಯೆಂದು ಅನಿಸುವ ಅಂಗಿಯನ್ನು ಧರಿಸುತ್ತಿದ್ದೆ. ಇದರಿಂದ ನಾನು ಇರುವುದಕ್ಕಿಂತ ಹೆಚ್ಚು ದಪ್ಪ ಕಾಣಿಸುತ್ತಿದ್ದೆ. ಹವಾಯಿ ಚಪ್ಪಲಿಯು ನನ್ನ ನಿತ್ಯದ ಪಾದಸಂಗಾತಿ. ಮಳೆಗಾಲದಲ್ಲಿ ಹವಾಯಿ ಚಪ್ಪಲಿ ಹಾಕಿಕೊಂಡು ಓಡಾಡುವಾಗ ಹಿಂದಿನಿಂದ ಅದರ ಕೆಸರು ಹಾರಿ ನನ್ನ ಪಂಚೆ ಮತ್ತು ಶರಟುಗಳಿಗೆ ಕೆಂಪು ಚುಕ್ಕಿ ಮೂಡುತ್ತಿತ್ತು. ತರಗತಿಯಿಂದ ಹೊರ ಬರುವಾಗ ಜೊತೆಗೆ ಮಾಲಿಂಗೇಶ್ವರನಿದ್ದ. ಶನಿವಾರದ ಕೊನೆಯ ಗಂಟೆ ಇಂಗ್ಲೀಷ್. ಕೇರಳದಿಂದ ಬಂದ ಮಲೆಯಾಳಿ ಲೆಕ್ಚರರ್ ಅವರು. ಅವರ ಇಂಗ್ಲೀಷ್ ವಿಶಿಷ್ಟವಾಗಿರುತ್ತಿತ್ತು. "ಮಾಳಿಂಗ ಈ ಎಷ್ಟು ಗಂಡೆ ಎಂದು ಕೇಳುತ್ತಾರೆ. ಮಾರಾಯ!" ಎಂದು ಮಾಲಿಂಗೇಶ್ವರ ಹೇಳಿಕೊಂಡು ಬರುತ್ತಿದ್ದ. ನಾನು ಜೋರಾಗಿ ನಗಾಡುತ್ತಿದ್ದೆ. ನಾನೂ ಆಗ ತುಂಬಾ ಸಪೂರ, ಒಳ್ಳೆಯ ಡ್ರೆಸ್ ಹಾಕಿಕೊಳ್ಳುತ್ತಿರಲಿಲ್ಲ. ಆದರೆ ಅದರ ಅಗತ್ಯವಿರಲಿಲ್ಲ. ಅಗತ್ಯವಿದ್ದರೂ ಕೊಳ್ಳುವ ಚೈತನ್ಯ ನನಗಿರಲಿಲ್ಲ. ಹುಡುಗಿಯರೊಂದಿಗೆ ಜೋಕ್ ಹೊಡೆದು ಮಾತಾಡುವುದು: ಅವರಿಗೆ ರಾಖಿ ಕಟ್ಟುವುದು; ಅವರಿಗೆ ಐಸ್ ಕ್ರೀಂ ಕೊಡಿಸಿ ಅವರಿಂದ ನೋಟ್ಸ್ ಪಡೆದುಕೊಳ್ಳುವುದು– ಯಾವುದೂ ಸಾಧ್ಯವಿರಲಿಲ್ಲ. ನನ್ನ ಕ್ಲಾಸಿನ ರಫಿ ಈ ವಿಷಯದಲ್ಲಿ ತುಂಬಾ ಪರಿಣಿತ. ಬಡಾಯಿ ಕೊಚ್ಚುತ್ತಿದ್ದ. ಮುಖಕ್ಕೆ ಸದಾ ಪೌಡರ್ ಹಾಕಿಕೊಳ್ಳುತ್ತಿದ್ದ. ಶರ್ಟಿನ ಗುಂಡಿ ತೆಗೆದುಕೊಂಡು ಕುತ್ತಿಗೆಯಲ್ಲಿರುವ ಬಂಗಾರದ ಸರವನ್ನು ಪ್ರದರ್ಶಿಸುತ್ತಿದ್ದ. ಕ್ಲಾಸಿಗೆ ಹೋಗುವಾಗ ಒಂದು ಪರಿಮಳ ಬರುತ್ತಿತ್ತು. ತಿಂಗಳಿಗೊಮ್ಮೆಯಾದರೂ ಸಣ್ಣನೆಯ ಸೆಂಟ್ ಬಾಟಲಿಯನ್ನು ಹುಡುಗಿಯರಿಗೆ ಕೊಟ್ಟು ಅವರನ್ನು ಹೊಗಳಿ ಅಟ್ಟಕ್ಕೇರಿಸಿ ತನ್ನ ಕೆಲಸವನ್ನು ಸಾಧಿಸಿಕೊಳ್ಳುತ್ತಿದ್ದ. ರಫಿಯ ಸುತ್ತ ಹುಡುಗಿಯರು ಮುತ್ತಿಕೊಳ್ಳುವುದು. ಉಳಿದೆಲ್ಲಾ ಹುಡುಗರಿಗೆ ಅಸೂಯೆಯನ್ನು ಹುಟ್ಟಿಸುತ್ತಿತ್ತು. ಆ ಪ್ರಾಯದಲ್ಲಿ ನಮಗೆ ಹುಡುಗಿಯರನ್ನು ಗೆಲ್ಲುವ; ಅವರನ್ನು ಮನವೊಲಿಸುವ ಯಾವ ತಂತ್ರಗಾರಿಕೆಯೂ ಗೊತ್ತಿರಲಿಲ್ಲ. ಆಮೇಲೆ ರೂಢಿಸಿಕೊಂಡೆ. ಆಗ ನಾವೆಲ್ಲಾ ರಫಿಯ ಕುರಿತು ಹೊಟ್ಟೆಕಿಚ್ಚು ಪಡಲು ಮಾತ್ರ ಸಾಧ್ಯವಾಗಿತ್ತು. ಹೀಗಾಗಿ ನಾವು ತರಗತಿ ಬಿಟ್ಟ ತಕ್ಷಣ ಹೊರಗೆ ಬಂದು

ಬಿಡುತ್ತಿದ್ದೆವು. ತರಗತಿಯ ಸಮಯಕ್ಕೆ ಸರಿಯಾಗಿ ಹೋಗುತ್ತಿದ್ದೆವು. ಆ ದಿನವೂ ಅಷ್ಟೆ – ತರಗತಿಯನ್ನು ಬಿಟ್ಟು ತಕ್ಷಣ ತರಗತಿಯಿಂದ ಹೊರಗೆ ಬಂದೆ. ಆ ದಿವಸ ಶಾಂಭವಿ ಸಿಕ್ಕಿದ್ದಳು.

ವಿದ್ಯಾರ್ಥಿ ಸರಕಾರದಲ್ಲಿ ನಾನು ಸಾಂಸ್ಕೃತಿಕ ಮಂತ್ರಿ ಮತ್ತು ಶಾಂಭವಿ ಉಪ ಸಾಂಸ್ಕೃತಿಕ ಮಂತ್ರಿಯಾದುದರಿಂದ ಆಗಾಗ ನಾವು ಮಾತಾಡುತ್ತಿದ್ದುದು ನಿಜ. ಅವಳು ಕೂಡಾ ಕಾಲೇಜಿನ ಆವರಣದಲ್ಲಿ ಎಲ್ಲೆಂದರಲ್ಲಿ ನಿಂತು ಮಾತಾಡಬೇಕಾದ ಪ್ರಮೇಯಗಳಿದ್ದವು. ವಿದ್ಯಾರ್ಥಿ ಸರಕಾರದಲ್ಲಿ ಗೃಹಮಂತ್ರಿಯು ಕಾಲೇಜಿನ ಶಿಸ್ತಿನ ಬಗೆಗೆ, – ಕ್ರೀಡಾಮಂತ್ರಿ ಕ್ರೀಡಾ ಚಟುವಟಿಕೆಗೆ ಮತ್ತು ಸಾಂಸ್ಕೃತಿಕ ಮಂತ್ರಿಗೆ ಸಾಂಸ್ಕೃತಿಕ ಚಟುವಟಿಕೆಗಳ ಜವಾಬ್ದಾರಿಗಳಿದ್ದವು. ಒಂದು ದೃಷ್ಟಿಯಿಂದ ಸಾಂಸ್ಕೃತಿಕ ಚಟುವಟಿಕೆಗಳು ಮಹತ್ವದ ಖಾತೆಯಾಗಿತ್ತು. ನನಗೆ ಮಂತ್ರಿಯಾಗುವ ತನಕವೂ ಈ ಚಟುವಟಿಕೆಗಳು ಅರಿವು ನನಗೆ ಇರಲಿಲ್ಲ. ನನ್ನನ್ನು ಸಾಂಸ್ಕೃತಿಕ ಮಂತ್ರಿಯಾಗಿ ಪ್ರಾಂಶುಪಾಲರು ಆಯ್ಕೆ ಮಾಡಿದ ತಕ್ಷಣ ಅವರ ಬಳಿ ಹೋಗಿ ಹೇಳಿದ್ದೆ. “ಇದು ನನ್ನ ಕೈಯಲ್ಲಿ ಸಾಧ್ಯವಿಲ್ಲ. ನನಗೆ ಸ್ಟೇಜ್ ಎಂದರೆ ಭಯ. ನಾನು ಯಾವತ್ತು ಸ್ಟೇಜ್ ಹತ್ತಿಲ್ಲ.” ಪ್ರಾಂಶುಪಾಲರು “ನಿನಗೆ ನಿನ್ನ ಸಾಮರ್ಥ್ಯ ಗೊತ್ತಿಲ್ಲ. ನೀನು ಇದನ್ನು ವಹಿಸಲು ಏನೂ ಭಯಪಡಬೇಡ.” ಸಂಕೋಚದಲ್ಲಿ ಮುದ್ದೆಯಾಗಿ ಮಳೆಯಲ್ಲಿ ನೆಂದು ಕುಳಿತ ಗುಬ್ಬಿ ಹಕ್ಕಿಯಂತೆ ಅದನ್ನು ಒಪ್ಪಿಕೊಂಡಿದ್ದೆ. ಸಾಂಸ್ಕೃತಿಕ ಮಂತ್ರಿಯಾಗಿರುವುದರಿಂದ ಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆ, ನಾಟಕ, ಯಕ್ಷಗಾನ ಇತ್ಯಾದಿ ಎಲ್ಲವೂ ನನ್ನ ತಲೆಯ ಮೇಲೆ ಬಿತ್ತು. ಶಾಂಭವಿಯೊಡನೆ ನಾನು ಚರ್ಚಿಸಬೇಕಾಗಿತ್ತು. ನನಗಿರುವ ಸಂಕೋಚವಾಗಲೀ. ವೇದಿಕೆಯ ಭಯವಾಗಲೀ ಯಾವುದೂ ಅವಳಿಗೆ ಇರಲಿಲ್ಲ. ಒಂದೆರಡು ಸಾರಿ ರಫಿ ಅಂದಿದ್ದ “ಏನೋ ನಿಶಿ – ನಿನ್ನ ಉಪ ಎಲ್ಲಿ ಕಾಣಿಸ್ತಾ ಇಲ್ಲ?” ಅದರೆ ಅದಕ್ಕೆ ನಾನು ಮಹತ್ವ ಕೊಟ್ಟಿರಲಿಲ್ಲ. ಬಹುಶಃ ಅದೆಲ್ಲಾ ಊಹಿಸುವುದಕ್ಕೂ ಸಾಧ್ಯವಿರಲಿಲ್ಲ.

ಮತ್ತೊಂದು ದಿನ ಅವಳನ್ನು – ಅವಳ ಕ್ಲಾಸಿನಿಂದ ಕರೆದೆ. ಅವಳ ತರಗತಿಯ ಹುಡುಗಿಯರು ಕಿಸಕ್ಕನೆ ನಕ್ಕರು. ನನಗೆ ಯಾಕೋ ಸಂಕೋಚವೆನಿಸಿತ್ತು. ಇದೆಲ್ಲಾ ನಡೆಯುತ್ತಿತ್ತು. ಮತ್ತು ದಿನಗಳು ಉರುಳುತ್ತಿದ್ದವು. ಆದರೆ ಆ ದಿನ ಮಾತ್ರ ನಡೆದದ್ದು ಮರೆಯಲಾರೆ ಶನಿವಾರ ಮತ್ತೆ ಮತ್ತೆ... ಸುರುಳಿ ಸುರುಳಿಯಾಗಿ ಬರುವ ಶನಿವಾರ.

ಕ್ಲಾಸು ಬಿಟ್ಟು ಹೊರಬರುವಾಗ ಶಾಂಭವಿ ಸಿಕ್ಕಿದಳು. ಸಣ್ಣ ನಗು ಬೀರಿದೆ. ಬಹುಶಃ ಅವಳು ನನ್ನ ತರಗತಿಯ ಹುಡುಗಿಯರನ್ನು ಭೇಟಿಯಾಗಲು ಬಂದಿದ್ದಾಳೆಂದು ಭಾವಿಸಿಕೊಂಡೆ. ಹೆಜ್ಜೆ ಮುಂದುವರೆಸಿದೆ. ಜೊತೆಗೆ ಇದ್ದ

ಮಾಲಿಂಗೇಶ್ವರ ಇಂಗ್ಲೀಷ್ ಉಪನ್ಯಾಸಕರ ಬಗ್ಗೆ ತಮಾಷೆ ಮಾಡಿದ್ದನ್ನು ನೆನಪಿಸಿಕೊಂಡು; ಅವನ ಜೊತೆ ಮುಂದೆ ಹೋಗುತ್ತಿದ್ದವನಿಗೆ ಅವಳ ಮಾತು ತಡೆ ಹಿಡಿಯಿತು. "ನಿಶಿತ–ನಿಮ್ಮೊಂದಿಗೆ ಮಾತಾಡಬೇಕು" ಕಣ್ಣಿನಲ್ಲಿಯೇ ಅವಳು ಖಾಸಗಿ ಮಾತುಕತೆಯೆಂಬ ಸೂಚನೆ ಕೊಟ್ಟಳು. ಮಾಲಿಂಗೇಶ್ವರ 'ಏಯ್ ನಿಶಿ– ಆಮೇಲೆ ಸಿಗ್ತೇನೆ.' ಎಂದು ಹೊರಟು ಹೋದ.

ಶಾಂಭವಿ ಎದುರು ನಿಂತಿದ್ದಳು. ಅಕ್ಕ ಪಕ್ಕದಲ್ಲಿ ಗುಜು ಗುಜು ಸದ್ದಿನೊಂದಿಗೆ, ಹಿಂಡು – ಹಿಂಡು ಪಾರಿವಾಳಗಳಂತೆ ಎಲ್ಲರೂ ಹೋಗುತ್ತಿದ್ದರು. "ನಾನು ನಿಮ್ಮೊಂದಿಗೆ ತುಂಬಾ ಮಾತಾಡಬೇಕು. ಮಧ್ಯಾಹ್ನ ಎರಡೂವರೆಗೆ ಹೊಳೆ ದಡದ ಹತ್ತಿರ ಬರುತ್ತೇನೆ. ನೀವು ಬನ್ನಿ" ಅಂದವಳು ಮತ್ತೆ ಏನೂ ಮಾತಾಡದೆ ಹೊರಟು ಹೋದಳು. ನಾನು ಆಯಿತು ಎಂದು ಹೇಳುವಷ್ಟು ಕೂಡಾ ಪುರುಸೊತ್ತು ಕೊಡಲಿಲ್ಲ. ಅವಳು ತಿರುಗಿಕೂಡಾ ನೋಡದೆ ಹೊರಟು ಹೋದುದನ್ನು ಒಂದು ಕ್ಷಣ ನೋಡುತ್ತಾ ನಿಂತೆ. ನನ್ನ ಮಟ್ಟಿಗೆ ಇದು ಅನಿರೀಕ್ಷಿತವಾದುದು. ಜೇಬನ್ನು ಮುಟ್ಟಿನೋಡಿದೆ. ನಾನು ದರಿದ್ರ ನಾರಾಯಣ, ಕಿಸೆಯಲ್ಲಿರುವುದು ಎರಡು ರೂಪಾಯಿಯ ಮುದ್ದೆಗೊಂಡ ಕಾಗದ ಚೂರು. ಅಂದಾಜು ಮಾಡಿದೆ. ಹೆಚ್ಚು ಕಡಿಮೆ ಒಂದೂವರೆ ಗಂಟೆಯಾಗಿರಬಹುದು. ಮತ್ತೆ ಒಂದು ಗಂಟೆ ಕಾಯಬೇಕು. ಊಟ ಮಾಡಲು ದುಡ್ಡಿಲ್ಲ. ತಿಂಡಿ ತಿನ್ನಲು ಎರಡು ರೂಪಾಯಿ ಸಾಲದು. ಹೊಟ್ಟೆಯ ಹಸಿವು ಕೆಂಡದಂತೆ ಸುಡುತ್ತಿದೆ. ತಡೆಯಲಾಗದು. ಕಡು ಬೇಸಿಗೆಯ ಉರಿ ತಲೆಯ ಮೇಲೆ. ಕರುಳಿನಲ್ಲಿ ಹಸಿವೆಯ ಅಗ್ನಿಕುಂಡ. ಶಾಂಭವಿ ಮಾತಾಡಬೇಕೆಂದು ಹೇಳಿದ ಮಾತು – ಹೆಚ್ಚಿಸಿದ ಕುತೂಹಲದ ಕಿಡಿ. ಎಲ್ಲಾ ತರಹದ ಬೆಂಕಿಯ ಮಧ್ಯೆ ನಾನು ಮುಂದೆ ಅನವರತವೂ ಬೆಂಕಿಯ ಮಧ್ಯೆ ಉರಿಯಬೇಕಾದ ಸ್ಥಿತಿಯೊಂದು ಉದ್ಭವವಾಗಲಿದೆ ಎಂದು ಗೊತ್ತಿರಲಿಲ್ಲ. ಹಸಿರು ಬಣ್ಣದ ಉದ್ದಲಂಗದ ಅಂಚಿನಲ್ಲಿ ಫಳಫಳ ಹೊಳೆಯುತ್ತಿರುವ ಬಂಗಾರ ರೇಖೆಗಳು, ಕೆಂಪು ಬ್ಲೌಸ್, ಸಣ್ಣಕುಂಕುಮದ ಬೊಟ್ಟು, ಅರೆಕಪ್ಪು ಬಣ್ಣದ ಶಾಂಭವಿಯೆಂಬ ಹುಡುಗಿಯೊಬ್ಬಳು ಉರಿಯನ್ನು ಹಚ್ಚಲಿದ್ದಾಳೆ ಎಂಬ ಅರಿವು; ಇರಲಿಲ್ಲ. ಆ ದಿನ ಶನಿವಾರ. ಅದೂ ಮಧ್ಯಾಹ್ನದ ಹೊತ್ತು ನನ್ನ ತಿಳುವಳಿಕೆಯ ಪ್ರಪಂಚಕ್ಕೆ ಬರುವುದು ಸಾಧ್ಯವಿರಲಿಲ್ಲ. ಈಗ ನಾನು ಯೋಚಿಸುವಾಗ ಅನಿಸುತ್ತದೆ: ಆಗ ಇದ್ದುದು ಬರಿಯ ಹೆಡ್ಡುತನ. ಆ ಹೆಡ್ಡುತನವನ್ನೇ ಒಂದು ನಂಬಿಕೆಯಾಗಿ ಸ್ಥಾಪಿಸಿಕೊಂಡಿದ್ದೆ. ಒಂದು ಅಪ್ಪಟ ಸತ್ಯ. ಅದಕ್ಕೆ ಆಗ ಆ ದಿನ ಸುಮ್ಮನೆ ಒಂದು ಹೋಟೆಲಿಗೆ ಹೋಗಿ ಒಂದು ಖಡಕ್ ಚಾ ಕುಡಿದೆ. ಒಂದು ಸಣ್ಣ ಗೂಡಂಗಡಿಗೆ ಹೋಗಿ ಎಂಟಾಣೆಯ ಬಿಸ್ಕೆಟ್ ತಿಂದೆ. ಹಸಿವು ಉಪಶಮನ ಹೊಂದಿತು.

ನಿಧಾನವಾಗಿ ನಡೆಯುತ್ತಾ ಹೊಳೆಯಬದಿಗೆ ಹೋದೆ. ಆಗ ಹೊಳೆಯಲ್ಲಿ ಇದ್ದುದೇನು? ಮರಳು, ದುಂಡನೆಯ ಕಲ್ಲುಗಳು ಹಾಗೂ ಮೊಣಕಾಲು ತನಕ ಮಾತ್ರ ಬರುವ ನೀರು. ಹೊಳೆಯ ಹತ್ತಿರ ಬರಬೇಕೆಂದು ಅವಳು ಹೇಳಿದ್ದು ನಿಜ. ಆದರೆ ಎಲ್ಲಿ ಕಾಯಬೇಕು. ಎಂದು ಅವಳು ಹೇಳಿರಲಿಲ್ಲ. ನದಿಗೆ ಇಳಿಯುವ ಮೆಟ್ಟಿಲ ಬಳಿಯ ಅಶ್ವತ್ಥ ಮರದ ಬಡದಲ್ಲಿ ಕುಳಿತುಕೊಂಡು ಯೋಚಿಸಿದೆ: ಶಾಂಭವಿ ಯಾಕೆ ಬರ ಹೇಳಿರಬಹುದು? ಅವಳ ಮನೆಯಲ್ಲಿ ಏನಾದರೂ ತೊಂದರೆಯಿರಬಹುದೆ? ಕೇವಲ ಊಹಾತ್ಮಕ ಪ್ರಶ್ನೆಗಳು ಮತ್ತು ಅದಕ್ಕೆ ನಾನು ಕೊಡಬಹುದಾದ ಊಹಾತ್ಮಕ ಉತ್ತರಗಳು. ಆತಂಕಕ್ಕೆ ಉತ್ತರವಿಲ್ಲದೆ ಪ್ರಶ್ನೆಗಳಿಗೆ ಮಾತ್ರ ನಾನು ತಲೆ ಕೆಡಿಸಿಕೊಂಡೆ. ಹೀಗೆ ಆಲೋಚಿಸುವಾಗಲೆಲ್ಲಾ ನಾನು ಮಾಡುವ ಎರಡು ಕೆಲಸವೆಂದರೆ ಒಂದೋ, ತಲೆಕೆರೆದುಕೊಳ್ಳುವುದು ಅಥವಾ ಉಗುರು ಇಲ್ಲದಿದ್ದರೂ ಉಗುರು ಕಚ್ಚುವುದು. ಆ ಕೆಲಸವನ್ನು ಮಾಡುತ್ತಾ ಕುಳಿತೆ. ಅದೇ ಹಸಿರು ಲಂಗ, ಕೆಂಪು ಬ್ಲೌಸ್, ಲಂಗದ ನಿರಿಗೆ ಚಿಮ್ಮಿಸುತ್ತಾ ಬರುವಾಗ ಲಂಗದಲ್ಲಿನ ಬಿಳಿಯ ಹೂಗಳು ನಗುತ್ತಿರುವಂತೆ ಕಾಣಿಸಿತು. ಶಾಂಭವಿ ಬಂದಳು ನನ್ನ ಬಳಿಗೆ "ಆಗಲೇ ಬಂದಿರಾ? ನಾನು ಊಟ ಮಾಡುವಾಗ ತಡವಾಯಿತು." ಎಂದಳು. ಬಿರುಬಿಸಿಲಲ್ಲಿ ಒಂದು ಮಲ್ಲಿಗೆಯ ನಗು ಅವಳ ತುಟಿಯಲ್ಲಿ ಅರಳಿತು. "ಬನ್ನಿ 'ಕುಳಿತುಕೊಳ್ಳಿ' ಎಂದೆ."

"ನೀವು ನನಗಿಂತ ದೊಡ್ಡವರು. ಹೀಗೆ ಬಹುವಚನ ಬೇಡ. ಕೆಳಗೆ ಹೋಗೋಣ. ಸ್ವಲ್ಪ ದೂರ ಹೋದರೆ ಒಂದು ನೆರಳು ಸಿಗುತ್ತದೆ. ಅಲ್ಲಿಯೇ ಕುಳಿತುಕೊಳ್ಳೋಣ" ಎಂದಳು. ನಾನು ಅವಳನ್ನು ಹಿಂಬಾಲಿಸಿದೆ. ಇಬ್ಬರೂ ಅವಳು ಹೇಳಿದ ಬಂಡೆಯನ್ನು ಸಮೀಪಿಸಿದೆವು. ಅಲ್ಲಿಯ ತನಕ ಅವಳು ಮಾತಾಡುತ್ತಿದ್ದಳು. ನಾನು ಕೇಳಿಸಿಕೊಳ್ಳುತ್ತಿದ್ದೆ. ಬಂಡೆ ಕಲ್ಲಿನಲ್ಲಿ ಕುಳಿತ ಮೇಲೆ ನಮ್ಮಿಬ್ಬರ ಮಾತುಕತೆಗಳು ಶುರುವಾಯಿತು. ಶಾಂಭವಿ ಇದ್ದಕಿದ್ದಂತೆ ಎದುರು ಕುಳಿತುಕೊಂಡಳು.

ನನ್ನ ಮುಖವನ್ನೇ ನೋಡಿದಳು. "ಏನು?" ಎಂದೆ.

"ಇದು ಕಷ್ಟ"

"ಯಾವುದು?"

"ಅದೇ – ನಾವು ಹೀಗಿರುವುದು"

"ಅಂದರೆ......."

ನನಗೆ ಅವಳು ಮಾತಾಡುವುದು ಸರಿಯಾಗಿ ಅರ್ಥವಾಗಲಿಲ್ಲ. ಅವಳ ಮಾತು ಒಗಟಿನಂತಿತ್ತು. ಬಹುಶಃ ನಾನು ಅವಳೊಂದಿಗೆ ಮಾತಾಡುವುದು ಕಷ್ಟವಾಗುತ್ತದೆಯೇನೋ ಅಂತನ್ನಿಸಿತು. ಸುಮ್ಮನೆ ನೋಡುತ್ತಾ ಕುಳಿತೆ. ಅವಳ ದೃಷ್ಟಿ ನನ್ನ ಮೇಲಿತ್ತು. ನಾನೂ ಅವಳ ಮುಖವನ್ನು ನೋಡುತ್ತಿದ್ದವನು. "ಬಿಡಿಸಿ ಹೇಳು" ಎಂದೆ, ನನ್ನಿಂದ ಬಂದ ಏಕವಚನ – ಅಂತರದ ರೇಖೆಯನ್ನು ದಾಟಿದ್ದನ್ನು ಸೂಚಿಸಿತು. ಅವಳ ತುಟಿಯಲ್ಲಿ ಮತ್ತೆ ಅರಳಿದ್ದು – ಮಲ್ಲಿಗೆನಗು.

ಶಾಂಭವಿ: "ನೋಡಿ – ನಮ್ಮಿಬ್ಬರ ಬಗ್ಗೆ ಸುದ್ದಿಯಾಗ್ತಿದೆ ಅದಕ್ಕೆ......" ಉಗುಳು ನುಂಗಿದಳು. ತಾನು ಏನು ಹೇಳುತ್ತಿದ್ದೇನೆ ಎಂಬುದನ್ನು ಪರೀಕ್ಷಿಸಿಕೊಳ್ಳುವಂತೆ ದೃಷ್ಟಿಯನ್ನು ದೂರನೆಟ್ಟು ಯೋಚಿಸಿ ಮುಂದುವರಿಸಿದಳು. ಅವಳ ಮುಖ ಗಂಭೀರವಾಗ ತೊಡಗಿತು. "ನಾನು ಒಂದು ನಿರ್ಧಾರಕ್ಕೆ ಬಂದಿದ್ದೇನೆ. ನಾನು ನಿಮ್ಮನ್ನೇ ಮದುವೆಯಾಗ್ತೇನೆ ಅಂತ ಭಾಷೆ ಕೊಡಿ" ಆಗ ನಾನು ಕೊಂಚ ಅಧೀರನಾದೆ. 'ಶಾಂಭವಿ – ನನ್ನದು ಬಡತನದ ಕುಟುಂಬ. ಮುಂದೆ ಹೀಗಿರುತ್ತೇನೋ ಇಲ್ಲವೋ ತಿಳಿಯದು. ನಿನ್ನ ಆಯ್ಕೆ ತಪ್ಪು" ಎಂದೆ. ಅವಳು "ಇಲ್ಲ, ನಿಮ್ಮನ್ನು ತುಂಬಾ ಇಷ್ಟ ಪಡ್ತೇನೆ ಯಾವುದೇ ಕಾರಣಕ್ಕೂ ನಾನು ನಿಮ್ಮನ್ನು ಬಿಡೋಲ್ಲ. ನಾನೂ ಆಣೆ ಹಾಕ್ತೇನೆ. ನೀವೂ ಕೈ ಮೇಲೆ ಇಟ್ಟು ಹೇಳಿ – ನನಗೆ ನಿಮ್ಮ ಹೃದಯ ಶ್ರೀಮಂತಿಕೆ ಸಾಕು.' ಅವಳು ಮಾತು ಗ್ರಾಂಥಿಕವಾಗಿತ್ತು. ಆಗಿನ ನನ್ನ ವಯಸ್ಸಿಗೆ ಅವಳ ಮಾತಿನಲ್ಲಿ ನಾಟಕೀಯತೆಯು ಇದೆಯೆಂದು ತಿಳಿಯಲಿಲ್ಲ. ಆಗ ಅವಳ ಕೈ ಮುಟ್ಟಿದೆ. ಹೂಮುಟ್ಟುವಂತೆ, ಆಗ ಅವಳ ಅರೆ ಕಪ್ಪು ಬಣ್ಣದ ಗಲ್ಲ ಕೆಂಪೇರಿತು. ನದಿಯ ಎದುರು – ದೊಡ್ಡ ಕಪ್ಪು ಬಂಡೆಗಲ್ಲಿನ ಮೇಲೆ, ನಿರ್ಜನ ಸಾಕ್ಷ್ಯದಲ್ಲಿ ನಾವು ಒಬ್ಬರಿಗೊಬ್ಬರು ಪ್ರೀತಿಸುತ್ತೇವೆಯೆಂದು ಪರಸ್ಪರ ಕೈ ಮೇಲೆ ಕೈಯಿಟ್ಟೆವು. ಸಾಕ್ಷಿ ಹೇಳಿದ್ದು ಅಗ್ನಿಯಲ್ಲ – ನೀರು!

* * * * *

ರೂಮಿನಲ್ಲಿ ಕುಳಿತವನಿಗೆ ಹಳೆಯ ನೆನಪು ಬಂದು, – ಕಣ್ಣಲ್ಲಿ ನೀರು ಬರುತ್ತಿದೆಯೆಂದನ್ನಿಸಿತು. ಸಣ್ಣ ಬಿಕ್ಕಳಿಕೆ ಬಂತು. ನೆನಪುಗಳು ಕೂಡಾ ಕ್ರೂರ. ಅದು ಹಿಂಸೆ ಮಾಡುತ್ತದೆ. ಸಂಬಂಧಗಳು ನೋವು ಕೊಡುತ್ತವೆ. ಎಷ್ಟು ಹೊತ್ತು ಹಾಗೆಯೇ ಕುಳಿತಿದ್ದೆ – ಮಂಕು ಹಿಡಿದವನಂತೆ.!

(ನಿಶಿತ ಡೈರಿಯಲ್ಲಿ ಹೀಗೆಂದು ಕೆಂಪು ಅಕ್ಷರದಲ್ಲಿ ಬರೆದಿದ್ದ.)

* * * * *

ಅನಂತರದ ದಿನಗಳಲ್ಲಿ ನಾನೂ ಅವಳು ಇಬ್ಬರೂ ಪ್ರೇಮಿಗಳಂತೆ ವರ್ತಿಸಿದರೂ ಹದ್ದು ಮೀರಲಿಲ್ಲ. ಅವಳ ಕೈಯನ್ನು ಹಿಡಿದು ಕನಸು ಕಾಣುತ್ತಿದ್ದೆ. ನನ್ನ ಅಂಗೈ ಹಿಡಿದುಕೊಂಡು ಅವಳೂ ಕನಸು ಕಾಣಿಸುತ್ತಿದ್ದಳು. ಇಬ್ಬರಿಗೂ ಪ್ರೀತಿಯ ಕನಸುಗಳು ಮುಖ್ಯವಾಗಿದ್ದವು – ದೇಹಕ್ಕಿಂತ ಈಗ ನೋಡಿದರೆ ಈ ಕತೆಯಾಗಿದೆ. ಒಂದು ವಾರ ಮಂಕುಹಿಡಿದವನಂತೆ ಇದ್ದೆ – ನೋವಿನಲ್ಲಿ; ಹತಾಶೆಯಲ್ಲಿ. ಒಂದು ವಾರ ದಾಟಿದ ಮೇಲೆ ನಾನು ರೂಮಿನಲ್ಲಿ ಕುಳಿತುಕೊಂಡಿದ್ದೆ – ಆ ಸಮಯದಲ್ಲಿ. ಇದ್ದಕ್ಕಿದ್ದಂತೆ ಹುಡುಕಿಕೊಂಡು ಶಾಂಭವಿ ಬಂದಳು. ಬಂದವಳು ಮುಖದಲ್ಲಿ ಅದೇ ಮಲ್ಲಿಗೆಯ ನಗು, 'ನಿಶಿ – ಬನ್ನಿ ಟೀ ಕುಡಿಯೋಣ' ಅಂದಳು. ಹೊರಟೆ. ಟೀ ಕುಡಿಯುತ್ತಾ ಅವಳ ಮುಖ ನೋಡುತ್ತಾ ಹೇಳಿದೆ – ಪುರುಷೋತ್ತಮ ಹೇಳಿದ ಸಂಗತಿಯನ್ನು, ಅವಳ ನಗು ಮುಖದಲ್ಲಿ ನಗು ಮಾಸತೊಡಗಿತು. ಅವಳಿಂದ ಬೇರೆ ಮಾತುಗಳು ಬರಲಿಲ್ಲ – ಕೊನೆಗೆ ನಿಶಿ, 'ನಾನು ಹಾಸ್ಟೆಲಿಗೆ ಹೋಗಲು ತಡವಾಗುತ್ತಿದೆ. ನಿಮಗಾಗಿ ಒಂದು ಪತ್ರ ತಂದಿದ್ದೇನೆ. ಅದನ್ನು ರೂಮಿನಲ್ಲಿ ಓದಿ" ಅಂದಳು. ದೇವದಾಸನ ಬಗೆಗೆ; ಅವಳ ಬಗೆಗೆ ಅದರಲ್ಲಿ ಸುದೀರ್ಘವಾದ ವಿವರಣೆಯಿದೆ. ಅವಳು ಒಂದಿಷ್ಟು ಮಾತಾಡಲಿಲ್ಲ. ಹೋಟೆಲಿಂದ ಎದ್ದು ಬರುವಾಗ ಅವಳ ಕೈಯೊತ್ತಿ ಹೇಳಿದೆ; 'ಶಾಂಭವಿ ನಾನು ನಿನ್ನ ಪ್ರೀತಿಸುತ್ತೇನೆ". ಶಾಂಭವಿಯದು ಮತ್ತೆ ಕೊಂಚ ನಗು. ಆ ನಗುವಿನಲ್ಲಿ ಏನೇನು ಅರ್ಥಗಳಿದ್ದವು ಎಂದು ಆಗ ಅರ್ಥವಾಗಲಿಲ್ಲ. ರೂಮಿಗೆ ಬಂದವನು – ಅವಳ ಪತ್ರವನ್ನು ಓದಿದೆ. ತುಂಬಾ ದೀರ್ಘವಾದ ಪತ್ರವದು. ಆ ಪತ್ರದಲ್ಲಿ ಅವಳು ಏನೇನು ಬರೆದಿದ್ದಾಳೆ ಎಂದೂ ಓದುವಷ್ಟು ನನಗೆ ತಾಳ್ಮೆಯಿರಲಿಲ್ಲ. ಮೊದಲ ವಾಕ್ಯ ಹೀಗಿತ್ತು.

"ನಿಶಿ:

ನಾವಿಬ್ಬರೂ ಪರಸ್ಪರ ಪ್ರೀತಿಸುತ್ತೇವೆ ಎಂದು ನಂಬಿಕೊಂಡಿದ್ದೆವು. ಆದರೆ ಅದು ನಿಜವಲ್ಲ ಎಂದು ಅನಿಸುತ್ತಿದೆ. ನೀನು ನನ್ನನ್ನು ಮರೆತುಬಿಡು. ನಾನು ದೇವದಾಸನನ್ನು ಪ್ರೀತಿಸುತ್ತೇನೆ. ನನಗೆ ದೇವದಾಸ ಇಷ್ಟ. ಅವರೊಂದಿಗೆ ಬಾಳು ಹಂಚಿಕೊಳ್ಳಲು ಇಷ್ಟ. ನಿಶಿಗೆ ಇದು ಬೇಜಾರಾಗಬಹುದು. ನಿನ್ನ ಭಾವಕತೆ, ನಿನ್ನ ಕನಸುಗಳಿಗಿಂತ ದೇವದಾಸ ತುಂಬಾ ವಾಸ್ತವವಾದಿ: ಸ್ವಯಂ ಶಕ್ತಿಯುಳ್ಳ, ನಿರ್ಭಾವುಕ ವ್ಯಕ್ತಿತ್ವದ – ನಿನ್ನಂತೆ ಸ್ವಯಂ ಮರುಕವಿಲ್ಲದ ದೇವದಾಸ – ನನಗೆ ಜೀವನವನ್ನು ನೋಡಲು ಕಲಿಸಿದರು. ನಿನಗೆ ನೀನು ಪ್ರೀತಿಸುವ ಹುಡುಗಿ ಸಿಗಲಿ, ನಾನು ಮತ್ತೊಮ್ಮೆ ನಿನ್ನ ಭೇಟಿಯಾಗಲು ಇಷ್ಟಪಡುವುದಿಲ್ಲ. ದೇವದಾಸ – ನನಗೆ ಜೀವನವನ್ನು ನೋಡಲು ಕಲಿಸಿದರು." ಶಾಂಭವಿ ದೇವದಾಸ ನನ್ನ ದೇಹ

ಮತ್ತು ಮನಸ್ಸು ಅವರಿಗಾಗಿ. ಪತ್ರದ ತುಂಬಾ ದೇವದಾಸನ ಬಗ್ಗೆ ಹೊಗಳಿಕೆ, ನನ್ನ ಬಗ್ಗೆ ಮೂದಲಿಕೆ, ಎಳೆಯ ವಯಸ್ಸಿನಲ್ಲಿನ ಆದ ಪ್ರೇಮದ ಅಸಿಂಧುತ್ವ ಮುಂತಾದವುಗಳಿದ್ದವು. ನನ್ನ ತಲೆ ಗಿರ್ರನೆ ತಿರುಗಿದ ಅನುಭವವಾಯಿತು. ಬವಳಿ ಬಂದಂತಾಗಿ ಮಂಚದ ಮೇಲೆ ತಲೆಯಿಟ್ಟು ಮಲಗಿದೆ. ಅದೇ ವೇಳೆ 'ನಿಶಾ ಕೆಳಗಿನ ಮನೆಯ ಪ್ರಕರಣ ನಡೆಯಿತು. ಶಾಂಭವಿ ಜೀವನದಲ್ಲಿ ಕೆಲವು ವಾಕ್ಯಗಳು ಬರೆದು – ಪೆನ್ನಿನ ಮುಚ್ಚಳ ಹಾಕಿದಳು. 'ನಾನು ಮತ್ತೊಮ್ಮೆ ನಿನ್ನನ್ನು ಭೇಟಿಯಾಗಲು ಇಷ್ಟಪಡುವುದಿಲ್ಲ' ಎಷ್ಟು ಸಣ್ಣ ವಾಕ್ಯ ಮತ್ತು ಎಷ್ಟು ದೊಡ್ಡ ಪರಿಣಾಮ? ಆದರೆ ಭೇಟಿಯಾಗಲೇಬೇಕಿತ್ತು. ನಾವಿಬ್ಬರೂ ಬೇರೆ ಘಟನೆಯಲ್ಲಿ!

* * * * *

ಸವಿನೋಟದೊಳ್ ಸಂಚು ನಗೆಯು ಪ್ರಪಂಚು
ಸೊಗಯಿಸುವ ಬೇಟದೊಳ ಕೃತಕ
ಒಲವಿನೊಳ್ ಕತಕಮುಂ
ಅನಿರುವ ಲಲ್ಲೆಯೊಳ್ ಕೊಂಕು
ಬಗೆಯೊಳ್ ಕಳಂಕು
ಸವಿಗಲೆಗಳೊಳ್ ಸಲೆವಂಚನೆ
(ಜೈಮಿನಿ ಭಾರತ 34– 6ನೆಯ ಸಂಧಿ)

## 1992
## ಡಿಸೆಂಬರ್
## 11

ಈ ಸಮಯದಲ್ಲಿ ನನಗೆ ಸಹಾಯ ಮಾಡಿದ್ದು ಯಕ್ಷಗಾನ. ಇದರಲ್ಲಿ ಕಮಾಯಿಯಿದೆ. ಕುಣಿದರೆ, ತಾಳಮದ್ದಲೆಯಲ್ಲಿ ಅರ್ಥ ಹೇಳಿದರೆ ದುಡ್ಡು ಸಿಗುತ್ತದೆ. ಇದಕ್ಕಾಗಿಯೇ ಕಾರ್ಯಕ್ರಮ ಒಪ್ಪಿಕೊಳ್ಳುತ್ತಿದ್ದೆ. ಒಂದು ವಾರ ನಿರಂತರ ಯಕ್ಷಗಾನ, ಹಗಲೂ ಸರಿಯಾಗಿ ನಿದ್ದೆಯಿಲ್ಲ. ಮೊನ್ನೆ ಕಾಸರಗೋಡು. ನಿನ್ನೆ ಕುಂಬಳೆ – ಹೀಗೆ ಕಾಸರಗೋಡು ಮತ್ತು ಕುಂಬ್ಳೆಯಲ್ಲಿ ದೇವಿ ಮಹಾತ್ಮೆ ಪ್ರಸಂಗ. ದೇವಿ ಮಹಾತ್ಮೆಯೆಂದರೆ ಕಲಾವಿದರು ಪುಡಿ ಪುಡಿಯಾದರು ಎಂದೇ ಅರ್ಥ. ದೇವೇಂದ್ರ: ದೇವಿ: ಮಹಿಷಾಸುರ: ರಕ್ತಾಬೀಜಾಸುರ – ಈ ನಾಲ್ಕು ಜನ ವೇಷಧಾರಿಗಳು ಬೇರೆ ವೇಷ ಮಾಡುವಂತಿಲ್ಲ. ಶುಂಭ – ನಿಶುಂಭರದು ಬಣ್ಣದ ವೇಷ. ಅವರು ಚುಟ್ಟಿ ಬಳಿಯಲು ರಾತ್ರಿ ಏಳೂವರೆಗೆ ಕೂತರೆ ಬೆಳಗಿನ ಜಾವ ನಾಲ್ಕು ಗಂಟೆಗೆ ಅವರ ಪ್ರವೇಶ. ಹೀಗಾಗಿ ಉಳಿದವರು ಎರಡೆರಡು ವೇಷ ಮಾಡದೆ ಗತ್ಯಂತರವಿಲ್ಲ. 'ಮಧು ಕೈಟಭ'ರ ವಧೆಯಲ್ಲಿ ನಾನು ವಿಷ್ಣು ಮಾಡಿ ಮತ್ತೆ ಚಂಡ – ಮುಂಡಾಸುರರಲ್ಲಿ ಒಂದು ವೇಷ ಮಾಡಲೇ ಬೇಕಿತ್ತು. ನಮ್ಮ ಚೌಕಿಯವರ ಮಾತಿನಲ್ಲಿ ಹೇಳಬೇಕೆಂದರೆ ಕುಂಡೆ ತುರಿಸಲು ಪುರುಸೊತ್ತಿಲ್ಲ. ವಿಷ್ಣುವಿನ ವೇಷ ಬಿಚ್ಚಿ ತಕ್ಷಣವೇ ಚಂಡಾಸುರನ ವೇಷ ಮಾಡಲು ಕೂರುತ್ತಿದ್ದೆ. ಚೌಕಿಯ ನಮ್ಮ ಗಡಿಬಿಡಿ – ಅವಸರವಂತೂ ದೇವರಿಗೇ ಪ್ರೀತಿ. ವೇಷ ಕಟ್ಟುವ ಗಂಗ ಮತ್ತು ಕೃಷ್ಣ ಮಣಿಯಾಣಿ ಇಬ್ಬರೂ ಸಾಕು ಸಾಕು ಎನ್ನುವಷ್ಟು ಆಯಾಸಗೊಳ್ಳುತ್ತಿದ್ದರು. ರಕ್ತ ಬೀಜಾಸುರನ ಪ್ರವೇಶವಾದರೆ ಮಾತ್ರ ಅವರಿಗೆ ಬೀಡಿ ಸೇದಲು ಪುರುಸೊತ್ತು. ಆಗ ನನ್ನ ಬ್ರಾಂಡ್ – ಗಣೇಶ ಬೀಡಿ. ಗಂಗ, 'ಧನಿ, ಒಂದು ಬೀಡಿ ಕೊಡಿ' ಎಂದು ಅಮರಿಕೊಳ್ಳುತ್ತಿದ್ದ. ಚಂಡಾಸುರನ ಮೇಕಪ್, ಡ್ರೆಸ್ ಆದ ಮೇಲೆ ಮಾತ್ರ ನಾನು ಗುಟುಕು ಸಕ್ಕರೆ ಹಾಕದ ಚಾ ಕುಡಿದು ಬೀಡಿ ಸೇದಿ ವೇಷ ಪ್ರವೇಶದ ತನಕ ಕಾಯುತ್ತಿದ್ದೆ. ನನ್ನ ಜೊತೆಗೆ ಮುಂಡಾಸುರನ ವೇಷ ಮಾಡುತ್ತಿದ್ದುದು ಯಾವಾಗಲೂ ನಾರಾಯಣ ಶೆಟ್ಟಿ. ಒಳ್ಳೆಯ ತಾಕತ್ತಿನ ವೇಷಧಾರಿ. ಧೀಂಗಿಣ ಹೊಡೆಯಲು ಶುರುಮಾಡಿದರೆ ಸಭಿಕರ ಸಿಳ್ಳೆ ಬೀಳಬೇಕು ಅಲ್ಲಿಯ ತನಕ ನಿಲ್ಲಿಸುವ ಜಾತಿಯಲ್ಲ. ಎಷ್ಟೋಸರ್ತಿ – ನಾನೇ ಕಣ್ಣ ಸನ್ನೆಯಲ್ಲಿ ಸಾಕು ಮಾರಾಯ ಅಂತಿದ್ದೆ. ಅದನ್ನು ರಂಗಸ್ಥಳದಲ್ಲಿ ಕಿವಿಗೊಡುವ ಮನಸ್ಸು ಅವನಿಗೆ ಇರುತ್ತಿರಲಿಲ್ಲ. ಬಣ್ಣ ತೆಗೆಯುವಾಗ ಕನ್ನಡಿಯೆದುರು ಕುಳಿತು – 'ಅದೇನೋ ಮಾರಾಯ ಒಳ್ಳೆ

ಮಂಗ ಲಾಗ ತೆಗ್ದ ಹಾಗೆ ತೆಗಿತಾನೇ ಇರ್ತಿಯಲ್ಲ' ಅಂತ ಅವನಿಗೆ ಕೇಳಿದರೆ, 'ಅದಕ್ಕೆ ತಾಕತ್ತು ಬೇಕು ಧನಿ. ನಿಮ್ಮ ಪುಳಿಚಾರಿಂದ ಬರುವುದಿಲ್ಲ. ವಾರಕ್ಕೆ ಎರಡು ಸರ್ತಿ ಕೋಳಿ ರೊಟ್ಟಿ ತಿನ್ನಿ. ಹೇಗೆ ಮೈ ಬರ್ತದೆ ನೋಡಿ." ಎನ್ನುತ್ತಿದ್ದ. 'ಅಯ್ಯೋ ಮಾರಾಯ. ಕೋಳಿಯೂ ಬೇಡ – ನಿನ್ನ ಮಂಗನ ಲಾಗವೂ ಬೇಡ' ಎಂದು ಹೇಳಿದ್ದೆ. ಅವನ ಸಮಸ್ಯೆಯೇನು ಎಂದರೆ ಎಷ್ಟು ಬೇಕಾದರೂ ಕುಣಿಯುತ್ತಾನೆ. ಮಾತು ಮಾತ್ರ ಇಲ್ಲ. ಅವನ ಮಾತನ್ನು ನಾನೇ ಹೇಳಬೇಕು. ಪುಟ್ಟಪ್ಪ ಭಾಗವತರು – ನಿನ್ನ ನಾಲಿಗೆಯನ್ನು ಮಾತ್ರ ರಂಗಸ್ಥಳದಲ್ಲಿ ಇಕ್ಕುಳ ಹಾಕಿ ತೆಗೆಯಬೇಕು ಎಂದು ಹೇಳುತ್ತಾ ನನ್ನನ್ನು ತೋರಿಸಿ – ಅವರು ಇರುವುದರಿಂದ ನೀನು ಬಚಾವ್ ಅಷ್ಟೆ ಎಂದು ಹೇಳುತ್ತಿದ್ದರು.

"ಕಂಬು ಕಂಠಿನಿ ನೀಯಾರೆ?"

ಎನ್ನುವ ಪದ ಬಂದರಂತೂ ಅವನು ಬೆರ್ಚಪ್ಪ. ನಾನೇ ಅಭಿನಯಿಸಬೇಕಾಗುತ್ತಿತ್ತು. ಹೀಗಾಗಿ ಕಾಸರಗೋಡು – ಕುಂಬಳೆ ಎರಡು ಕ್ಯಾಂಪ್‌ಗಳಲ್ಲಿ ಕುಣಿದವನು ಹಗಲಿಡೀ ಬೇಸಿಗೆಯ ಬಿಸಿಲಲ್ಲಿ ಜಮೀನಿನ ಕೆಲಸಕ್ಕೆಂದು ತಾಲೂಕು ಆಫೀಸಿಗೂ ಓಡಾಡಬೇಕಾಗಿಯೂ ಬಂದಿತ್ತು.

ಈ ತಾಲೂಕು ಆಫೀಸುಗಳಿಗೆ ತಬರ ಹೋದರೂ ಒಂದೇ – ನಾನು ಹೋದರೂ ಒಂದೇ. ಅವರ ಹಣೆಯಲ್ಲಿ ಅಶ್ವಮೇಧದ ಕುದುರೆಯ ಹಣೆಪಟ್ಟಿಯಲ್ಲಿ ಬರೆದಿಟ್ಟಂತೆ ಬರೆದು ಬಿಟ್ಟಿದ್ದಾರೆ: ಬಂದವರ ಸುಲಿದು ತಿಂಬುವುದು. ಅಲೆದಲೆದು ಬೆವರಿಳಿಸಿ ಬಂದವರ ಸೋಲಿಸಿ ದಾಖಲೆಯಂ ಕೊಡುವುದು. ಇತಿ ಶ್ರೀ" ಹೀಗಾಗಿ ಎರಡು ದಿನ ಅಲೆದು ಕೊನೆಗೂ ದಾಖಲೆಯನ್ನು ಪಡೆದುಕೊಂಡೆ, ಬೇರೆ ದಾರಿಯಿರಲಿಲ್ಲ –" "ಲಂಚ ತಿಂಬವರಿಗೆ ಲಂಚಮಂ ಕೊಟ್ಟು; ಪಡೆಯದಿದ್ದವರ ಕಾಲಂ ಕರ್ಚಿ" ಬರುವ ವೇಳೆಗೆ ಸಂಜೆ ಆರು ಗಂಟೆ ಅಲ್ಲಿಂದಲೇ ಕುಂಬಳೆಗೆ ಬಸ್‌ನಲ್ಲಿ ಕೊಂಚ ನಿದ್ದೆ ಮಾಡಿದ್ದು ಬಿಟ್ಟರೆ ಮತ್ತೆ ನಿದ್ದೆಯಿಲ್ಲ. ಕಣ್ಣಿನ ಉರಿಯೆಂದರೆ ಹೇಳುವುದು ಬೇಡ. ಆದರೂ ಮುಖಕ್ಕೆ ಎಣ್ಣೆಯ ಮತ್ತು ಬಣ್ಣ, ವಾಸನೆ ಅಂಟಿದರೆ ಬಿಡುವುದಿಲ್ಲ. ಕೈಗಳಿಗೂ ಅಷ್ಟೆ: ಎಣ್ಣೆಯ ಜಿಡ್ಡು ಹಿಡಿಯಿತು ಎಂದರೆ ಬಿಡುವುದು ಕಷ್ಟ. ಕುಂಬಳೆಯಲ್ಲಿ ಪೂರ್ತಿಯಾಗಿ ಶೆಟ್ಟಿಯದೇ ದರಬಾರು. ರಂಗಸ್ಥಳದಲ್ಲಿ ಕುಣಿದದ್ದೇ ಕುಣಿದದ್ದು. ನಾನು ದೇವಿಯನ್ನು ಕಂಡಾಗಿನ ಒಂದೆರಡು ಶೃಂಗಾರ ರಸಕ್ಕೆ ಅಭಿನಯಿಸಿ ಕಾಟಾಚಾರಕ್ಕೆ ಕೆಲಸ ಮುಗಿಸಿ ಚೌಕಿಗೆ ಹೋದೆ. ಬಟವಾಡೆಯ ಹೊತ್ತಿಗೆ ಆಟ ಆಡಿಸಿದವರು, 'ಏನು ಈವತ್ತು ಚಂಡಮುಂಡರು ಸಪ್ಪೆಯಾದರು' ಎಂದು ಹೇಳುತ್ತಾ ಕವರ್‌ನಲ್ಲಿ ದುಡ್ಡಿಟ್ಟರು.

ಈವತ್ತು ನಾನು ಒಪ್ಪಿಕೊಂಡ ಯಾವ ಆಟವೂ ಇಲ್ಲ. ಈ ವಾರದ ಖರ್ಚಿಗಂತೂ ತೊಂದರೆಯಿಲ್ಲ. ಎಂಟು ಯಕ್ಷಗಾನಕ್ಕೆ ಖರ್ಚು ಕಳೆದು ಕೈಯಲ್ಲಿ ಐದು ನೂರು ರೂಪಾಯಿ ಉಳಿದಿದೆ. ಇನ್ನು ನಾಲ್ಕು ದಿವಸ ಯಾವ ಯಕ್ಷಗಾನ ಒಪ್ಪಿಕೊಳ್ಳದಿದ್ದರೂ ನಡೆಯುತ್ತದೆ. ಜೆಸಿಂತಾಬಾಯಿ ರೂಮು ಕೊಟ್ಟಿದ್ದಾಳೆ. ಅವರ ಮಗ ಎಷ್ಟು ಹೊತ್ತಿಗೆ ಬರ್‍ತಾನೋ – ಹೋಗ್ತಾನೋ ಗೊತ್ತಿಲ್ಲ. ಜೆಸಿಂತಾಬಾಯಿ ಕಂಪೆನಿಗೆ ಇರಲಿ ಎಂದು ಮಗಳ ಮಕ್ಕಳಿಬ್ಬರನ್ನು ಕರೆದುಕೊಂಡು ಬಂದಿದ್ದಾಳೆ. ರೂಮು ಕೊಡುವಾಗಲೇ ಹೇಳಿದ್ದಳು – 'ಇದಕ್ಕೆ ಕರೆಂಟಿಲ್ಲ. ಮಂಚ ಹಾಕಿಸಿ ಕೊಡುತ್ತೇನೆ. ಬೇಕಾದಾಗ ಬರಬಹುದು. ಬಾವಿಯಿಂದ ನೀರೆತ್ತಿ ತೆಗೆದುಕೊಳ್ಳಬೇಕು.' ಎರಡು ಬೆಂಚುಗಳನ್ನು ಜೋಡಿಸಿಕೊಟ್ಟಿದ್ದಾಳೆ. ನನ್ನ ಮಟ್ಟಿಗೆ ಸಾಕೆಂದು 'ಸರಿ'ಯೆಂದು ಒಪ್ಪಿಕೊಂಡಿದ್ದೆ. ಮೂರು – ನಾಲ್ಕು ತಿಂಗಳು ಬಾಡಿಗೆ ಕೊಡದಿದ್ದರೂ ಒಂದಿನವೂ ಕೇಳಿದವಳಲ್ಲ. ತುಂಬಾ ಚಳಿಗಾಲದಲ್ಲಿ, ಅವಳೇ ಹಂಡೆಗೆ ನೀರು ತುಂಬಿ, ಬಿಸಿ ನೀರು ಕಾಯಿಸಿ ನೀವು ಸ್ನಾನ ಮಾಡಿ ಎಂದು ಹೇಳುತ್ತಿದ್ದಳು. ಮೀನು ಸಾರು ಮಾಡಿದ ದಿನ "ಸಮುದ್ರ ಬಾಳೆ ಕಾಯಿ ಸಾರಿದೆ ಬೇಕಾ?" ಎಂದು ಕೇಳುತ್ತಿದ್ದಳು. "ಬಾಳೆಕಾಯಿ ಸಾರು ಬೇಕು. ಅದಕ್ಕೆ ಸಮುದ್ರ ಬೇಡ" ಎನ್ನುತ್ತಿದ್ದೆ. ಕುಂಬಳೆಯಿಂದ ವೇಷ ಮುಗಿಸಿ, ತಾಲೂಕು ಆಫೀಸಿಗೆ ಹೋಗಿ ಸಂಜೆ ಬಂದೆ. ಆರೂವರೆ – ಏಳು ಗಂಟೆಯಿರಬಹುದು. ಯಾಕೆಂದರೆ ಬಿ.ಸಿ ರೋಡಿಂದ ಪೋಯಿಕ್ಕರನ ಬಸ್ಸು ಕಟ್ಟೆಗೆ ಬರುವುದೇ ಆರೂವರೆಗೆ. ಅಲ್ಲಿಂದ ರೂಮಿಗೆ ಇಪ್ಪತ್ತು ನಿಮಿಷ. ಬಂದವನೆ ತಣ್ಣೀರಲ್ಲಿ ಸ್ನಾನ ಮುಗಿಸಿ ಸ್ಟೌವಿರಿಸಿದೆ. ಗಂಜಿಯಿಟ್ಟೆ. ಮೇರಿಯಮ್ಮನ ಮೊಮ್ಮಗಳು ರೋಸಿಗೆ – 'ಇನ್ನು ಇಪ್ಪತ್ತು ನಿಮಿಷದಲ್ಲಿ ಅನ್ನ ಬೇಯಬಹುದು. ನನ್ನ ಎಬ್ಬಿಸು' ಎಂದು ಮಲಗಿದೆ. ರೋಸಿ ನನ್ನ ರೂಮಿನ ಎದುರು ಕುಳಿತು ತಲೆ ಬಾಚುತ್ತಾ; ಹೇನು ತೆಗೆಯುತ್ತಾ, ಅದನ್ನು ಹೆಬ್ಬೆರಳ ಉಗುರಲ್ಲಿ ಸಾಯಿಸುತ್ತಾ ಕೂತಿದ್ದಳು. ರೋಸಿಯೇ ಸ್ಟೌ ಆಫ್ ಮಾಡಿದಳು ಎಂದು ತೋರುತ್ತದೆ. ಎಂಟು ಗಂಟೆಯ ಹೊತ್ತಿಗೆ ಎಬ್ಬಿಸಿದಳು. ಬಿಸಿ ಬಿಸಿಯಾದ ಕುಚ್ಚಲಕ್ಕಿ ಗಂಜಿಗೆ ಉಪ್ಪು ಸೇರಿಸಿಕೊಂಡು ಊಟದ ಶಾಸ್ತ್ರ ಮುಗಿಸಿ – ಮತ್ತೆ ಮಲಗಿದೆ. ಗಾಢ ನಿದ್ದೆ: "ಇತ್ತಲು ಹತ್ತಿತು ಕರ್ಣಾರ್ಜುನರಿಗೆ ಕಾಳಗ – ಇಳೆ ಬಾಯ್ಬಿಡಲೀ ತೆರದಿ ಮೂದಲಿಸುತ್ತಲೇ ಮಾತಾಡಿದಾರಾಗಳ್" ಭಾಗವತರು ಹಾಡು ಮುಗಿಸಿದ್ದಾರೆ. ಕರ್ಣನಾಗಿ ನಾನು ರಂಗಸ್ಥಳದಲ್ಲಿದ್ದೇನೆ. ಏನೂ ಮಾಡಿದರೂ ಮಾತು ಬರುತ್ತಿಲ್ಲ. ಮೌನಿಯಾಗಿದ್ದೇನೆ. ಮುಖದಲ್ಲಿ ಬೆವರು ಕೋಡಿ ಹರಿಯುತ್ತಿದೆ. ಅನಾಥನಾದ ಕರ್ಣ – ಅರ್ಜುನನ ಮೂದಲಿಕೆಯ ಮಾತುಗಳಿಗೆ; ಅವಮಾನಕ್ಕೆ; ಹೀಗಳಿಕೆಗೆ ಏನೂ ಮಾತಾಡದೆ ಮೂಕವಾಗಿದ್ದಾನೆ. ಭಾಗವತರು ಸಿಟ್ಟಿನಿಂದ ಕಾಲಿಗೆ ಜಾಗಟೆಯ ಕೋಲಿಂದ ಹೊಡೆಯುತ್ತಿದ್ದಾರೆ. ಚೆಂಡೆಯವರು ಚೆಂಡೆಯ ಕೋಲಿಂದ

ಬಾರಿಸುತ್ತಿದ್ದಾರೆ. ಹೆದರಿ ಮೈಯಿಡೀ ಚಳಿಹಿಡಿದಂತಾಗಿದೆ." ಪಟ್ಟನೆ ಎಚ್ಚರವಾಯಿತು. 'ಎಲ್ಲಿಗೆ ತಲುಪಿತು? ಯಾವ ಪದ್ಯ?' ಎಂದು ಕೇಳಿದೆ. ರೋಸಿ ಪಕ ಪಕನೆ ನಗಾಡಿ – ಯಾರೋ ಕರೆಯುತ್ತಿದ್ದಾರೆ ಎಂದಳು. ಗಾಬರಿಯಾಗಿ ಎದ್ದು ಕುಳಿತೆ. ಕಣ್ಣು ತಿಕ್ಕಿದೆ. ಕಣ್ಣಿನಲ್ಲಿ ಅಗ್ಗಿಷ್ಟಿಕೆಯ ಉರಿ. ನನ್ನ ರೂಮಿಂದ ಹೊರಗೆ ನಿಂತವರು ಕತ್ತಲೆಯಲ್ಲಿಯೇ, 'ನಮಸ್ಕಾರ' ಎಂದರು. ಎದ್ದು ನಿಂತು ಲುಂಗಿಯನ್ನು ಸರಿಯಾಗಿ ಸೊಂಟಕ್ಕೆ ಸುತ್ತಿಕೊಂಡೆ. ಬೆಂಕಿ ಕಡ್ಡಿ ಗೀಚಿ ಮೇಣದ ಬತ್ತಿ ಉರಿಸಿ. ಅದಕ್ಕೆ ಬೀಡಿಯನ್ನು ಹಿಡಿದೆ. ಬಂದವರು ರೂಮಿನೊಳಗೆ ಬಂದರು. "ಯಾರೂಂತ ಗೊತ್ತಾಗಲಿಲ್ಲ." ಅಂದೆ. "ಬಿ.ಸಿ ರೋಡಿನಲ್ಲಿ ಈವತ್ತು ಆಟ ನೀವು ಬರಲೇಬೇಕಂತೆ ಕರಕೊಂಡು ಬಾ ಅಂತ ಬೈಕು ಕೊಟ್ಟು ಕಳಿಸಿದ್ದಾರೆ." ಬಂದವರು ಹೇಳಿದರು. ನಾನು ಮುಖಕ್ಕೆ ನೀರು ಹಾಕಿಕೊಂಡು ಬಂದು, "ಯಾರು ಹೇಳಿಕಳಿಸಿದರು ಅಂತ ಬೇಕಲ್ಲಾ? ಸುಮ್ಮನೆ ಬನ್ನಿ ಎಂದರೆ ಹೇಗೆ? ಅದೂ ಈಗ ಎಂಟೂವರೆ ದಾಟಿರಬಹುದು. ಈವತ್ತು ಎಷ್ಟು ನಿದ್ದೆ ಬರುತ್ತಿದೆಯೆಂದರೆ ರಂಗಸ್ಥಳದಲ್ಲಿ ಕಾಲೂರಲು ಕೂಡಾ ಸಾಧ್ಯವಿಲ್ಲ. ಪ್ರಸಂಗ ಯಾವುದು? ರಾತ್ರಿಯಿಡೀ ನಿದ್ದೆ ಗೆಟ್ಟು ಮರುದಿನ ಉಚ್ಚೆ ಕೆಂಪು ಮಾಡಿಕೊಳ್ಳುವವರ ಕಷ್ಟ ನಿಮಗೇನು ಗೊತ್ತು? ವೇಷ ಬಿಚ್ಚಿ ಹೊರಡುವಾಗ ವೇಷ ಭಾರೀ ಚೆನ್ನಾಗಿತ್ತು. ಬರ್ತಿರಾ ಹಾಗಾದ್ರೆ – ನಮಸ್ಕಾರ' ಅಂತೀರಿ. ಈವತ್ತಂತೂ ಸಾಧ್ಯವೇ ಇಲ್ಲ. ವೇಷಕ್ಕೆ ಜನ ಇಲ್ಲಾಂತ ನನ್ನತ್ರ ಬಂದಿದ್ದೀರಿ. ಹೋಗಿ ಯಾರ ಹತ್ತಿರವಾದರೂ ಮಾಡಿಸಿಕೊಳ್ಳಿ." ಎಂದು ಸಿಡುಕಿ ಬೀಡಿಯನ್ನು ಕಾಲಿನ ಹೆಬ್ಬೆರಳಲ್ಲಿ ಹೊಸಕಿ ಹಾಕಿದೆ. ಬಂದವರ ಮುಖ ಸಣ್ಣಗಾಯಿತು. ಬಂದವರು, 'ಇಲ್ಲಾ – ಹಾಗಲ್ಲ. ನೀವು ತಪ್ಪು ಅರ್ಥ ಮಾಡಿಕೊಂಡಿದ್ದೀರಿ. ನಮಗೆ ನೀವು ಸಿಗ್ತೀರೋ ಇಲ್ಲವೋ ಅಂತ ಗೊತ್ತಿರಲಿಲ್ಲ. ವೇಷ ಕಟ್ಟುವ ಗಂಗಣ್ಣ ಹೇಳಿದ. ಅದೂ ಅಲ್ಲದೆ – ನಿಮ್ಮ ಗುರುಗಳು ಬಂದಿದ್ದಾರೆ. ನಾನು ಹೇಳಿದ್ದೇನೆ ಅಂತ ಹೇಳಿ: ಬಂದೇ ಬರ್ತಾರೆ ಅಂದಿದ್ದಾರೆ. ಅದೂ ಅಲ್ಲದೆ – ಇದು ಹರಕೆಯಾಟ. ಗೃಹಪ್ರವೇಶಕ್ಕೆ ಆಟ ಆಡಿಸ್ತೇವೆ ಅಂತ ಮನೆ ಕಟ್ಟಿಸಿದವರು ಹರಕೆ ಹೇಳಿಕೊಂಡಿದ್ದಾರೆ. ನೀವು ಬಾರದೆ ಇದ್ದರೆ ಮರ್ಯಾದೆ ಹೋಗ್ತದೆ." ಎಂದು ಕೈಮುಗಿದರು. ಗುರುಗಳ ಹೆಸರು ಹೇಳಿದ ಕೂಡಲೇ ನಿದ್ದೆಯ ಮಂಪರು ಇಳಿಯಿತು. ಕಾಲಿಗೆ ಗೆಜ್ಜೆ ಕಟ್ಟಿ. ಚೌಕಿಯಲ್ಲಿ ದೇವರಿಗೆ ನಮಸ್ಕರಿಸಿ, ಗುರುಗಳಿಗೂ ನಮಸ್ಕರಿಸಿ ರಂಗಸ್ಥಳ ಪ್ರವೇಶ ಮಾಡಿದ್ದೆ. ವೇಷ ಮುಗಿಸಿ ಮತ್ತೆ ಒಳ ಬಂದಾಗ ಸ್ವತಃ ಗುರುಗಳೇ ನನ್ನ ಕಾಲಿನ ಗೆಜ್ಜೆ ಬಿಚ್ಚಿ ಅದಕ್ಕೆ ನಮಸ್ಕರಿಸಿ ನನ್ನ ಕೈಗೆ ಕೊಟ್ಟಿದ್ದರು. 'ಕಾಲಿನ ಗೆಜ್ಜೆ ರಂಗಸ್ಥಳದಲ್ಲಿ ಬೀಳದ ಹಾಗೆ ನೋಡಿಕೋ. ಆದರೆ ಬಳ್ಳಿಯನ್ನು ಯಾವಾಗಲೂ ನಮಸ್ಕರಿಸಿದ ಮೇಲೆಯೇ ಕಟ್ಟಬೇಕು. ತಿಳಿಯಿತಾ? ರಂಗಸ್ಥಳದಲ್ಲಿ ಯಾವಾಗಲೂ ಗೆಜ್ಜೆ ಬೀಳದ ಹಾಗೆ

ನೋಡಿಕೋ." ಗುರುವನ್ನು ನೆನಪಿಸಿಕೊಂಡೆ. ಗುರುವಿನೊಂದಿಗಿನ ವೇಷವೆಂದರೆ ಅದೊಂದು ಥರ ಖುಶಿ. ಅವರು ಚೌಕಿಯಲ್ಲಿ ನನ್ನನ್ನು ಮಗನಂತೆ ನ್ನೋಡಿಕೊಳ್ಳುತ್ತಾರೆ. ಹಣೆಯ ತಿಲಕ ಸ್ವಲ್ಪ ಓರೆಯಾದರೆ ಸರಿಪಡಿಸುತ್ತಾರೆ – ವೇಷ ಕಟ್ಟಿದ ಮೇಲೆ ನಿಲ್ಲಲು ಹೇಳಿ – ಚೌಕಿಯ ಮೂಲೆಗೆ ಹೋಗಿ ವೇಷದ ಆಯ ನೋಡಿ 'ಹೋಗಿ' ಎಂದು ಹೇಳುತ್ತಾರೆ. ಸೊಂಟ ಪಟ್ಟಿಯ ಬಳ್ಳಿ ಕಂಡರೂ ಬಂದು ಸರಿಪಡಿಸುತ್ತಾರೆ. ಅವರಿಗೆ ನಮಸ್ಕರಿಸಿದರೆ ಆಶೀರ್ವದಿಸಿ ನನ್ನ ರಂಗಸ್ಥಳ ಪ್ರವೇಶದ ತನಕ ನೋಡುತ್ತಾರೆ. 'ತಡೀರಿ ಪ್ಯಾಂಟು ಹಾಕಿಕೊಂಡು ಬರ್ತೇನೆ.' ಎಂದೆ. "ಬೇಡ ಹೇಗೂ ಕತ್ತಲೆಯಾಗಿದೆ. ಹಾಗೆಯೇ ಲುಂಗಿಯಲ್ಲಿ ಬನ್ನಿ" ಎಂದರು. ಶರ್ಟು ಬದಲಾಯಿಸಲೂ ಬಿಡಲಿಲ್ಲ. ಕತ್ತಲೆಯಲ್ಲಿ ಯಾರು ನೋಡ್ತಾರೆ? ಬೆಳಿಗ್ಗೆ ಏಳು ಗಂಟೆಯ ಒಳಗೆ ನಾನು ರೂಮಿಗೆ ಬಂದಿರ್ತೇನೆ ಎಂದುಕೊಂಡು ಹಾಗೆಯೇ ಹೊರಟೆ. ಕಂದು ಬಣ್ಣದ ಟೀ ಶರ್ಟು ಏರಿಸಿದೆ. ಕಂಕುಳಡಿಯಲ್ಲಿ ಅದು ಹರಿದು ಹೋಗಿತ್ತು. ಅವರ ಬೈಕೇರಿ ಕುಳಿತೆ. ಕತ್ತಲೆಯೆಂದರೆ – ಕಾರ್ಗತ್ತಲು. ಒಳರೋಡಿನಲ್ಲಿ ಹೋಗುತ್ತಿದ್ದುದರಿಂದ ಎದುರು – ಹಿಂದೆ ಯಾವುದೇ ವಾಹನಗಳಿಲ್ಲ. ಬೈಕ್ ಓಡಿಸುವವರಿಗೆ ರಸ್ತೆಯ ಮೇಲೆಯೇ ಗಮನ. ಅದಕ್ಕಿಂತ ಹೆಚ್ಚು – ಸಮಯಕ್ಕೆ ಸರಿಯಾಗಿ ನನ್ನನ್ನು ತಲುಪಿಸಬೇಕೆಂದು ಹಟ. ದಾರಿಯಲ್ಲಿ ಹೆಚ್ಚು ಮಾತಾಡುವ ಉತ್ಸಾಹ ಅವರಿಗೆ ಇದ್ದಂತಿರಲಿಲ್ಲ. ನಾನು ಕೇಳಿದೆ "ಈವತ್ತು ಯಾವ ಪ್ರಸಂಗ?"

"ಯಾವುದೂಂತ ಗೊತ್ತಿಲ್ಲಾ. ನೀವು ವೇಷ ಚೆನ್ನಾಗಿ ಮಾಡ್ತೀರಂತೆ ಗಂಗಣ್ಣ ಹೇಳ್ತಿದ್ದ?

"ಬಿ.ಸಿ. ರೋಡಲ್ಲಿ ಎಲ್ಲಿ ಆಟ?

"ಅಯ್ಯೋ ಬಿ.ಸಿ. ರೋಡಿನ ಹತ್ತಿರ – ಮೂರು ಮೈಲು ಒಳಗೆ. ನಾನು ಕರೆಕ್ಟಾಗಿ ನಿಮ್ಮನ್ನು ತಲುಪಿಸುತ್ತೇನೆ – ಆಯ್ತಾ?"

ಈ ಮನುಷ್ಯನ ಹತ್ತಿರ ಹೆಚ್ಚು ಮಾತಾಡಿ ಪ್ರಯೋಜನವಿಲ್ಲವೆಂದು ಸುಮ್ಮನೆ ಕುಳಿತೆ. ಆ ಮನುಷ್ಯ ಬೈಕನ್ನು ಬಿ.ಸಿ. ರೋಡಿನ ಹತ್ತಿರ ಬಂದಾಗ ಒಳರೋಡಲ್ಲಿ ತಿರುಗಿಸಿದ. ದೂರದಿಂದ ಲೈಟುಗಳು ಕಾಣಿಸಿದವು. ಯಕ್ಷಗಾನ ನಡೆಯುವ ಸ್ಥಳ ಹತ್ತಿರ ಬಂತು ಅಂತ ಭಾವಿಸಿಕೊಂಡೆ. 'ಇನ್ನು ಕೆಲವೇ ಕ್ಷಣದಲ್ಲಿ ಯಕ್ಷಗಾನ ಕಾರ್ಯಕ್ರಮ ನಡೆಯಲಿದೆ. ಈ ಯಕ್ಷಗಾನವನ್ನು ನೋಡಿ ಸಭಿಕರು ಶ್ರೀ ದೇವಿಯ ಕೃಪೆಗೆ ಪಾತ್ರರಾಗಬೇಕೆಂದು ಗ್ರಾಮಸ್ಥರ ಪರವಾಗಿ ಹೊಸಮನೆಯೊಕ್ಕಲು ಮಾಡಿದವರ ಪರವಾಗಿ ವಿನಂತಿಸುತ್ತೇನೆ,' ಎಂದು ಮೈಕಲ್ಲಿ ಹೇಳುವುದು ಕೇಳಿಸಿತು.

ಗೃಹಪ್ರವೇಶವಾದುದರಿಂದ ಯಾವುದಾದರೂ 'ಅಶ್ವಮೇಧ' 'ಕಲ್ಯಾಣ' ಪ್ರಸಂಗವೇ ಇರುತ್ತವೆಯೆಂದು ನನಗೆ ಮನದಟ್ಟಾಯಿತು. ಯಾವುದಾದರೆ ನನಗೇನು ಅಂತಲೂ ಅನಿಸಿತು. ಇಂಥ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಜನರು 'ಜಯದ ಪ್ರಸಂಗ'ಗಳೆಂದು ಹೆಸರು ಪಡೆದ ಅಶ್ವಮೇಧ ಪ್ರಸಂಗಗಳನ್ನು ಮಾಡಿಸುತ್ತಾರೆ. ಒಂದೋ 'ರಾಮಾಶ್ವಮೇಧ' ತಪ್ಪಿದರೆ 'ಪಾಂಡವಾಶ್ವಮೇಧ' ಪಾಂಡವಾಶ್ವಮೇಧವಾದರೆ ಪ್ರಮೀಳೆ, ಬಭ್ರುವಾಹನ, ತಾಮ್ರಧ್ವಜ, ವೀರವರ್ಮ ಕಾಳಗ ಪ್ರಮೀಳೆಯನ್ನು ಬಿಟ್ಟರೆ ಸುಧನ್ವ ಕಾಳಗ ಸೇರಿಸಬಹುದು. ಈ ಪ್ರಸಂಗವಾದರೆ ಒಂದೋ ನಾನು ಸುಧನ್ವ ತಪ್ಪಿದರೆ ಬಭ್ರುವಾಹನ ಮಾಡಬೇಕಾಗಬಹುದು. ಮಾಡಿದರೂ ಅನಂತರ ವೇಷ ಬಿಚ್ಚಿ ನಿದ್ದೆ ಹೊಡೆಯಲು ಅಡ್ಡಿಯಿಲ್ಲ ಎಂದು ಯೋಚಿಸಿದೆ. "ಜಗಮಗಿಸುವ ಭವ್ಯರಂಗ ಮಂಟಪದಲ್ಲಿ ಒಂದೇ ಒಂದು ಆಟ. ನೋಡಲು ಮರೆಯದಿರಿ" – ಬಾಲ್ಯದಲ್ಲಿ ಮೈಕಿನ ಈ ಪ್ರಚಾರಕ್ಕೆ ನಾನು ಮಾರು ಹೋಗಿದ್ದೆ. ಬಯಲಾಟದ ಕರಪತ್ರವನ್ನು ನೋಡಿ ಖುಶಿಪಡುತ್ತಿದ್ದೆ. ರಾತ್ರಿಯಾಗಲು ತುದಿಗಾಲ ಮೇಲೆ ನಿಂತಿರುತ್ತಿದ್ದೆ – ನಾನು ಎಷ್ಟು ತುದಿಗಾಲ ಮೇಲೆ ನಿಂತರೂ ರಾತ್ರಿಯೆನ್ನುವುದು ಅದರ ಸಮಯಕ್ಕೆ ಬರುತ್ತಿತ್ತು. ಅದನ್ನು ನೆನಪಿಸಿಕೊಂಡು ಕೊಂಚ ನಗು ಬಂತು. ಈ ಯೋಚನೆಯಲ್ಲಿರುವಾಗಲೇ – ಬೈಕ್ ಓಡಿಸುತ್ತಿದ್ದ ಪುಣ್ಯಾತ್ಮ ನೇರವಾಗಿ ಚೌಕಿಯ ಹತ್ತಿರವೇ ನನ್ನನ್ನು ಬಿಟ್ಟ. ತನ್ನ ಕೆಲಸವಾಯಿತು ಎಂಬಂತೆ – "ಆಯ್ತು, ನಾನು ಆಮೇಲೆ ಸಿಗ್ತೇನೆ. ತುಂಬಾ ಜಂಬರವಿದೆ" ಎಂದು ಹೊರಟೇ ಬಿಟ್ಟರು. ಅವರು ಯಕ್ಷಗಾನದಲ್ಲಿ ಆಸಕ್ತಿಯುಳ್ಳವರಂತೆ ಕಾಣಿಸಲಿಲ್ಲ. ಊರಿನ ಕಾರುಭಾರಿನವರಿರಬೇಕು. ಯಾಕೆಂದರೆ ಬೈಕಿಂದ ಇಳಿದವರು ಹೆಗಲ ಮೇಲಿನ ಟರ್ಕಿ ಶಾಲನ್ನು ಹಾಕಿಕೊಂಡ ಗತ್ತೇ ಬೇರೆಯಿತ್ತು. ಅಲ್ಲಿಂದಲೇ, 'ಹೌದನಾ ಯಾರಿದ್ದೀರಿ? ಈ ವೇಷ ಹಾಕುವವರಿಗೆಲ್ಲಾ ಊಟ ಆಯ್ತಾ ಅಂತ ನೋಡಿ' ಎಂದು ಸ್ವರವೇರಿಸುತ್ತಲೇ ಹೊರಟು ಹೋಗಿದ್ದರು. ಮೆಲ್ಲಗೆ ಚೌಕಿಯೊಳಗೆ ನುಗ್ಗಿದೆ. "ಓ ಧನಿಗಳು ಬಂದ್ರಾ? ನಮಸ್ಕಾರ" ಎಂದು ಗಂಗಣ್ಣ ಹೇಳಿದ. ನಾನು ನಗಾಡಿದೆ. 'ಅಲ್ವೋ ಗಂಗ ನಿನಗೇನು ಸಿಟ್ಟೋ ಮಾರಾಯ? ಈವತ್ತು ಒಳ್ಳೆ ನಿದ್ದೆ ಮಾಡಬೇಕು ಅಂತಿದ್ದೆ" ಎಂದು ಹೇಳಿದೆ. ಗಂಗ ವೇಷಭೂಷಣಗಳನ್ನು ತುಂಬಿಡುವ ಟ್ರಂಕಿನಿಂದ ಎದ್ದು ಬೀಡಿಯಾರಿಸಿ, 'ನಿಮಗೇನು ಮದುವೆಯಾ ಮಕ್ಕಳಾ – ರಾತ್ರಿ ಜಟಕಾ ಓಡಿಸುವುದಕ್ಕೆ? ಇಲ್ಲೇ ಕುಣಿದು – ಮಲಗಿದರೆ ಆಯ್ತಪ್ಪ" ಎಂದ. ನಾನು: 'ನಿನಗೆ ಜಟಕಾ ಓಡಿಸಿ ಮುಗಿದಿದೆ ಅಂತ ಕಾಣುತ್ತದೆ. ಅದಕ್ಕೆ ರಾತ್ರಿ ಹೊರಟುಬಂದೆ. ಹಗಲು ಜಟಕಾ ಓಡಿಸು. ರಾತ್ರೆಯಲ್ಲಿ ನಮ್ಮ ಪ್ರಾಣ ತಿನ್ನು' ಎಂದೆ.

ಗಂಗ: 'ಇಲ್ಲ ಧನಿಗಳೆ ಜಟಕಾ ಓಡಿಸಬೇಕು ಅಂತ ಕುಂಬ್ಳೆ ಕ್ಯಾಂಪ್ ಮುಗಿಸಿ ಮನೆಗೆ ಹೋದೆ. ಅಲ್ಲಿ ಅವಳು ನಾನು ಮುಟ್ಟು; ಅಡುಗೆ ಸಹಿತ ಮಾಡುವ ಹಾಗಿಲ್ಲ ಅಂದಳು. ಇನ್ನು ಹೇಗೂ ನಾಕು ದಿವಸ ಉಪವಾಸ. ಅದಕ್ಕೆ ಬಂದೆ.'

ಅವನ ಮಾತನ್ನು ಮುಗಿಸುವಷ್ಟರಲ್ಲಿಯೇ ನಾರಾಯಣ ಶೆಟ್ಟಿ ಬಂದ. 'ಈ ಗಂಗನಿಗೆ ಯಾವಾಗ ನೋಡಿದರೂ ಅದೇ ಸುದ್ದಿ. ಜಟಕಾ – ಜಟಕಾ. ಅಷ್ಟು ಅರ್ಜೆಂಟಿದ್ದರೆ... ಹತ್ರ ಹೋದರೆ ಆಯ್ತಪ್ಪ. ಯಾವ ಜಾತಿಯ ಕುದುರೆಗಳು ಬೇಕಾದರೂ ಸಿಗ್ತವೆ." ಅಂದ.

ಚೌಕಿಯಲ್ಲಿ ದೇವರ ಕಿರೀಟದ ಹತ್ರ ಮುಖಕ್ಕೆ ಚುಟ್ಟಿ ಅಂಟಿಸುತ್ತಾ ಕುಳಿತಿದ್ದ ಬಣ್ಣದ ವೇಷಧಾರಿ ವಾಟೆ ವೆಂಕಟ್ರಮಣ 'ಓಯ್ – ನಮಸ್ಕಾರ' ಎಂದರು. ಅಲ್ಲಿಗೆ ಬಂದ ಭಾಗವತ ಗಣೇಶ ಭಟ್ಟ ಉಪ್ಪಾರು – 'ಸದ್ಯ ಬಂದ್ರಲ್ಲ. ಮರ್ಯಾದೆ ಉಳಿಯಿತು. ಅಂದರು. "ಬನ್ನಿ – ವೇಷದ ಪಟ್ಟಿಯನ್ನು ದೇವರೆದುರು ಇಟ್ಟಿದ್ದೇನೆ. ನೀವು ಬರದಿದ್ದರೆ ಏನು ಮಾಡುವುದು ಅಂತ ಎರಡು ವೇಷ ಹೆಸರು ಹಾಗೆಯೇ ಉಳಿಸಿದ್ದೇನೆ. ಆಟ ಆಡಿಸುವವರು ನೀವು ಬಂದರೆ 'ಪ್ರಮೀಳೆ – ಸುಧನ್ವ – ತಾಮ್ರಧ್ವಜ – ವೀರವರ್ಮ ಕಾಳಗ' ಇಲ್ಲವಾದರೆ ಪ್ರಮೀಳೆ – ಬಬ್ರುವಾಹನ – ತಾಮ್ರಧ್ವಜ – ವೀರವರ್ಮ ಕಾಳಗ' ಅಂದಿದ್ದರು. ಈಗ ಅವರು ಏನು ಹೇಳುತ್ತಾರೆ ಅಂತ ಕೇಳಿಕೊಂಡು ಬರ್ತೇನೆ." ಎಂದು ಹೊರಟರು. ನನ್ನ ಗುರುಗಳು ಚೌಕಿಯಲ್ಲಿ ಕಾಣಿಸಲಿಲ್ಲ. ಸುಮ್ಮನೆ ಚೌಕಿಯಿಂದ ಹೊರಗೆ ಹೋಗಿ ಬೀಡಿ ಸೇದುತ್ತಾ ನಿಂತೆ. ಚೌಕಿಯ ಒಳಗಿಂದ, 'ನಿಶಿತಣ್ಣ ಬರಬೇಕಂತೆ' ಎಂದು ದೊಡ್ಡದಾಗಿ ಹೇಳುವುದು ಕೇಳಿಸಿತು. ಚೌಕಿಯ ಒಳಗೆ ನುಗ್ಗಿದೆ. ನನ್ನ ಗುರು – ನಾಯಕರು, 'ಓ ಬಂದ್ರಾ – ನನ್ನ ಶಿಷ್ಯರೆಂದರೆ ಹೀಗೆ' ಎಂದರು. ಅವರೂ ಭಾಗವತರು ಮಾತಾಡಿಕೊಳ್ಳುತ್ತಾ ಇದ್ದರು. 'ನಿಶಿತಣ್ಣ ನಿಮ್ಮದು ಈವತ್ತು ಸುಧನ್ವ' ಎಂದು ಭಾಗವತರು ಹೇಳಿದರು. ವೇಷಕ್ಕೆ ಕುಳಿತುಕೊಳ್ಳಲು ಪುರಸೊತ್ತು ಇದೆ. ಪ್ರಮೀಳೆ ಹೇಗೂ ಮೊದಲೇ ನಿರ್ಧರಿತವಾದ ಪಾತ್ರವಾದುದರಿಂದ ಪ್ರಮೀಳೆಯ ವೇಷಧಾರಿ ಸುಬ್ಬಣ್ಣ ಮೇಕಪ್ ಮಾಡುತ್ತಾ ಕುಳಿತಿದ್ದ. ಭಾಗವತರು – "ಮುಖಕ್ಕೆ ರಂಗೋಲಿ ಬರೆದದ್ದು ಸಾಕು. ಅದನ್ನೆಲ್ಲಾ ಯಾರು ನೋಡ್ತಾರೆ. ಬೇಗ ರೆಡಿಯಾಗಿ" ಎಂದಾಗ ಕನ್ನಡಿಯ ಎದುರಿಂದ ಎದ್ದು ಮೊಲೆ ಕಟ್ಟು ಕಟ್ಟತೊಡಗಿದ.

ಭಾಗವತರು: "ಈಶಣ್ಣನದು ಪ್ರಭಾವತಿ."

ನನಗೂ – ಈಶನಿಗೂ ರಂಗಸ್ಥಳದಲ್ಲಿ ಜೋಡಿ ಸರಿಯಾಗುತ್ತದೆ. ಭಾಗವತರಿಗೆ 'ಅಡ್ಡಿಯಿಲ್ಲ' ಅಂತ ಹೇಳಿ ಗಂಗ ಸತ್ಯ ಮಾತಾಡಲು ತಿರುಗಿ

ನಿಂತಿದ್ದೆ. ಹೈಸ್ಕೂಲ್ ಓದುವ ಹುಡುಗನೊಬ್ಬ ಬಂದು ಗಂಗನತ್ರ 'ಇಲ್ಲಿ ನಿಶಿತಣ್ಣ ಎಂದರೆ ಯಾರು? ಎಂದು ಕೇಳಿದ. 'ನಾನೇ ನಿಶಿತಣ್ಣ ಯಾಕೋ?' ಅಂದೆ. ಅವನು 'ನೀವು ಬರ್ಬೇಕಂತೆ' ಅಂತ ಹೇಳಿದ.

"ಯಾರು ಹೇಳಿದರು?"

"ಅಕ್ಕ ಹೇಳಿ ಕಳಿಸಿದರು" ಅಂದ.

'ಗಂಗ, ಧನಿಗಳೇ ನಿಮ್ಮದು ಈವತ್ತು ಸುಧನ್ವ, ಕುದುರೆಯನ್ನು ಕಟ್ಟಲು ಹೋಗಬೇಡಿ. ಬೇಗ ಬನ್ನಿ, ಏನಿದ್ದರೂ ಕುದುರೆ ಸಾವಾಸ ವೇಷ ಮುಗಿದ ಮೇಲೆ. ಚೌಕಿಯ ಹಿಂದೆ ಕತ್ತಲೆಯಿದೆ.' ಎಂದು ಪೋಲಿ ಮಾತಾಡುತ್ತಾ ಕಣ್ಣು ಹೊಡೆದ. 'ನೀನು ನಿನ್ನ ಕೆಲಸ ನೋಡು. ಕುದುರೆಯನ್ನು ಕಟ್ಟುವುದು, ಬಿಡುವುದು ನಾನು ನೋಡಿಕೊಳ್ತೇನೆ. 'ಬಲುಹುಳ್ಳವರು ಕಟ್ಟಿ ಕಾದುವುದು' ಪದ್ಯ ಬಂದಾಗ ನೋಡಿದರಾಯಿತು. ಭಾಗವತರು ಹಾಡು ಹೇಳಿದ ಹಾಗೆ ನಾವು ಕುಣಿಯುವುದು. ಅಷ್ಟತಾಳವಾದರೆ ಅಷ್ಟತಾಳ ಗೊತ್ತಾಯ್ತಾ?" ಎಂದು ಹುಡುಗನನ್ನು ಹಿಂಬಾಲಿಸಿದೆ. ಆ ಹುಡುಗ ಮನೆಯೊಳಗೆ ಕರೆದುಕೊಂಡು ಹೋದ. ಹೊಸಮನೆಯ ಸಂಭ್ರಮ. ಹೆಂಗಸರು ಮಿರಿ ಮಿರಿ ಸೀರೆಯನ್ನುಟ್ಟುಕೊಂಡು ಓಡಾಡುತ್ತಿದ್ದರು. ನಾನು ಮನೆಯ ಮೆಟ್ಟಿಲೇರಿ – ಒಳಗೆ ಕಾಲಿಟ್ಟ ಕೂಡಲೇ ಎಲ್ಲಿದ್ದಳೋ ಏನೋ ಶಾಂಭವಿ ಓಡಿಬಂದು ನನ್ನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು, 'ಬಾರೋ ಮಾರಾಯಾ. ನೀನು ವೇಷಕ್ಕೆ ಬರ್ಲೇ ಬೇಕೂಂತ ನಾನೇ ಹೇಳಿಕಳಿಸಿದ್ದು. ನಿನ್ನನ್ನು ಕರಕೊಂಡು ಬಾರದಿದ್ರೆ ನಾನು ಮಲಗಿಕೊಂಡು ಬಿಡ್ತೇನೆ" ಎಂದಿದ್ದೆ." ಅಂದಳು. ನನಗೆ ಒಂಥರ ಶಾಕ್, "ಅಲ್ಲಾ ಶಾಂಭವಿ, ನೀನ್ಯಾಕೆ ಮಾರಾಯ್ತಿ ಇಲ್ಲಿ?"

'ಅದು ಆಮೇಲೆ ಹೇಳ್ತೇನೆ. ಬಾ ಒಳಗೆ ಊಟ ಮಾಡು'

'ಇಲ್ಲ ಊಟವಾಗಿದೆ'

'ನೀನ್ಯಾಕೆ ಇಲ್ಲಿ ಹೇಳು'

'ಹೋಗಲಿ ಹೆಸರುಬೇಳೆ ಪಾಯಸ ಕುಡಿ'

ಎಂದು ನನ್ನನ್ನು ದರದರನೆ ಅಡುಗೆಯ ಮನೆಯತ್ರ ಕರಕೊಂಡು ಹೋಗಿ ಹೆಸರು ಬೇಳೆ ಪಾಯಸ; ಹೋಳಿಗೆ ಕೊಟ್ಟಳು. ಬೇಕು – ಬೇಕೂಂತಲೆ ಯಾವುದೋ ವಿಷಯವನ್ನು ಮಾತಾಡುತ್ತಿದ್ದಳು. ನಾನು ಕೈತೊಳೆದು ಎದ್ದು ಬರುವಾಗ ಅವಳು ಬೈರಾಸು ಕೊಟ್ಟಳು. ಯಾಕೋ ನನ್ನ ಒಳಮನಸ್ಸಿನಲ್ಲಿ ಶಾಂಭವಿಯ ನಡತೆ ನೋಡಿ ಯಾವುದನ್ನೋ ಮುಚ್ಚಿಡುತ್ತಿದ್ದಾಳೆ ಅಂತನ್ನಿಸಿತು. ಜೋಯಿಸರ

ಮೊಮ್ಮಗಳು ಗೌರಿಗೂ – ಸಾಲಿಯಾನರ ಈ ಹೊಸ ಮನೆಗೂ ಯಾವ ಸಂಬಂಧವೆಂದು ತಿಳಿಯಲಿಲ್ಲ. ಹೊರಗೆ ಬಂದ ಮೇಲೆ ಒಬ್ಬರನ್ನು ತೋರಿಸಿ – 'ಇವರು ನಮ್ಮ ಸೋಶಿಯಾಲಜಿ ಲೆಕ್ಚರರ್' ಅಂದಳು. 'ನಮಸ್ಕಾರ' ಅಂದೆ. 'ನೀವು ತುಂಬಾ ಒಳ್ಳೆಯ ವೇಷಧಾರಿಯಂತೆ. ಶಾಂಭವಿ ಯಾವಾಗಲೂ ನಿಮ್ಮ ಸುದ್ದಿಯನ್ನೇ ಹೇಳುತ್ತಿರುತ್ತಾಳೆ.' ಎಂದರು. ಯಾವುದರ ಅರಿವಿಲ್ಲದ ನಾನು – "ಶಾಂಭವಿ ಅಂದ ಹಾಗೆ ಈ ವರ್ಷ ದಾಟಿದರೆ ನಾನು ಸುಧಾರಿಸಿದ ಹಾಗೆ. ಮತ್ತೆ ಏನೂ ತೊಂದರೆಯಿಲ್ಲ. ಅಷ್ಟು ಹೊತ್ತಿಗೆ ನಿನ್ನ ಬಿ.ಎ. ಮುಗಿಯುತ್ತದೆ. ಅಲ್ವಾ? ಅಂದೆ. ಅರೆ ಕಪ್ಪು ಬಣ್ಣದ ಶಾಂಭವಿ ಮತ್ತು ಅವಳ ಲೆಕ್ಚರರು ಒಬ್ಬರೊಬ್ಬರ ಮುಖ ನೋಡಿದರು. 'ನನಗೆ ಸಮಯವಾಯಿತು. ಬಣ್ಣಕ್ಕೆ ಕುಳಿತುಕೊಳ್ಳಬೇಕು' ಎಂದು ಹೊರಟೆ. ಇಬ್ಬರೂ ನನ್ನ ಜೊತೆಯಲ್ಲಿಯೇ ಬಂದರು. 'ಒಂದು ಹತ್ತು ನಿಮಿಷ – ಇಲ್ಲೇ ಸುತ್ತಾಡಿ ಬರೋಣ' ಅಂದರು. ಶಾಂಭವಿ, 'ಹೌದು – ಹೌದು' ಅಂದಳು. ಸರಿಯೆಂದೆ. ಹೇಳಲು ಕಾರಣವಿತ್ತು – ಪ್ರಮೀಳಾರ್ಜುನ ಏನಿದ್ದರೂ ಒಂದೂವರೆ ಗಂಟೆ. ನನಗೆ ಸಮಯವಿದೆ ಶಾಂಭವಿಯು ಏನೋ ಹೇಳಲಿದ್ದಾಳೆ. – ಒಳ ಮನಸ್ಸಿನಲ್ಲಿ ಬಂದ ಭಾವವದು. ಮೂವರೂ ಚೌಕಿಯಿಂದ ಸ್ವಲ್ಪದೂರ ಹೋದೆವು. ಯಕ್ಷಗಾನ ಪ್ರಾರಂಭವಾಗಿದೆ.

ಭಾಗವತರು–ಸ್ತ್ರೀವೇಷ ಕುಣಿಸುತ್ತಿದ್ದಾರೆ. 'ಶ್ರೀಮಂಜುನಾಥ ಸ್ವಾಮಿಯ ಯಾರೇ ಕರೆಯಬಂದವರು' ಹಾಡು ಹೇಳುತ್ತಿದ್ದಾರೆ. ಭಾಗವತರು ಉತ್ಸಾಹದಲ್ಲಿದ್ದಾರೆ. ಅವರ ಧ್ವನಿಯಲ್ಲಿ ಅದು ಎದ್ದು ಕಾಣಿಸುತ್ತಿತ್ತು. ಕತ್ತಲೆಯಲ್ಲಿ ಹೋಗುತ್ತಿರುವಾಗ ಶಾಂಭವಿ ನನ್ನ ಬಲಗೈಯನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಮತ್ತೆ ಅಂಗೈಯನ್ನು ಹಿಡಿದುಕೊಂಡು ಗಕ್ಕನೆ ನಿಂತಳು: "ಇವರು ದೇವದಾಸ್. ನಿನಗೆ ಬೇಸರವಾಗುವ ಸುದ್ದಿ ಹೇಳ್ತೇನೆ. ಬೇಸರ ಮಾಡಿಕೊಳ್ಳಬೇಡ" ಅಂತ ಅವಳು ನನ್ನ ಹೆಗಲ ಮೇಲೆ ಕೈಯಿಟ್ಟಿದ್ದಳು. ಮೂಗಿಗೆ ವಾಸನೆ ಹೊಡೆಯಿತು. ಅವಳ ಮುಂದಿನ ವಾಕ್ಯ ಯಾವುದಿರಬಹುದು ಅಂತ. 'ನಾನೂ ಇವರೂ ಮದುವೆಯಾಗ ಬೇಕೂಂತ ಇದ್ದೇವೆ. ನಮ್ಮ ಮನೆಯಲ್ಲಿ ಗೊತ್ತಿಲ್ಲ. ನಿನಗೆ ನನಗಿಂತ ಒಳ್ಳೆಯ ಹೆಂಡತಿ ಸಿಗಲಿ. ದೇವದಾಸ, 'ಹೌದು ಬೇಸರ ಮಾಡಿಕೊಳ್ಳಬೇಡಿ. ನನಗೆ ಗೊತ್ತಿತ್ತು – ನೀವು ಇವಳನ್ನು ಪ್ರೀತಿಸುತ್ತಿರಿ. ಇವಳಿಗೂ ನಿಮ್ಮ ಮೇಲೆ ಪ್ರೀತಿ ಇತ್ತು. ಆದರೆ ಯಾಕೋ ನಾನು ದಿನಾ ಇವರಿಗೆ ಕ್ಲಾಸು ತೆಗೆದುಕೊಳ್ಳುವುದರಿಂದ ನಮ್ಮಿಬ್ಬರ ನಡುವೆ ಈ ಪ್ರಸ್ತಾಪ ಬಂತು. ಈ ನಿರ್ಧಾರಕ್ಕೆ ಬಂದೆವು. ನೀವು ಇವಳನ್ನು ಬಿಟ್ಟು ಬದುಕಬಲ್ಲಿರಿ. ಆದರೆ ನಮಗಿಬ್ಬರಿಗೂ ಈಗ ಹಾಗಲ್ಲ. ನಾವಿಬ್ಬರೂ ಹೊಸ ಕನಸು ಕಟ್ತಾ ಇದ್ದೇವೆ. ಇವಳಿಗೆ ಹೇಳಿದೆ – ಕೇಳಲಿಲ್ಲ. ನಾನು

ನಿಶಿತನನ್ನ ಬಿಡ್ತೇನೆ. ತೊಂದರೆಯಿಲ್ಲ. ಆದರೆ ನೀವು ನನ್ನ ಜೊತೆಗಿರಬೇಕು ಅಂದಳು. ಅದಕ್ಕೆ ಈ ನಿರ್ಧಾರಕ್ಕೆ ಬಂದಿದ್ದೇವೆ. ಈ ಮನೆಗೂ ಶಾಂಭವಿ ನಿಲಯ ಅಂತಲೇ ಹೆಸರಿಟ್ಟಿದ್ದೇನೆ. ಇದು ನಮ್ಮಿಬ್ಬರ ಕನಸಿನ ಮನೆ. ನೀವು ಈವತ್ತು ಯಕ್ಷಗಾನಕ್ಕೆ ಬರಲೇಬೇಕು ಅಂತ ಹೇಳಿದ್ದೇ ಶಾಂಭವಿ. ಅದಕ್ಕೆ ನನ್ನ ಬೈಕ್ ಕೊಟ್ಟು ಕಳಿಸಿದೆ. ನೀವು ಒಪ್ಪಿಗೆ ಕೊಡಿ' ಅಂದ. ಶಾಂಭವಿಯನ್ನು ಪ್ರೀತಿಸಿದ್ದೆ. ಅವಳೂ ಪ್ರೀತಿಸಿದ್ದಳು. ಒಂದಲ್ಲ ಎರಡಲ್ಲ – ಸತತ ಮೂರು ವರ್ಷದಿಂದ ಅವಳಮ್ಮ – ಅಪ್ಪನಿಗೆ ನನ್ನನ್ನು ಕಂಡರೆ ಖುಶಿ. ಅವರೂ ಒಪ್ಪಿದ್ದರು. ಒಂದು ವರ್ಷದಿಂದ ಶಾಂಭವಿ ಮತ್ತು ನಾನು ಪತ್ರ ವ್ಯವಹಾರ ಮಾಡುತ್ತಿದ್ದವರು ನಿಲ್ಲಿಸಿದ್ದೆವು. ನನಗೆ ಶಾಂಭವಿಯ ಮೇಲೆ ತುಂಬಾ ವಿಶ್ವಾಸ ಮತ್ತು ನಂಬಿಕೆ. ಯಾವ ಕಾರಣದಿಂದಲೂ ನನ್ನ ಶಾಂಭವಿ ನನ್ನವಳು ಎಂಬ ಅಭಿಮಾನ. ಮುಂದೆ ಅವರು ಹೇಳುವ ಮಾತು ಕೇಳುವ ವ್ಯವಧಾನ ನನಗಿರಲಿಲ್ಲ. ಒಂದೇ ಒಂದು ವಾಕ್ಯ ಹೇಳಿದೆ: 'ನೀವಿಬ್ಬರೂ ನಿರ್ಧರಿಸಿದ್ದೀರಿ. ನನ್ನಿಂದಂತೂ ನಿಮಗೆ ಯಾವ ತೊಂದರೆಯೂ ಆಗುವುದಿಲ್ಲ. ನನಗೆ ವೇಷಕ್ಕೆ ಸಮಯವಾಯಿತು.' ಅಂಗೈಯನ್ನು ಹಿಡಿದುಕೊಂಡಿದ್ದ ಶಾಂಭವಿಯ ಕೈ ಬಿಡಿಸಿ ಚೌಕಿಯತ್ತ ಹೆಜ್ಜೆ ಹಾಕಿದೆ – ಮನಸ್ಸು ಕೊತ ಕೊತನೆ ಕುದಿಯುತ್ತಿತ್ತು. ರಮ್ಮನೇ ತಲೆನೋವು ನೆತ್ತಿಗೇರಿತು. ಶಾಂಭವಿ ನನಗೆ ಮೋಸ ಮಾಡಿದಳು ಅಂತನ್ನಿಸಿತು. ಚೌಕಿಗೆ ಬಂದವನು ನನ್ನ ಟೀಶರ್ಟನ್ನು ತೆಗೆದು ಬಣ್ಣ ಹಚ್ಚಿಕೊಳ್ಳಲು ಕುಳಿತೆ. ಮೇಕಪ್‌ನಲ್ಲಿ ಆಸಕ್ತಿಯಿರಲಿಲ್ಲ. ಎಡಗೈಯಲ್ಲಿ ಕನ್ನಡಿ ಹಿಡಿದುಕೊಂಡು ಕಣ್ಣಿನ ರೆಪ್ಪೆಯನ್ನು ಅಗಲಗೊಳಿಸಲು ಮಡಲ ಕಡ್ಡಿಯನ್ನು ತೆಗೆದುಕೊಂಡೆ. ಕೈ ತಪ್ಪಿ ಕಣ್ಣಿನ ಬದಿಗೆ ಚುಚ್ಚಿಕೊಂಡಿತು. ಕನ್ನಡಿ ಕೆಳಗಿಟ್ಟು ಅದಕ್ಕೆ ಕೊಂಚ ರೋಸ್ ಪೌಡರ್ ಹಚ್ಚಿದೆ. ಮಡಲ ಕಡ್ಡಿಯ ಒಂದು ಬದಿಯನ್ನು ಮೆಲ್ಲಗೆ ಸುಟ್ಟು ನಯಗೊಳಿಸಿ ಮತ್ತೆ ಕಣ್ಣಿನ ಕಾಡಿಗೆ ಹಚ್ಚಿಕೊಳ್ಳಲು ಪ್ರಾರಂಭಿಸಿದೆ. ನಿಧಾನವಾಗಿ ಅಗಲಗೊಳಿಸುತ್ತಾ ಬಂದೆ. ಹಣೆಗೆ ಕೇವಲ ನಾಮವೆಳೆದು ವೇಷ ಕಟ್ಟಲು ಎದ್ದು ನಿಂತೆ. ಮನಸ್ಸು ಸರಿಯಿಲ್ಲವಾದುದರಿಂದ ಹಾಗೆಯೇ ಸಿದ್ಧತೆ ನಡೆಸಿದೆ. ಎಲ್ಲಾ ವೇಷ ಕಟ್ಟಿ ಮತ್ತೆ ಕನ್ನಡಿಯೆದುರು ಕುಳಿತುಕೊಂಡೆ. ನನ್ನ ಹಿಂದೆ ದೇವದಾಸ ಮತ್ತು ಶಾಂಭವಿಯರು ನಿಂತದ್ದು ಕನ್ನಡಿಯಲ್ಲಿ ಕಾಣಿಸಿತು. ಶಾಂಭವಿ ಹೇಳುತ್ತಿದ್ದಳು: ಈ ವೇಷದಲ್ಲಿ ನಿಶಿತ ಎಷ್ಟು ಚೆನ್ನಾಗಿ ಕಾಣಿಸುತ್ತಿದ್ದಾನೆ ಅಲ್ವಾ?" ಅವರು 'ಹೌದು ತುಂಬಾ ಚೆನ್ನಾಗಿ ಕಾಣಿಸುತ್ತಿದ್ದಾರೆ' ಎಂದು ಹೇಳುವುದು ಕೇಳಿಸಿತು. ನಾನು ನನ್ನ ತುಟಿಗಳಿಗೆ ಕೆಂಪು ಹಚ್ಚಿಕೊಳ್ಳುವುದರಲ್ಲಿ ತಲ್ಲೀನನಾದಂತೆ ನಟಿಸಿದೆ. ನಾನು ಸುಮ್ಮನೆ ಈ ಕೆಲಸದಲ್ಲಿ ಮುಳುಗಿರುವಾಗ ಭಾಗವತರು, 'ಆಗ ಸುಧನ್ವನು ಬೇಗದಿರಣಕನುವಾದನು ಮುದದಿಂದ' ಹಾಡನ್ನು ಎತ್ತಿಕೊಂಡು ಬಿಟ್ಟರು. ಗಡಿಬಿಡಿಯಲ್ಲಿ ಗುರುಗಳಿಗೆ

ರಂಗಸ್ಥಳಕ್ಕೆ ನಮಸ್ಕರಿಸಿ ರಂಗ ಪ್ರವೇಶ ಮಾಡಿದೆ. ಈ ಪದ್ಯಕ್ಕೆ ಪ್ರವೇಶವನ್ನು ಮಾತ್ರ ನನಗೆ ಬೇಕಾದ ಶೈಲಿಯಲ್ಲಿ ರೂಢಿಸಿಕೊಂಡಿದ್ದೆ. ಹಾಡಿನ ಮೊದಲ ಚರಣವಾದ ಮೇಲೆಯೇ ನನ್ನ ಪ್ರವೇಶ. ಏಕಕಾಲಕ್ಕೆ ಲಾಲಿತ್ಯ ಮತ್ತು ಗಾಂಭೀರ್ಯ ತುಂಬಿಸಿಕೊಂಡು ವೇದಿಕೆಯನ್ನು ಹೊಕ್ಕೆ. ವೇಷಪ್ರವೇಶ ಮಾಡಿದ ನನಗೆ ಉಳಿದುದು ಗಮನಕ್ಕೆ ಬರಲಿಲ್ಲ. ಯುದ್ಧಕ್ಕೆ ಹೊರಟ ಸುಧನ್ವನನ್ನು ಪ್ರಭಾವತಿ ತಡೆಯುತ್ತಾಳೆ. ಪ್ರಭಾವತಿಯದು ಶೃಂಗಾರವೇಷ. ಅವಳು ತಡೆಯುವ ಸನ್ನಿವೇಶವಂತೂ ನನಗೆ ತುಂಬಾ ಅಂದರೆ ತುಂಬಾ ಕಿರಿಕಿರಿಯೆನಿಸಿತು. ರಂಗಸ್ಥಳದ ಎದುರು ದೇವದಾಸ ಮತ್ತು ಶಾಂಭವಿಯರು ಕೂತಿದ್ದಾರೆ. ವೇಷ ಮುಗಿಸಿ ಪಟಪಟನೆ ಚೌಕಿಗೆ ಬಂದು ಕಿರೀಟ ಬಿಚ್ಚಿದೆ. ಮೇಕಪ್ಪನ್ನು ಬೇಗನೆ ಒರಸಿ ಹಾಕಿದೆ. ಚೌಕಿಯ ಹೊರಗಡೆಯ ಇರುವ ಬಾಲ್ದಿಯಲ್ಲಿರುವ ನೀರನ್ನು ಮುಖ ತೊಳೆದುಕೊಂಡೆ. ಯಾರೊಂದಿಗೋ ಹೇಳಿ ಕಳಿಸಿದೆ – "ನಾನು ಹೋಗಬೇಕು" ನನ್ನ ಬ್ಯಾಗ್ ಹಿಡಿದುಕೊಂಡು ಚೌಕಿಯ ಹೊರಗೆ ನಿಂತಿದ್ದೆ. ಶಾಂಭವಿ – ದೇವದಾಸ ಇಬ್ಬರೂ ಬಂದರು. ಅವರ ಮುಖ ನೋಡುವ ಇಚ್ಛೆ ಇದ್ದಿರಲಿಲ್ಲ. ಕಾಟಾಚಾರಕ್ಕೆ – "ನಾನು ಹೊರಟಿದ್ದೇನೆ. ನಿದ್ದೆ ಮಾಡಲೇಬೇಕು" ಎಂದವನು ಮತ್ತೆ ಚೌಕಿಯ ಕಡೆಗೆ ಮುಖ ಮಾಡಿದೆ. ಶಾಂಭವಿ ಪಟ್ಟನೆ ಕೈಹಿಡಿದು – 'ನಾನು ನಿಮ್ಮತ್ರ ಮಾತಾಡಬೇಕು' ಎಂದಳು. 'ಇಲ್ಲ, ಶಾಂಭವಿ ಸುಮಾರು ದಿನ ನಿದ್ದೆಗೆಟ್ಟಿದ್ದೇನೆ.' ಮತ್ತೊಂದು ವೇಷದ ಮಾತು ನನ್ನ ನಾಲಿಗೆಯಿಂದ ಉದುರಿತು.

ಶಾಂಭವಿ: 'ನಿಮ್ಮೊಂದಿಗೆ ಹತ್ತೇ ಹತ್ತು ನಿಮಿಷ ಮಾತಾಡಬೇಕು.'

ದೇವದಾಸ: 'ಬನ್ನಿ, ಆರಾಮಾಗಿರಿ. ಮಾತಾಡೋಣ. ಟೀ ಕುಡಿತೀರಾ?'

ನಾನು: 'ನನಗೆ ಮಾತಾಡಬೇಕೂಂತ ಅನಿಸುವುದಿಲ್ಲ.'

"ಬಲ್ಲುಳ್ಳ ಭಟರು ಕಾದಿ ಗೆಲುವುದು" – ಮತ್ತೆ ರಂಗದ ಮೇಲೆ ಅದೇ ಮಾತು. ಸೋತ ನನಗೆ ಕುದುರೆಯನ್ನು ಕಟ್ಟುವ ಕಾದಿಗೆಲ್ಲುವ ಉತ್ಸಾಹವಿಲ್ಲ. 'ಆರೊಡನೆ ಕಾದಾಡಲಿ?'–ನನ್ನ ಮನಸ್ಸು ಹೇಳಿತು. ಶಾಂಭವಿ–ದೇವದಾಸ ಇಬ್ಬರೂ ನನ್ನನ್ನು ಕೈಹಿಡಿದು ವಿನಂತಿಸಿದರು. ಅವರ ಹಿಂದೆಯೇ ಹೋದೆ – ಅಶ್ವಮೇಧದ ಕುದುರೆ ಸ್ವತಂತ್ರ. ಶಾಂಭವಿ–ದೇವದಾಸರ ಮಧ್ಯೆ ನಾನು. ರೂಮಿಗೆ ಹೋದ ಕೂಡಲೇ ಗೌರಿ ನನ್ನ ಬೊಗಸೆಯಲ್ಲಿ ಅವಳ ಮುಖ ಮುಚ್ಚಿ ಜೋರಾಗಿ ಅಳತೊಡಗಿದಳು: 'ನನ್ನನ್ನು ಕ್ಷಮಿಸು. ನನಗೆ ನಿನ್ನ ಪ್ರೀತಿಗಿಂತ ಇವರು ಬೇಕಾಯಿತು.' ನಾನು ಸುಮ್ಮನುಳಿದೆ. ದೇವದಾಸ ಅವಳ ಬೆನ್ನು ನೇವರಿಸುತ್ತಾ ಇದ್ದ. 'ನಿಶಿತ – ಒಂದೇ ಒಂದು ಕ್ಷಣ ಕುಳಿತುಕೋ' ಎಂದವಳು ಒಳಗಡೆಯಿಂದ ಒಂದು

ಬೆಳ್ಳಿಯ ಗಣಪತಿ ಪದಕ ತಂದುಕೊಟ್ಟು. 'ಇದು ನಾವಿಬ್ಬರೂ ಇಟ್ಟುಕೊಂಡಿದ್ದ ಪ್ರೀತಿಗೆ ಸದಾ ಇಟ್ಟುಕೋ' ಎಂದವಳು ಮತ್ತೆ ಜೋರಾಗಿ ಅತ್ತಳು. ದೇವದಾಸ ಅವಳ ತಲೆಗೂದಲನ್ನು ಸವರುತ್ತಿದ್ದ. ಶಾಂಭವಿಯ ಗಲ್ಲ ತಟ್ಟಿ, 'ಅಳಬೇಡ ಶಾಂಭವಿ ನಿನಗೆ ದೇವದಾಸ ಇದ್ದಾರೆ. ಬಹುಶಃ ನನಗಿಂತ ಅವನು ಒಳ್ಳೆಯವರಿರಬೇಕು. ಮತ್ತೆಂದೂ ನಾವು ಭೇಟಿಯಾಗದಿರೋಣ. ನಮ್ಮ ನೆನಪುಗಳು ಮತ್ತೆ ಬಾರದಿರಲಿ.' ಎಂದವನು ಹೊರಟೆ. ಗಣೇಶ ಬೀಡಿ ಹಚ್ಚಿದೆ. ಬಣ್ಣ ತೆಗೆಯಲು ನಾನು ಬಳಸಿಕೊಂಡ ಕೊಬ್ಬರಿ ಎಣ್ಣೆಯ ಜಿಡ್ಡು: ನನ್ನ ಲುಂಗಿ: ನನ್ನ ಶರಟು – ಎಲ್ಲವೂ ನನ್ನನ್ನು ಹಂಗಿಸುತ್ತಿತ್ತು. ರಂಗಸ್ಥಳದಲ್ಲಿ ಕುಣಿಯುವ ನಾನು ಚೌಕಿಯಲ್ಲಿ ಮೂಳೆ – ಮಾಂಸಗಳ ತಡಿಕೆ ಏನಿತ್ತು? ಏನಿದೆ ನನ್ನಲ್ಲಿ? ಭಾಗವತರು ಹಾಡು ಹೇಳುತ್ತಾರೆ–ನಾವು ಕುಣಿಯುತ್ತೇವೆ. ಚೌಕಿಯಲ್ಲಿ ಹಾಸಿ ಸ್ವಲ್ಪ ಹೊತ್ತು ಮಲಗಿದೆ. ಮುಂಜಾವ ಕಾಲು ನಡಿಗೆಯಲ್ಲಿ ಯಾರಿಗೂ ಹೇಳದೆ ಹೊರಟೆ. ಎಷ್ಟೋ ವರ್ಷಗಳ ಅನಂತರ ತಿಳಿಯಿತು: ಮುಖಕ್ಕೆ ಹಚ್ಚಿದ ಬಣ್ಣದ ಪರಿಮಳ ಹೋಗುವುದಿಲ್ಲ. ಶಾಂಭವಿಗೆ ನಾನು ಬೇಕಿರಲಿಲ್ಲ – ನಿಜ. ಅವಳು ಅದಕ್ಕೆ ಕೊಟ್ಟ ಕಾರಣ ಸರಿಯಿರಲಿಲ್ಲ. ವೇಷ ಕಟ್ಟುವವರ ಜೊತೆ ಬಾಳುವೆ ಕಷ್ಟ. ಆದರೆ ಅಂದಿನಿಂದ ಈ ಕ್ಷಣದವರೆಗೂ ವೇಷ ಕಟ್ಟಿದೆ. ಬಣ್ಣ ಹಾಕಿಕೊಂಡೆ ಕುಣಿದೆ. ನಿಜವಾಗಿಯೂ ಹೇಳುತ್ತೇನೆ: ವೇಷ; ಬಣ್ಣ; ನೃತ್ಯದಿಂದ ಬಸವಳಿದಿದ್ದೇನೆ. ನನ್ನ ದೇಹವೀಗ ನಾನು ಹೇಳಿದಂತೆ ಕೇಳುತ್ತಿಲ್ಲ. ದಣಿವಾಗಿದ್ದಕ್ಕೆ ಏಮುಸಿರು ಬಿಡುತ್ತೇನೆ. ಅದರ ಅನಂತರ ಎಷ್ಟೊಂದು ಜನ ಹುಡುಗಿಯರ ಕಣ್ಣಲ್ಲಿ ಶಾಂಭವಿಯ ಬಿಂಬಗಳು! ನಾನು ಭಾವುಕ; ಕನಸುಗಾರ; ಅವಾಸ್ತವವಾದಿ – ಎಲ್ಲವೂ ಹೌದು. ಏನಾಯಿತು ಅದರಿಂದ?

* * * * *

ಅದಾದ ನಂತರ ನಾನು ಒಂದು ದಿನ ಶಾಂಭವಿಯ ಮನೆಗೆ ಹೋಗಲೇಬೇಕಾದ ಪ್ರಸಂಗ ಒದಗಿತು. ಹೋದೆ. ಶಾಂಭವಿ ಆದಿನ ರಾತ್ರಿ ಊಟವಾದ ಮೇಲೆ ಅಪ್ಪ ಅಮ್ಮ ಎಲೆಯಡಿಕೆಯನ್ನು ಹಾಕುವ ಹೊತ್ತಿನಲ್ಲಿ ಬಂದು ಕುಳಿತಳು. ಅವಳಪ್ಪ ಶಾಂಭವಿಯ ಮುಖ ನೋಡಿದರು. ಅವಳಮ್ಮ: 'ಏನು ನಿಶಿತ ಓದಿಯಾಯಿತಾ?' ಶಾಂಭವಿ ಮೌನವೊಡೆದು ಹೇಳಿದಳು. "ನಾನು ನಿಶಿತನನ್ನು ಮದುವೆಯಾಗುವುದಿಲ್ಲ. ನಾನು ದೇವದಾಸನನ್ನು ಪ್ರೀತಿಸುತ್ತೇನೆ. ಮದುವೆಯಾಗುವುದಿದ್ದರೆ ದೇವದಾಸನನ್ನು." ಶಾಂಭವಿಯ ತಾಯಿಗೆ–ದೇವದಾಸ ಯಾರು? ಅವನ ಕುಲಗೋತ್ರ ಯಾವುದು ಅಂತ ಬೇಕಿತ್ತು. ದೇವದಾಸನ ಕುಲಗೋತ್ರವನ್ನು ವಿವರಿಸಿದಳು. ದೇವದಾಸ ಬೇರೆ ಜಾತಿಯವನೆಂದೂ, ತಾನೂ

ಅವನು ಮದುವೆಯಾಗುವುದು ಖಾತ್ರಿಯೆಂದು ಹೇಳಿದಳು. ಆಗ ಶಾಂಭವಿಯ ತಾಯಿಗೆ ಸಿಟ್ಟು ಬಂತು. ಅವಳನ್ನು ಮನೆಯಲ್ಲಿ ಕೂಡಿಹಾಕಿದರು. ದೇವದಾಸ ಈ ವಿಷಯವನ್ನು ಸವಿವರವಾಗಿ ನನಗೆ ಹೇಳಿ– "ನಿಶಿತ ಅವಳನ್ನು ಅವಳ ಮನೆಯಿಂದ ಬಿಡಿಸಿಕೊಂಡು ಬನ್ನಿ. ನೀವಲ್ಲದೆ ಬೇರೆ ಯಾರೂ ಅವಳ ಮನೆಗೆ ಹೋಗುವಂತಿಲ್ಲ" ಎಂದರು. ನಾನು ಒಪ್ಪಿಕೊಂಡೆ–ವಿಧಿಯಿಲ್ಲದೆ. 'ನಾನು ಮತ್ತೊಮ್ಮೆ ನಿನ್ನ ಭೇಟಿಯಾಗಲು ಇಷ್ಟಪಡುವುದಿಲ್ಲ." ಶಾಂಭವಿಯ ಮಾತು ಮತ್ತೆ ಮತ್ತೆ ನೆನಪಾಯಿತು. ಶಾಂಭವಿ ದೇವದಾಸನನ್ನು ಮದುವೆಯಾಗಲು ನಾನು ಮೆಟ್ಟಿಲಾಗಬೇಕಾಯಿತು. ಒಂದು ವಿಚಿತ್ರ ಸನ್ನಿವೇಶವಿದು. ನಾನು ಶಾಂಭವಿಯ ಮನೆಯಂಗಳಕ್ಕೆ ತಲುಪುವಾಗ ಮಧ್ಯಾಹ್ನ ದಾಟಿತ್ತು. ಹೆಚ್ಚು ಕಡಿಮೆ ಆಗಲೂ ಮೂರು ಗಂಟೆ. ಅವರ ಮನೆಯ ಅಂಗಳದ ದೊಡ್ಡ ಮರದ ಗೇಟು ತೆರೆಯುವಾಗ ಯಾಕೋ ಎದೆ ನಡುಗಿದಂತಾಯಿತು. ಕೈಯಲ್ಲಿದ್ದ ಸಣ್ಣ ನಡುಕ. ಅಂಗಳದ ತುಂಬಾ ಒಣ ಅಡಿಕೆಯನ್ನು ಹರವಿ ಇಡಲಾಗಿತ್ತು. ನಾನೂ ಒಣಗಿ ಹೋಗಿದ್ದೇನೆ ಅಂತ ಅನಿಸಿತು. ಅಂಗಳದಲ್ಲಿ ಕಾಲಿಟ್ಟಾಗ ಅವರ ಮನೆಯ ಬಿಳಿಯ ಕೊಬ್ಬಿದ ನಾಯಿ ಜೋರಾಗಿ ಬಗುಳಿಕೊಂಡು ಬಂತು. ಮನೆಯ ಒಳಗಿನಿಂದ ನಾಯಿಯನ್ನು, ಬಾಬಾ, ಕುರ್, ಕುರ್ ಎಂದು ಶಾಂಭವಿಯ ತಾಯಿ ಕರೆದರು. ಆಗಷ್ಟೆ ಊಟ ಮುಗಿಸಿ ಹೊರ ಬಂದಿದ್ದಾರೆನ್ನುವುದಕ್ಕೆ ಸಾಕ್ಷಿಯಾಗಿ ಅವರ ಕೈಯಲ್ಲಿ ಬಟ್ಟಲು ಇತ್ತು. ಮೊದಲು ಪರಿಚಯ ಸಿಕ್ಕದವರಂತೆ–ಹುಬ್ಬು ಬಿಗಿ ಮಾಡಿ–ಅನಂತರ ಪರಿಚಯ ದೊರತವರಂತೆ "ಓ ನೀನಾ–ಬಾ ಒಳಗೆ" ಎಂದರು. ಒಡಲು ತುಂಬಾ ಶ್ರೀಮಂತಿಕೆಯನ್ನು ತುಂಬಿಕೊಂಡ ಗೃಹಿಣಿಯ ಮುಖದಲ್ಲಿ ಒಂದು ಕೃತಕವಾದ ನಗೆಯ ಮುಖವಾಡ. ನನಗಿದು ಮುಖ್ಯವೆಂದು ಅನಿಸದ್ದರಿಂದ ನಾನೂ ಕೃತಕವಾದ ಮತ್ತು ಪೇಲವವಾದ ನಗೆಯನ್ನು ಬೀರಿದೆ. ಬೇರೆ ದಾರಿಯಿಲ್ಲವಾದ ಸಂದರ್ಭದಲ್ಲಿ ಬಂದ ನಗೆಯು ನನ್ನದು. ನನ್ನ ಹಣೆಯಲ್ಲಿ ಬೆವರಿನ ಸಾಲು–ಸಾಲು. 'ಯಾರದು?' ಮನೆಯ ಒಳಗಿನಿಂದ ಶಾಂಭವಿಯ ಅಪ್ಪ ಹೇಳುವುದು ಕೇಳಿಸಿತು. 'ನಿಶಿ ಬಾ ಒಳಗೆ ಕುಳಿತುಕೋ. ನಮ್ಮ ನಿಶಿ ಬಂದಿದ್ದಾನೆ.' ಏಕ ಕಾಲಕ್ಕೆ ನನಗೆ ಮತ್ತು ಶಾಂಭವಿಯ ಅಪ್ಪನಿಗೆ ಅವಳಮ್ಮ ಉತ್ತರ ಕೊಟ್ಟರು. ಬಂದೆ, ಕೈತೊಳೆದು ಬರ್ತೇನೆ. ಬಾಯಾರಿಕೆ ಬೇಕಾ?" ಮತ್ತೆ ಅವಳಮ್ಮನೇ ಎಂದರು. ಉತ್ತರ ಕೊಡಲು ಬೇರೆ ಶಬ್ದಗಳು ಬೇಕಿರಲಿಲ್ಲ. 'ಬೇಡವೆಂದಷ್ಟೇ'–ಹೇಳಿ ಕುಳಿತುಕೊಂಡೆ. ಶಾಂಭವಿಯ ಅಪ್ಪ 'ಏನು ನಿಶಿ ಚೆನ್ನಾಗಿದ್ದಿಯಾ?' ಅಂದರು. ಆದರೂ ಅವರ ಮುಖದಲ್ಲಿ ಒಂದು ಮಿಶ್ರ ಭಾವ ಇದೆಯೆಂದು ಅನಿಸಿತು. ನಾನು ತಲೆಯಾಡಿಸಿದೆ. ಸೆರಗಿಗೆ ಕೈ ಒರಸುತ್ತಾ ಶಾಂಭವಿಯ ಅಮ್ಮ ಸೋಫಾದ ಮೇಲೆ ಕುಳಿತರು. ಒಂದು ಸ್ವಲ್ಪ ಹೊತ್ತು ಬೇಡವೆಂದರೂ ಮೌನ ಆವರಿಸಿತು. ಶಾಂಭವಿಯ ಅಮ್ಮ ನನ್ನ

ಬಲಗಡೆಯಲ್ಲಿ ಸ್ವಲ್ಪ ದೂರ ಕುಳಿತರು. ಅವರ ವಜ್ರದ ಮೂಗುತಿ ಫಳ ಫಳನೆ ಹೊಳೆಯುತ್ತಿತ್ತು. ಶಾಂಭವಿಯ ಅಪ್ಪ ಚೆಯರ್‌ನಲ್ಲಿ ಕುಳಿತರು. ಅಷ್ಟು ಹೊತ್ತಿಗೆ ಒಳಗಡೆಯಿಂದ ಶಾಂಭವಿಯ ಮಾವ ಬಂದರು. ಒಂದು ಚಕ್ರವ್ಯೂಹ ಕೋಟೆ ನಿರ್ಮಾಣವಾಯಿತು. ಈಗ ಅಭಿಮನ್ಯುವಿನ ಕೆಲಸ ನಾನು ಮಾಡಲೇಬೇಕು.

ಅಮ್ಮ 'ಶಾಂಭವಿ, ಏ ಶಾಂಭವಿ ಯಾರು ಬಂದಿದ್ದಾರೆಂದು ನೋಡು. ನಿನ್ನ ನಿಶಿ ಬಂದಿದ್ದಾನೆ. ಬಾ ಹೊರಗೆ' ಎಂದು ಕರೆದರು. ಅವರ ಸ್ವರದಲ್ಲಿ ಗಡುಸುತನವಿತ್ತು. "ನಿನ್ನ ನಿಶಿ" ಎಂಬುದನ್ನು ತುಂಬಾ ಉದ್ದೇಶ ಪೂರ್ವಕವಾಗಿ ಹೇಳುತ್ತಿದ್ದಾರೆಂದು ಅನಿಸಿತು. ಅವರು ಹಾಗೆ ಕರೆಯುವಾಗ ಶಾಂಭವಿಯ ತಂದೆ ಮತ್ತು ಅವಳ ಮಾವನ ಕಣ್ಣು-ನನ್ನನ್ನು ಇರಿಯುತ್ತಿದೆಯೆಂದನ್ನಿಸಿ, ಅದಕ್ಕೂ ನನಗೂ ಯಾವುದೇ ಸಂಬಂಧವಿಲ್ಲವೆಂಬಂತೆ ಗೋಡೆಯನ್ನು ನೋಡುತ್ತಾ ಕುಳಿತೆ. ಗೋಡೆಯಲ್ಲಿ ಶಾಂಭವಿಯ ಅಜ್ಜ-ಅಜ್ಜಿಯ ಪೋಟೋ ನೇತು ಹಾಕಿದೆ. ಅದರ ಪಕ್ಕದಲ್ಲಿ ಒಂದು ಹಲ್ಲಿ ಈ ಘಟನೆಗಳಿಗೆ ಸಾಕ್ಷಿ ಹೇಳುತ್ತಾ ಕುಳಿತಿದೆ. ಬಾಗಿಲಿಗೆ ಹಾಕಿದ ಕರ್ಟನ್ ಸರಿಸಿ ಯಾರೋ ಬಂದಂತಾಯಿತು. ನೋಡಿದೆ: ಅತ್ತು ಅತ್ತು ಶಾಂಭವಿಯ ಕಣ್ಣು ಕೆಂಪಾಗಾಗಿದೆ. ಅದರ ಗುರುತು ಮುಖದ ಮೇಲೆ ಕಾಣಿಸಬಾರದು ಎಂದು ಮುಖಕ್ಕೆ ನೀರು ಹಾಕಿಕೊಂಡು ಬಂದಂತಿದೆ.

ಶಾಂಭವಿ: 'ಏನು ನಿಶಿ? ಚೆನ್ನಾಗಿದ್ದಿಯಾ?'

ಅಮ್ಮ: "ಏನದು? ಚೆನ್ನಾಗಿದ್ದೀರಾ ಅಂತ ಕೇಳಬಾರದಾ, ನಾಳೆ ನಿನ್ನ ಗಂಡ ಆಗುವವನು. ಸರಿಯಾಗಿ ಮಾತಾಡುವುದಕ್ಕೆ ಬರುವುದಿಲ್ವಾ? ಕಲಿತವರ ಹಣೇಬರ ಇಷ್ಟೆ"

ನಾನು: 'ಚೆನ್ನಾಗಿದ್ದೇನೆ. ನೀನು?'

ಶಾಂಭವಿ: 'ಚೆನ್ನಾಗಿದ್ದೇನೆ.'

ಶಾಂಭವಿ ನೆಲದ ಮೇಲೆ ಕಾಲು ಚಾಚಿಕೊಂಡು ಕುಳಿತಳು. ನಾಟಕದ ಮೊದಲ ದೃಶ್ಯ ಪ್ರಾರಂಭವಾಗಿದೆ. ನಾನು ಎಚ್ಚರವಾಗಿರಬೇಕು. ನಾನು ನನ್ನ ಭಾವನೆಗಳನ್ನು ತೋರ್ಪಡಿಸಿಕೊಳ್ಳಬಾರದು ಎಂದುಕೊಂಡೆ.

ಶಾಂಭವಿಯ ಅಪ್ಪ: ಊಟವಾಗಿದೆಯಾ? ಎಂದು ಕೇಳಿದರು, "ಹ್ಞೂ" ಎಂದೆ.

ಊಟವಾಗಿರಲಿಲ್ಲ "ಹ್ಞೂಂ" ಅನ್ನುವಂತೆ ಪರಿಸರ ಪ್ರೇರಿಸಿತು.

ಶಾಂಭವಿಯ ಅಮ್ಮ: 'ನಿನ್ನ ಕುರಿತೇ ಬಹಳ ಮಾತಾಡುತ್ತಿರುತ್ತಾಳೆ' ಅಂದರು ಅವರು ಹಸಿಸುಳ್ಳು ಹೇಳುತ್ತಾರೆಂದು ನನಗೆ ಗೊತ್ತಿತ್ತು. ಶಾಂಭವಿಗೆ ಗೊತ್ತಿತ್ತು ಅವರೆಲ್ಲರಿಗೂ ಗೊತ್ತಿತ್ತು. ಸುಳ್ಳು ಕೋಮಲವಾಗಿದೆ. ಸುಂದರವಾಗಿದೆ. ಅದು ಬಾಗಿ ಬಳುಕಿ ವೈಯ್ಯಾರ ತೋರಿಸುತ್ತದೆ. ನಾಲಿಗೆಯ ಮೇಲಿನ ಸುಳ್ಳು ಕೂಡಾ ಎಷ್ಟು ಆಕರ್ಶಕವಾಗಿದೆಯೆಂದನ್ನಿಸಿತು. ಸುಳ್ಳಿನ ಚೆಂದ ಸತ್ಯಕ್ಕಿಲ್ಲ.

ಶಾಂಭವಿಯ ಅಪ್ಪ ಹೇಳಿದರು "ಯಾವಾಗ ಮದುವೆಯಿಟ್ಟು ಕೋಳ್ಳೋಣ ಶಾಂಭವಿ ನನ್ನ ಮುಖ ನೋಡಿದಳು. ನಾನು ಏನು ಹೇಳುತ್ತೇನೆ ಎನ್ನುವ ಕುತೂಹಲ ಅವಳಿಗೆ. ಮೆಲ್ಲನೆ ಸುಮ್ಮನಿರುವಂತೆ ಕಣ್ಣು ಮಿಟುಕಿಸಿದಳು. ಅವಳಿಗೆ ನಾನು ಯಾಕೆ ಹೋಗಿದ್ದೇನೆ ಎಂದು ಗೊತ್ತಿಲ್ಲ. ಅವಳು ಸುಮ್ಮನಿರು ಎಂದು ಸಣ್ಣ ಸನ್ನೆ ಮಾಡಿದರೂ ಅವಳ ಹಂಗು ನನಗಿರಲಿಲ್ಲ. ಈಗ ಸುಳ್ಳಿನ ಚೆಂಡು ನನ್ನ ಅಂಗಳಕ್ಕೆ ಬಂದು ಬಿದ್ದಿದೆ. ಒದೆಯಬೇಕು. ಆ ಅಂಗಳಕ್ಕೆ ಎಂದುಕೊಂಡೆ

ಶಾಂಭವಿಯ ಅಮ್ಮ, 'ಯಾಕೆ ಯೋಚಿಸುತ್ತಿಯಾ ನಿಶಿ?" ಎಂದರು ಶಾಂಭವಿಯ ಮಾವ ಕಟುವ್ಯಂಗ್ಯದಲ್ಲಿ: "ನಿಶಿಗೆ ಈಗ ಶಾಂಭವಿ ಬೇಡ ಅಂತ ಅನಿಸಿರಬೇಕು. ಶಾಂಭವಿಯನ್ನು ಕಟ್ಟಿಕೊಂಡು ಅವನ್ಯಾಕೆ ಕಷ್ಟಪಡಬೇಕು. ಚೆಂದದ ಹುಡುಗಿ ಸಿಕ್ಕಿರಬೇಕು. ಒಳ್ಳೆಯ ವರದಕ್ಷಿಣೆಯೂ ಸಿಗಬಹುದು" ಎಂದರು. ಅವರ ಮಾತು ನನಗೆ ಇರಿಯಿತು. ಬೇರೆ ಸಂದರ್ಭದಲ್ಲಿಯಾದರೆ ಮಾತಾಡುತ್ತಿದ್ದೆ ನಾಲಿಗೆಯ ತುದಿಗೆ ಬಂದು ಮಾತುಗಳನ್ನು ತಡೆಹಿಡಿದುಕೊಂಡೆ – ವೇದನೆಯಲ್ಲಿ "ಅಯ್ಯೋ ಇದೆಂಥ ನೋವು ನನಗೆ?" ಅಂತ ಅನಿಸಿತು. ಒಂದು ನಿರ್ಣಾಯಕವಾದ ಗಳಿಗೆಯಲ್ಲಿ; ನನ್ನ ಜೀವನದ ತಿರುವಿನಲ್ಲಿ ಸಾಗಬೇಕಾದುದು ಏನು ಅಂತ ಹೊಳೆಯಲಿಲ್ಲ. ವ್ಯಂಗ್ಯಕ್ಕೆ ಕೂಡಾ ಎಷ್ಟೊಂದು ಬಾಗಿಲುಗಳು ಇವೆಯಲ್ಲಾ ಅಂತಲೂ ಅನಿಸಿತು. ಒಂದು ಕ್ಷಣ ನಾನು ಮಂಕಾದುದನ್ನು ಕಂಡ ಶಾಂಭವಿ "ಅವರು ಹಾಗಲ್ಲಂತ ನನಗೆ ಗೊತ್ತು" ಅಂದಳು. ಶಾಂಭವಿಯ ಅಮ್ಮ ನೋಡಿ 'ಈಗಲೆ ಗಂಡನಾಗುವವನ್ನು ಹೇಗೆ ಬೆಂಬಲಿಸ್ತಾಳೆ ನೋಡಿ" ಅಂತ ಅಂದರು – ಶಾಂಭವಿಯ ಅಪ್ಪ ನಗಾಡಿದರು. ಮಾತು ಎಲ್ಲಿಂದ ಎಲ್ಲಿಗೋ ಹೋಗುತ್ತಿದೆಯೆಂದು ನನಗನ್ನಿಸಿತು ಶಾಂಭವಿಯ ತಂದೆ, "ನೀನು ಹುಟ್ಟಿದ ನಕ್ಷತ್ರ ಹೇಳು? ಯಾವಾಗ ಮುಹೂರ್ತ ಇಟ್ಟುಕೊಳ್ಳಬಹುದು ಅಂತ ನೋಡುತ್ತೇನೆ." ಅಂತ ಹೇಳುತ್ತಾ ಮೇಜಿನ ಮೇಲಿನ ಪಂಚಾಂಗ ಬಿಡಿಸಿದರು. "ಆರ್ದ್ರ ನಕ್ಷತ್ರ; ಮಿಥುನ ರಾಶಿ" ಅಂದೆ. ಅವರು ಲೆಕ್ಕಾಚಾರ ಹಾಕತೊಡಗಿರು. ಶಾಂಭವಿಯ ತಾಯಿ ಯೋಚನೆ ಮಾಡತೊಡಗಿರುವವರನ್ನು ಮತ್ತೆ ನೆಲಕ್ಕೆಳೆದರು. 'ನಿಶಿ ಏನು ಯೋಚನೆ ಮಾಡು ಇದ್ದಿಯಾ? ನಮ್ಮ ಶಾಂಭವಿಯ ರೂಪ ಸಾಕಾಗುವುದಿಲ್ಲವಾ?" ನಾನು 'ಹಾಗೇ

ಏನೂ ಇಲ್ಲ'ವೆಂದೆ ಮತ್ತು "ಯೋಚನೆ ಮಾಡಬೇಡ ಮದುವೆಯ ಖರ್ಚು ನಾವು ನೋಡಿಕೊಳ್ಳುತ್ತೇವೆ. ಮಗಳಿಗೆ ಬೇಕಾದ ಚಿನ್ನ-ಗಿನ್ನ ಮಾಡಿಸಿ ಹಾಕಿಸುತ್ತೇವೆ. ಅಲ್ಲ ನಿನ್ನ ಯೋಚನೆಯೇನಿದೆಯೋ-ಅದರ ಖರ್ಚಿಗೆ ಯೋಚನೆ ಮಾಡಬೇಕಾದ ಅಗತ್ಯವಿಲ್ಲ." "ನಾನು, 'ಸದ್ಯ ಮದುವೆಯಾಗಲು ಬೇರೆ ಕಷ್ಟವಿದೆ. ಆಗಸ್ಟ್ ತಿಂಗಳಿಗೆ ಮದುವೆಯಾಗ್ತೇನೆ." "ಅಂತ ಹೇಳಿದೆ." "ಏಕೆ ಅಷ್ಟೊಂದು ದೂರ? ಒಂದು ತಿಂಗಳಲ್ಲಿ ಆಗಿ ಬಿಡು," ಅಂತ ಅವಳ ಮಾವ ಅಂದರು. ಅವರಿಗೆ ನಾನು ಯಾವ ಪ್ರತಿಕ್ರಿಯೆಯನ್ನು ಕೊಡಲಿಲ್ಲ. "ನಾನು ಶಾಂಭವಿಯ ಜೊತೆ ಮಾತಾಡಬೇಕು" ಎಂದುದನ್ನು ಅವರು ಯಾರೂ ಒಪ್ಪಲಿಲ್ಲ. ಅವಳಿಗೆ ದೇವದಾಸ ಕಳಿಸಿದ್ದನ್ನು ಹೇಗೆ ತಿಳಿಸಬೇಕೆಂದು ಯೋಚಿಸುತ್ತಿದ್ದೆ.

ಪರಿಸ್ಥಿತಿಯ ದಾವಾನಲ ನನ್ನನ್ನು ಸುಡುತ್ತಿದೆ. ಬೆಂಕಿಯ ಮೇಲೆ ಕೂತಂಥ ಅನುಭವ ನನಗೆ. ಶಾಂಭವಿಯು ಚೂರು ಮಾತಾಡಲಿಲ್ಲ. ತುಂಬಾ ವಿಚಿತ್ರ ಎಂದನ್ನಿಸಿತು. ನಾನು ಚಡಪಡಿಸುತ್ತಿರುವುದು ಅವಳ ಗಮನಕ್ಕೆ ಬಂದರೂ ಸುಮ್ಮನಿದ್ದಳು. ಅವಳು ಏನಾದರೂ ಹೇಳಬಹುದಿತ್ತು. ಹೇಳಲಿಲ್ಲ. ಕೊನೆಗೆ ನಾನೇ, "ಶಾಂಭವಿ ಬಚ್ಚಲ ಮನೆ ತೋರಿಸು. ಸ್ವಲ್ಪ ಮುಖ ತೊಳೆದು ಬರುತ್ತೇನೆ" ಅಂದೆ, ಅವಳು ಎದ್ದು ಬಚ್ಚಲ ಮನೆ ತೋರಿಸಲು ಬಂದಳು. ಅನುಭವಿಯಾದ ಅವಳ ಅಮ್ಮನೂ ಜೊತೆಗೆ ಬಂದರು. "ಇರಲಿ, ಇವರನ್ನು ಈಗ ಚೆನ್ನಾಗಿ ಯಮಾರಿಸಬಲ್ಲೆ," ಎಂದು ಕೊಂಡು ಅಲ್ಲಿಂದ ಟಾಯ್ಲೆಟಿಗೆ ಹೋದೆ. ಕತ್ತಲೆಯ ಕೋಟೆ. ಅವಳಮ್ಮ ಹೊರಗಿನಿಂದ ಸ್ವಿಚ್ ಅದುಮಿದರು. ಟಾಯ್ಲಟಿನ ಗೋಡೆಯಲ್ಲಿ ಪೂರ್ತಿಯಾಗಿ; ಶಾಂಭವಿ-'ದೇವದಾಸ,' "ದೇವದಾಸನನ್ನು ನಾನು ಪ್ರೀತಿಸುತ್ತೇನೆ." ಮುಂತಾಗಿ ಹಾಗೂ ಲವ್‌ನ ಸಂಕೇತಗಳನ್ನು ಕೆಂಪು ಅಕ್ಷರದಲ್ಲಿ ಬರೆದಿದ್ದಳು. ಅಂದರೆ ಶಾಂಭವಿ ರಕ್ತದಲ್ಲಿಯೇ ಬರೆದಿದ್ದಾಳೆ. 'ಓಹ್ ಜನಪ್ರಿಯ ಸಿನಿಮಾದ ಕೆಟ್ಟ ಅನುಕರಣೆ. ಒಂದು ಬಾಲಿಶ ಪ್ರತಿಕ್ರಿಯೆ" ಎಂದುಕೊಂಡೆ.

'ದೇವದಾಸ ಕಳಿಸಿದ್ದಾರೆ. ಬರುವ ಬುಧವಾರ ಬೆಳಗಿನ ಜಾವ ನಾಲ್ಕು ಗಂಟೆಗೆ ಗುಡ್ಡದಿಂದ ಆಚೆಗಿರುವ ರಸ್ತೆಯಲ್ಲಿ ಕಾರು ನಿಂತಿರುತ್ತದೆ. ಅಲ್ಲಿಗೆ ಬಾ" ಚೀಟಿಯಲ್ಲಿ ಬರೆದೆ. "ಚೀಟಿಯನ್ನು ಎಂಟು ಮಡಿಕೆ ಮಾಡಿ ಹಿಡಿದುಕೊಂಡೆ. ಆದರೆ ನಾನು ಟಾಯ್ಲೆಟನಿಂದ ಹೊರಬರುವಾಗ ಅವಳಮ್ಮ ಕಾದಿದ್ದರು. ತಂತ್ರದ ಮೊದಲ ಭಾಗ ಫಲಿಸಲಿಲ್ಲ. ಹೊರಗಿನ ವರಾಂಡದಲ್ಲಿ ಕುಳಿತುಕೊಂಡೆ. ಅವಳ ಅಪ್ಪ-ಮಾವ ಎಲ್ಲಿ ಮದುವೆ ಮಾಡಬೇಕೆಂದು ಮಾತಾಡುತ್ತಿದ್ದರು. ನಾನು, 'ಅದನ್ನೆಲ್ಲಾ ಆಮೇಲೆ ಮಾತಾಡೋಣ. ನಾನು ನನ್ನ ಮಾವ ಚಿಕ್ಕಪ್ಪರನ್ನು ಕರೆದುಕೊಂಡು ಬರುತ್ತೇನೆ' ಎಂದು ಹೇಳಿದೆ. ಶಾಂಭವಿಯ ತಂದೆ, "ಆಗಬಹುದು."

ಎಂದರು. ನಾನು ಶಾಂಭವಿಯ ಮುಖ ನೋಡಿ: "ಕುಡಿಯೋದಕ್ಕೆ ನೀರು ಬೇಕು" ಎಂದೆ. ಅವಳು ಹೋಗಿ ತರುವಷ್ಟರಲ್ಲಿ ನಾನೂ ಹೋಗಿ ನೀರಿನ ಲೋಟ ತೆಗೆದುಕೊಳ್ಳುವಂತೆ ಬಲಗೈಯಲ್ಲಿ ಎತ್ತಿಕೊಂಡು ಎಡಗೈಯಿಂದ ಕಾಗದದ ಚೂರನ್ನು ಅವಳ ಕೈಯಲ್ಲಿರಿಸಿದೆ. ಅವಳಮ್ಮನಿಗೆ ನಾನು ಅವಳ ಕೈ ಹಿಡಿದಂತೆ ಮಾತ್ರ ಕಾಣಿಸುತ್ತಿತ್ತು. ಕಾಗದ ರವಾನೆಯು ಅವರಿಗೆ ತಿಳಿಯಲಿಲ್ಲ. ಅದಕ್ಕೆ ನಾನಂದೆ: "ಅವಳ ಕೈ ಎಷ್ಟು ಗಟ್ಟಿಯಿವೆ ಅಂತ ನೋಡುತ್ತಿದ್ದೇನೆ ಕೈ ಗಟ್ಟಿಯಿಲ್ಲವಾದರೆ ಕೈ ಹಿಡಿಯುವುದು ಕಷ್ಟ." ಅವರು ನಗಾಡಿದರು, ಶಾಂಭವಿ ಒಳಹೋದಳು. ಸ್ವಲ್ಪ ಹೊತ್ತು ಮನಸ್ಸಿಗೆ ಆವರಿಸಿದ ಶೂನ್ಯತೆಯಿಂದ ತಪ್ಪಿಸಿಕೊಳ್ಳಲು ಅಡಿಕೆಯ ಕುರಿತು ಮಾತಾಡಿದೆ. ಈ ವಿಷಯಗಳು ಯಾವತ್ತು ಕಷ್ಟದಾಯಕವಲ್ಲ. ಅಪಾಯಕಾರಿಯಲ್ಲ. ಕೆಲವು ಸುದ್ದಿಗಳನ್ನು ಮಾತಾಡುವಾಗ ಯಾವ ತೊಂದರೆಯೂ ಇರುವುದಿಲ್ಲ. ಅವಕ್ಕೆ ಕೋರೆದಾಡೆಗಳು ಇಲ್ಲ. ಹಾರುವುದಕ್ಕೆ ರೆಕ್ಕೆಗಳಿಲ್ಲ. ಯಾರಿಂದಲೋ ಯಾರದೋ ಕಿವಿಗೆ ಮುಟ್ಟುವಾಗ ಬಣ್ಣ, ರುಚಿ, ವಾಸನೆ ಯಾವುದನ್ನೂ ಹೊತ್ತು ತರುವುದಿಲ್ಲ. ಆದರೂ ಅಷ್ಟು ಹೊತ್ತು ಮಾತಾಡಿದರೂ ಅವರು ನನಗೆ ಟೀಯಾಗಲಿ ತಿಂಡಿಯಾಗಲಿ ಕೊಡಲಿಲ್ಲ. ನನಗೂ ಹಸಿವೆ ತಡೆಯುವುದಕ್ಕೆ ಸಾಧ್ಯವಿರಲಿಲ್ಲ. ಒಳಗಡೆ ಹೋದ ಶಾಂಭವಿಯು ಬರುವ ಸೂಚನೆ ಕಾಣಿಸಲಿಲ್ಲ. ಕೊನೆಗೆ ನಾನು– "ಹೋಗಿ–ಮತ್ತೆ ಒಂದು ವಾರದಲ್ಲಿ ಬರುತ್ತೇನೆ" ಎಂದು ಹೊರಟೆ. ಆಗ ಅವಳು ಒಳಗಿನಿಂದ ಟೀ ತಂದುಕೊಟ್ಟಳು. ತಿನ್ನಲು ಜೊತೆಗೆ ಬಾಳೆಯ ಹಣ್ಣು, ನಾನು ತುಂಬಾ ಅವಸರದಲ್ಲಿ ಇರುವವನಂತೆ ಟೀ ಕುಡಿದು ಇನ್ನೇನು ಮೆಟ್ಟಿಲು ಇಳಿಯಬೇಕು ಅನ್ನುವಷ್ಟರಲ್ಲಿ ಶಾಂಭವಿಯು ಹೊರಗೆ ಬಂದಳು. ಅವಳಮ್ಮನ ಮುಖ ನೋಡುತ್ತಾ, 'ಅಮ್ಮ ನಾನು ನಿಶಿಯ ಜೊತೆಗೆ ಹೋಗಿ ಬಸ್ಸು ಹತ್ತಿಸಿ ಬರುತ್ತೇನೆ" ಎಂದಳು. ಅಮ್ಮ ಅವಳನ್ನು ದುರುಗುಟ್ಟಿ ನೋಡಿ, 'ಏನೂ ಬೇಡ ಮದುವೆಯಾದ ಮೇಲೆ ಎಲ್ಲಾ ಗೇಟಿನ ತನಕವಂತಲ್ಲ. ಕಾಶ್ಮೀರಕ್ಕೆ ಬೇಕಾದರೆ ಹೋಗು. ಈಗ ಮಾತ್ರ ಮನೆಯ ಮೆಟ್ಟಿಲು ಕೂಡಾ ಇಳಿಯಬೇಡ"ವೆಂದರು. ಈ ತನಕ ತಾಳ್ಮೆಯಿಂದ ಇದ್ದ ನಾನು ಈ ಮಾತಿನಿಂದ ಸಿಟ್ಟಿಗೇಳುವಂತಾಯಿತು. ಅದನ್ನು ಅದುಮಿಟ್ಟುಕೊಂಡು ಹೇಳಿದೆ" "ಶಾಂಭವಿ ನಾನು ಮದುವೆಯಾಗುವ ಹುಡುಗಿ. ನನಗೂ ಅವಳಿಗೂ ಮಾತಾಡಬೇಕಾದ ಅಗತ್ಯವಿದೆ. ಮದುವೆಯಾದ ಮೇಲೆ ಏನು–ಎತ್ತ ಅಂತ ಯೋಚಿಸಬೇಕಾಗಿದೆ. ಎಲ್ಲಕ್ಕಿಂತ ಹೆಚ್ಚು ನನಗೆ ಈಗಲೇ ಶಾಂಭವಿಯನ್ನು ಹೊತ್ತುಕೊಂಡು ಹೋಗಬೇಕೆಂಬ ಆಸೆಯಿಲ್ಲ. ಆಸೆಯಿದ್ದರೂ ಅವಳನ್ನು ಎತ್ತಿಕೊಂಡು ಹೋಗುವುದು ತುಂಬಾ ಕಷ್ಟ" ಎಂದೆ. ಆ ಮಾತಿನಿಂದ ಅಲ್ಲಿದ್ದವರಿಗೆ ನಗೆ ಬಂತು. ಶಾಂಭವಿಯು ಕೊಂಚ ದಪ್ಪನಾಗಿದ್ದುದು ಅದಕ್ಕೆ ಕಾರಣ. ಆದರೆ ಅವಳು ಗೇಟಿನ ತನಕ ಬಂದಳು. ಅವಳೊಂದಿಗೆ ನಾನು

ಮಾತಾಡಬೇಕಾಗಿರುವ ವಿಷಯಗಳು ಇರಲಿಲ್ಲ. ಅವಳು ಮೆಲ್ಲನೆಯ ಸ್ವರದಲ್ಲಿ, 'ಥ್ಯಾಂಕ್ ಯು ನಿಶಿ' ಅಂದಳು. ಅದಕ್ಕೆ ನಾನು ಉತ್ತರ ಕೊಡಲಿಲ್ಲ. ಮನೆಯಿಂದಲೇ ಬೇರೆ ಬೇರೆ ಕಣ್ಣುಗಳು ನನ್ನ ನೋಡುತ್ತಿವೆಯೆಂದು ಗೊತ್ತಿತ್ತು. ಶಾಂಭವಿ – ನನಗೆ ಕೈಕುಲುಕುವ ನೆಪದಲ್ಲಿ ಒಂದು ಚೀಟಿಕೊಟ್ಟಳು. ಅದನ್ನು ಜೇಬಿಗೆ ಹಾಕಿಕೊಂಡು ಹೊರಟೆ. ಆದರೆ ನನಗೆ ಗೊತ್ತಿತ್ತು – ಶಾಂಭವಿ ಈಗ ನನ್ನ ಬೆನ್ನು ನೋಡುತ್ತಾ ನಿಂತಿರುತ್ತಾಳೆ. ಪ್ರೇಮಕ್ಕಿರುವ ನಂಜುಗಳಲ್ಲಿ ಇದು ಒಂದು ಮುಖ. ಒಡೆದ ಸಂಬಂಧಗಳಲ್ಲಿ ವಿಷದ ನಾಲಿಗೆ. ಮರಳಿ ನಾನು ರೂಮಿಗೆ ಬರುವಾಗ ಎಂಟೂವರೆ. ಬಂದು ಇನ್ನೇನು ಬಟ್ಟೆ ಬದಲಿಸಬೇಕೆನ್ನುವಾಗ – ದೇವದಾಸ ಮತ್ತು ಅವನ ಸ್ನೇಹಿತರು ಬಂದರು. ವಿಷಯವನ್ನೆಲ್ಲಾ ತಿಳಿಸಿದೆ. ಜೇಬಿನಲ್ಲಿದ್ದ ಚೀಟಿ ತೆಗೆದುಕೊಟ್ಟೆ. ಅದರಲ್ಲಿ ಶಾಂಭವಿ – ನಾನು ಬರ್ತೇನೆ ಅಂತ ಮಾತ್ರ ಬರೆದಿದ್ದಳು. ದೇವದಾಸ ಸಂತೋಷದಿಂದ ಕಿರುಚಾಡಿದ. ಅವನ ಸ್ನೇಹಿತರು ನನಗೆ ಕುಡಿಯಲು ಸೋಡಾ ಮತ್ತು ಎರಡು ಕ್ವಾರ್ಟರ್ ವಿಸ್ಕಿ ತಂದಿಟ್ಟು ಹೋದರು. ಅವರು ಹೋದ ಮೇಲೆ ನಾನು ಕುಡಿಯುತ್ತಾ ಕುಳಿತೆ – ಹೆಚ್ಚು ಕಡಿಮೆ ಹತ್ತನ್ನೆರಡೂವರೆಯ ತನಕ. ಮಧ್ಯಾಹ್ನ – ರಾತ್ರಿ ಹೊತ್ತು ಊಟವಿಲ್ಲದ್ದರಿಂದ ಸಿಕ್ಕಾ ಪಟ್ಟೆ ವಾಂತಿಯಾಯಿತು. ಕರುಳು ಕತ್ತರಿಸಿ ಬರುವಂತೆ ಅಯ್ಯೋ ಸಾಕಾಯಿತು ಅಂತ ಅನಿಸಿತು.

ಮತ್ತೆ ಹತ್ತು ದಿನಗಳಲ್ಲಿ ಎಲ್ಲವೂ ಮಾಮೂಲಿಯಾಗಿತ್ತು. ಒಳಗುದ್ದಿನಿಂದ ಉಂಟಾದ ನೋವಿನಂತೆ, ಹಸಿ ಹಸಿಯಾಗಿರುವ ಅದೇ ಚಿತ್ರಗಳು, ಅದರಿಂದ ತಪ್ಪಿಸಿಕೊಳ್ಳುವುದಕ್ಕೆ ಸದಾ ಅಮಲು ಬೇಕು ಅಂತ ಅನಿಸುತ್ತಿತ್ತು. ನಾನು ಸಭ್ಯ ಹಾಗೂ ಸಜ್ಜನನಲ್ಲ ಅಂತ ನನಗೆ ಅನಿಸತೊಡಗಿತು. ಏಳು ಗಂಟೆಗೆ ಕುಡಿಯತೊಡಗಿದರೆ ಸರಿ ಸುಮಾರು ಹತ್ತುಗಂಟೆಯವರೆಗೆ ಕುಡಿಯುತ್ತಾ ಅನಂತರ ಸಿಗರೇಟು ಸೇದುತ್ತಾ ಕುಳಿತಿರುತ್ತಿದ್ದೆ. ದಿನದ ಪುಟಗಳು ಬದಲಾದವು. ಮಂಗಳವಾರ ಬಂತು. ಆ ರಾತ್ರಿಯು ಅಷ್ಟೆ ಹಾಗೆ ಕುಡಿಯುತ್ತಾ ಕೂತಿದ್ದೆ ದೇವದಾಸ ಬಂದು, 'ಎಲ್ಲವೂ ವ್ಯವಸ್ಥೆಯಾಗಿದೆ. ನೀವು ನಾಳೆ ಗಣಪತಿ ದೇವಸ್ಥಾನಕ್ಕೆ ಬರಲೇಬೇಕು' ಅಂದ. 'ಆಯಿತು' ಅಂದೆ. ಮಂಗಳವಾರ ರಾತ್ರಿಯು ನಿದ್ದೆಯಿಲ್ಲದೆ ಕಳೆದೆ. ಸರಿ ಸುಮಾರು ಒಂದು ಗಂಟೆಗೆ ಕೊಂಚ ನಿದ್ದೆ ಬಂತು ಬುಧವಾರ ಬೆಳಿಗ್ಗೆ ಮೂರು ಗಂಟೆಗೆ ಎಚ್ಚರವಾಯಿತು. ಆಮೇಲೆ ಪುನಃ ಕುಡಿದು ಮಲಗಿದೆ. ನಾಲ್ಕೂವರೆ ಇರಬಹುದು ನನ್ನ ರೂಮಿಗೆ ದೇವದಾಸ ಮತ್ತು ಶಾಂಭವಿ ಬಂದರು. ಶಾಂಭವಿ ಬಂದವಳು "ನಿಶಿ – ನಾನು ಬಂದೆ" ಅಂತ ಹೇಳಿ ಕೈ ಹಿಡಿದು ಕುಳಿತಳು.

"ನಿಶಿ ಸಾರಿ ನಿನಗೆ ನೋವು ಕೊಟ್ಟೆ" ಎಂದಳು. ಅದಕ್ಕೆ ಪ್ರತಿಯಾಗಿ ಮಾತಾಡಲು ನನ್ನ ಬಳಿಯಾದರೂ ಏನಿತ್ತು? ಸುಮ್ಮನೆ ಉಳಿದೆ. ಅನಂತರ ಅವರು ಹೋದರು.

ಅವರು ಹೇಳಿದಂತೆ ಅವರ ಮದುವೆಗೆ ಹೋದೆ. ಮದುವೆಯ ರಿಜಿಸ್ಟ್ರೇಶನ್ ಅರ್ಜಿಯಲ್ಲಿ ಅವಳ ಪಾಲಕ/ತಂದೆಯ ಸಹಿ ಎನ್ನುವಲ್ಲಿ ನಾನೇ ಸಹಿ ಮಾಡಬೇಕಿತ್ತು. ಆ ಸಹಿಯನ್ನು ಹಾಕಬೇಕಾದ ಸಂದರ್ಭದಲ್ಲಿ ಮಾತ್ರ ನನ್ನ ಕೈ ನಡುಗಿತ್ತು. ಅಷ್ಟೇ – ಆ ದಿನದ ರಾತ್ರಿಯಿಂದ ಸದಾ ಒಂದು ಗಂಟೆಗೆ ಎಚ್ಚರವಾಗಿ ಕುಳಿತುಕೊಳ್ಳುತ್ತೇನೆ – ಒಂದು ಅಂತರ ಪಿಶಾಚಿಯಾಗಿ. ಮದುವೆಯಾದ ದೇವದಾಸ ಶಾಂಭವಿ ಹೊರಟು ಹೋದರು ಮಡಿಕೇರಿಗೆ.

ನಾನು ಪುನಃ ಬರುವಷ್ಟರಲ್ಲಿ ಶಾಂಭವಿಯ ಮಾವ ಮತ್ತು ಅವಳಪ್ಪ – ನನ್ನ ರೂಮಿನ ಎದುರು ಕಾಯುತ್ತಾ ನಿಂತಿದ್ದರು. ಶಾಂಭವಿ ನಿನ್ನೆ ರಾತ್ರಿಯಿಂದ ಕಾಣಿಸ್ತಾ ಇಲ್ಲ ಎಂದರು. ಅವರ ಮುಖ ಸಪ್ಪಗಿತ್ತು. "ನಾನು ಹೌದಾ?" ಅಂದೆ "ಎಲ್ಲಿಯಾದರೂ ನಿನ್ನ ರೂಮಿಗೆ ಬಂದಳೆನೋ? ಅಂತ ಬಂದೆವು." ಅಂತ ಅವಳ ಮಾವ ಅಂದರು. ಅನಂತರ ಅವರೇ "ಮುಂದೆ ಏನು ಮಾಡಬೇಕು?" ಅಂತ ನನಗೆ ಕೇಳಿದರು. ನಾನಂದೆ: 'ಅವಳು ನಿಮ್ಮ ಸಂಬಂಧಿಕರ ಮನೆಗೆ ಹೋಗಿರಬೇಕು. ಹುಡುಕಿ." ಅವರು ಹೋದರು. ಅವರು ಹೋಗುತ್ತಿರುವುದನ್ನು ನೋಡಿ "ಅಯ್ಯೋ ಪಾಪ" ಅಂತ ಅನಿಸಿತು. ಮುಂದೆ ಎಂದೂ ದೇವದಾಸ ಶಾಂಭವಿ ನನಗೆ ಸಿಗಲಿಲ್ಲ. ಶಾಂಭವಿ ನನಗೆ ಸಿಗಲಿಲ್ಲ ನಿಜ. ಆದರೆ ಶಾಂಭವಿ ನಡೆದ ಹೆಜ್ಜೆಯ ಗುರುತು ಹಾಗೆಯೇ ಉಳಿಯಿತು. ಅವಳು ಆ ಶನಿವಾರ ನನ್ನತ್ರ ಯಾಕೆ ಪ್ರೀತಿಸುತ್ತೇನೆ ಅಂದಳು? ಅವಳು ದೇವದಾಸನನ್ನು ಯಾಕೆ ಮದುವೆಯಾದಳು? ಅವಳು ನನ್ನ ಹೃದಯದಲ್ಲಿ ಯಾಕೆ ಗೆರೆಕೊಯ್ದಳು? ಒಡೆದ ಹೃದಯದಲ್ಲಿ ಅವಳ ಮುಖ ಚಹರೆ ಯಾಕೆ ಹಾಗೆಯೇ ಉಳಿಯಿತು–? ಎಲ್ಲಾ ಪ್ರಶ್ನೆಗಳು ನೋವಿನೊಂದಿಗೆ ಜೀವನದ ಉದ್ದಕ್ಕೂ ಕಾಡಿತು. ಅದೇ ದಿನ – ಅವಳ ಮದುವೆಯ ದಿನ, ಏನೇ ಆಗಿರಲಿ. ದುಗ್ಗಮ್ಮಜ್ಜಿ ತೀರಿ ಹೋದದ್ದು ಕೂಡಾ ತಿಳಿಯಲಿಲ್ಲ. ದುಗ್ಗಮ್ಮಜ್ಜಿಗೆ ಕೊಟ್ಟ ಮಾತು ನಾನು ಮುರಿದೆ. ನನಗೆ ಕೊಟ್ಟ ಮಾತನ್ನು ಶಾಂಭವಿ ಮುರಿದಳು.

ಶಾಂಭವಿಯ ದುಃಖ ಮತ್ತು ಸುಖ, ಅವಳ ಅಂತರಂಗ ಬಹಿರಂಗ – ಯಾವುದೂ ನನಗೆ ತಿಳಿಯಲಿಲ್ಲ. ಯಾಕಾಗಿ ಅವಳು ದೇವದಾಸನನ್ನು ಪ್ರೀತಿಸಿದಳು ಎನ್ನುವುದಕ್ಕೆ ಅವಳು ಅವಳದೇ ಸಮರ್ಥನೆ ಕೊಟ್ಟ ಹಾಗೆ! ನಿನ್ನನ್ನು ಪ್ರೀತಿಸುತ್ತೇನೆ ಎಂದು ಅಂದಾಗ ಅದಕ್ಕೆ ಅವಳು ಪ್ರೀತಿಸಲು ಬೇಕಾದ ಕಾರಣ ಕೊಟ್ಟಳು.

ನಾನು ನಿನ್ನನ್ನು ನೋಡುವುದಕ್ಕೆ ಇಷ್ಟಪಡುವುದಿಲ್ಲವೆನ್ನುವುದಕ್ಕೆ ಕೂಡಾ ಅವಳದೇ ಕಾರಣದ ಲೋಕವಿತ್ತು. ಅಂದಿನಿಂದ ನಾನು ಯಾವತ್ತೂ ಅವಳನ್ನು ಭೇಟಿಯಾಗಲಿಲ್ಲ. ಅವಳು ಹೇಗಿದ್ದಾಳೆಂದು ಗೊತ್ತಿಲ್ಲ. ಇಂದಿಗೂ ನನಗೆ ಗೊತ್ತಿಲ್ಲ.!

ನಿಶಿಯು ರೊಮ್ಯಾಂಟಿಕ್ ಆಗಿ ಡೈರಿಯಲ್ಲಿ ಬರೆದಿದ್ದ. ಯಾರದು ಶಾಂಭವಿ? ಅದರ ಅರ್ಥಗಳನ್ನು ಹುಡುಕಬಾರದು. ನಾನು ತಪ್ಪಿರಬೇಕು. ಅದನ್ನು ಅವಳು ಹೇಳಲಿಲ್ಲ. ನಾನು ಅದನ್ನು ಕೇಳಲಿಲ್ಲ.

* * * * *

"ಜೀವನದಲ್ಲಿ ಏನೊ ಆಗಬಹುದು
ಅದು ತರ್ಕದ ಗಡಿರೇಖೆಗಳಿಗೆ ಸಿಗುವುದಿಲ್ಲ. ತರ್ಕಕ್ಕೆ ಭಾವುಕತೆಯಿಲ್ಲ.
ಆದರೆ ಭಾವುಕ ಪ್ರತಿಕ್ರಿಯೆ ತರ್ಕವಾಗಲಾರದೇಕೆ?

## 1992
## ಡಿಸೆಂಬರ್
## 15

ಚಂದುನಾಯ್ಕನ ಮಗ ಕಿಟ್ಟನಿಗೆ ವಿದ್ಯೆಯೆನ್ನುವುದು ಸರಿಯಾಗಿ ಹತ್ತಲಿಲ್ಲ. ಕೃಷ್ಣನಾಯ್ಕ ಎಂದು ಸರಿಯಾಗಿ ಬರೆಯಲು ಕೂಡಾ ಅವನು ಬಹಳ ಬಾರಿ ಮೇಷ್ಟ್ರ ಕೈಯಿಂದ ಏಟು ತಿಂದಿದ್ದ. 'ಕೃಷ್ಣನಾಯ್ಕ' ಎಂದು ಬರೆಯುವುದೋ 'ಕ್ರಿಷ್ಣ' ಎಂದೋ ಬರೆಯುತ್ತಿದ್ದ. 'ಕಿರಿಷ್ಣ' ಎಂದು ಬರೆದು ಒಂದು ದಿನ ಮೇಷ್ಟ್ರ ಕೈಯಲ್ಲಿದ್ದ ಹುಣಿಸೆ ಬೆತ್ತದಿಂದ ಅವನು ತಿಂದ ಏಟಿಗೆ ಲೆಕ್ಕವಿಲ್ಲ. ಮೇಷ್ಟ್ರೇ ಒಂದು ಸಾರಿ ಸಿಟ್ಟಿನ ಭರದಲ್ಲಿ ಯಾರೋ ಒಬ್ಬ ಹುಡುಗನಿಗೆ ಕಪಾಲಕ್ಕೆ ಹೊಡೆದಿದ್ದರಂತೆ. ಅದು ಆಯತಪ್ಪಿ ಹೊಡೆತ ಕಣ್ಣಿನ ಸಮೀಪ ಬಿತ್ತಂತೆ. ಆ ಹುಡುಗ ಮೂರ್ಛೆ ತಪ್ಪಿ ಬಿದ್ದುಬಿಟ್ಟನಂತೆ. ಅಂದಿನಿಂದ ಮೇಷ್ಟ್ರು ಹುಶಾರಾಗಿ ಬಿಟ್ಟರು. ಅಂದಿನಿಂದ ಯಾವತ್ತೂ ಅವರೂ ಗಲ್ಲಕ್ಕೆ, ಕಪಾಳಕ್ಕೆ, ತಲೆಗೆ ಹೊಡೆಯುವ ಚಾಳಿಯನ್ನು ಬಿಟ್ಟುಬಿಟ್ಟರು. ಏನಿದ್ದರೂ ಹುಣಿಸೆಯ ಬೆತ್ತ. ಆ ಬೆತ್ತದಿಂದ ಕಾಲಿಗೆ ಹೊಡೆದರೆ, ಕುಂಡೆಗೆ ಹೊಡೆದರೆ ಯಾವ ಸಮಸ್ಯೆಯೂ ಇಲ್ಲವೆಂದು ಅವರ ಲೆಕ್ಕಾಚಾರ. ಸಾಧಾರಣ ತಪ್ಪು ಮಾಡಿದವರಿಗೆ ಕುಂಡೆಗೆ ಹೊಡೆಯುತ್ತಿದ್ದರು. ಕುಂಡೆಗೆ ಹೊಡೆದರೆ ಹೆಚ್ಚು ಏಟು ಬೀಳುವುದಿಲ್ಲವೆಂದು ಅವರಿಗೂ ಗೊತ್ತು. ಯಾಕೆಂದರೆ – ಹುಡುಗರಾದರೆ ಮೇಲಿನಿಂದ ಚಡ್ಡಿಯಿರುತ್ತದೆ. ಹುಡುಗಿಯರಾದರೆ ಲಂಗವಿರುತ್ತದೆ. ಆದರೆ ಕಾಲಿನ ಬೆರಳಿಗೆ, ಕಾಲಿನ ಗಂಟಿಗೆ ಹೊಡೆಯಬೇಕಾದರೆ ಅಪರಾಧಿಯ ಅಪರಾಧವು ಘೋರವಾಗಬೇಕಾದ್ದು ಅಗತ್ಯವಿತ್ತು. ಕಿಟ್ಟ 'ಕಿರಿಷ್ಣ' ಎಂದು ಬರೆದದ್ದು ನಿಜವಾಗಿಯೂ ಮೇಷ್ಟ್ರ – ಅದೊಂದು ಅಪರಾಧವೆಂದೂ ತನ್ನ ಮರ್ಯಾದೆಯನ್ನು ತೆಗೆಯುವ ಕೆಲಸವನ್ನು ಕಿಟ್ಟ ಮಾಡಿದನೆಂದು ತಿಳಿದು, ಅವನ ಕಾಲಿನ ಮೀನ ಖಂಡಕ್ಕೆ ಸರಿಯಾಗಿ ಬೀಳುವಂತೆ ಏಟು ಹೊಡೆದರು. ಏಟು ಬಿದ್ದರೂ ಕಿಟ್ಟ ಒಂಚೂರೂ ಅಳಲಿಲ್ಲ. ಅವನು ಕಣ್ಣೀರು ಹಾಕಿ ದಮ್ಮಯ್ಯವೆಂದು ಹೇಳಿದ್ದರೆ ಮೇಷ್ಟ್ರು ಕರಗುತ್ತಿದ್ದರೋ ಏನೋ? ಅವನು ಯಾವುದೇ ಕಾರಣಕ್ಕೂ 'ದಮ್ಮಯ್ಯ' ಅಂತ ಹೇಳಬಾರದೆಂದೂ ನಿರ್ಧರಿಸಿದಂತಿತ್ತು. ಮೇಷ್ಟ್ರ ಮುಖವನ್ನು ದುರುದುರು ನೋಡುತ್ತಾ ನಿಂತ. ಅವನ ನೋಟ ನೋಡಿ ಮೇಷ್ಟ್ರು ಹೊಡೆ ಹೊಡೆದು ಕೊನೆಗೆ ಸುಸ್ತಾಗಿ ಕೋಲು ಬಿಸಾಕಿದರು. ಮತ್ತೆ ಪಾಠ ಶುರು ಮಾಡಿದರು. ಸಂಜೆಯ ದೊಡ್ಡಬೆಲ್ ಹೊಡೆದು ಎಲ್ಲರೂ ಹೊರಟು ಹೋಗಲು ಪ್ರಾರಂಭಿಸಿದಾಗ ಶಾಲೆಯ ಬೀಗ ಹಾಕಲು ಕಿಟ್ಟನನ್ನು ಮೇಷ್ಟ್ರು 'ಬೀಗ ಹಾಕು'

ಎಂದರು. 'ಬೀಗ ಹಾಕುವುದೂ ಇಲ್ಲ. ನಾಳೆಯಿಂದ ಶಾಲೆಗೆ ಬರುವುದೂ ಇಲ್ಲ. ಅದ್ಹೇಗೆ ಬೀಗ ಹಾಕ್ತೀರಿ?' ಎಂದು ಹೇಳುತ್ತಾ ಕಿಟ್ಟ ಒಂದೇ ಸಮ ಓಟ ಕಿತ್ತ. ಅಲ್ಲಿಂದ ಅವನು ತಿರುಗಿಯೂ ನೋಡಲಿಲ್ಲ. ಅಂದು ಶಾಲೆ ಬಿಟ್ಟ ಕಿಟ್ಟ ಮತ್ತೆ ಯಾವತ್ತೂ ತಿರುಗಿಯೂ ನೋಡಲಿಲ್ಲ. ಅಂಥ ಕಿಟ್ಟ ತಂದೆ ಸತ್ತ ಮೇಲೆ ಲಂಗು ಲಗಾಮು ಇಲ್ಲದಂತಾಗಿ ಬಿಟ್ಟ. ಚಂದುನಾಯ್ಕನದು ಒಂದು ಅವತಾರವಾದರೆ ಅವನದು ಮತ್ತೊಂದು ಅವತಾರ. ಚಂದುನಾಯ್ಕ ಸತ್ತು ಒಂದು ವಾರವಾಗಲು ಪುರುಸೊತ್ತಿಲ್ಲ. ಅವನ ಶೈಲಿಯು ಬದಲಾಯಿತು. ಹೇಗೂ ಅಮ್ಮನಿಗೆ ಯಾವುದೂ ತಿಳಿಯುವುದಿಲ್ಲವೆಂದು ಅವನ ಲೆಕ್ಕಾಚಾರ. ಅವನಿಗೆ ಕಣ್ಣು ನೆತ್ತಿಯಲ್ಲಿ ಮೂಡತೊಡಗಿತು. ತಂದೆ ಸತ್ತಮೇಲೆ ಮುಂದೆ ನಮ್ಮ ದಿಕ್ಕು ಯಾರು ಎಂಬ ಚಿಂತೆಯು ಅವನಿಗೆ ಬಂದಂತಿರಲಿಲ್ಲ. ತಾಯಿಯನ್ನು ಪೀಡಿಸಿ ಒಂದು ದಿನ ಅವಳ ಓಲೆಯನ್ನು ಲಪಟಾಯಿಸಬೇಕೆಂದು ಲೆಕ್ಕಹಾಕಿದ್ದ. ಮೊದಲು ನಾಕು ದಿನ ಅದು ನಡೆಯಲಿಲ್ಲ. ಅಮ್ಮನಿಗೆ ಕೇಳಿದ: 'ನಿಮ್ಮ ಕಿವಿಯದ್ದು ಹಾಳಾಗಿದೆ'

'ಹಾಳಾದರೆ ಏನು ಮಾಡಬೇಕು'

'ಅವನ್ನು ಮಾರಿ'

'ಮಾರಿ ಏನು ಮಾಡಬೇಕು?'

ಕಿಟ್ಟ ಈ ಮಾತುಗಳಿಂದ ಆ ದಿನ ಸುಮ್ಮನಾದ. ಒಂದು ದಿನ ಓಲೆಯನ್ನು ತೊಳೆಯಬೇಕೆಂದು ತೆಂಗಿನ ಕಾಯಿಯ ಕರಟದಲ್ಲಿ ಸೀಗೆಕಾಯಿ ಪುಡಿಯ ನೀರಿನಲ್ಲಿ ಹಾಕಿಟ್ಟು ಸ್ನಾನಕ್ಕೆ ಹೋಗಿದ್ದಳು. ಅದನ್ನೇ ಕಿಟ್ಟ ಎತ್ತಿಕೊಂಡು ಹೋಗಿ ಅಡವಿಟ್ಟು ಬಂದ. ಅಡವಿಟ್ಟುದು ಕುಂಟ ಕಾಲು ಮೂಸೆಗೆ. ಮೂಸೆ ಬಂಗಾರದ ಓಲೆಯನ್ನು ಕೈಯಲ್ಲಿಯೇ ತೂಗಿ ಕಿಟ್ಟನಿಗೆ ಆ ದುಡ್ಡು ಎಣಿಸಲು ಹೋದ. ಆಗ ಕಿಟ್ಟ ಹೇಳಿದ; "ನನಗೆ ದುಡ್ಡು ಬೇಡ ಒಂದು ವಾಚು ಬೇಕು" ಕುಂಟ ಮೂಸೆ ಕೈಯಲ್ಲಿದ್ದ ವಾಚು ಬಿಚ್ಚಿ ಕಿಟ್ಟನಿಗೆ ಕೊಟ್ಟು, 'ಇದನ್ನು ಯಾರಿಗೂ ಹೇಳಬೇಡ' ಅಂದಿದ್ದ. ಬಡ್ಡಿ ಸುಬ್ಬಣ್ಣ ; ಬಿಳಿ ಮೂಸೆ; ಕುಂಟ ಮೂಸೆ – ಈ ಮೂವರಲ್ಲಿ ಮಾತ್ರ ವಾಚು ಇದ್ದ ಕಾಲವದು. ಸುಬ್ಬಣ್ಣನ ಮನೆಯಲ್ಲಿ ಒಂದು ಮುಳ್ಳು ಗಡಿಯಾರವೂ ಇತ್ತು. ಅದು ಒಂದು ಗಂಟೆಯಾದರೆ ಒಂದು ಸಾರಿ 'ಡಣ್' ಅಂತ ಕೂಗುತ್ತಿತ್ತು: ಹನ್ನೆರಡು ಗಂಟೆಗೆ ಹನ್ನೆರಡು ಸಾರಿ 'ಡಣ್ ಡಣ್' ಅಂತ ಹೇಳುತ್ತಿತ್ತು. ವಾಚನ್ನಂತೂ ಯಾರೂ ಕಟ್ಟುತ್ತಿರಲಿಲ್ಲ. ಯಾರಿಗೂ ಅದು ಅಗತ್ಯವೆಂದು ಅನಿಸುತ್ತಿರಲಿಲ್ಲ. ವಾಚು ಮತ್ತು ಅದು ಸೂಚಿಸುತ್ತಿದ್ದ ಕಾಲವು ಯಾರಿಗೂ ಉಪಯುಕ್ತವಾಗುತ್ತಿರಲಿಲ್ಲ.

ರುಕುಮಿಣಿಯು ಬಂದು ನೋಡ್ತಾಳೆ– ಅದೂ ಸ್ನಾನ ಮುಗಿಸಿ ಸಂಜೆಯ ದೀಪವುರಿಸಿದ ಮೇಲೆ – ಕರಟದಲ್ಲಿ ಏನಿದೆ? ಸೀಗೆಕಾಯಿಯ ಬೀಜ ಮತ್ತು

ನೀರಿನ ಹೊರತು. ಅವಳಿಗೆ ಜೀವ ಹಾರಿಹೋದಂತೆ ಆಯಿತು. ಗಂಡ ಸತ್ತಾಗಲೂ ಅವಳು ಅಷ್ಟು ಅತ್ತಿರಲಿಲ್ಲ. ಅವಳಿಗೆ ರೋದನ ಮಾಡುವುದರ ಹೊರತು ಬೇರೇನೂ ಇರಲಿಲ್ಲ. ಅದರ ನಡುವೆಯೂ ಅದು ಕಿಟ್ಟನ ದರ್ಬಾರು ಅನ್ನುವುದರ ಹೊರತು ಬೇರಾರ ಕಾರುಬಾರು ಅಲ್ಲವೆಂದು ಅವಳಿಗೆ ಹೊಳೆಯಿತು. ಕುಂಟು ಕಾಲಿನ ಮೂಸೆಯು ಕೊಟ್ಟ ವಾಚನ್ನು ಕಟ್ಟದೆ, ಜೇಬಿನಲ್ಲಿರಿಸಿಕೊಂಡು ಕಿಟ್ಟ ಮನೆಗೆ ಬಂದ. ರುಕುಮಿಣಿಯು ಅಳುತ್ತಿದ್ದಳು. ಕಿಟ್ಟ ಬಂದವನು ತಾಯಿ ಯಾಕೆ ಅಳುತ್ತಿದ್ದಾಳೆಂದು ಗೊತ್ತಿದ್ದು ಸುಮ್ಮನುಳಿದ. ರುಕುಮಣಿಯೇ ಅಳುತ್ತಾ 'ನನ್ನ ಓಲೆ ಮಾರಿ ತಿಂದಾಯಿತಾ? ಎಂದು ಕೇಳಿದಳು. ಅದಕ್ಕೆ, 'ಗಂಡ ಸತ್ತವರಿಗೆ ಓಲೆಯಾಕೆ?' ಎಂದ. ಕಿಟ್ಟ ಕದಿಯುವುದಕ್ಕೆ ಮೊದಲ ಪ್ರಸ್ತಾವನೆಯನ್ನು ಬರೆದದ್ದು ಹೀಗೆ. ಮರುದಿನವೇ ಅವನ ವಾಚು ಕಟ್ಟಿಕೊಂಡು ಹೊರಟ. ಅವನ ಕೈಯಲ್ಲಿ ವಾಚು ಕಂಡು ಸುಬ್ಬಣ್ಣ ಮಾತ್ರ ಕಸಿವಿಸಿಗೊಂಡ. ಯಾರೂ ವಾಚು ಕಟ್ಟುವುದಿಲ್ಲ. ಅದು ತಾನು ಕೂಡಾ ಎಲ್ಲಿಯಾದರೂ ಪೇಟೆಗೆ ಹೋಗುವಾಗ ಮಾತ್ರ ವಾಚು ಕಟ್ಟಿಕೊಂಡು ಹೋಗುವುದು ರೂಢಿ. ಅದರಲ್ಲಿ ಈ ಕಿಟ್ಟ ತನ್ನ ಎದುರು ವಾಚು ಕಟ್ಟಿಕೊಂಡು ಓಡಾಡುತ್ತಾನೆ ಎನ್ನುವುದು ಸುಬ್ಬಣ್ಣನಿಗೆ ನುಂಗಲಾರದ ತುತ್ತಾಗಿತ್ತು. ಉದ್ದಕಾಲು ಲಕ್ಷ್ಮಿಯ ಎದುರು ಹಲ್ಲು ಕಡಿದುಕೊಂಡು 'ಉಸ್ಸಪ್ಪಾ' ಅಂದ. ಲಕ್ಷ್ಮಿಯು ಮೂಗುತಿಯನ್ನು ತಿರುವುತ್ತಾ ಬಂದಳು. 'ಸಾಕಾಯಿತು. ಒಂದು ಲೋಟ ನೀರು ತೆಗೆದುಕೊಂಡು ಬಾ' ಎಂದ ಸುಬ್ಬಣ್ಣ ವಾಡಿಕೆಯಂತೆ ಜೋರಾಗಿ ಹುರಿಕೆಯನ್ನು ಬಿಟ್ಟ. 'ಈ ವಾಯು ದೋಷವೊಂದು ನಿಲ್ಲುವುದಿಲ್ಲವಪ್ಪಾ' ಎಂದು ಹೇಳಿದ. ಅವನ ಮಾತನ್ನು ಕೇಳಲು ಲಕ್ಷ್ಮಿಯು ಅಲ್ಲಿ ಇರಲಿಲ್ಲ. ಅವಳು ಒಳಗಿಂದ ನೀರು ತಂದುಕೊಟ್ಟ ಕೂಡಲೆ, 'ಹೌದನಾ ನಿನಗೊಂದು ವಿಷಯ ಗೊತ್ತುಂಟಾ?' ಎಂದ. ಏನೋ ಘನತರವಾದ ವಿಷಯವಿರಬೇಕೆಂದುಕೊಂಡು ಏನು ಎಂಬಂತೆ ಗಂಡನ ಮುಖವನ್ನು ನೋಡಿದಳು ಸುಬ್ಬಣ್ಣ. 'ಕೂತುಕೋ' ಅಂದ ಉದ್ದಕಾಲು ಕಾಲು ಬಿಡಿಸಿಕೊಂಡು ಕೂತಳು. ಅದು ಅವಳ ಮಾಮೂಲಿಯಾದ ಭಂಗಿ. ಸುಬ್ಬಣ್ಣ 'ಈವತ್ತು ಏನಾಯಿತು ಗೊತ್ತಾ?' ಎಂದು ಹೇಳಿದ. ಕತೆಗೆ ಬಣ್ಣ ಕಟ್ಟಲು ಮತ್ತೆ ಪುನಃ 'ಈವತ್ತು ಒಂದು ವಿಷಯ ನೋಡಿದೆ' ಎಂದ. 'ಅದೇನು ಅಂತ ಹೇಳಬಾರ್ದ' ಎಂದು ಲಕ್ಷ್ಮಿಯು ಮತ್ತೆ ಕಿವಿಯ ಓಲೆಗೆ ಕೈಹಾಕಿದಳು.

'ಆ ಕಿಟ್ಟ ರುಕುಮಿಣಿಯು ಓಲೆಯನ್ನು ಮಾರಿ – ವಾಚು ತಗೊಂಡಿದ್ದಾನೆ. ಅವನಿಗೆ ಯಾಕೆ ಅಂತ ಬೇಕಲ್ವ? 'ಓಲೆಯನ್ನು ಕುಂಟ ಮೂಸೆಗೆ ಮಾರಿದನಂತೆ. ನನ್ನತ್ರ ತಂದಿದ್ದರೆ ನಾಕಾಣೆ ಹೆಚ್ಚು ಸೇರಿಸಿಕೊಡುತ್ತಿದ್ದೆ' ಎಂದು ಹೇಳಿದ. ಲಕ್ಷ್ಮಿ, 'ಅವನಿಗೆ ವಾಚು ಎಂತದ್ದಕ್ಕೆ? ಏನು ಹೊತ್ತು ಹೋಗುವುದು ಗೊತ್ತಾಗುವುದಿಲ್ಲವಾ?' ಎಂದು ಹೇಳಿದಳು. 'ಎಲ್ಲಾ – ಹೀಗೆ ನೋಡು, ಚಂದು ಸತ್ತ. ಅವನು ಸತ್ತು

ವರ್ಷವಾಗಲೀ ಕಿಟ್ಟನ ದರ್ಬಾರು ಶುರುವಾಯಿತು' ಎಂದು ಹೇಳಿದ ಸುಬ್ಬಣ್ಣ ತನ್ನ ಪಾಡಿಗೆಂಬಂತೆ – 'ಇವರೆಲ್ಲ ಇಷ್ಟೆ. ದರಬಾರು ಮಾಡಿ ಸಾಯ್ತಾರೆ' ಅಂತಂದ. ಕಿಟ್ಟನ ಒಂದು ಅವತಾರ ಪ್ರಾರಂಭವಾಗಿದ್ದು ಹೀಗೆ! 'ಸಾಯಲಿ ಬಿಡಿ. ಅವನ ಸಮಾಚಾರ ಕಟ್ಟಿಕೊಂಡು ನಮಗೇನು? ಎಂದು ಲಕ್ಷ್ಮಿಯು ಸಮಾಧಾನ ಮಾಡಿದಳು.'

ಕಿಟ್ಟನಿಗೆ ಇಪ್ಪತ್ತೆರಡು ವರ್ಷದಾಟಿ ಇಪ್ಪತ್ತಮೂರು ತುಂಬುವ ಹೊತ್ತಿಗೆ ಅವನು ಅನೇಕ ವಿಷಯಗಳಲ್ಲಿ ಪ್ರಖ್ಯಾತಿಯನ್ನು ಪಡೆದು ಬಿಟ್ಟಿದ್ದ. ರಾತ್ರೋ ರಾತ್ರಿ ಅಡಿಕೆ ಗೊನೆ ಇಳಿಸುವುದು. ಕಳ್ಳನಾಟಾ ವ್ಯಾಪಾರ, ಕೋಳಿ ಅಂಕ. ಹೀಗೆ ಸಕಲಕಲೆಯಲ್ಲಿಯೂ ಅವನು ಪರಿಣಿತಿಯನ್ನು ಹೊಂದಿಬಿಟ್ಟಿದ್ದ. ಅಷ್ಟು ಸುಲಭವಾಗಿ ಯಾರ ಕೈಗೂ ಸಿಗದವನು ಅಂತ ಹೆಸರೂ ಮಾಡಿದ್ದ. ಮೂರೂ ಹೊತ್ತು ಬೀಡಿ; ಎಲೆಯಡಿಕೆ – ಹೀಗೆ ಬಾಯಿಯಲ್ಲಿ ಏನಾದರೂ ಒಂದು ಇರುತ್ತಿತ್ತು. ಮಾತು ಮಾತ್ರ ಭಾರೀ ಕಮ್ಮಿ. ಆತ್ಮೀಯರೊಂದಿಗೆ ಮಾತ್ರ ಮಾತಾಡುತ್ತಿದ್ದ. ಲಿಂಗ, ಕುಂಟುಕಾಲಿನ ಮೂಸೆಯ ಹತ್ತಿರ, ಪಟೇಲರ ಅಳಿಯನ ಹತ್ತಿರ ಬಿಟ್ಟರೆ ಯಾರೊಂದಿಗೂ ಹೆಚ್ಚು ಮಾತಾಡಿದ ಗಿರಾಕಿಯಲ್ಲ. ದಾರಿಯಲ್ಲಿ ಯಾರು ಎದುರು ಸಿಕ್ಕಿದರೂ ತಲೆಕೆಳಗೆ ಮಾಡಿಕೊಂಡು ಅಥವಾ ಕಣ್ಣು ಕೆಕ್ಕರಿಸಿಕೊಂಡು ನೋಡುತ್ತಾ ಮುಂದೆ ಸಾಗುತ್ತಿದ್ದ. ಅವನ ಮೌನ ಮಾತ್ರ ಅಸಹನೀಯವಾದ ಹಾಗೆಯೇ ಸಣ್ಣವರಿಗೆ ಭಯವನ್ನು ಹುಟ್ಟಿಸುತ್ತಿತ್ತು.

ಒಂದು ದಿನ ಅವನು ನಾಪತ್ತೆಯಾದರೆ ಅದಕ್ಕೆ ಯಾವುದಾದರೂ ಮಹತ್ವದ ಕಾರಣವಿದೆಯೆಂದೇ ಜನರು ಭಾವಿಸುತ್ತಿದ್ದರು. ಮಧ್ಯಾಹ್ನ ಕುಡಿದುಕೊಂಡು ಬಂದು ಊಟ ಮಾಡಿ ಮಲಗಿದರೆ ಏಳುತ್ತಿದ್ದುದು ಸಂಜೆ 5 ಗಂಟೆಗೆ. ಬೆಳಗಿನ ಹೊತ್ತು ಸೇಂದಿ ಮತ್ತು ಸಂಜೆಯ ಹೊತ್ತು ಸಾರಾಯಿ ಕುಡಿಯುತ್ತಿದ್ದ. ಇದರಿಂದ ಅವನ ಕಣ್ಣುಗಳು ಸದಾ ಕೆಂಪಾಗಿ ಉರಿಯುವ ಕೆಂಡದ ರೀತಿಯಲ್ಲಿರುತ್ತಿದ್ದವು. ಸೇಂದಿ ಕುಡಿದರೆ ಕೊಂಚವೂ ಏರುಪೇರಾಗದ ಅವನ ಜೀವವು ಸಾರಾಯಿ ಕುಡಿದಾಗ ಕೊಂಚ ಏರುಪೇರಾಗುತ್ತಿತ್ತು. ನಾಲಿಗೆಯು ಕೊಂಚ ತಡವರಿಸುತ್ತಿತ್ತು. ಗಟ್ಟಿಮುಟ್ಟಾದ ಅವನ ದೇಹದ ಚಹರೆಯು ಮಾತ್ರ ಆಕರ್ಷಕವಾಗಿತ್ತು ಎಂದು ಹೇಳಲು ಅಡ್ಡಿಯಿಲ್ಲ. ಅವನ ಸೊಂಟ ಸಪೂರವಿತ್ತು. ಕೈಗಳು ಒರಟಾಗಿದ್ದವು. ಚಿಗುರು ಮೀಸೆಯ ಹೊಂತಕಾರಿಯೆಂಬ ಬಿರುದು ಅನ್ವಯವಾಗುವಂತೆ ಇದ್ದ. ಅವನು ಹೆಸರು ಕೆಡಿಸಿಕೊಂಡಿದ್ದ. ಆದರೆ ದೇಹವನ್ನು ಪೂರ್ತಿ ಕೆಡಿಸಿಕೊಂಡಿರಲಿಲ್ಲ. ವಯಸ್ಸಿಗೆ ಬಂದ ಹುಡುಗಿಯರು ಒಮ್ಮೆ ತಿರುಗಿ ನೋಡಬಹುದಾದ ರೂಪ ಅವನಿಗೆ ಇತ್ತು.

ಇಂಥ ಕಿಟ್ಟ ಮೀನಾಕ್ಷಿಯ ಪ್ರೇಮಕ್ಕೆ ಸಿಕ್ಕಿಬಿದ್ದ. ಲೀಲಾ ಮತ್ತು ಕಿಟ್ಟನ ಜಾತಿಯೂ ಒಂದೆ. ಲೀಲಾ ಕೂಡಾ ವಿಟ್ಲ ಸೀಮೆಯವಳೇ. ಅವಳದು ಎಣ್ಣೆಗಪ್ಪು ಮೈಬಣ್ಣ. ದೊಡ್ಡಕಣ್ಣು. ಹಣೆ ಮಾತ್ರ ಸಣ್ಣದು. ಹಣೆಯಲ್ಲಿ ಒಂದು ಚುಕ್ಕಿ. ಅವಳನ್ನು ಕಿಟ್ಟ ಕಂಡದ್ದು ಜಾತ್ರೆಯಲ್ಲಿ. ಜಾತ್ರೆಯ ದಿನ ಅವಳು ಒಂದಿಬ್ಬರು ಹುಡುಗಿಯರೊಂದಿಗೆ ದಬ್ಬಣ ತೆಗೆದುಕೊಳ್ಳುತ್ತಿದ್ದರು. ಜಾತ್ರೆಯ ದಿನದ ಜನ ಜಂಗುಳಿಯಲ್ಲಿ ಯಾರು ಯಾರನ್ನು ಮುಟ್ಟಿದರು. ಯಾರು ಯಾರನ್ನು ಮಾತಾಡಿಸಿದರು ಎಂದು ನೋಡಲು ಪುರುಸೊತ್ತಿಲ್ಲ. ಅದರ ನಡುವೆ ಮಕ್ಕಳ ಕೈಯಲ್ಲಿ ಪೀಪಿ ಬೇರೆ. ಮಂಡಕ್ಕಿಯವರ ಗಲಾಟೆ. ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಾದುದರಿಂದ ಗಲಾಟೆಯೋ ಗಲಾಟೆ. ಮಕ್ಕಳ ಕೈಯಲ್ಲಿರುವ ಪೀಪಿಯ ಸದ್ದು; ಆಗಾಗ ಒಡೆದು ಹೋಗುವ ಬಲೂನಿನಿಂದ ಸಂಭ್ರಮದ ಕೇಕೆಯು ಹೆಚ್ಚಾಗಿತ್ತು. ಆ ಜನ ಜಂಗುಳಿಯ ನಡುವೆಯೇ ಕಿಟ್ಟ ನುಸುಳಿಕೊಂಡು ಹೋಗುತ್ತಿದ್ದ. ಅವನು ಹೋಗುತ್ತಿರುವಾಗಲೇ ರಿಬ್ಬನ್ ತೆಗೆದುಕೊಂಡು ಲೀಲಾವತಿಯು ರಪ್ಪನೆ ತಿರುಗಿದಳು. ಅವಳು ತಿರುಗಿದ್ದಕ್ಕೂ – ಕಿಟ್ಟೆ ಅಲ್ಲಿ ಹೋದುದಕ್ಕೂ ಸರಿಯಾಯಿತು.

'ಏನು ಕೈ ಕಾಲಿಗೆ ಕಣ್ಣು ಕಾಣಿಸುವುದಿಲ್ಲವಾ?'

ಲೀಲಾ ಜೋರಾಗಿ ಕೇಳಿದಳು.

'ನನಗೆ ಕಾಲಿಗೆ ಕಣ್ಣು ಕಾಣಿಸುವುದಿಲ್ಲ. ನನ್ನ ಕೈಗೆ ಕಣ್ಣು ಕಾಣಿಸುವುದಿಲ್ಲ. ಕಣ್ಣಿರುವುದು ಮುಖದಲ್ಲಿ ಅಂತ ತಿಳಿಯುತ್ತದಾ?' ಎಂದ ಕಿಟ್ಟ. ಅಲ್ಲಿಂದ ಅವರ ಮಾತು ಮುಂದುವರಿಯಿತು.

'ರಿಬ್ಬನ್ ಅಂಗಡಿಯತ್ರ ಗಂಡಸರಿಗೆ ಏನು ಕೆಲಸ?'

ಕಬ್ಬಿಣದ ಅಂಗಡಿಯಲ್ಲಿ ಇರುವೆಗೇನು?

'ಇರುವೆಗೆ ಬೆಲ್ಲ ಕಂಡರೆ ಆಸೆ. ಹಾಗೆಯೇ..........

"ಸಾಕು. ಈ ಗಂಡಸರು ಮೈಮೇಲೆ ಬೀಳ್ತಾರಪ್ಪ! ಗಂಡಸರಿಗೆ ಸೊಕ್ಕು"

'ನಿನಗೆ ಚರ್ಬಿ'

'ಚರ್ಬಿ ಅಂದರೆ ಏನಿಲ್ಲಾ ಮತ್ತೆ'

ಕಿಟ್ಟ ಚರ್ಬಿ ಅಂತ ಹೇಳುತ್ತಾ ಅವಳ ಎದೆಯನ್ನು ನೋಡಿದ, ಅವನು ನೋಡುತ್ತಿರುವುದನ್ನು ಗಮನಿಸಿ ಲೀಲಾ ಸೆರಗು ಸರಿಪಡಿಸಿಕೊಂಡಳು. ಅವಳೊಂದಿಗೆ ಇದ್ದವರು, 'ಏಯ್ ಹೋಗೋಣ' ಎಂದರು. ಲೀಲಾ ನಡೆದಳು. ಕಿಟ್ಟನಿಗೆ ಆ ಪ್ರಕರಣವು ಕಣ್ಣಲ್ಲಿ ಅಚ್ಚೊತ್ತಿ ನಿಂತಂತೆ ಆಯಿತು. ಜಾತ್ರೆ ನಡೆದ

ಮರುದಿನ ವಿಟ್ಲದಲ್ಲಿ ಕಿಟ್ಟನಿಗೆ ಮತ್ತೆ ಲೀಲಾ ಸಿಕ್ಕಿದಳು. ದಾರಿಯಲ್ಲಿ ಕೈಚೀಲ ಹಿಡಿದುಕೊಂಡು ಒಬ್ಬಳೇ ಬರುತ್ತಿದ್ದಳು. ಕಿಟ್ಟ ಅವಳನ್ನು ನೋಡಿದ. ಅವನ ನೋಟಕ್ಕೆ ಲೀಲಾ ತಲೆ ತಗ್ಗಿಸಿದಳು. ಅವಳು ಹತ್ತಿರ ಬರುತ್ತಿದ್ದ ಕಿಟ್ಟ, ಮೆಲ್ಲನೆ, 'ಜಾತ್ರೆ ನಿನ್ನೆಯೇ ಮುಗಿಯಿತು. ಈವತ್ತು ಚೀಲ ತೆಗೆದುಕೊಂಡು ಹೋದರೂ ಪ್ರಯೋಜನವಿಲ್ಲ' ಅಂದ. "ಜಾತ್ರೆ ಮುಗಿಯಿತು ಅಂತ ಗೊತ್ತುಂಟು" ಎಂದು ಹೇಳುತ್ತಾ ಲೀಲಾ ಮುಂದೆ ಹೆಜ್ಜೆಯಿಡಬೇಕೆಂದುಕೊಳ್ಳುವಷ್ಟರಲ್ಲಿ ಕಿಟ್ಟ 'ನಿನ್ನ ಹೆಸರೇನು?' ಎಂದು ಕೇಳಿದ.

'ಅದೆಲ್ಲ ನಿಮಗ್ಯಾಕೆ?'

'ಸುಮ್ಮನೆ'

'ಸುಮ್ಮನಾದರೆ...'

ಮಾತನ್ನು ಅರ್ಧದಲ್ಲಿಯೇ ನಿಲ್ಲಿಸಿದಳು. 'ಹೇಳುವುದಕ್ಕೆ ಮನಸ್ಸಿಲ್ಲಾಂತ ಅಂದ್ರೆ ಬೇಡ'

'ನಾವೆಲ್ಲಾ ಸೊಕ್ಕಿನವರು. ಹೆಸರೂ ಹಾಗೆಂದು ತಿಳಿದುಕೊಳ್ಳಿ'–"ಹೆಸರುಕಾಳು ಅಂತ."

'ಸಿಟ್ಟು ಚೆನ್ನಾಗಿ ಬರ್ತದೆ'

'ಹ್ಹೂಂ ಮತ್ತೆ'

'ಹೋಗ್ಲಿ ಬಿಡು ನಾನು ಬರ್ತೇನೆ'

ಅಂತ ಕಿಟ್ಟ ಹೆಜ್ಜೆ ಇಡಲು ಕಾಲೆತ್ತಿದ ತಕ್ಷಣ 'ನನ್ನ ಹೆಸರು ಲೀಲಾ ಅಂತ. ಬಾಳು ನಾಯ್ಕರ ಮಗಳು. ಇಲ್ಲಿಂದ ಮೂರು............ ಮೈಲು ದೂರ ನಮ್ಮ ಮನೆ. ಸಾಕಾ? ನನಗೆ ತಡವಾಯಿತು" ಎಂದು ಹೊರಟಳು. ಅಂಗಡಿಯಿಂದ ಅವಳು ಸಾಮಾನು ತೆಗೆದು ಹಿಂತಿರುಗಿ ಬರುವಾಗ ಪುನಃ ಕಿಟ್ಟ ಸಿಕ್ಕ. ಈಗ ಅವನ ಬಾಯಲ್ಲಿ ಒಂದು ಬೀಡಿಯಿತ್ತು. 'ಹೋದ ಕೆಲಸವಾಯಿತಾ?' ಎಂದು ಕೇಳಿದ.

'ಕೆಲಸವಾಗುವುದು ಎಲ್ಲಿಂದ? ನನಗೆ ಎದುರು ಗಂಡು ಬೆಕ್ಕು ಸಿಕ್ಕಿತ್ತು. ಅದಕ್ಕೆ ಕೆಲಸವೇ ಆಗಲಿಲ್ಲ' ಎಂದಳು ಲೀಲಾ ತುಂಟತನದಿಂದ. 'ನನಗೂ ನಿನ್ನೆಯಿಂದ ಒಂದು ಹೆಣ್ಣು ಬೆಕ್ಕು ಸಿಗುತ್ತಲೇ ಇದೆ. ಅದು ನನ್ನ ಕಾಲಿಗೆ ಸುತ್ತು ಹಾಕ್ತದೆ. ಅದಕ್ಕೆ ನನ್ನ ಕೆಲಸವೂ ಆಗುವುದಿಲ್ಲ. ಇನ್ನೇನು ಮಾಡುವುದೆಂದು ಊರಿಗೆ ಹೊರಟಿದ್ದೇನೆ' ಅಂತ ನಗಾಡುತ್ತಾ ಕಿಟ್ಟ ಕೇಳಿದ. ಅವರಿಬ್ಬರಿಗೂ ಏಕಕಾಲಕ್ಕೆ

ನಗು ಬಂತು. ಕೊನೆಗೆ ಲೀಲಾನೇ, 'ಮನೆಗೆ ಬನ್ನಿ' ಎಂದಳು. 'ಇಷ್ಟು ಹೊತ್ತು ನೀನಾಗಿಯೇ ನನ್ನ ಹೆಸರು ಕೇಳಿಲ್ಲ. ಕಿಟ್ಟನಾಯ್ಕ ಅಂತ ನನ್ನ ಹೆಸರು. ಅಪ್ಪ ಇಲ್ಲ. ನಾನೊಬ್ಬನೆ" ಅಂತ ಹೇಳಿದ ಈ ಪರಿಚಯದಿಂದ ಇಬ್ಬರೂ ಮತ್ತೊಂದು ಪೂರ್ವಪೀಠಿಕೆಯನ್ನು ಹಾಕಲು ಅನುಕೂಲವಾಯಿತು. ಅವನೇ ಮುಂದುವರಿಸಿ, 'ನಾನು ಈವತ್ತು ಊರಿಗೆ ಹೋಗ್ಬೇಕು' ಅಂದ. 'ಹೆಣ್ಣು ಮಕ್ಕಳಾದರೆ ಸ್ವಲ್ಪ ಸೇಲೆ – ಗೀಲೆ ಮಾಡುವುದು ಸರಿಯಷ್ಟೆ. ನೀವು ಗಂಡಸರು ಯಾಕೆ ಹಾಗೆಲ್ಲ ಮಾಡ್ಬೇಕು. ರಾತ್ರೆ ಮನೆಗೆ ಹೋಗಿ ಗುಡ್ಡ ಕಡ್ದು ಕಟ್ಟಿ ಹಾಕುವುದು ಅಷ್ಟರಲ್ಲಿಯೇ ಇದೆ.' ಎನ್ನುತ್ತಾ ಅವನ ಮುಖವನ್ನೇ ನೋಡಿದಳು. ಅವಳ ಕಣ್ಣನ್ನು ಕಿಟ್ಟ ನೋಡಿದ. ಅವಳ ಕಣ್ಣು ಮೆಲ್ಲನೆ ಕೆಳಗೆ ಬಂದು ಅವನ ತುಟಿಯನ್ನು ಅವನ ಕೈಗಳನ್ನು ಪಂಚೆ ಎತ್ತಿಕಟ್ಟಿದ್ದರಿಂದ ಕಂಡ ಕಾಲನ್ನು ನೋಡಿತು. ಅವಳನ್ನು ಕಿಟ್ಟನೂ ನೋಡಿದ. ಕಣ್ಣಿನಿಂದ ಕೆಳಗೆ ತುಟಿಗೆ ತುಟಿಯಿಂದ ಅವಳ ಕೊರಳಿಗೆ, ಕೊರಳಿನಿಂದ ಸೊಂಟಕ್ಕೆ ಕಿಟ್ಟನ ಕಣ್ಣು ಓಡಾಡಿತು. ಒಂದರೆ ಕ್ಷಣ ಇಬ್ಬರೂ ಪರಸ್ಪರ ನೋಡಿದರು. ಲೀಲಾಗೆ ಆಗ ಹದಿನೆಂಟರ ಪ್ರಾಯ. ತುಂಬು ಯೌವ್ವನ. ಬೇಕು ಬೇಕಾದುದನ್ನು ಕೇಳುತ್ತಿತ್ತು. ಕಿಟ್ಟನಿಗೂ ಅಷ್ಟೆ – ಗುಂಡು ಕಲ್ಲನ್ನು ಅಪ್ಪಿದರೂ ಅದು ಪುಡಿಯಾಗುವ ಕಾಲ. ಆದರೂ ಕಿಟ್ಟನಿಗೆ ಅವಳ ಮನೆಗೆ ಹೋಗುವುದೋ ಬೇಡವೋ ಎಂಬ ಜಿಜ್ಞಾಸೆ ಉಂಟಾಯಿತು. ಅದೂ ಅಲ್ಲದೆ ಪರಿಚಯವಾದ ಎರಡನೇ ದಿನದಲ್ಲಿಯೇ ಅವಳೊಂದಿಗೆ ಅವಳ ಮನೆಗೆ ಹೋಗುವುದು ತನ್ನ ಮರ್ಯಾದೆಗೆ ತಕ್ಕುದಲ್ಲವೆಂದು ಅವನ ಮನಸ್ಸು ಹೇಳಿತು. ಅವನ ಮನಸ್ಸು ಹೇಳಿದ್ದನ್ನು ಲೀಲಾ ಅರ್ಥಮಾಡಿಕೊಂಡವಳಂತೆ, 'ಪರಿಚಯದ ಹೊಸತರಲ್ಲಿ ಹೇಗೆ ಬರುವುದು ಅಂತ ಯೋಚನೆ ಮಾಡ್ತಾ ಇದ್ದೀರೇನೋ? ಆದ್ರೆ ನಮ್ಮ ಮನೆಯಲ್ಲಿ ಅಮ್ಮನನ್ನು ಬಿಟ್ರೆ ಬೇರೆ ಯಾರೂ ಇಲ್ಲ. ಅಪ್ಪ ಘಟ್ಟಕ್ಕೆ ಹೋದ್ರೆ ವರ್ಷಕ್ಕೆ ಒಂದು ಸರ್ತಿಯೋ ಎರಡು ಸರ್ತಿಯೋ ಬಂದು ಹೋಗ್ತಾರೆ. ಅವರಿಗೆ ಯಾಲಕ್ಕಿ ಮಲೆಯಲ್ಲಿ ಕೆಲಸ. ನಾನು ಅಮ್ಮ ಇಬ್ರೆ. ಬರುವುದಿದ್ರೆ ಬನ್ನಿ.' 'ಹೆಚ್ಚು ಹೇಳಿಸಿಕೊಳ್ಳಬೇಡಿ ಎಂಬ ಅರ್ಥದಲ್ಲಿಯೇ ಲೀಲಾ ಮಾತಾಡಿದಳು. ಇದಿಷ್ಟೆ ಮಾತುಕತೆಯಾದ್ದು ದಾರಿಯಲ್ಲಿ – ವಿಟ್ಲದ ಕಲ್ಲು ಸಂಕದ ಹತ್ತಿರ. ಅಲ್ಲಿ ಅವರ ಮಾತಿಗೆ ಸಾಕ್ಷಿ ಹೇಳುವವರು ಯಾರೂ ಇರಲಿಲ್ಲ. ಅವರಿಬ್ಬರಿಗೆ ಅವರ ಮನಸ್ಸು ಬಿಟ್ಟು ಬೇರೆ ಯಾವ ಸಾಕ್ಷಿಯೂ ಬೇಕಿರಲಿಲ್ಲ. ಲೀಲಾನದು ಒರಟು ಮಾತು. ಅಂದ್ರೆ ಕಡ್ಡಿ ಮುರಿದ ಹಾಗೆ. ಕಿಟ್ಟನದು ಮಾತ್ರ ಹಾಗಲ್ಲ. ಅವನು ಮನಸ್ಸಿನಲ್ಲೊಂದು ಮಾತಿನಲ್ಲಿ ಒಂದು. ಮಾತು ತೂತು ಮಾಡುತ್ತದೆಯೆಂದು ತಿಳಿದುಕೊಂಡವನು. ಲೀಲಾ ಕಡ್ಡಿ ಮುರಿದ ಹಾಗೆ ಮಾತಾಡುವ ಹೆಣ್ಣು, ಹೆಚ್ಚು ದುಡಿಯದೆ ದುಡ್ಡು ಸಂಪಾದಿಸುವ ಹಾದಿಯನ್ನು ಕಂಡುಕೊಂಡ ಗಂಡು. ಇಬ್ಬರೂ ಒಬ್ಬರಿಗೊಬ್ಬರು ಪರಸ್ಪರ ಅರಿವಿಗೆ

ಬಂದೋ, ಅರಿವಿಗೆ ಬಾರದೆಯೋ ಮನಸ್ಸನ್ನು ಕೊಟ್ಟರು. ವಿಟ್ಲಪೇಟೆಗೆ ಆಗ ನಾಲ್ಕು ಗಂಟೆ ನಲುವತ್ತು ನಿಮಿಷ. ಜಾತ್ರೆಯ ಮರುದಿನ ಎಲ್ಲಾ ಸುಖವನ್ನು ಪಡೆದುಕೊಂಡು ಆಗಷ್ಟೇ ಎದ್ದು ಬಂದ ಹೆಣ್ಣು ನಿಂತಂತೆ, ವಿಟ್ಲ ಪೇಟೆಯಿತ್ತು. 'ಕಿಟ್ಟ ಇಲ್ಲ, ನಾಳೆ ಬರ್ತೇನೆ' ಎಂದ. ಅವನ ಕಣ್ಣು ಅವಳನ್ನು ಪರೀಕ್ಷಿಸುವಂತಿತ್ತು. ಲೀಲಾನ ಮುಖ ಸಪ್ಪಗಾಯಿತು ಅಂತ ಅನಿಸಿತು ಅವನಿಗೆ. ಅಗತ್ಯವಿಲ್ಲವೆಂಬಂತೆ 'ನಿಮ್ಮಿಷ್ಟ' ಎಂದು ಹೆಜ್ಜೆ ಹಾಕಿದಳು. ಅದು ಅವಳಲ್ಲಿ ಉಂಟಾದ ನಿರಾಸೆಯು ಭಾವದಂತೆ ವ್ಯಕ್ತವಾಯಿತು.

ಅವಳು ಮುಂದೆ ಹೆಜ್ಜೆ ಇಟ್ಟಾಗ ನಾಲ್ಕು ಹೆಜ್ಜೆ ಹಾಕಿದ ಕಿಟ್ಟ ತಿರುಗಿ ನಿಂತು "ಓಯ್ ಲೀಲಾ ಬರ್ತೇನೆ" ಅಂತ ವಾಪಸ್ಸು ತಿರುಗಿದ. ಈಗ ಅವಳ ಮುಖ ಅರಳಿತು. "ಬನ್ನಿ ಮತ್ತೆ." ದಾರಿ ಇಡೀ ಹರಟುತ್ತಾ ಹೊರಟಳು. ಆ ಹರಟೆಯಲ್ಲಿ ತುದಿ ಇರಲಿಲ್ಲ. ಕೊನೆ ಇರಲಿಲ್ಲ. ಅವಳ ಅಪ್ಪ ಘಟ್ಟಕ್ಕೆ ಹೋದದ್ದು; ಅವಳಿಗೆ ಅಲ್ಲಿಂದ ಬರುವಾಗ ಕಂಬಳಿಯನ್ನು ತಂದುದು: ಅವಳಮ್ಮ ಕಲ್ಯಾಣಿ ದಮ್ಮು ರೋಗಿಯಾಗಿರುವುದು; ರಾತ್ರಿ ಮಲಗುವಾಗ ಅವಳು ಕುಡಿದು ಮಲಗುವುದು ಇತ್ಯಾದಿ. ಕಲ್ಯಾಣಿಯು ರಾತ್ರಿ ಸಾರಾಯಿ ಕುಡಿದು ಮಲಗುವುದು ಒಂದು ದೊಡ್ಡ ಸಂಗತಿಯಾಗಿರಲಿಲ್ಲ. ಲೀಲಾ ಏನು ಹೇಳಿದ್ದರೂ ಅದಕ್ಕೆ ಒಂದೆರಡು ಮಾತುಗಳಲ್ಲಿ ಕಿಟ್ಟ ಉತ್ತರ ಕೊಡುತ್ತಿದ್ದನಾದರೂ ಅದಕ್ಕಿಂತ ಹೆಚ್ಚಿನ ಪ್ರತಿಕ್ರಿಯೆ ಕೊಡುತ್ತಿರಲಿಲ್ಲ. ದಾರಿಯಲ್ಲಿ ಲೀಲಾ ಅವಳಮ್ಮನಿಗೆಂದು ಒಂದು ಬಾಟ್ಲಿಯಲ್ಲಿ ಸಾರಾಯಿಯನ್ನು ತೆಗೆದುಕೊಂಡಳು. ಅವರಿಬ್ಬರೂ ಮಾತಾಡುತ್ತ ಮನೆಯನ್ನು ತಲುಪುವಾಗ ಸಂಜೆಯು ಇಳಿಮುಖವಾಗತೊಡಗಿತು. ಕಲ್ಯಾಣಿಯು ಬಂದು ಕಿಟ್ಟನನನ್ನು ಉಪಚರಿಸಿದಳು. ಅತಿಥಿಗೆ ಬೇಕು ಬೇಕಾದ ಹಾಗೆ ಸ್ನಾನಕ್ಕೆಂದು ಬಿಸಿ ನೀರನ್ನು ಕಾಯಿಸಿ ಇಟ್ಟಳು. ಮಗಳು ತಂದುಕೊಟ್ಟ ಮೀನನ್ನು ಸುಟ್ಟಳು. ಸುಟ್ಟಮೀನು ಒಂದಿಷ್ಟು ಉಪ್ಪಿನ ಹರಳು ಬಾಟ್ಲಿಯನ್ನು ತಂದು ಕಿಟ್ಟುವಿನ ಎದುರು ಇಟ್ಟಳು. ಕಿಟ್ಟನು ಅಷ್ಟೆ. ಅತಿಥಿಯ ಮರ್ಯಾದೆಯನ್ನು ಎಷ್ಟು ಬಳಸಿಕೊಳ್ಳಬೇಕೋ ಅಷ್ಟು ಬಳಸಿಕೊಂಡ. ಮೀನಿನ ಚೂರು ತಿಂದು ಎಷ್ಟು ಬೇಕೋ ಅಷ್ಟು ಕುಡಿದ. ಅವನು ಕುಡಿಯುವ ವಿಷಯದಲ್ಲಿ ತಕರಾರು ಎತ್ತದೆ ಲೀಲಾ ಅವಳ ಅಮ್ಮ ಕಲ್ಯಾಣಿಯು ಕುಡಿಯುವಾಗ ಮಾತ್ರ ತಕರಾರು ಎತ್ತಿದಳು. "ಅಮ್ಮ ಕುಡಿದದ್ದು ಸಾಕು. ಅವರು ಏನೆಂದುಕೊಳ್ಳುತ್ತಾರೋ, ಏನು ಕತೆಯೋ."? ಕಲ್ಯಾಣಿಯ ನೆತ್ತಿಗೆ ಕುಡಿದ ಅಮಲು ಏರತೊಡಗಿತು. "ಅವರು ಎಂದರೆ ನಿನ್ನನ್ನು ಕಟ್ಟಿಕೊಳ್ಳುವವನಾ?"

'ಛೆ ಎಂಥಾ ಮಾತು' ಎಂದು ಲೀಲಾ ಹೇಳಿದರೆ ಕಿಟ್ಟನ ಮುಖ ಅರಳಿತು. ಮೂವರ ಮಾತುಕತೆಯ ನಡುವೆ ಇದ್ದುದು ಒಂದು ಚಿಮಿಣಿ ಎಣ್ಣೆಯ ದೀಪ ಮಾತ್ರ. ಕಲ್ಯಾಣಿಯ ಅಮಲು ಮತ್ತೆರಡು ಮಾತುಗಳನ್ನು ಹೇಳಿತು.

"ನೋಡು ಕಿಟ್ಟ. ನಿನ್ನಂಥ ಗಂಡು ಸಿಕ್ಕದ್ರೆ ಕಾಲು ಹಿಡಿದು ಧಾರೆ ಎರೆದುಕೊಟ್ಟೇನು. ಈ ವಿಟ್ಲದಲ್ಲಿ ನನ್ನ ಮಗಳನ್ನು ಧಾರೆ ಎರೆದುಕೊಳ್ಳುವವನು ಯಾರೂ ಇಲ್ಲ." ಕುಡಿದರೂ ಯಾವತ್ತೂ ಬುದ್ಧಿಯ ಸ್ಥಿಮಿತ ಕಳೆದುಕೊಳ್ಳದ ಕಿಟ್ಟ ಆಗ ಅವಳನ್ನು ಹಸಿ ಹಸಿಯಾಗಿ ನುಂಗುವಂತೆ ನೋಡಿದ. ಅಮಲು ಹೆಚ್ಚಾದಂತೆ ಕಲ್ಯಾಣಿಯು ಅಲ್ಲಿಯೇ ಒರಗಿದಳು – ಮೈಮೇಲೆ ಅರಿವಿಲ್ಲದಂತೆ. ಕಲ್ಯಾಣಿಯು ಅಲ್ಲಿಯೇ ಮಲಗಿದ ಮೇಲೆ ಕಿಟ್ಟ ಮತ್ತು ಲೀಲಾರು ಊಟ ಮುಗಿಸಿದರು. ಅವರಿಬ್ಬರೂ ಊಟ ಮಾಡುವಾಗ ಕಲ್ಯಾಣಿಯು ಕನವರಿಸುತ್ತಿದ್ದಳು. 'ಅಯ್ಯೋ ಅಮ್ಮ' ಎಂದು ಹೇಳುತ್ತಿದ್ದಳು. ಅವಳ ನರಳಾಟವನ್ನು ನೋಡಿ ಕಿಟ್ಟನು 'ನಿನ್ನ ಅಮ್ಮ ನರಳುತ್ತಿದ್ದಾರೆ' ಅಂದ. ಅದಕ್ಕೆ ಲೀಲಾ, "ಹೌದು. ಅವರು ಹಾಗೆಯೇ. ರಾತ್ರಿ ಕುಡಿಯುತ್ತಾರೆ. ಒಂದೊಂದು ದಿವಸ ರಾತ್ರಿ ಊಟವನ್ನು ಮಾಡದೇ ಮಲಗುತ್ತಾರೆ. ಊಟ ಮಾಡದೇ ಮಲಗಿದರೆ ಇದೇ ಕಥೆ ಎಂದಳು. ಕಿಟ್ಟ ಮತ್ತೆ ಅಂದ: "ಮಿತಿಮೀರಿ ಕುಡಿದರೆ ಹಾಗೆಯೇ. ನನ್ನ ಅಪ್ಪನು ಕೂಡ ಅಷ್ಟೆ. ಕುಡಿದಾಗ ಊಟ ಮಾಡುತ್ತಿರಲಿಲ್ಲ. ಸ್ವಲ್ಪ ಕುಡಿದರೆ ಜೀರ್ಣಕ್ಕೆ ಒಳ್ಳೆಯದು." ಲೀಲಾ ಅದಕ್ಕೆ, "ಅದು ನೀವು ಕುಡಿಯುವವರು ಹೇಳುವುದು. ಕುಡಿಯದಿದ್ದ ನಮಗೆ ಜೀರ್ಣವಾಗುವುದಿಲ್ಲವಾ?" ಎಂದಳು. ಕಿಟ್ಟ ಮರುಮಾತಾಡಲಿಲ್ಲ. ಮರು ಮಾತಾಡುವುದಕ್ಕೆ ಅವನ ಹತ್ತಿರ ಉತ್ತರವಿರಲಿಲ್ಲ. ಕಿಟ್ಟ ಮೀನು ಸಾರು ಚೆನ್ನಾಗಿದೆಯೆಂದುಕೊಂಡು ಎರಡು ತುತ್ತು ಹೆಚ್ಚು ಊಟ ಮಾಡಿದ. ಲೀಲಾ ಅಷ್ಟೇ. ಕಿಟ್ಟ ಎದುರು ಕುಳಿತಿದ್ದರಿಂದ ಎರಡು ತುತ್ತು ಹೆಚ್ಚು ಊಟ ಮಾಡಿದಳು. ಪರಸ್ಪರ ಹೆಚ್ಚು ಗೊತ್ತಿಲ್ಲದ ಇಬ್ಬರೂ ಹೆಚ್ಚು ಗೊತ್ತಾಗುವಂತೆ ಉಂಡರು. ಮಾತುಕತೆ ನಡೆಸಿದರು. ಊಟವಾದ ಮೇಲೆ ಹೊರಗೆ ಕಾಯುತ್ತಾ ಕುಳಿತಿದ್ದ ಹೆಣ್ಣು ನಾಯಿಗೆ ಉಳಿದ ಮೀನಿನ ಮುಳ್ಳು ಚೂರುಗಳನ್ನು ಸ್ವಲ್ಪ ಅನ್ನವನ್ನು ಲೀಲಾ ಹಾಕಿದಳು. ಸಂತೋಷದಿಂದ ಬಾಲವಲ್ಲಾಡಿಸಿಕೊಂಡು ಸ್ವೀಕರಿಸಿತು. ಊಟವಾದ ಮೇಲೆ ಎಲೆ ಬುಟ್ಟಿಯನ್ನು ತಂದು ಲೀಲಾ ಕಿಟ್ಟನೆದುರು ಇಟ್ಟಳು. ಕಿಟ್ಟ ವೀಳೆದೆಲೆಯನ್ನು ಬಾಯಿಗೆ ಹಾಕಿಕೊಂಡ ಚಿಮಣಿ ದೀಪದ ಎದುರು. ಲೀಲಾ ಓಡಾಡುವಾಗ ಅವಳ ನೆರಳು ದೊಡ್ಡದಾಗಿ ಗೋಡೆಯ ಮೇಲೆ ಬೀಳುತ್ತಿತ್ತು. ಅವಳ ಮನೆಯೆಂದರೆ ದೊಡ್ಡ ಮನೆಯಲ್ಲ. ಒಂದು ಚಾವಡಿ ಒಂದು ಅಡುಗೆ ಮನೆ ಮಾತ್ರ. ಚಾವಡಿಯ ಒಂದು ಮೂಲೆಯಲ್ಲಿ ಕಲ್ಯಾಣಿಯು ಮಲಗಿದ್ದರಿಂದ ಮತ್ತೊಂದು ಮೂಲೆಯಲ್ಲಿ

ಲೀಲಾ ಅಡುಗೆ ಮನೆಯಲ್ಲಿ ತನ್ನ ಚಾಪೆಯನ್ನು ಬಿಡಿಸಿಕೊಂಡಳು. ಕಿಟ್ಟನೆದ್ದು ಎಲೆಯಡಕೆಯನ್ನು ಉಗುಳಿ – ಬಾಯಿ ಮುಕ್ಕಳಿಸಿಕೊಂಡು ಬಂದು ಮಲಗಿದ.

ಮಧ್ಯರಾತ್ರಿ ಹೊತ್ತು ಲೀಲಾ ಗಾಢ ನಿದ್ದೆಯಲ್ಲಿದ್ದಾಗ ಕಿಟ್ಟ ಮೆಲ್ಲನೆದ್ದು ಅವಳ ಸಮೀಪ ಬಂದ. ಲೀಲಾ ದಡಕ್ಕನೆ ಎದ್ದು ಕುಳಿತಳು. ಕಿಟ್ಟ ಮೆಲ್ಲನೆ, 'ನಾನು ಕಿಟ್ಟ. ನಿನ್ನನ್ನೇ ಮದುವೆಯಾಗ್ತೇನೆ' ಎಂದ. ಕಿಟ್ಟ ಕೂತವಳನ್ನು ಮೆಲ್ಲನೆ ಅಪ್ಪಿದ.

* * * * *

ಕಿಟ್ಟ ಅಂದಿನಿಂದ ವಾರಕ್ಕೊಮ್ಮೆ ಲೀಲಾಳ ಮನೆಗೆ ಹೋಗಿ ಬಂದು ಮಾಡುತ್ತಿದ್ದ. ಕಾಲ ನಿಲ್ಲಲಿಲ್ಲ. ಅವಳಿಗೆ ಮುಟ್ಟಾಗದೆ ಎರಡು ತಿಂಗಳಾಯಿತು. ಎಂದು ಅರಿವಾಯಿತು. ಈಗ ಕಿಟ್ಟ ಸಿಕ್ಕಿಬಿದ್ದ. ಒಂದು ದಿನ ಇಬ್ಬರೂ ಹೇಳದೆ – ಕೇಳದೆ ದೇವಸ್ಥಾನಕ್ಕೆ ಹೋಗಿ ಮದುವೆಯಾಗಿ ಬಂದರು. ಕಿಟ್ಟ ಹೆಂಡತಿಯನ್ನು ಕರೆದುಕೊಂಡ ಬಂದಾಗ ರುಕುಮಿಣಿ ಮೊದಲು ಬಾಗಿಲು ತೆರೆಯಲಿಲ್ಲ. ಕಿಟ್ಟನ ಅವತಾರವು ಬಹುಬೇಗನೆ ಲೀಲಾಗೆ ಅರ್ಥವಾಯಿತು. ಆದರೆ ಲೀಲಾ ತುಂಬಾದೂರ ಕ್ರಮಿಸಿಯಾಗಿತ್ತು. ಕಿಟ್ಟನ ಹಾದಿಯನ್ನು ಬದಲಾಯಿಸಲು ಸಾಧ್ಯವಾಗಲಿಲ್ಲ. ಲೀಲಾಳ ಹಾದಿಯು ಕೂಡಾ ಬದಲಾಯಿತು. ಅದು ಅವರ ಜೀವನದ ಮತ್ತೊಂದು ಅಧ್ಯಾಯ. ಲೀಲಾ ಮತ್ತು ಕಿಟ್ಟರ ದಾಂಪತ್ಯ ಜೀವನ ಸುಖಕರವಾಗಿರಲಿಲ್ಲ. ಮದುವೆಯಾದ ಹೊಸತರಲ್ಲಿ ಎಲ್ಲವೂ ಚೆನ್ನಾಗಿತ್ತು ಅಂತಲೂ ಅಲ್ಲ. ಮದುವೆಯಾಗಿ ಗಂಡ ಹೆಂಡತಿ ಮನೆಯ ಬಾಗಿಲಿಗೆ ಬಂದಾಗ ರುಕುಮಿಣಿಯು ಸಿಡಕ್ಕನೆ 'ಸಿಡುಕಿದ್ದಳು. ಬಾಗಿಲು ಹಾಕಿದ್ದಳು. ಮಗ ಹೇಳದೆ ಕೇಳದೆ ಒಬ್ಬಳನ್ನು ಕಟ್ಟಿಕೊಂಡು ಬಂದು ಅಂಗಳ ದಣಪೆ ತೆರೆಯುವ ಮೊದಲು 'ನೋಡು ನಿನ್ನ ಸೊಸೆಯನ್ನು: ಮದುವೆಯಾಗಿ ಬಂದಿದ್ದೇನೆ' ಎಂದು ಹೇಳಿದಾಗ ಉಂಟಾದ ಸಿಟ್ಟು ಅದು. ರುಕುಮಿಣಿಗೆ ಗಂಡನನ್ನು ಕಳೆದುಕೊಂಡ ಮೇಲೆ ಮಗನ ಹಠಮಾರಿತನ; ಕುಂಟು ಮೂಸೆಯೊಂದಿಗೆ ಅವನು ಇರಿಸಿಕೊಂಡಿದ್ದ ಸಂಬಂಧ, ರಾತ್ರಿಯ ಅವನ ತಿರುಗಾಟ – ಎಲ್ಲವನ್ನೂ ಸಹಿಸಿಕೊಂಡದ್ದಳು. ರುಕುಮಿಣಿಯು ಹೇಳಿದರೆ ಕೇಳುವಂಥ ಸ್ವಭಾವ ಕಿಟ್ಟನದು ಆಗಿರಲಿಲ್ಲ. ಗಂಡ ಜೀವಂತ ಇದ್ದಾಗ ಅವನಿಂದ ತಿಂದ ಒದೆಗೆ ಲೆಕ್ಕವಿರಲಿಲ್ಲ. ಎಷ್ಟೊಂದು ಸಾರಿ ಅವನು ಎಡಗಾಲಿಂದ ಒದ್ದಿದ್ದನೆಂದರೆ ಅದಕ್ಕೆ ಯಾವ ಲೆಕ್ಕ ಮಿತಿಗಳೂ ಇರಲಿಲ್ಲ. ಗಂಡ ಸತ್ತಾಗ; ಹೋದರೆ ಹೋಗಲಿ' ಎಂದು ಅನಿಸಿತ್ತು. ಇರುವ ಮಗನನ್ನು ಕೆಳಗೆ ಹೋದರೆ ಇರುವೆ ಕಚ್ಚಿಕೊಂಡು ಹೋಗುತ್ತದೆ. ಮೇಲೆ ಇಟ್ಟರೆ ಕಾಗೆ ಕಚ್ಚಿಕೊಂಡು ಹೋಗ್ತದೆ ಅನ್ನುವ ರೀತಿಯಲ್ಲಿ, ಕಣ್ಣಿನ ರೆಪ್ಪೆಯಡಿಯಲ್ಲಿ ಇಟ್ಟುಕೊಂಡು ಸಾಕಿಕೊಂಡು ಬಂದಳು. ಕಿಟ್ಟನ ತಪ್ಪು

ಹೆಚ್ಚುತ್ತಾ ಹೋಯಿತು. ಸಹನೆಯ ಕಟ್ಟೆಯೊಡೆದದ್ದು ಮಾತ್ರ ಆದಿನ. ಕಿಟ್ಟ ಲೀಲಾಳನ್ನು ಕರೆದುಕೊಂಡು ಬಂದ ದಿನ. ಆದರೆ ಅದನೆಲ್ಲಾ ಲೆಕ್ಕಿಸದೆ ಕಿಟ್ಟ ಹೆಂಡತಿಯನ್ನು ಕರೆದುಕೊಂಡು ಮನೆಯೊಳಗೆ ಹೊಕ್ಕ. ರುಕುಮಿಣಿ 'ಓ ಸೂಳೆಯನ್ನು ಕರಕೊಂಡು ಬಂದೆಯಾ?' ನೀನು ಬರ್ಕತ್ತು ಆಗ್ಲಿಕ್ಕಿಲ್ಲ. ಇವಳು ಬರಕತ್ತಾಗುವುದು ಅಷ್ಟರಲ್ಲಿಯೇ ಇದೆ. ನನ್ನ ಹೊಟ್ಟೆ ಉರಿಸಿದ್ದಕ್ಕೆ ನೀವಿಬ್ಬರೂ ಹಾಳಾಗಿ ಹೋಗ್ಲಿಕ್ಕಿದೀರಿ?" ಎಂದು ನೆಲಕ್ಕೆ ಕೈ ಬಡಿದಳು. ಲೀಲಾ ಕೂಡಾ ಒಂದು ಕ್ಷಣ ತಬ್ಬಿಬ್ಬಾದಳು. ಆಮೇಲೆ ಸಾವರಿಸಿಕೊಂಡು, "ನೀವೂ ಹಾಳಾಗಿ ಹೋಗ್ತೀರಿ. ನಿಮ್ಮ ನಾಲಿಗೆಯಲ್ಲಿ ಹುಳ ಬಿದ್ದೀತು. ನಾನೇನು ನಿಮ್ಮ ಮಗನ ಸೂಳೆಯಲ್ಲ. ನೋಡಿ ಇಲ್ಲಿ ನಿಮ್ಮ ಮಗ ಕಟ್ಟಿದ ಕರಿಮಣಿ" ಎಂದಳು. ಅಮ್ಮ ಯಾಕೆ ಸಿಡುಕಿದಳು ಎಂದು ಕಿಟ್ಟನಿಗೆ ಅರ್ಥವಾಯಿತು. ಅವನ ತಾಯಿಯ ಅಣ್ಣನ ಮಗಳು ಕೋಸುಕಣ್ಣಿನ ಈಶ್ವರಿಯನ್ನು ಅವನು ಮದುವೆಯಾಗಿದ್ದರೆ ಈ ಗಲಾಟೆ ಆಗುತ್ತಿರಲಿಲ್ಲ. "ತಾಟಕಿತ್ತಿಯರು ಗಲಾಟೆ ಶುರು ಮಾಡಿದಿರಾ? ನಿಮ್ಮ ಬಾಯಿ ಮುಚ್ಚುತ್ತೀರೋ ಇಲ್ಲವೋ? ಏಯ್ ಲೀಲಾ ಅಲ್ಲಿಂದ ಎಲೆಯಡಿಕೆಯ ಬುಟ್ಟಿ ತೆಗೆದುಕೊಂಡು ಬಾ" ಎಂದನು. ಅದರಲ್ಲಿ ಅಧಿಕಾರಯುಕ್ತವಾದ ಸ್ವರವಿತ್ತು. ಲೀಲಾ ಮಾತ್ರ ಮುಖ ಊದಿಸಿಕೊಂಡು ಎಲೆಯಡಿಕೆಯ ಬುಟ್ಟಿಯನ್ನು ತಂದು ಅವನೆದುರು ಇಟ್ಟಳು. ಆದರೂ ಅವಳಿಗೆ ಅವಳತ್ತೆ ಕೊಟ್ಟಶಾಪವು ನಂಜಿನ ಮುಳ್ಳು ಹೊಕ್ಕಂತೆ ಎದೆಯೊಳಗೆ ನಾಟಿತು. ಕಿಟ್ಟನಿಗೆ ಹೆಂಡತಿಯು ಮನೆಯೊಳಗೆ ಕಾಲಿಟ್ಟ ಗಳಿಗೆಯು ಸರಿಯಿಲ್ಲವೆಂದು ಅನಿಸಿತು. ರುಕುಮಿಣಿ ಮುಸಿಮುಸಿ ಅಳುತ್ತಾ ಅಡುಗೆ ಮನೆಯ ಒಲೆಕಟ್ಟೆಯ ಎದುರು ಕುಳಿತಳು. ಅಳುತ್ತಲೇ ಒಲೆಯಲ್ಲಿದ್ದ ಸೌದೆಯನ್ನು ಉದ್ದೇಶಪೂರ್ವಕ ಆರಿಸಿದಳು. ಅರ್ಧ ಬೆಂದ ಗಂಜಿಯನ್ನು ಬೇಕಿದ್ದರೆ ಸೊಸೆಯು ಬೇಯಿಸಲಿ ಎಂದು ಅನಿಸಿತ್ತು. ಲೀಲಾ; 'ಅಯ್ತಾ ಹೊಟ್ಟೆ ನೋವು ಕಡಿಮೆಯಾಯ್ತಾ? ನಿಮ್ಮಂಥ ಹೊಟ್ಟೆಕಿಚ್ಚಿನ ಹೆಂಗಸರನ್ನು ನಾನು ಈತನಕ ನೋಡಲಿಲ್ಲ. ಎಂದಳು. "ಹೌದು ಶೂರ್ಪನಖಿ ನನಗೆ ನಂಜು. ನೀನು ಮಾತ್ರ ಭಾರೀ ಸಭ್ಯೆ. ನನ್ನ ಮಗನಿಗೆ ಮಂತ್ರಮಾಟ ಮಾಡಿ ಸೆರಗು ಹಾಸಿದವಳು ನೀನು. ನಿನ್ನ ಸಂತಾನ ಹಾಳಾಗಲಿಕ್ಕೆ" ಎಂದು ಮತ್ತೊಮ್ಮೆ ಒಲೆಯೆದುರು ಕುಳಿತವಳು ಒಲೆಕಟ್ಟೆಯ ಮೇಲೆ ಹೊಡೆದಳು – ರುಕುಮಿಣಿ. ಕಿಟ್ಟ ಬಾಯಿತುಂಬಾ ಎಲೆಯಡಿಕೆ ತುಂಬಿಸಿಕೊಂಡವನು ಕುಳಿತಲ್ಲಿಂದಲೇ ಅಂಗಳಕ್ಕೆ ಉಗುಳಿ ಎದ್ದು ಬಂದು ತಾಯಿಯ ಕಪಾಲಕ್ಕೆ; ಹೆಂಡತಿಯ ಕಪಾಲಕ್ಕೆ ಹೊಡೆದು ದೂರ್ವಾಸ ಮುನಿಯಂತೆ ಎದ್ದುಹೋಗಿ ಅಂಗಳ ಮೂಲೆಯಲ್ಲಿ ಕುಳಿತನು. ಇಬ್ಬರು ಹೆಂಗಸರು ಅಳುತ್ತಾ ಕುಳಿತರು. ಎಷ್ಟು ಹೊತ್ತು ಅತ್ತರೋ ಅವರಿಗೇ ಗೊತ್ತಿಲ್ಲ. ಕಿಟ್ಟನೂ ಅಷ್ಟೆ; ಎಷ್ಟು ಹೊತ್ತು ಹಾಗೆ ಕುಳಿತಿದ್ದನೋ ಗೊತ್ತಿಲ್ಲ. ಮದುವೆಯಾಗಿ ಬಂದ ದಿನ ಮೂವರು ಒಂದೊಂದು ದಿಕ್ಕಿನಿಂದ ಆಲೋಚಿಸಿದ್ದರು.

* * * * *

ಬಸುರಾಗಿ ಎರಡು ತಿಂಗಳು ದಾಟಿದ ಇವಳನ್ನು ಮಗನು ಕರೆದುಕೊಂಡು ಬಂದನೆಂದು ರುಕುಮಿಣಿಗೆ ತಡವಾಗಿ ಗೊತ್ತಾಯಿತು. ಅದೂ ಲೀಲಾ ಹೇಳಿ ಗೊತ್ತಾದ ಸಂಗತಿಯಲ್ಲ – ಕಿಟ್ಟನ ಬಾಯಿಂದ ಆಕಸ್ಮಿಕವಾಗಿ ಬಂದ ಮಾತಿಂದ ತಿಳಿಯದ್ದು. "ಓ ಬಸುರಿ ಅವಳು. ಅವಳತ್ರಾನೇ ಎಲ್ಲಾ ಕೆಲಸ ಹೇಳ್ತಿಯಲ್ಲಾ? ಇನ್ನು ಎರಡು ತಿಂಗಳಷ್ಟೆ – ಹೊಟ್ಟೆಯಲ್ಲಿರುವ ಮಗುವಿಗೆ ಏನಾದರೂ ಹೆಚ್ಚು ಕಮ್ಮಿಯಾದರೆ ಗತಿಯೇನು" ಅಂತ ಒಂದು ದಿನ ಕಿಟ್ಟ ಹೇಳಿದ್ದರಿಂದ ವಿಷಯ ರುಕುಮಿಣಿಗೆ ತಿಳಿಯತು. ಅತ್ತೆ – ಸೊಸೆ ಇಬ್ಬರೂ ಮಾತಾಡುವುದೇ ಅಪರೂಪ. ಮಾತಾಡಿದರೂ ಎಂದಾದರೆ ಆ ದಿವಸ ಜಗಳ ಕಟ್ಟಿಟ್ಟದ್ದು. ಲೀಲಾ ಒಂದಲ್ಲ ಒಂದು ದಿನ ಕಾಲು ಕೆರೆದು ರುಕುಮಣಿಯ ಬಾಯಿ ಮುಚ್ಚಿಸುವವಳು. ಕಿಟ್ಟನಿಗೂ ಹೆಂಡತಿಯ ವಿಷಯದಲ್ಲಿ ಉತ್ಸಾಹವಿರಲಿಲ್ಲ. ಅವಳದು ಹರುಕು ಬಾಯಿಯೆಂದೇ ಅವನ ತೀರ್ಮಾನ. ಅದಕ್ಕಿಂತ ಹೆಚ್ಚಿನದೆಂದರೆ ಲಿಂಗ ಮತ್ತು ಮೂಸೆಯರು ಒಡ್ಡುವ ಆಮಿಷವು ಹೆಚ್ಚಿನದಿತ್ತು. ಮದುವೆಯಾಗಿ ಬಂದ ನಾಕುದಿನ ಮಾತ್ರ ಮೂಸೆ ಮತ್ತು ಲಿಂಗರ ಸಹವಾಸವನ್ನು ಬಿಟ್ಟದ್ದು. ಹಗಲು ಮನೆಯಲ್ಲಿದ್ದರೆ ಅತ್ತೆ – ಸೊಸೆಯರ ಕಾಟವೆಂದು ಕಿಟ್ಟ ಹಗಲು ಹೊತ್ತು ಮನೆಯಲ್ಲಿರುವುದು ಕಡಿಮೆ ಮಾಡಿದ. ರಾತ್ರಿ ಒಂದು ಮುಷ್ಟಿ ಉಂಡು ಹೊರಟನೆಂದರೆ ಮುಗಿಯಿತು. ಅನಂತರ ಅವನು ಬರುವುದು ಬೆಳಗಿನ ಜಾವವೇ. ಗಂಡನದು ಕಳ್ಳತನದ ವ್ಯಾಪಾರವೆಂದು ಗೊತ್ತಾದ ಲೀಲಾ ಅದಕ್ಕೆ ಏನು ಪರಿಹಾರ ಕಂಡುಕೊಳ್ಳಬೇಕೆಂದು ಆಲೋಚಿಸಲಿಲ್ಲ. ಯಾವುದು ತಿನ್ನಬೇಕು, ಯಾವುದು ತಿನ್ನಬಾರದು ಎಂಬುದನ್ನೂ ಚಿಂತಿಸಲಿಲ್ಲ. ರುಕುಮಿಣಿಯಂತೂ ಸೊಸೆಯ ಹಂಗಿಗೆ ಹೋಗಲಿಲ್ಲ. ಒಂದೇ ಮನೆಯಲ್ಲಿದ್ದರೂ ಒಂದೇ ಅಡುಗೆಯಾದರೂ ಒಬ್ಬರಿಗೊಬ್ಬರು ಮಾತಾಡಿಸಿದವರಲ್ಲ.

ಒಂದು ದಿನ ಕಿಟ್ಟ ಬಿದಿರ ಮೊಳಕೆಯನ್ನು ತಂದುಕೊಟ್ಟ. ಅದರ ಪಲ್ಯ ತಿಂದ್ದೇ ಲೀಲಾಗೆ ಗರ್ಭಪಾತವಾಯಿತು! ಗರ್ಭ ಕಳೆದು ಮೈಶುದ್ಧ ಮಾಡಿಸಿಕೊಂಡ ಲೀಲಾ ಆರು ತಿಂಗಳು ಬಿಳುಚಿಕೊಂಡಿದ್ದಳು. ಅಲ್ಲಿಂದ ಅನಂತರ ಅವಳ ಅವಾಂತರ ಪ್ರಾರಂಭವಾಯಿತು. ಗಂಡ ಮತ್ತು ಅತ್ತೆಯರನ್ನು ಕ್ಯಾರೇ ಅನ್ನಲಿಲ್ಲ. ತವರು ಮನೆಗೆ ಹೋಗಿ ಕೂತವಳು ಗಂಡನ ಮನೆಗೆ ಬಂದರೆ ಬಂದಳು. ಇಲ್ಲವೆಂದರೆ ಇಲ್ಲ. ವಿಟ್ಲದಲ್ಲಿಯೇ ಖಾಯಂ ಆಗಿ ಉಳಿಯಲು ಬೇಕಾದ ಹುನ್ನಾರ ಮಾಡಿಕೊಂಡು ಒಂದು ದಿನ ಗಂಡನನ್ನು ಬಿಟ್ಟು ಹೋದಳು. ಅವಳು ಬಿಟ್ಟುಹೋದಳೆಂದು ಕಿಟ್ಟ ಚಿಂತಿಸಲಿಲ್ಲ. ಅದರ ಬದಲು ಕುಡಿಯುವುದು ಹೆಚ್ಚು ಮಾಡಿಕೊಂಡ. ಅಷ್ಟೆ: ಹೆಂಡತಿಯ ಅಮಲಿಗಿಂತಲೂ ಕುಡಿತದ ಅಮಲು ಹೆಚ್ಚೆಂದು ತಿಳಿಯಿತು.

* * * * *

## 1992
## ಡಿಸೆಂಬರ್
## 16

ಮಾಲಿಂಗ ಜೋಯಿಸರು ಕವಡೆ ತಿರುಗಿಸುವುದರಲ್ಲಿ ಎತ್ತಿದ ಕೈ. ಒಮ್ಮೆ ಕವಡೆ ತಿರುಗಿಸಿ ಮಗುಚಿ, ಮೂಗಿಗೆ ಒಂದು ಚಿಟಿಕೆಯ ಶ್ರೀಕೃಷ್ಣ ನಶ್ಯ ಏರಿಸಿ ಭವಿಷ್ಯ ಹೇಳಿದರೆ ಎಲ್ಲ ಕರಾರುವಕ್ಕು ಎಂದು ಜನ ನಂಬುತ್ತಿದ್ದರು. ಅವರು ಭವಿಷ್ಯ ಹೇಳುವುದು ಅಂದಾಜಿನ ಮೇಲೆಯಾದರೂ ಜನ ಅದನ್ನು ಪರಮವೇದವೆಂದು ತಿಳಿದುಕೊಳ್ಳುತ್ತಿದ್ದರು. ವಯಸ್ಕರು ಅವರೆದುರು ಕೈಮುಗಿದುಕೊಂಡು ದೀನರಾಗಿದ್ದರೆ ಜೋಯಿಸರಿಗೆ ಬಂದವನ ಸಮಸ್ಯೆಯೇನು ತಿಳಿಯುತ್ತಿತ್ತು. ಜೋಯಿಸರು ಮೊದಲು ಹ್ಞೂಂ, 'ನಿಮ್ಮ ಸಮಸ್ಯೆ?' ಅಂತ ಕೇಳುತ್ತಿದ್ದರು. ಬಂದವರು, ಮನೆಯಲ್ಲಿ, ತಾಪತ್ರಯ ಕಷ್ಟಗಳು ಅಂದರೆ ಅದು ನಿನ್ನ ಜಾತಕದಲ್ಲಿ ಏಳನೆಯ ಮನೆಯಲ್ಲಿ ಶನಿಕಾಟ. ಎಲ್ಲಾ ಬಗೆ ಹರಿಯುತ್ತದೆ. ಅದಕ್ಕೆ ಪರಿಹಾರ ಮಾಡದೇ ಕೂರಬೇಡ ಎಂದು ಹೇಳುತ್ತಿದ್ದರು.

ಕೆಲವರು ಕೈತೋರಿಸಲು ಬರುತ್ತಿದ್ದರು. ಬಂದವರಿಗೆ ಕೆಲವನ್ನು ಜೋಯಿಸರು ಮಾಮೂಲಿನಂತಾಗಿ ಮೊದಲು ಹೇಳಿಬಿಡುತ್ತಿದ್ದರು. ಬಂದವರು ಮದುವೆಯಾಗದವರಾದರೆ – ನಿನಗೆ ಹತ್ತನೆಯ ವಯಸ್ಸಿನಲ್ಲಿ ಕಂಟಕವಿತ್ತು. ಅದರಿಂದ ಪಾರಾದೆ ಅನ್ನುತ್ತಿದ್ದರು. ಜಲ – ಅಗ್ನಿಯ ಬಾಧೆಯಿತ್ತು ಅನ್ನುತ್ತಿದ್ದರು. ಸಾಮಾನ್ಯವಾಗಿ ಯಾರೂ ಅಲ್ಲವೆಂದು ಹೇಳುತ್ತಿರಲಿಲ್ಲ. ಮದುವೆಯಾದವರು ಬಂದರು ಎಂದಾದರೆ ನಿಮಗೆ ಗಂಡ – ಹೆಂಡತಿಗೆ ಸಾಮರಸ್ಯದ ಕೊರತೆ ಎಂದು ಹೇಳುತ್ತಿದ್ದರು. ಇದು ಎಲ್ಲರಿಗೂ ಎಲ್ಲರ ಜೀವನದಲ್ಲಿ ನಡೆಯುವ ಸಂಗತಿಯೆಂಬುದನ್ನು ಜನ ಮರೆತು ಬಿಡುತ್ತಿದ್ದರು. ಇಂಥ ಜೋಯಿಸರ ಮಗಳು ಸಾವಿತ್ರಿ. ಅವಳನ್ನು ಶಾಲೆಗೆ ಸೇರಿಸುವಾಗಲೇ ಜೋಯಿಸರು ಸಾವಿತ್ರಿ ಜೋಯಿಸ ಅಂತ ಸೇರಿಸಿಬಿಟ್ಟರು. ಈ ಸಾವಿತ್ರಿ ಜೋಯಿಸ್ ಕಾಲೇಜಿನಲ್ಲಿ ನನ್ನ ಕ್ಲಾಸ್‌ಮೇಟ್. ತರಗತಿಯಲ್ಲಿ ಅವಳು ಯಾವಾಗಲೂ ಫಸ್ಟ್. ನಾನು ಲಾಸ್ಟ್. ನನ್ನನ್ನು ಪುರುಷೋತ್ತಮನನ್ನು ಕಂಡರೆ ಅವಳಿಗೆ ಆಗುತ್ತಿರಲಿಲ್ಲ. ಅದಕ್ಕೆ ಕಾರಣ ಒಂದೇ; ಒಂದು ದಿನ ಸಾವಿತ್ರಿ ಜೋಯಿಸ ತರಗತಿಗೆ ಬರುವಾಗ ಪುರುಷೋತ್ತಮ – ಬೆಕ್ಕೆ ಬೆಕ್ಕೆ ಮುದ್ದಿನ ಸೊಕ್ಕೆ ಎಲ್ಲಿಗೆ ಹೋಗಿದ್ದೆ?" ಎಂದು ಹೇಳಿದ. ನಾನು, ಕದ್ದು ಮುಚ್ಚಿಬೆಣ್ಣೆಯ ತಿಂದಿದ್ದೆ' ಅಂತ ಹೇಳಿದೆ. ಸಾವಿತ್ರಿ ಜೋಯಿಸ್ ಅವಳಿಗೆ

ಹೇಳಿದ್ದೆಂದು ತಿಳಿದುಕೊಂಡಳು. ಯಾಕೆಂದರೆ ಸಾವಿತ್ರಿ ಜೋಯಿಸ್‌ಗೆ ಬಿಳಿಯ ಕಣ್ಣುಗಳಿದ್ದವು. 'ಅದು ಅವಳ ಸೌಂದರ್ಯವನ್ನು ಹೆಚ್ಚಿಸಿತ್ತು. ಆದರೆ ಈ ಸಾವಿತ್ರಿ ಜೋಯಿಸ್ ಡಾ. ನವನೀತ; ಎಂ.ಬಿ.ಬಿ.ಎಸ್;ಯನ್ನು ನಾನು ಫೈನಲ್ ಇಯರ್ ಬಿ.ಎ.ಯಲ್ಲಿರುವಾಗ ಮದುವೆಯಾಗಿ ಹೋದಳು. ಅದೇ ನವನೀತ ಎಂ.ಡಿಯನ್ನು ರಸಾತಳಕ್ಕೆ ಅವಳ ಸೌಂದರ್ಯದಿಂದಲೇ ತಳ್ಳಿದಳು. ಇದು ಗೊತ್ತಾದುದು ಈಚೆಗೆ.

ಸಾವಿತ್ರಿಜೋಯಿಸ್ ನಾವು ಕಾಲೇಜು ಓದುತ್ತಿರುವ ಸಂದರ್ಭದಲ್ಲಿ ಕೆಲವು ಮೇಷ್ಟ್ರಗಳ ತಲೆ ಕೆಡಿಸಿದ್ದಂತೂ ನಿಜ. ಇಂಗ್ಲಿಷ್ ವಿಭಾಗದ ಲೆಕ್ಚರರ್ ಸದಾ ತನ್ನ ಕಣ್ಣುಗಳ್ಳು ತನ್ನ ಮುದ್ದಿನ ಬೆಕ್ಕಾದ ಸಾವಿತ್ರಿ ಜೋಯಿಸಳ ಮೈಮೇಲೆ ಓಡಾಡಿಸುತ್ತಿದ್ದುದು ಪುರುಷೋತ್ತಮನ ಮಂಡೆಗೆ ಬೆಂಕಿ ಹಚ್ಚಿದಂತಾಗುತ್ತಿತ್ತು. ಮೇಷ್ಟ್ರು ಅವಳ ಕಡೆಗೆ ನೋಡಿದಾಗಲೆಲ್ಲ ಪುರುಷೋತ್ತಮ ಚೀಟಿಯಲ್ಲಿ ಏನಾದರೂ ಬರೆದು ನನಗೆ ಕಳಿಸಿಕೊಡುತ್ತಿದ್ದ. ನಿಸ್ಸಂಶಯವಾಗಿ ಹೇಳಬೇಕೆಂದರೆ ಸರಿಯಾಗಿ ಹಾಲು ತುಪ್ಪತಿಂದ ಸಾವಿತ್ರಿ ಜೋಯಿಸ್ ತನ್ನ ಕೊಬ್ಬನ್ನು ಪೂರ್ತಿಯಾಗಿ ಬಳಸಿಕೊಂಡಿದ್ದಾಳೆ ಎಂದು ಪುರುಷೋತ್ತಮನ ನಿಲುವು. ಅವಳಿಗೆ ಧಿಮಾಕಿದ್ದದ್ದಂತೂ ನಿಜ. ಸ್ವಲ್ಪ ಬಿಳಿಯ ಕಣ್ಣು. ಉಬ್ಬಿದ ಗಲ್ಲ, ಸಪೂರ ಸೊಂಟ, ಹಣೆಗೆ ಕುಂಕುಮದ ಬೊಟ್ಟು ಮತ್ತು ಸದಾ ಅವಳು ಹಾಕಿಕೊಳ್ಳುತ್ತಿದ್ದ ಬಳೆಗಳು ಅವಳ ಸೌಂದರ್ಯವನ್ನು ಹೆಚ್ಚಿಸಿತ್ತು. ಹಸಿರು ಮತ್ತು ಬಿಳಿ ಅವಳ ಇಷ್ಟದ ಬಣ್ಣವೆಂದು ಕಾಣುತ್ತದೆ. ಸದಾ ಅದೇ ಬಣ್ಣದ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದಳು. ಅವಳ ಸೌಂದರ್ಯಕ್ಕೆ ಮಾರುಹೋದ ನವನೀತ. ಎಂಬಿಬಿಎಸ್‌ಯನ್ನು ಅವಳನ್ನು ಮದುವೆಯಾದದ್ದು ಯಾರಿಗೂ ಆಶ್ಚರ್ಯ ತರಲಿಲ್ಲ. ನವನೀತ ಎಂ.ಡಿ.ಯನ್ನು ಮುಗಿಸಿದ್ದಾನಂತೆ, ಅವನು ಆಪರೇಷನ್ ಮಾಡುವ ಡಾಕ್ಟರಂತೆ, ಅವನು ದೂರದಲ್ಲಿ ಓದಿದ್ದಾನಂತೆ, ಅವನು ಆಪರೇಷನ್ ಮಾಡುವ ಡಾಕ್ಟರಂತೆ, ಅವನು ತುಂಬಾ ಓದಿದ್ದಾನಂತೆ ಮುಂತಾದ ಸುದ್ದಿಗಳೊಂದಿಗೆ ಸಾವಿತ್ರಿ ಜೋಯಿಸ್ ಹಿಂದಿನ ಜನ್ಮದಲ್ಲಿ ಪುಣ್ಯ ಮಾಡಿರಬೇಕೆಂದು ಹಿರಿಯ ಹೆಂಗಸರು ಮಾತಾಡಿಕೊಳ್ಳುತ್ತಿದ್ದರು. ಆದರೆ ಮಾಲಿಂಗ ಜೋಯಿಸರನ್ನು ಕಂಡರೆ ಆಗದಿರುವ ಸುಬ್ಬಣ್ಣನಂತಹವರು ಮಾತ್ರ, 'ಈ ಕವಡೆ ಜೋಯಿಸ ಮಗಳನ್ನು ಅದ್ಯಾರೋ ಹೊಟ್ಟೆ ಕೊಯ್ಯುವ, ಹೆರಿಗೆ ಮಾಡಿಸುವ ಡಾಕ್ಟರಿಗೆ ಮದುವೆ ಮಾಡಿಸಿಕೊಡುತ್ತಾನಂತೆ. ಈ ಡಾಕ್ಟರುಗಳಿಗೆ ಜಾತಿ ಗೀತಿ ಎಂತ ಏನಿದೆ? ಈ ಡಾಕ್ಟರುಗಳು ಎಲ್ಲೆಲ್ಲಿ ಕೈ ಹಾಕಬೇಕೋ ಏನು ಕತೆನೋ... ಮಡಿ ಅಂತಿಲ್ಲ, ಮೈಲಿಗೆ ಅಂತಿಲ್ಲ' ಎಂದು ವಟಗುಟ್ಟಿದ್ದ. ಹೇಗಾದರೂ ಮಾಡಿ ಈ ಸಂಬಂಧವನ್ನು ಮುರಿಯಲೇ ಬೇಕೆಂದು ಕೆಲವರು ಯೋಚಿಸಿದ್ದು ಅಷ್ಟೇ ನಿಜ. ಅದಕ್ಕೆ ನವನೀತನಿಗೆ ಯಾರೋ ಪತ್ರ ಬರೆದರಂತೆ. 'ಸಾವಿತ್ರಿ ನಡತೆ

ಸರಿ ಇಲ್ಲ. ಅವಳು ಕಾಲೇಜಿನಲ್ಲಿ ಆಡದ ಆಟವಿಲ್ಲ. ಅವಳಿಗೆ ಚೂರು ಉಷ್ಣ ಹೆಚ್ಚು. ಒಮ್ಮೆ ಬಸುರಿಯೂ ಆಗಿದ್ದಳು' ಈ ಪತ್ರವನ್ನು ಓದಿದ ನವನೀತ ತನಗೆ ಬಂದ ಪತ್ರವನ್ನು ಸಾವಿತ್ರಿಗೆ ತೋರಿಸಿದ. ಸಾವಿತ್ರಿ ಅದನ್ನು ಒಂದು ದಿನ ಪರ್ಸ್‌ನಲ್ಲಿ ಇಟ್ಟುಕೊಂಡು ಬಂದು ಪುರುಷೋತ್ತಮ ಒಬ್ಬನೇ ಇರುವಾಗ ಕರೆದಳು. ಪುರುಷೋತ್ತಮ ಮೊದಲೇ ಒಂಚೂರು ಪುಸ್ಕು. ಸಾವಿತ್ರಿ ಕರೆದಾಗ ಹೆದರಿಕೊಂಡ. ಸಾವಿತ್ರಿ ಅದನ್ನು ಓದಲು ಕೊಟ್ಟಳು. ಓದಿದವನೇ ಪುರುಷೋತ್ತಮ 'ದೇವರಾಣೆ ಹೇಳುತ್ತೇನೆ – ನೀ ನನ್ನ ಅಕ್ಕ ಇದ್ದ ಹಾಗೆ. ನಾನ್ಯಾಕೆ ಇಂಥ ಲೆಟರ್ ಬರೀಲಿ' ಅಂತ ಹೇಳ್ದ. ಸಾವಿತ್ರಿಗೆ ಆ ಅನುಮಾನ ಕೊನೆಯವರೆಗೂ ಇದ್ದಿರಬೇಕು. ಯಾಕೆಂದರೆ ನನ್ನನ್ನು ಮತ್ತು ಪುರುಷೋತ್ತಮನನ್ನು ಕಂಡರೆ ತಲೆ ತಗ್ಗಿಸಿ ಓರೆ ಕಣ್ಣಿನಿಂದ ದಿಟ್ಟಿಸಿ ನೋಡುತ್ತಿದ್ದಳು. ಅವಳ ನೋಟಕ್ಕೆ ನಾವು ಭಸ್ಮವಾಗದಿದ್ದುದು ಪುಣ್ಯ! ಸಾವಿತ್ರಿ ಜೋಯಿಸ್ ನಮ್ಮ ಕ್ಲಾಸಿನ ಎಲ್ಲಾ ಹುಡುಗರಿಗೂ ಮದುವೆಯ ಆಮಂತ್ರಣ ಕೊಟ್ಟವಳು ನನಗೆ ಮತ್ತು ಪುರುಷೋತ್ತಮನಿಗೆ ಆಮಂತ್ರಣ ಪತ್ರಿಕೆಯನ್ನು ಕೊಟ್ಟಿರಲಿಲ್ಲ. ಮದುವೆಗೆ ಹೋಗುವ ಆಸಕ್ತಿ ನಮಗೂ ಇರಲಿಲ್ಲ. ಆಗಿನ ನಮ್ಮ ತಿಳುವಳಿಕೆ ಏನೆಂದರೆ ಜಾತಿ ಬಿಡಬೇಕಿದ್ದರೆ ಜಾತಿಯೊಳಗಿನ ಮದುವೆಗಳನ್ನು ಬಹಿಷ್ಕರಿಸಬೇಕು. ಅಂತಹ ಮದುವೆಗೆ ಹೋಗಲೂಬಾರದು. ಇಂದಿನವರೆಗೂ ನನ್ನಲ್ಲಿ ಬೇರುಬಿಟ್ಟಿರುವ ಭಾವನೆ ಅದುವೇ. ಆಕಸ್ಮಿಕವಾಗಿ ಒಂದು ದಿನ ಸಾವಿತ್ರಿ ಜೋಯಿಸ್ ಮತ್ತು ನವನೀತರನ್ನು ಬಸ್ಸಿನಲ್ಲಿ ನೋಡಿದ್ದೆ. ಅವಳು ಮನಸ್ಸಿಲ್ಲದ ಮನಸ್ಸಿನಿಂದ ನನ್ನನ್ನು ಅವಳ ಗಂಡನಿಗೆ ಪರಿಚಯಿಸಿದ್ದಳು. ಅವಳ ಗಂಡ ಮಾತ್ರ ಶೇಕ್ ಹ್ಯಾಂಡ್ ಕೊಟ್ಟು 'ನಿಮ್ಮ ಬಗ್ಗೆ ಆಗಾಗ್ಗೆ ಇವಳು ಹೇಳುತ್ತಿರುತ್ತಾಳೆ' ಎಂದ. ಅವರ ಮುಖವನ್ನೇ ನೋಡಿದೆ. ಒಂದು ಸಣ್ಣ ವ್ಯಂಗ್ಯವಿತ್ತು ಅದರಲ್ಲಿ. ಸಾವಿತ್ರಿ ಮುಖ ತಿರುಗಿಸಿದ್ದಳು. ಮನಸ್ಸಿನಲ್ಲಿಯೇ ಅಂದುಕೊಂಡೆ 'ಈ ನವನೀತನಿಗೆ ಸಾವಿತ್ರಿಯ ಧಿಮಾಕು ಇಳಿಸುವುದು ಬಹಳ ಕಷ್ಟ. ಮದುವೆಯಾದರೂ ಇವಳ ಕೊಬ್ಬು ಇಳಿದಿಲ್ಲವಲ್ಲ' ಎಂದನ್ನಿಸಿತು. ನನ್ನ ನೆನಪು ಸರಿಯೆಂದಾದರೆ ಆ ದಿನ ಗುರುವಾರ. ಒಬ್ಬ ಸಿಕ್ಕಿದ. ಉದ್ದನೆಯ ಗಡ್ಡ, ಸಪೂರ ಕೈಕಾಲು. ಇಸ್ತ್ರಿ ಹಾಕದ ಪ್ಯಾಂಟು ಷರಟು. ಕಾಲಿಗೆ ಹವಾಯಿ ಚಪ್ಪಲಿ, ಹೊಂಡಕ್ಕಿಳಿದ ಕಣ್ಣುಗಳು. ಬೀಡಿ ಮತ್ತು ಕಂಟ್ರಿ ಸಾರಾಯಿಯ ಕಮಟು ವಾಸನೆ. ತಕ್ಷಣ ಯಾರೆಂದು ಪರಿಚಯವಾಗಲಿಲ್ಲ. ಅದನ್ನೇ ಅವನಿಗೆ ಹೇಳಿದೆ. ಆದರೆ ಅವನು, 'ನನಗೆ ನಿಮ್ಮ ಪರಿಚಯ ಚೆನ್ನಾಗಿದೆ. ತುಂಬಾ ವರ್ಷದ ಹಿಂದೆ ನಿಮ್ಮನ್ನು ನೋಡಿದ್ದೆ ಅದೂ ಕೂಡಾ ಬಸ್ಸಿನಲ್ಲಿ. ನೀವು ಆಗ ಕಾಲೇಜಿನಲ್ಲಿ ಓದುತ್ತಿದ್ದಿರಿ. ನಿಮ್ಮ ಹೆಸರು ನಿಶಿತ. ನಿಮ್ಮ ಕಣ್ಣುಗಳು ಮತ್ತು ಹುಬ್ಬು ಹಾಗೆಯೇ ಇದೆ. ಅದು ಬದಲಾಗುವುದು ಸಾಧ್ಯವಿಲ್ಲ. ನಾನೂ ನಿಮ್ಮೂರಿನವನೆ. ಸಾಧ್ಯವಾದರೆ ಒಂದು ನೂರು ರೂಪಾಯಿ

ಕೊಡಿ. ಅದನ್ನು ನಾಳೆ ಬೆಳಿಗ್ಗೆಯೇ ನಿಮಗೆ ತಲುಪಿಸುತ್ತೇನೆ' ಎಂದು ಹೇಳಿದ. ಆದರೆ ಅವನ ಸ್ಥಿತಿಯನ್ನು ನೋಡಿದರೆ ಅವನು ಮರುದಿನ ನೂರು ರೂಪಾಯಿ ಕೊಡುವುದಿರಲಿ ಹತ್ತು ರೂಪಾಯಿಯನ್ನೂ ಕೊಡಲಾರನೆಂದೆನಿಸಿತು. ಸ್ಪಷ್ಟವಾಗಿ ಮತ್ತು ಸಿಟ್ಟಿನಿಂದ ಹೇಳಿದೆ – 'ಅಲ್ವೋ ಮಾರಾಯ ನೀನ್ಯಾರು ಅಂತಲೇ ನಂಗೆ ಗೊತ್ತಿಲ್ಲ. ಗೊತ್ತಿಲ್ಲದಿದ್ದವರಿಗೆ ದುಡ್ಡು ಕೊಟ್ಟು ಅಭ್ಯಾಸವಿಲ್ಲ. ಕೈಬಿಡು' ಎಂದು ಹೇಳಿ ಅವನ ಕೈ ಬಿಡಿಸಿಕೊಂಡು ನಾನು ಮುಂದಕ್ಕೆ ಹೊರಟೆ. ಆ ಗಿರಾಕಿ ಜನರ ಎದುರಿನಲ್ಲಿ ನನ್ನ ಕಾಲಿಗೆ ನೇರವಾಗಿ ಅಡ್ಡ ಬೀಳಲು ಹೊರಟ. ನೀವು ದುಡ್ಡು ಕೊಡದಿದ್ದರೆ ನಾನು ನಿಮ್ಮ ಜೊತೆಯೆ ಬರುತ್ತೇನೆಂದು ಹೇಳಿದ. ಜನರೆಲ್ಲಾ ಅವರ ಪಾಡಿಗೆ ಹೋಗುತ್ತಿದ್ದರೂ ಎಲ್ಲರೂ ನನ್ನನ್ನೇ ನೋಡುತ್ತಿದ್ದಾರೆಂದು ನನಗೆ ಅನ್ನಿಸತೊಡಗಿತು. ಸಾಮಾನ್ಯವಾಗಿ ಇಂತಹ ಸಂದರ್ಭದಲ್ಲಿ ನನಗೆ ಆಗುವ ಅತೀವ ಸಂಕೋಚ ಮತ್ತು ನನ್ನ ಮುಖ ಕೆಂಪಾಗುವುದು ನಡೆದೇ ಬಿಟ್ಟಿತು. ಹೇಗಾದರೂ ಈ ಬಲೆಯಿಂದ ತಪ್ಪಿಸಿಕೊಂಡರೆ ಸಾಕೆಂದು ಜೇಬಿನಿಂದ ಐವತ್ತು ರೂಪಾಯಿ ತೆಗೆದುಕೊಟ್ಟು "ಅಲ್ವೋ ಮಾರಾಯ, ನಿಮ್ಮ ಕುಡಿಯುವ ಚಟಕ್ಕೆ ನಮ್ಮ ದುಡ್ಡು ಬೇರೆ ಕೇಡು. ಈ ಕುಡಿಯೋದರ ಬದಲು ಹೋಗಿ ಹೆಂಡ್ತಿ ಮಕ್ಳನ್ನ ಚೆನ್ನಾಗಿ ನೋಡಿಕೋ. ನನ್ನ ಬೆನ್ನ ಹಿಂದೆ ಬರಬೇಡ" ಎಂದು ಕೊಂಚ ಜೋರಿನಲ್ಲಿ ಹೇಳಿದೆ. ಅವನು ಹಿಹಿಹೀ... ಎಂದು ನಗಾಡುತ್ತ, 'ಹೆಂಡ್ತಿ ಮಕ್ಕಳನ್ನು ಸಾಕುವ ಮಾತು ಇನ್ನು ಬರುವ ಜನ್ಮದಲ್ಲಿ ಅಂದ್ಹಾಗೆ ನಾನ್ಯಾರು ಅಂತ ಗೊತ್ತಾಯ್ತಾ' ಅಂತ ಕೇಳಿದ. ನನಗೆ ಅದರ ಅಗತ್ಯವಿಲ್ಲವೆಂದೆ. 'ನಾನು ಹೇಳುವುದನ್ನಂತೂ ಹೇಳಿ ಬಿಡುತ್ತೇನೆ. ನಾನು ಹಿಂಗೆ ಆಗ್ತಿರಲಿಲ್ಲ. ಇನ್ನೂ ಗೊತ್ತಾಗಲಿಲ್ವ, ನಾನು ನವನೀತ. ಎಂ.ಬಿ.ಬಿ.ಎಸ್. ಎಂ.ಡಿ. ಹಸ್ಬೆಂಡ್ ಆಫ್ ಸಾವಿತ್ರಿ ಜೋಯಿಸ್.' ಈಗ ಶಾಕ್ ಆಗುವ ಸರದಿ ನನ್ನದು. ಅಯಾಚಿತವಾಗಿ ನನ್ನ ಬಾಯಿಯಿಂದ 'ಅಯ್ಯೋ' 'ನೀವಾ' ಎನ್ನುವ ಉದ್ಗಾರ ಬಂತು. ಏಕವಚನ ಬಹುವಚನಕ್ಕೆ ತಿರುಗಿತು. ಮತ್ತೊಮ್ಮೆ ಅವರನ್ನು ಕಾಲಿನಿಂದ ತಲೆಯವರೆಗೆ ನೋಡಿದೆ. ಅವರ ಬಲಗೈ ತುಂಬಾ ನಡುಗುತ್ತಿದೆ. ಕಾಲು ಹೆಜ್ಜೆ ಇಡಲು ತಡವರಿಸುತ್ತಿದೆ. ನಾಲಿಗೆಯಲ್ಲಿ ಶಬ್ದಗಳು ಸರಿಯಾಗಿ ಉರುಳಿತ್ತಿಲ್ಲವೆಂದು ಈಗ ಅನ್ನಿಸಿತು. ಯಾಕೆ ಹೀಗಾಯಿತು ಎಂದು ಕೇಳಿದೆ. ನವನೀತ ಮತ್ತೆ ಅಸಹಜವಾಗಿ ಹಿಹಿಹ್ಹೀ.. ಎಂದು ಹೇಳುತ್ತಾ ನನ್ನ ಬಲಗೈಯನ್ನು ಅವರ ಮುಖಕ್ಕೆ ಮುಚ್ಚಿಕೊಂಡರು. ಅವರ ಕಣ್ಣೀರಲ್ಲಿ ನನ್ನ ಅಂಗೈಗಳು ಒದ್ದೆಯಾದವು. ನಾನು ಕೈಗಳನ್ನು ಹಿಂದಕ್ಕೆ ತೆಗೆದುಕೊಂಡು ಅವರ ಬೆನ್ನು ನೇವರಿಸಿ "ಬನ್ನಿ ಎಲ್ಲಾದರೂ ಕೂತು ಮಾತಾಡೋಣ" ಎಂದೆ. 'ನೀವು ಇಲ್ಲಿಯೇ ನಿಂತಿರಿ. ಈಗ ಬಂದೆ' ಎಂದು ಹೇಳಿ ಸಂದಿಯೊಳಗೆ ನುಗ್ಗಿ ಮತ್ತೆ ಹೊರಗೆ ಬಂದರು. ಈಗ ಅವರ ಕೈಯಲ್ಲಿ ಒಂದು ಪ್ಲಾಸ್ಟಿಕ್ ಲಕೋಟೆ ಇತ್ತು.

ಅವರೇ, "ಬಸ್‌ಸ್ಟ್ಯಾಂಡಿನ ಹಿಂದಿನ ಭಾಗದಲ್ಲಿ ಕತ್ತಲೆ ಇರುತ್ತದೆ. ಅದು ನಮಗೆ ಮಾತನಾಡುವುದಕ್ಕೆ ಹೇಳಿ ಮಾಡಿಸಿದ ಜಾಗ. ಇಲ್ಲಿ ಸೂಳೆಯರು ಇರ್ತಾರೆ ಗೊತ್ತಾ?" ಎಂದು ಮತ್ತೆ "ಹಿ ಹಿ ಹೀ" ಎಂದರು. ಅವರ ವಿಚಿತ್ರ ವರ್ತನೆ ನನಗೆ ಕುತೂಹಲಕಾರಿಯಾಗಿ ಕಾಣಿಸಿತು. ಇಬ್ಬರೂ ಬಸ್‌ಸ್ಟ್ಯಾಂಡಿನ ಹಿಂದಿನ ಭಾಗಕ್ಕೆ ಹೋದೆವು. ಹುಲ್ಲಿನ ಮೇಲೆ ಕುಳಿತೆವು. ಒಂದು ಕಾಲದ ಡಾಕ್ಟರ್ ನವನೀತ್ ಎಂಬಿಬಿಎಸ್ ಸಾರಾಯಿ ಪ್ಯಾಕೆಟ್ಟಿಗೆ ಬಾಯಿಯಿಂದಲೆ ಕಚ್ಚಿ ಅದನ್ನು ಕುಡಿದರು. ಮತ್ತು ಗಣೇಶ ಬೀಡಿಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಕತೆ ಹೇಳಲು ಶುರುಮಾಡಿದರು. ಅವರು ಹೇಳಿದ ಕತೆ ಮಾತ್ರ ಇಂದಿಗೂ ನನ್ನ ಮನಸ್ಸಿನಲ್ಲಿ ಹಸಿ ಹಸಿಯಾಗಿಯೇ ಉಳಿದಿದೆ. ಅದಕ್ಕೆ ಉತ್ತರ ಕಂಡುಕೊಳ್ಳಲಾಗದೆ ತಡಬಡಾಯಿಸಿದ್ದೇನೆ:

ನವನೀತ ಮೊದಲು ತನ್ನ ಡಾಕ್ಟರಿಕೆಯನ್ನು ಶುರುಮಾಡಿದ್ದು ಜಾವಗಲ್ಲಿನಲ್ಲಿ. ಅದು ಮದುವೆಗಿಂತಲೂ ಮೊದಲು. ಆವಾಗ ಅವನಿಗೆ ಸಾಕಷ್ಟು ಹೆಸರಿತ್ತು. ಡಾಕ್ಟ್ರ ಕೈಗುಣ ಚೆನ್ನಾಗಿದೆಯೆಂದು ಎಲ್ಲರೂ ಹೇಳುತ್ತಿದ್ದರು. ಹೆಚ್ಚು ಮಾತುಗಾರನಲ್ಲ. ಉದ್ಯೋಗದ. ವಿಷಯದಲ್ಲಿ ಬಹಳ ಮಹತ್ವಾಕಾಂಕ್ಷೆಯೂ ಅವರಿಗಿರಲಿಲ್ಲ. ಬಿಳಿಯ ಶರಟು ಮತ್ತು ಕಪ್ಪು ಪ್ಯಾಂಟು. ಶರಟಿಗೆಲ್ಲ ಗೆರೆಗಳಿದ್ದರೆ ಇಷ್ಟಪಡುತ್ತಿದ್ದ. ಸಂಬಂಧಿಕರ ಮನೆಯಲ್ಲಿ ಎಲ್ಲಿಯಾದರೂ ಮದುವೆಯೋ, ಉಪನಯನವೋ ಇದ್ದರೆ ಬಿಳಿಯ ಪಂಚೆ ಮತ್ತು ಬಿನ್ನಿ ಕಂಪೆನಿಯ ಬಿಳಿಯ ಶರಟು ಹಾಕಿಕೊಂಡು ಒಂದು ಉಲ್ಲನ್ ಶಾಲು ಹಾಕಿಕೊಂಡು ಹೊರಟು ಬಿಡುತ್ತಿದ್ದರು. 'ನಮ್ಮ ಡಾಕ್ಟ್ರಿಗೆ ಒಂಚೂರು ಅಹಂಕಾರವಿಲ್ಲವೆಂದು ನೋಡಿದವರು ಹೇಳಿಕೊಳ್ಳುವ ಹಾಗಿದ್ದರು. ಬಡತನದಿಂದ ಬಂದವರಿಗೆ ಬೆಂದವರ ದುಃಖ ಗೊತ್ತು ಎನ್ನುವ ಮಾತಿಗೆ ನವನೀತನೂ ಅಪವಾದವಾಗಿರಲಿಲ್ಲ. ಬಡವರಿಂದ ದುಡ್ಡೂ ತೆಗೆದುಕೊಳ್ಳುತ್ತಿರಲಿಲ್ಲ. ಅದೆಲ್ಲ ಮದುವೆಯ ಮುಂಚಿನ ಕತೆ. ನವನೀತರಾವ್ ಮೊದಲು ಇದ್ದುದ್ದು ಜಾವಗಲ್ಲಿನಲ್ಲಿ.

ಮದುವೆಯಾದ ಮೇಲೆ ಅವರ ಗ್ರಹಗತಿಯು ಬದಲಾಯಿತು. ಶನಿದೆಸೆಯು ಹಿಡಿದವರಿಗೆ ಕಾರ್ಕೋಟಕವು ಕಚ್ಚುವುದು ಎಷ್ಟು ಹೊತ್ತು? ನಳನನ್ನೇ ಬಿಡದ ಕಾರ್ಕೋಟಕವು ನವನೀತನನ್ನು ಬಿಟ್ಟೇತೆ? ಅದು ಬಂದು ಕಚ್ಚಿದ್ದುದು ಸಾವಿತ್ರಿ ಜೋಯಿಸಳ ರೂಪದಲ್ಲಿ. ಅವಳ ಧಿಮಾಕಿನಲ್ಲಿ: ಅವಳ ಬಯಕೆಯ ರೂಪದಲ್ಲಿ. ನವನೀತರಾವ್ ಸಾರಾಯಿಯನ್ನು ಬಾಯಿಗಿಟ್ಟಮೇಲೆ, ಬೀಡಿ ಹಚ್ಚಿ ಅದರ ಒಂದೆರಡು ದಮ್ಮು ಎಳೆದ ಮೇಲೆ ಅವರ ಮಾತು ಸರಿಯಾದಂತೆ ಅನಿಸಿತು:

"ನೋಡಿ ಇವ್ರೇ, ನಾನು ಜೀವನದಲ್ಲಿ ಮಾಡಿದ ಮೊದಲ ಮತ್ತು ಕೊನೆಯ ತಪ್ಪು ಎಂದರೆ ಸಾವಿತ್ರಿಯನ್ನು ಮದುವೆಯಾದುದು. ಅವಳ ತುಟಿಯಲ್ಲಿ, ನಾಲಗೆಯಲ್ಲಿ, ಅವಳ ದೇಹದ ಕಣಕಣದಲ್ಲಿ ಬರಿಯ ಪಾಪವೇ ತುಂಬಿದೆ ಎಂದು ಗೊತ್ತಿದ್ದರೆ ಖಂಡಿತಾ ನಾನು ಅವಳನ್ನು ಮದುವೆಯಾಗುತ್ತಿರಲಿಲ್ಲ. ಕವಡೆಯಾಡಿಸುವ ಜೋಯಿಸರ ಮಗಳಿಗೆ ಒಂದಿಷ್ಟು ಸಂಸ್ಕಾರವಿರಬಹುದು ಎಂದು ಭಾವಿಸಿಕೊಂಡಿದ್ದೆ. ಆದರೆ ಅವಳು ನನ್ನ ಜೀವನಕ್ಕೆ ಅಂತ್ಯ ಸಂಸ್ಕಾರ ಮಾಡಿದಳು" ಎಂದ ನವನೀತ್ ರಾವ್ ಮೂಗಿನ ಸಿಂಬಳವನ್ನು ತನ್ನ ಶರ್ಟಿನ ತುದಿಯಿಂದ ಒರೆಸಿಕೊಂಡರು. ಈ ಮನುಷ್ಯನಿಗೆ ಯಾವುದೋ ನೋವು ಮಡುಗಟ್ಟಿದೆಯೆಂದು ನನಗನ್ನಿಸಿತು. ಆದರೆ ನೋವು ಯಾವ ಥರದ್ದು ಎಂದು ತಿಳಿಯದೆಯೇ ಪ್ರತಿಕ್ರಿಯಿಸುವುದು ಸರಿಯಲ್ಲವೆಂದು ಸುಮ್ಮನಾದೆ. ನವನೀತರಾವ್ ಮುಂದುವರಿಸಿದರು.

"ಮದುವೆಯಾಗಿ ನಾವಿಬ್ಬರೂ ಗೃಹಪ್ರವೇಶ ಮಾಡಿದ ದಿನ ರಾತ್ರಿ ಸಾವಿತ್ರಿ ಬಂದವಳು ನನ್ಹತ್ರ ಮೊದಲು ಕೇಳಿದ ಪ್ರಶ್ನೆ ಯಾವುದು ಗೊತ್ತಾ" – ನಿಮ್ಮ ನರ್ಸಿಂಗ್ ಹೋಂನಲ್ಲಿ ತಿಂಗಳಿಗೆ ಎಷ್ಟು ಬರುತ್ತದೆ? ಅದರಲ್ಲಿ ನಾವಿಬ್ಬರೂ ಸಂಸಾರ ಮಾಡುವುದಕ್ಕೆ ಸಾಧ್ಯವಾದೀತಾ?" ಈ ಪ್ರಶ್ನೆ ನನ್ನ ಮಟ್ಟಿಗೆ ಅನಿರೀಕ್ಷಿತ. ನನ್ನ ವೃತ್ತಿಯನ್ನು ನಾನು ಸೇವೆಯೆಂದು ನೋಡುತ್ತಿದ್ದೇನೆ ಹೊರತು ಬೇರೆ ಯಾವ ಉದ್ದೇಶವು ನನಗಿರಲಿಲ್ಲ. ಅದಕ್ಕಿಂತ ಹೆಚ್ಚಾಗಿ ನನಗೆ ನನ್ನ ಉದ್ಯೋಗವೆಂದರೆ ಅದು ದುಡ್ಡು ಮಾಡುವ ಕಸುಬೆಂದೂ ಅನಿಸಿರಲಿಲ್ಲ. ಆದುದರಿಂದ ಅವಳ ವಾಕ್ಯ ಕೇಳಿದಾಗ ಯಾವುದೋ – ನನಗೆ ಇಷ್ಟವಾಗದ್ದನ್ನು ಅವಳು ಕೇಳಿದ್ದಾಳೆಂದೆನಿಸಿತು. ಅವಳಿಗೆ ಉತ್ತರಿಸುವ ಮನಸ್ಸಾಗಲಿಲ್ಲ. ಸುಮ್ಮನೆ ಕಿಟಕಿಯ ಹೊರಗಿನ ಮರ – ಗಿಡಗಳನ್ನು ನೋಡುತ್ತಾ ನಿಂತೆ. "ಆದಿನ ರಾತ್ರಿ ಅವಳ ತೀವ್ರ ದಾಹದ ಅರಿವು ನನಗುಂಟಾಯಿತು. ಹೆಣ್ಣು ಚಿರತೆಯ ನೆನಪಾಯಿತು. ಹಸಿವು; ಎಂದೂ ಇಂಗದ ದಾಹ. ಅವಳಿಗೂ ತಣಿಯಲಾರದ ಹಸಿವೆಯೆಂಬುದು ಗೊತ್ತಾಯಿತು. ಅದರಲ್ಲಿಯೂ ಅವಳಿಗೆ ಸ್ವಾರ್ಥವಿದೆಯೆಂಬುದು ಅರ್ಥವಾಗದಷ್ಟು ದಡ್ಡನಾಗಿರಲಿಲ್ಲ ನಾನು."

ಅವಳದು ತೀವ್ರವಾದ ಮಹತ್ವಾಕಾಂಕ್ಷೆ. ದಿನಾ ಮಾರ್ಕೆಟ್‌ಗೆ ಹೋಗುವವಳು. ಸೀರೆ – ಗೀರೆ ತರುವವಳು. ಚಿನ್ನ ಮಾಡಿಸುವ ಹುಚ್ಚು ಅವಳಿಗೆ. ದಿನಾ ನನ್ನ ಆದಾಯವೆಷ್ಟು? ಅದನ್ನು ಕೊಡಿ ಎಂದು ಕಿರಿಕಿರಿ ಮಾಡಲು ಶುರುಮಾಡತೊಡಗಿದಳು. ಬೆಳಿಗ್ಗೆ ರೋಗಿಗಳು ಬಂದರೆ ಅಸಹನೆ. ನಾನು ಮಧ್ಯರಾತ್ರಿ ಬಂದರೆ ಅನುಮಾನ. ಒಂದುದಿನ ಯಾವುದೋ ಎಮರ್ಜೆನ್ಸಿ ಕೇಸಿತ್ತು. ಹೆರಿಗೆಯದು.

ರಾತ್ರಿಯೇ ಅಟೆಂಡ್ ಮಾಡಬೇಕಿತ್ತು. ಇಲ್ಲದಿದ್ದರೆ ತಾಯಿ – ಮಗು ಉಳಿಯುವ ಸಂಭವ ಕಡಿಮೆಯಿತ್ತು. ಬಡತನದ ಹೆಂಗಸನ್ನು ನೋಡಿ 'ಅಯ್ಯೋಪಾಪ' ಅನಿಸಿತ್ತು. ಆಗ ನಾನು ಡ್ಯೂಟಿ ಮುಗಿಸಿ ಮನೆಗೆ ಹೊರಡುವ ಹೊತ್ತು. ಆ ಹೆಂಗಸನ್ನು ತಕ್ಷಣ ಅಡ್ಮಿಟ್ ಮಾಡುವಂತೆ ನರ್ಸ್‌ಗೆ ಹೇಳಿದೆ. ಆ ಹೆಂಗಸಿನ ತಾಯಿ ನನ್ನ ಕಾಲಿಗೆ ನಮಸ್ಕರಿಸಿ 'ನನ್ನ ಮಗಳ್ನ ಹೇಗಾದರೂ ಮಾಡಿ ಉಳಿಸಿಕೊಡಿ' ಎಂದಳು. ಅವಳ ಕಣ್ಣೀರು ನನ್ನ ಪಾದವನ್ನು ಸ್ಪರ್ಶಿಸಿತು. ಆದರೆ, ನನ್ನ ಮನಸ್ಸು ಉದ್ವಿಗ್ನಗೊಂಡಿತು. 'ಅಳಬೇಡಮ್ಮಾ, ನನ್ನ ಪ್ರಯತ್ನವನ್ನಂತೂ ಮಾಡಿಯೇ ಮಾಡುತ್ತೇನೆ' ಆಪರೇಶನ್ ಮುಗಿಸಿ ಹೊರಗೆ ಬರುವಾಗ ರಾತ್ರಿ ಒಂದೂವರೆ. ಆ ದಿನ ರಾತ್ರಿ ಆ ಹೆಂಗಸಿನ ಕುರಿತು ವಿವರಗಳನ್ನು ಅವಳಿಗೆ ಹೇಳಿದೆ. ಅವಳು ಮುಖ ಸಿಂಡರಿಸಿಕೊಂಡು, 'ನೀವು ಬಿಟ್ಟಿಯಾಗಿ ದುಡಿಯುವುದಕ್ಕೆ ಈ ಉದ್ಯೋಗ ಬೇಕಿತ್ತಾ? ಅವರು ಸತ್ತರೆ ಸಾಯುತ್ತಾರೆ. ಹಗಲೂ ಅಂತ ಇಲ್ಲ, ರಾತ್ರಿ ಅಂತ ಇಲ್ಲ. ಗಂಡನ ಜೊತೆ ಮಲಗ್ತಾರೆ. ಹಂದಿ ಮರಿ ಹಾಕುವಂತೆ ಹೆರುತ್ತಾರೆ. ಬಡತನ ಇರುವವರಿಗೆ ಈ ದರ್ದು ಬೇರೆ. ತುರಿಕೆ ಹೆಚ್ಚು ಅಂತ ಕಾಣುತ್ತದೆ. ಗರ್ಭ ನಿಂತಿತು ಅಂತ ಗೊತ್ತಾದರೆ ಅಬಾರ್ಷನ್ ಮಾಡಿಸಿಕೊಂಡು ಬಿಡಬೇಕು. ಇಲ್ಲಾಂತ ಆದರೆ ಕಾಸರಕನ ಕಾಯಿ ತಿಂದರೆ ಸಾಕಪ್ಪ. ಸುಲಭ ಪರಿಹಾರ". ಅವಳ ಮುಖ ಉರಿಯುತ್ತಿದ್ದುದು ಬಿಟ್ಟಿಯಾಗಿ ನಾನು ಆಪರೇಷನ್ ಮಾಡಿದ್ದಕ್ಕೆ ಎಂದು ತಿಳಿಯಿತು. ಒಂದು ಕ್ಷಣ ಆ ತಾಯಿ ಮಗನ ಚಿತ್ರ ನನ್ನ ಕಣ್ಣ ಮುಂದೆಯೇ ಸುಳಿಯತೊಡಗಿತು. ಮಗು – ತಾಯಿ ಆರೋಗ್ಯವಾಗಿದ್ದಾರೆಂಬುದು ಒಬ್ಬ ಡಾಕ್ಟರನಾದ ನನಗೆ ಹೆಮ್ಮೆಯ ಸಂಗತಿಯಾಗಿತ್ತು. ಸಾವಿತ್ರಿ – ಬಸಿರು ಇಳಿಸಿಕೊಳ್ಳಲು ಕಾಸರಕನ ಕಾಯಿ ತಿನ್ನಬಹುದಿತ್ತು ಎಂದು ಹೇಳಿದ್ದು ನನಗೆ ತುಂಬ ಬೇಸರವುಂಟುಮಾಡಿತ್ತು. ಕಾಸರಕನ ಕಾಯಿಯನ್ನು ಗುದ್ದಿ ಪುಡಿ ಮಾಡಿ ಆಗದವರನ್ನು ಕೊಂದ ಉದಾಹರಣೆಗಳು ಬೇಕಾದಷ್ಟು ಇವೆ. ಹಳ್ಳಿಯಲ್ಲಿ ಬೇಡದ ಬಸಿರು ಇಳಿಸಲು ಬೇರೆ ಬೇರೆ ಔಷಧಿ ಕೊಡುತ್ತಾರೆ. ಕೆಲವರ ಜೀವ ಹೋಗುತ್ತದೆ. ಮತ್ತೆ ಕೆಲವರ ಹೊಟ್ಟೆಯ ಭ್ರೂಣ ರಕ್ತ ಸಮೇತ ಉದುರುತ್ತದೆ:– ಹೀಚು ಕಾಯಿ ನೆಲಕ್ಕೆ ಬಿದ್ದಂತೆ! ಸಾವಿತ್ರಿಯು ಹೇಳಿದಾಗ ನಾನು ಹಳ್ಳಿಯಲ್ಲಿಯ ಈ ತರಹದ ಶೌರ್ಯಗಳನ್ನು ನೆನಪಿಸಿಕೊಂಡೆ. ಕೆಲವರಿಗೆ ರಕ್ತಸ್ರಾವ ನಿಲ್ಲಿವುದಿಲ್ಲ. ನಾಕು ಸಾರಿ ಬೇಡದ ಬಸಿರು ತೆಗೆಸಿಕೊಂಡವರ ಕತೆಯನ್ನು ಹೇಳುವುದು ಬೇಡ – ಬಿಳುಚಿದ ಜೀವಂತ ಶವವಾಗಿ ಓಡಾಡುತ್ತಾರೆ. ಅಬಾರ್ಶನ್ ಮಾಡಿಸುವುದು ಎಂದರೆ ನನ್ನ ಕೈಯಾರೆ ಒಂದು ಜೀವವನ್ನು ಕೊಲ್ಲುವುದು ಎಂದು ತಿಳಿದುಕೊಂಡವನು. ಬಸಿರು ತೆಗೆಸುವ ಕಾರ್ಯವೆಂದರೆ ಅಮಾನುಷವೆಂದು ಭಾವಿಸಿಕೊಂಡು ನನ್ನ ಉದ್ಯೋಗ ಧರ್ಮ ಕಾಪಾಡಿಕೊಂಡಿದ್ದೇನೆ. ನಿಮ್ಮ ತಲೆಯ

ಮೇಲೆ ಆಣೆಯಿಟ್ಟು ಹೇಳುತ್ತೇನೆ; ನಾನು ದುಡ್ಡು ಮಾಡುವುದಿದ್ದರೆ ಬೆಂಗಳೂರಿನಲ್ಲಿ ಇದ್ದು ಬಸುರಾಗಿ ಬರುವ ಹುಡುಗಿಯರ ಕೇಸ್ ತೆಗೆದುಕೊಂಡಿದ್ದರೆ ಒಂದಕ್ಕೆರಡು ದುಡ್ಡು ಮಾಡಬಹುದಿತ್ತು. ಹದಿವಯಸ್ಸಿನ ಹುಡುಗಿಯರು ಎಷ್ಟೊಂದು ಜನ ಕದ್ದು ಬಸಿರಾಗಿ ನನ್ನತ್ರ ಬರುತ್ತಾರೆ. ಗೊತ್ತಾ? ಅವರನ್ನು ನೋಡಿದರೆ ಅಯ್ಯೋ ಪಾಪವೆಂದು ಅನಿಸುತ್ತದೆ. ಆದರೆ ಈ ತನಕ ಅಂಥಾ ಕೇಸ್ ಮುಟ್ಟಿಲ್ಲ. ಅಂಥದ್ದಕ್ಕೆ ಹೇಳಿ ಮಾಡಿಸಿದ ಕ್ಲಿನಿಕ್‌ಗಳಿರುತ್ತವೆ. ದುಡ್ಡು ಬಾಚಿಕೊಳ್ಳುವವರು ಬಾಚಿಕೊಳ್ಳಲಿ ನಾನ್ಯಾಕೆ ಅದಕ್ಕೆ ತಲೆಕೆಡಿಸಿಕೊಳ್ಳಲಿ?". ನವನೀತರ ನಾಲಿಗೆ ತೊದಲಲು ಪ್ರಾರಂಭವಾಯಿತು. ಅವರ ಮಾತು ಮಾತ್ರ ಪೀಠಿಕೆಯ ರೂಪದಲ್ಲಿದ್ದಂತೆ ಅನಿಸಿತು. ಅವರ ಸ್ವಪ್ರವರವಾಗಲೀ, ದುಃಖದ ತೀವ್ರತೆಯಾಗಲೀ ನನಗೆ ಅಂಟಿಕೊಳ್ಳಲಿಲ್ಲ. ಒಮ್ಮೆ ಈ ಮನುಷ್ಯನಿಂದ ಬಿಡಿಸಿಕೊಂಡರೆ ಸಾಕಪ್ಪಾ ಅಂತ ಮಾತ್ರ ಅನಿಸಿತು. ಎಲ್ಲಕ್ಕಿಂತ ತೋಳ ಹಳ್ಳಕ್ಕೆ ಬಿದ್ದ ಮೇಲಿನ ಕತೆಯ ಅನಂತರ ಯಾವುದೂ ಉಳಿಯುವುದಿಲ್ಲ. ಸಾವಿತ್ರಿ ಜೋಯಿಸ್ ಎಂಥವಳು ಎಂಬುದರ ಬಗ್ಗೆ ನಮಗೆ ಗೊತ್ತಿತ್ತು. ಆದುದರಿಂದ ನವನೀತರ ಬಗ್ಗೆ ಒಂದು ರೀತಿಯ ಕರುಣೆ ಮಾತ್ರ ವ್ಯಕ್ತಪಡಿಸಲು ಸಾಧ್ಯವಿತ್ತು. 'ನಾನಿನ್ನು ಬರ್ತೇನೆ' ಎಂದೆ. ಆ ಕತ್ತಲೆಯಲ್ಲಿ ನನಗೆ ಅವರೊಂದಿಗೆ ಕೂತುಕೊಳ್ಳುವುದೂ ಇಷ್ಟವಾಗಿರಲಿಲ್ಲ.

ಕತ್ತಲೆಯಲ್ಲಿ ಸುಳಿದಾಡಿವ, ಸರಿಯಾದ ಮುಖವೇ ಕಾಣಿಸದ ಜೀವಗಳು ಒಂದಕ್ಕೊಂದು ಅವಸರದಲ್ಲಿ ಬೆಸೆದುಕೊಳ್ಳುವುದು, ಅಲ್ಲಿಯೇ ಇದ್ದ ಪೊದೆಗಳನ್ನು ಹುಡುಕುವುದು, ಕೆಲವರು ಅಲ್ಲಿಯೇ ಕುಡಿಯುವುದು, ಬೀಡಿ ಸೇದಿದ ಹೊಗೆ ತಲೆಹಿಡುಕರು, ಎಲ್ಲವೂ ಸೇರಿ ತುಂಬಾ ಅಸಹನೀಯವಾದ ವಾತಾವರಣ ಸೃಷ್ಟಿಸಿತ್ತು. ಇದರಿಂದ ತಪ್ಪಿಸಿಕೊಳ್ಳಬೇಕೆಂದು 'ನಾನು ನಾಳೆ ಸಿಗುತ್ತೇನೆ' ಎಂದೆ. ನವನೀತರಾವ್ ಕತೆಯನ್ನು ಮುಗಿಸುವ ಉಮೇದಿನಲ್ಲಿ ಇದ್ದರು. 'ಕುಳಿತುಕೊಳ್ಳಿ, ನೀವು ಸಭ್ಯರು. ನಾನೂ ಸಭ್ಯನಾಗಿದ್ದೆ. ಈಗ ಸರ್ವನಾಶವಾಗಿದ್ದೇನೆ. ಓ, ಅಲ್ಲಿರುವ ಸೂಳೆ ನೋಡಿ – ಬೇಗ ಬೇಗ ಅಂತಾಳೆ. ಅವಳಿಗೂ ನನ್ನ ಮನೆಯಲ್ಲಿದ್ದ ಸೂಳೆಗೂ ಯಾವ ವ್ಯತ್ಯಾಸವೂ ಉಳಿದಿಲ್ಲ. ಮದುವೆಯಾದ ಕೆಲವು ವರ್ಷಗಳಲ್ಲಿ ಏನು ಬಂತು – ಬೆಂಗಳೂರಿಗೆ ಬಂದ ಕೆಲವು ವರ್ಷಗಳಲ್ಲಿ, 'ಹ್ಞೂಂ. ಬೇಗ ಬೇಗ ಮಾಡಿ ಹೋಗಿ ಮಲಗಿಕೊಳ್ಳಿ ಎನ್ನತೊಡಗಿದ್ದಳು. ನನ್ನ ಕಾಲ ಕೆಳಗೆ ಗೆದ್ದಲು ಹಿಡಿಯಲು ಪ್ರಾರಂಭವಾಗಿದೆಯೆಂದು ಅರ್ಥವಾಗುವಷ್ಟು ಹೊತ್ತಿಗೆ ನನ್ನನ್ನು ಒಂದು ಗುಂಡಿಗೆ ನೂಕಿಬಿಟ್ಟು ತಲೆಯ ಮೇಲೆ ಕಲ್ಲು ಎಸೆದು ಬಿಟ್ಟಿದ್ದಳು. ನಾನು ಚೇತರಿಸಲಾಗದಷ್ಟು! ತಡೀರಿ, ಇನ್ನೊಂದು ಸ್ವಲ್ಪ ಕುಡಿದು ಬಿಡುತ್ತೇನೆ. ನನ್ನ ತಲೆಯಲ್ಲಿ ಜಿರಳೆ ಓಡ್ತಾ ಇದೆ. ಅದನ್ನು ತೆಗೆದುಹಾಕಿಬಿಡ್ತೇನೆ. ಮತ್ತೊಮ್ಮೆ ನೀವು ಸಿಗ್ತಿರೋ – ಇಲ್ಲವೋ

ಗೊತ್ತಿಲ್ಲ." ನವನೀತರಾವ್ ಮತ್ತೊಂದು ಸಾರಾಯಿ ಪಾಕೀಟಿಗೆ ಬಾಯಿಗಿಟ್ಟರು. ಸರಸರನೆ ಅದನ್ನು ಹೀರಿ ಶೇಂಗಾ ಬೀಜ ತಿಂದರು. ಸಾರಾಯಿ ಹೀರುವ ಮಟ್ಟಿಗೆ ಅಗಸ್ತ್ಯ ದಾಹ ಅವರಿಗೆ ಇದೆಯೆಂದು ನನಗನ್ನಿಸಿತು. ಅಸಹನೀಯವಾದ ವಾತಾವರಣದಲ್ಲಿ ಕುಳಿತುಕೊಂಡು ಅವರ ಕತೆ ಕೇಳುವ ಗ್ರಹಚಾರ ನನಗೆ ಹೇಗೆ ಸುತ್ತಿಕೊಂಡಿತಪ್ಪ ಎಂದು ಚಿಂತಿಸಿದೆ. ಎರಡು ದಂ ಎಳೆದ ಮೇಲೆ ಮುಂದುವರಿಸಿದರು. "ನಾನು ಏನು ಹೇಳುತ್ತಿದ್ದೆ. ಆ ಬೋಸುಡಿ ನನ್ನನ್ನು ಹಾಳು ಮಾಡಿದಳು. ಅಂತ ಅಲ್ಲವೆ?" ನಾನೇ ಹೇಳಬೇಕಾಯಿತು: "ಅದೇ ಹೆರಿಗೆಯ ಪ್ರಸಂಗ" ನವನೀತರಾವ್ ಮುಂದುವರಿಸಿದರು: "ನೋಡಿ ಇವ್ರೆ – "

ಅವರ "ನೋಡಿ ಇವ್ರೆ" ಎನ್ನುವ ಪದ ಕೇಳಿ ನಮ್ಮೂರಿನ "ಅದೆಂಥ ನಾರಾಯಣ" ನೆನಪಾದ. ಆ ನೆನಪಿನಲ್ಲಿ ಕೊಂಚ ನಗೆಯೂ ಬಂತು. ಮತ್ತೆ ಅನಿಸಿತು: ಪ್ರತಿಯೊಬ್ಬರೂ ಒಂದಲ್ಲ ಒಂದು ಪದವನ್ನು ರೂಢಿ ಮಾಡಿಕೊಂಡಿರುತ್ತಾರೆ.

"ಒಂದು ದಿನ ಬಾಲ್ಯದಲ್ಲಿ ನಾನು ಗೇರು ಗುಡ್ಡಕ್ಕೆ ಗೇರು ಹಣ್ಣನ್ನು ಕೊಯ್ಯಲು ಹೋಗಿದ್ದೆ. ಆ ದಿನ ನಾನು ನಾಕಾರು ಗೇರು ಬೀಜ ಕೊಯ್ದು ಹಣ್ಣು ತಿಂದೆ. ನಿಮಗೆ ಗೊತ್ತಲ್ಲ. ಅದಕ್ಕೆ ನಾನು ಬೆಣಚು ಕಲ್ಲು ಹುಡುಕುತ್ತಾ ಪೊದೆಯ ಹತ್ತಿರ ಹೋದೆ. ಕಲ್ಲು ಅಲ್ಲಿದ್ದುದು ನಿಜ. ಆದರೆ ಪಕ್ಕದಲ್ಲಿ ಯಾವುದೋ ಬಟ್ಟೆಯನ್ನು ಮುದುರಿ ಬಿಸಾಕಿದಂತೆ ಕಾಣಿಸಿತು. ಅದು ಹಳೆಯ ಸೀರೆ ಎಂಬುದರ ಬಗ್ಗೆ ಅನುಮಾನವಿರಲಿಲ್ಲ. ನನಗೆ ಕುತೂಹಲ ಹೆಚ್ಚಾಯಿತು. ಮೆಲ್ಲನೆ ಒಂದು ಕೋಲು ತಂದು ಅದನ್ನು ಪೊದೆಯಿಂದ ಈಚೆಗೆ ತೆಗೆದೆ. ಕೋಲಿನಲ್ಲಿಯೆ ಅದನ್ನು ಬಿಡಿಸಿದೆ. ಒಂದು ಸಣ್ಣ, ಸರಿಯಾಗಿ ಬೆಳೆಯದ ಭ್ರೂಣ. ರಕ್ತ ಅಂಟಿಕೊಂಡು ವಾಸನೆ ಹೊಡೆಯುತ್ತಿರುವ ಬಟ್ಟೆ. ಅದನ್ನು ಅಲ್ಲಿಯೆ ಬಿಟ್ಟು ಓಡಿದೆ. ಮನೆಗೆ ತಲುಪಿ ಅಮ್ಮನತ್ರ ಬಿಡಿಸಿ ಹೇಳಿದೆ. ಅಮ್ಮ ನನ್ನ ಬೆನ್ನಿಗೆರಡು ಬಿಗಿದು "ನೀನು ಸುಮ್ಮನಿರು" ಅಂದರು. ಅಂದಿನಿಂದ ಭ್ರೂಣ ಹತ್ಯೆಯೆಂದರೆ ನನಗೆ ನಾನು ಬಾಲ್ಯದಲ್ಲಿ ನೋಡಿದ ಎಳೆ ಚಿಗುರು ಮಗು ನೆನಪಿಗೆ ಬರುತ್ತದೆ. ಪಾಪ ಅಂಟಿಕೊಂಡ ಹಾಗೆ ಅನಿಸುತ್ತದೆ. ಈ ಉದ್ಯೋಗದಲ್ಲಿ ಎಷ್ಟೋ ಆಪರೇಶನ್ ಮಾಡಿದ್ದೇನೆ. ಎಷ್ಟೋ ತಾಯಂದಿರಿಗೆ ನೆರಳಾದೆ – ಆಗಷ್ಟೇ ಹುಟ್ಟಿದ ಮಕ್ಕಳ ಅಳು ಕೇಳಿದ್ದೇನೆ. ಆದರೆ ಆ ಚಿತ್ರ ನನ್ನ ಕಣ್ಣಿಂದ ಮಾಯವಾಗಲಿಲ್ಲ. ಸಾವಿತ್ರಿಯ ಕ್ರೌರ್ಯ ಯಾವ ಬಗೆಯದು ಎಂದು ಅನಿಸಲು ಇದು ಕಾರಣ. ಇನ್ನೊಂದು ಬಾಲ್ಯದಲ್ಲಿ ತಂದೆ ಹೇಳುತ್ತಿದ್ದ ಕತೆಗಳು. ಉಪಪಾಂಡವರನ್ನು ಕೊಂದ ಕತೆ. ಅಶ್ವತ್ಥಾಮನಿಗೆ ಪಾಪ ಅಂಟಿಕೊಂಡಿದ್ದು ಯಾವಾಗಲೂ ನೆನಪಿಗೆ ಬರುತ್ತದೆ. ಭ್ರೂಣ ಹತ್ಯೆ ಮಾಡಿದವನಿಗೆ ರೌರವ ನರಕ

ಕಟ್ಟಿಟ್ಟಿದೆ ಎಂದು ಯಾವಾಗಲೂ ಅನಿಸುತ್ತಿತ್ತು. ನೋಡಿ ಇವ್ರೆ – ಸಾವಿತ್ರಿಯ ಅಹಂಕಾರ, ದುಡ್ಡಿನ ದಾಹ ಸ್ವಾರ್ಥ ದಿನಂದಿನ ಬೆಳೆಯುತ್ತಿತ್ತು. ನಾನು ಅದರಿಂದ ಭಿನ್ನವಾಗಿ ಯೋಚಿಸುತ್ತಿದ್ದೆ. ಎಷ್ಟೋ ದಿನ ರಾತ್ರಿ ಮನೆಗೆ ಹೋದರೆ ಹೊಟ್ಟೆಗೆ ತಣ್ಣೀರು ಬಟ್ಟೆಯನ್ನು ಇಟ್ಟುಕೊಳ್ಳಬೇಕಾಗುತ್ತಿತ್ತು. ಹಸಿವೆಯೆಂದರೆ ಹಸಿವೆ. ಒಂದೊಂದು ದಿನ ರಾತ್ರಿ ಮನೆಯಲ್ಲಿ ಅವಲಕ್ಕಿ – ಮೊಸರು ತಿಂದಿದ್ದೇನೆ. ಮೊಟ್ಟೆ ಬೇಯಿಸಿ ನುಂಗಿದ್ದೇನೆ. ಅದು ಅವಳಿಗೆ ಗೊತ್ತಾದರೂ ಹಾಸುಗೆ ಬಿಟ್ಟು ಏಳುತ್ತಿರಲಿಲ್ಲ. ನಿದ್ದೆ ಬಂದಂತೆ ನಟಿಸುತ್ತಿದ್ದಳು. ಆದರೂ ನೋಡಿ ಇವ್ರೆ – ಯಾವಾಗಲೂ ಕೆಲವು ವಿಷಯಗಳಲ್ಲಿ ಸ್ತ್ರೀಯರ ಪರವಾಗಿಯೆ ಸಹಾನುಭೂತಿಯಿರುತ್ತದೆ. ನಾಕು ಜನರೆದುರು ಒಳ್ಳೆಯವಳಂತೆ ನಟಿಸುತ್ತಿದ್ದಳು. ಸಮಾಜ ಕೆಲವು ಸಲ ಸುಳ್ಳು ಹೇಳಿದರೂ ನಂಬುತ್ತದೆ. ಒಡೆದ ಬಿರುಕನ್ನು ಎಷ್ಟು ತೇಪೆ ಹಾಕಿದರೂ ಆ ತೇಪೆ ಹಾಗೆಯೇ ಉಳಿಯುತ್ತದೆ ನೋಡಿ. ಅದನ್ನು ಮುಚ್ಚಲು ಆಗುವುದಿಲ್ಲ. ನನ್ನ ಕತೆಯೂ ಹಾಗೆಯೇ ಆಯಿತು. ತಲೆ ತುಂಬಾ ಕೆಟ್ಟು ಹೋಗಿದೆಯೆಂದು ಅನಿಸಿದ ದಿನ ಬಾರಿಗೆ ಹೋಗಿ ಒಬ್ಬನೇ ಕುಳಿತುಕೊಳ್ಳತೊಡಗಿದೆ. ಬಾರ್‌ನ ಸದ್ದು – ಗದ್ದಲ ಬೇಡವೆಂದು ಅನಿಸಿದ ದಿನ ವಿಸ್ಕಿಯನ್ನೋ, ರಮ್ಮನ್ನೋ ಹಿಡಿದುಕೊಂಡು ದೂರದ ರಸ್ತೆಯ ಕಡೆಗೆ ಹೋಗಿಯೋ ಅದನ್ನು ನೀರಿನ ಬಾಟಲಿಗೆ ಮಿಕ್ಸ್ ಮಾಡಿಕೊಂಡು ಕುಡಿಯತೊಡಗಿದೆ. ಆಗ ಪ್ರಾರಂಭವಾಗಿದ್ದು ಒಬ್ಬನೇ ಕುಡಿಯುವ ಅಭ್ಯಾಸ. ನರ್ಸಿಂಗ್ ಹೋಂನಲ್ಲಿ ನಾನು ಸರ್ಜನ್. ಆದರೆ, ಕುಡಿಯಲು ಆರಿಸಿಕೊಂಡ ಜಾಗಗಳು ನರ್ಸಿಂಗ್ ಹೋಂನವುಗಳಲ್ಲ. ಬಾರ್‌ಗಳಲ್ಲ – ಕತ್ತಲೆ ಬೆಳಕಿನ ಆಟಗಳು ನಡೆಯುವ ಜಾಗಗಳಲ್ಲ. ಭಿಕ್ಷುಕರು ಇರುವ ಜಾಗಗಳು. ಕತ್ತಲೆಯಲ್ಲಿ ಕರೆಯುವ ಸೂಳೆಯರ ಜಾಗಗಳು. ಬಸ್‌ಸ್ಟ್ಯಾಂಡಿನ ಟಾಯ್ಲೆಟಿನ ರೂಂ ಕತ್ತಲೆಯ ಭಾಗಗಳು:– ಎಲ್ಲವೂ ನನ್ನ ಕುಡಿತದ ಜಾಗಗಳು. ಯಾರೂ ಇದನ್ನು ಗಮನಿಸುತ್ತಿರಲಿಲ್ಲ. ಗಮನಿಸಿದರೂ ಕುಡಿತವೆನ್ನುವುದು ಅಭ್ಯಾಸವಾದ ಜನಕ್ಕೆ ಇದು ಹೊಸ ಸಂಗತಿಯಾಗಿರಲಿಲ್ಲ. ಅವರು ಅದನ್ನು ಸಹಜವೆಂದು ತಿಳಿದುಕೊಳ್ಳುತ್ತಿದ್ದರು. ನೋಡಿ ಇವ್ರೇ – ನಾಗರಿಕರೆದುರು ಹಾಗೆಲ್ಲಾ ಕುಡಿಯಲಾಗುವುದಿಲ್ಲ. ಕಂಟ್ರಿ ಸಾರಾಯಿ, ಸೆಕೆಂಡ್ಸ್ ಕುಡಿದರೂ ಸ್ಕಾಚ್ ಕುಡಿದಿದ್ದೇನೆ ಎಂದು ಹೇಳಿಕೊಳ್ಳಬೇಕಾಗುತ್ತದೆ. ಅದು ಮರ್ಯಾದೆಯ ಪ್ರಶ್ನೆ. ರಾತ್ರಿ ನಾನು ಉಪವಾಸ ಮಲಗಿದರೆ, ಕುಡಿದುಕೊಂಡು ಬಂದು ಮಲಗಿದರೆ ಮರುದಿನ ಬೆಳಿಗ್ಗೆ ರಂಪಾಟ ಕಟ್ಟಿಟ್ಟದ್ದು:

"ನಿಮ್ಮನ್ನು ಕಟ್ಟಿಕೊಂಡು ನಾನು ನರಕ ಅನುಭವಿಸಬೇಕಾಯಿತು"

"ನೀವು ನಿಮ್ಮ ಸುಖ ನೋಡಿಕೊಳ್ತೀರಿ. ಹೆಂಡತಿ ಬದುಕಿದ್ದಾಳೋ, ಸತ್ತಿದ್ದಾಳೋ ಇದ್ಯಾವುದು ನಿಮಗೆ ಬೇಡ"

"ಈ ಮನೆಯಲ್ಲಿ ನಾನು ಲೆಕ್ಕಕ್ಕಿಲ್ಲ." ಇತ್ಯಾದಿ. ಆದರೆ ಇದ್ಯಾವುದಕ್ಕೂ ನಾನು ತಲೆಕೆಡಿಸಿಕೊಳ್ಳಲಿಲ್ಲ. ಬೆಳಿಗ್ಗೆ ನರ್ಸಿಂಗ್ ಹೋಂಗೆ ಹೊರಟರೆ ರಾತ್ರೆ ಬರುವುದನ್ನು ರೂಢಿಮಾಡಿಕೊಂಡೆ. ಕೆಲಸ – ಕೆಲಸ – ಕೆಲಸ.

ನವನೀತರಾವ್ ಕುಡಿತದ ಅಮಲಿನಲ್ಲಿ ಸುಳ್ಳು ಹೇಳುತ್ತಿದ್ದಾರೇನೋ ಎಂದೆನ್ನಿಸಿತು. ಯಾವ ಗಂಡಸೂ ತನ್ನ ಹೆಂಡತಿಯು ಬೇರೊಬ್ಬ ಗಂಡಸಿನ ತೊಡೆಯ ಮೇಲೆ ಮಲಗಿದ್ದನ್ನು ನೋಡಿ ಹಾಗೆಯೆ ಹೊರಟು ಹೋಗಲು ಸಾಧ್ಯವೇ? ಸಾವಿತ್ರಿಯನ್ನು ದುಷ್ಟ ಹೆಂಗಸೆಂದು ಚಿತ್ರಿಸಲು ಹಿಂಗೆ ಹೇಳುತ್ತಿದ್ದಾರೆಯೇ? ಯಾವುದೂ ಅರ್ಥವಾಗಲಿಲ್ಲ. ಆ ಅಸಹನೀಯ ವಾತಾವರಣ ನನಗೆ ಬೇಕಾಗಿರಲಿಲ್ಲ. ಸಾವಿತ್ರಿಯ ಬಗ್ಗೆ ಆಶ್ಚರ್ಯವಾಗಲಿಲ್ಲ ಅನ್ನುವುದು ಮಾತ್ರ ನಿಜ.

* * * * *

ಬದುಕಿರುವ ಪ್ರತಿಯೊಬ್ಬ ವ್ಯಕ್ತಿ ಒಂದಿಲ್ಲ ಒಂದು ಕ್ಷಣ ಹುಟ್ಟು – ಸಾವುಗಳಂತಹ ಮೂಲ ಭೂತ ಪ್ರಶ್ನೆಗಳ ಬಗ್ಗೆಯೇ ಯೋಚಿಸುತ್ತಾನೆ ಎನ್ನುವುದು ಮಾತ್ರ ನಿಜ ಎನ್ನಬಹುದು.

(ಸಾಹಿತ್ಯ, ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ 1981 ಪು.60)

1992

ಡಿಸೆಂಬರ್

# 20

ಆಯ್ಕೆ ಮತ್ತು ಅದರೊಂದಿಗೆ ಬರುವ ಜವಾಬ್ದಾರಿ ಎರಡನ್ನೂ ತಾವೇ ಹೊತ್ತು ಕೊಳ್ಳಬೇಕು. ಆಯ್ಕೆ ತನ್ನದು; ಜವಾಬ್ದಾರಿ ಮಾತ್ರ ದೇವರದು ಎಂದು ತಿಳಿದುಕೊಂಡು ಗಣಪತಿಗೆ ನೂರೆಂಟು ತೆಂಗಿನ ಕಾಯಿ ಒಡೆದರೆ ಯಾವ ಪ್ರಯೋಜನವೂ ಇಲ್ಲ; ಕೆದರಿಕೊಂಡ ತಲೆ ಕೂದಲ ಮೇಲೆ ತನ್ನ ಕೈ ಬೆರಳುಗಳನ್ನು ತೂರಿ ಮನಸ್ಸಿನಲ್ಲಿಯೇ ಅಂದುಕೊಂಡರು ಡಾ. ನವನೀತರಾವ್

ಸಮಯ: ರಾತ್ರೆ 9ಗಂಟೆ.

ಸ್ಥಳ: ತನ್ನ ಮನೆಯ ಖಾಸಗಿ ಕೋಣೆ.

ಸಂದರ್ಭ; ಎರಡು ಪೆಗ್ಗೆಂಬುದು ನೆತ್ತಿಗೇರಿದ ಹೊತ್ತು; ಯಾರೆಂದರೆ ಯಾರೂ ಇಲ್ಲದ ಸಮಯ

–1–

ಡಾ.ನವನೀತರಾವ್ ಆಸ್ಪತ್ರೆಯೆಂದರೆ ಜಾವಗಲ್ಲಿನಲ್ಲಿ ಯಾರಿಗಾದರೂ ತಿಳಿಯುತ್ತದೆ. ನಿಜವಾಗಿಯೂ ಡಾ. ನವನೀತರಾವ್ ಅವರು ಆಸ್ಪತ್ರೆ ತೆರೆಯುವಾಗ ಎಲ್ಲರೂ ಮಾಡುವಂತೆ ಒಂದು ಕರಪತ್ರ ಮಾಡಿಸಿ, ಆಸ್ಪತ್ರೆಗೆ ಚಂದದ ಹೆಸರು ಇರಲಿ ಎಂದು ತನ್ನ ಮತ್ತು ಹೆಂಡತಿ ಎರಡು ಹೆಸರುಗಳನ್ನು ಕೂಡಿಸಿ, ಕಳೆದು ಹೆಸರಿಟ್ಟಿದ್ದರು. 'ಸಾನಾ ಕ್ಲಿನಿಕ್' ಬಿಳಿಯ ತಗಡಿನಲ್ಲಿ ಕಪ್ಪು ದೊಡ್ಡ ಅಕ್ಷರದಲ್ಲಿ ಅದನ್ನು ಬರೆಸಿದ್ದರು. ಕೆಳಗೆ ಡಾ. ನವನೀತರಾವ್.

ಆಸ್ಪತ್ರೆಯ ವೇಳೆ –

ಬೆಳಿಗ್ಗೆ : 10 ಗಂಟೆಯಿಂದ ಮಧ್ಯಾಹ್ನ 1 ಗಂಟೆ.

ಅಪರಾಹ್ನ : 4 ಗಂಟೆಯಿಂದ ರಾತ್ರಿ 7 ಗಂಟೆ.

ಬೋರ್ಡ್ ಬರೆಸಿದ ಮೇಲೆ ಎರೆಡೆರಡು ಸಾರಿ ಓದಿದರು. ಡಾ.ನವನೀತರಾವ್ 'ನಾ' ಬಂದಿದೆ. ಹೆಂಡತಿಯ 'ಸಾವಿತ್ರಿ'ಯಲ್ಲಿ 'ಸಾ' ಬಂದಿದೆ. ಖುಶಿಯಾಗಿತ್ತು ಅದನ್ನು ಮೀನಾಕ್ಷಿಯಲ್ಲಿ ವಿವರಿಸಿ ಹೇಳಿದ್ದರು. ಮೀನಾಕ್ಷಿಗೆ ಅದರಿಂದ ಹೆಚ್ಚು ಖುಶಿಯಾದ ಹಾಗೆ ಕಾಣಿಸಲಿಲ್ಲ. ಆದರೂ ಡಾ.ನವನೀತರಾವ್

ಜೊತೆ ಬರಬೇಕಿತ್ತು; ಬಂದಳು. ಅದು ಬಿಟ್ಟರೆ ಮನೆ; ಕ್ಲಿನಿಕ್; ಕ್ಲಿನಿಕ್‌ನ ಹೆಸರು ಇವುಗಳ ಬಗ್ಗೆ ಅವಳಿಗೆ ಅಂಥ ಕುತೂಹಲ ಇರಲಿಲ್ಲ.

ಆಗ ಜಾವಗಲ್ಲಿನಲ್ಲಿ ಒಂದೇ ಒಂದು ಆಸ್ಪತ್ರೆಯಾಗಲೀ ಮೆಡಿಕಲ್ ಶಾಪ್ ಆಗಲೀ ಇರಲಿಲ್ಲ. ಬೆಳಿಗ್ಗೆ ಎಂಟೂವರೆಗೆ ಎಸ್. ಕೆ. ಬಿಟಿ; ಹತ್ತು ಗಂಟೆಗೆ ಗಣೇಶ. ಮತ್ತೆ ಅವುಗಳದೇ ಸುತ್ತು. ಊರಿನ ಪಟೇಲರಾದ ಶ್ರೀ ಕಂಠಯ್ಯ ಕಟ್ಟಿಸಿಕೊಟ್ಟ ಬಸ್‌ಸ್ಟ್ಯಾಂಡ್; ಒಂದು ಖಾನಾವಳಿ; ಈಶಣ್ಣನ ಅಂಗಡಿ; ಮತ್ತು ಸಂಜೆ ತಪ್ಪದೆ ವಡೆ, ಮೆಣಸಿನ ಬೋಂಡ ಕಾಯಿಸುವ ಗಾಡಿ ವ್ಯಾಪಾರಿ ವಡಿವೇಲು – ಇವುಗಳಲ್ಲದೆ ಲೈನ್ ಮೇನ್ ಶಿವಯ್ಯ ಮತ್ತೆ ಶಾಲೆ, ವಾರೊಕ್ಕೊಮ್ಮೆ ಸಂತೆ; ಮತ್ತೆ ನಂಬಿಯಾರ್ ಡಾಕ್ಟರರ ಕ್ಲಿನಿಕ್.

ರಸ್ತೆಯ ಉದ್ದಗಲಕ್ಕೂ ಸಾಲು ಸಾಲು ಮನೆಗಳು; ಮತ್ತು ಹೊಂಗೆಯ ಮರಗಳು. ಶನಿವಾರ ಮಾತ್ರ ಒಂದು ಹೊಂಗೆಯ ಮರದ ಕೆಳಗೆ ಮಹಮ್ಮದ್ ಬ್ಯಾರಿಯ ಒಣಮೀನಿನ ವ್ಯಾಪಾರ. ಅವನಿಗೂ ಅಡ್ಡ ಹೆಸರಿದೆ – 'ಬಂಗುಡೆ ಬ್ಯಾರಿ' ಅಂತ. ಯಾರೂ ಸಾನಾ ಕ್ಲಿನಿಕ್ ಅಂತ ಕರೆಯುತ್ತಿರಲಿಲ್ಲ. ನವನೀತ ಆಸ್ಪತ್ರೆ ಎಂದು ಕರೆಯುತಿದ್ದರು. ಅವರೊಬ್ಬರು ಮಾತ್ರ ಆ ಊರಿಗೆ ಹೊಸಬರು.

ನವನೀತರು ಕಲಿತದ್ದು; ಹೆಗಲಿಗೆ ಸ್ಟೆತೋಸ್ಕೋಪ್ ಹಾಕಿಕೊಂಡು ಓಡಾಡಿದ್ದು ಅಪ್ಪಟ ಕನ್ನಡ ಮಾತಾಡುವ ದಾವಣಗೆರೆಯಲ್ಲಿ. ದಾವಣಗೆರೆಯಲ್ಲಿ ಮೆಣಸಿನ ಬೋಂಡ; ಬೆಣ್ಣೆದೋಸೆ; ಚಿಗಟೇರಿ ಆಸ್ಪತ್ರೆ; ಹರಿಹರ ರೈಲು; ಕಿರ್ಲೋಸ್ಕರ್ ಕಂಪೆನಿಯವರ ಜನಗಳು – ಎಲ್ಲ ಸೇರಿಕೊಂಡು ಒಂದು ವಿಶಿಷ್ಟ ಸಂಸ್ಕೃತಿ ರೂಪುಗೊಂಡಿತ್ತು. ಅನೇಕರು ಅಲ್ಲಿಗೆ ಹೊರಗಿನಿಂದ ಬಂದವರು. ಕೆಲವರು ಹೇಗೊ ಏನೋ ಕನ್ನಡ ಕಲಿತರು. ಬೆಣ್ಣೆ ತಿಂದರು. ಮೆಣಸಿನ ಬೋಂಡದ ಜೊತೆಗೆ ಕೆಂಪು ಬಾವುಟದ ಮೆರವಣಿಗೆ ಅರ್ಥ ಮಾಡಿಕೊಂಡರು. ಇವೆಲ್ಲದರ ಜೊತೆಗೆ ಎಂ.ಬಿ.ಬಿ.ಎಸ್. ಮುಗಿಸಿದರು.

ನವನೀತರ ಪ್ರಕಾರ, ಬಡತನದಲ್ಲಿ ಹುಟ್ಟಿ ಬಂದವರಿಗೆ ಕಷ್ಟದ ಅರ್ಥ ಗೊತ್ತಾಗುತ್ತದೆ. ಅದಕ್ಕೆ ನಿಘಂಟು ಬಿಡಿಸಬೇಕಾಗಿಲ್ಲ. ದುಡಿದು ತಿನ್ನುವ ಛಲ ಗೊತ್ತಿರುತ್ತೆ. ಅದನ್ನು ಉರು ಹಚ್ಚಿ ಕಲಿಯಬೇಕಾಗಿಲ್ಲ. ಯಾವ ಊರಿಗೆ ಹೋದರೂ ಕಾಲೂರಿ ಬದುಕಲು ಬರುತ್ತದೆ. ಏನಿಲ್ಲವೆಂದರೂ ಕೊನೆಯ ಪಕ್ಷ ಒಂದು ಚಾ ಕಡ್ಯೆ ಇಟ್ಟುಕೊಂಡಾದರೂ ಬದುಕುತ್ತಾರೆ.

ನವನೀತರ ಆಸ್ಪತ್ರೆ ತಗೆಯುವಾಗ ಇಂಥದ್ದೊಂದು ತಿಳುವಳಿಕೆ ಅವರಿಗಿತ್ತು; ಬಡವರ ಕೈಯಿಂದ ಒಂದು ರೂಪಾಯಿ ಮುಟ್ಟಬಾರದು. ಅವರಿಗೆ ಕೈಯಿಂದ

ಸಾಧ್ಯವಾದಷ್ಟು ಸಹಾಯ ಮಾಡಬೇಕು. ಇದಕ್ಕಾಗಿ ಅವರು ಪೇಟೆಗೆ ಹೋದಾಗ ಒಂದಿಷ್ಟು ಮಾತ್ರೆ; ಔಷಧಿ ತಂದು ಕೊಡುತ್ತಿದ್ದರು. ಅವರ ಆಸ್ಪತ್ರೆಯ ಪಕ್ಕದಲ್ಲಿಯೇ ರೂಪಶ್ರೀ ಮೆಡಿಕಲ್ ಶಾಪ್ ಪ್ರಾರಂಭವಾಯಿತು. ಇದರಿಂದ ಜಾವಗಲ್ಲಿನ ರಂಗು ಬದಲಾಗತೊಡಗಿತು.

ನವನೀತರ ಮನೆಯ ಪಕ್ಕದಲ್ಲಿಯೇ ಎಲಿಮೆಂಟರಿ ಶಾಲೆಗೆ ಸೋಜ ಮೇಷ್ಟ್ರು ಬಂದರು. ಅವರಿಗೆ ಇಬ್ಬರು ಮಕ್ಕಳು. ಆ ಕಾಲದ ರೂಢಿಯಂತೆ ಆರತಿಗೊಬ್ಬಳು ಕೀರುತಿಗೊಬ್ಬ. ಆರತಿಗೆ ಮೇರಿ ಡಿಸೋಜ, ವಯಸ್ಸು ಕೇವಲ ಇಪ್ಪತ್ತು ಮಾತ್ರ ಸ್ವೀಟ್ ಟ್ವೊಂಟಿ. ಕೀರುತಿಗೆ ಅಲ್ಬರ್ಟ್ ಡಿಸೋಜ. ವಯಸ್ಸು ಕೇವಲ ಇಪ್ಪತ್ತನಾಲ್ಕು, ಸೋಜ ಮೇಸ್ತರರ ಹೆಂಡತಿಯ ಹೆಸರು ......ಬಾಯಿ ಊರವರು ಹೇಳುವಂತೆ – ಅವಳು ಬಾಯಮ್ಮಮೇಸ್ಟರರು ಪುರುಬ್ಬು ಮಾಸ್ಟ್ರು. ಪುರುಬ್ಬು ಮಾಸ್ಟರ್‍ರು ರಿಟೈರ್ ಆಗಲು ಉಳಿದಿರುವುದು ಎರಡೇ ವರ್ಷ.

ಊರಿನ ಹುಡುಗರು ಈವಿಷಯದಲ್ಲಿ ಎರಡು ನಿರ್ಣಾಯಕ ವಿಧೇಯಕ ಪಾಸು ಮಾಡಿದರು. ಮೇರಿ ಪ್ರತೀ ಬಾನುವಾರ ವೈನು ಕುಡಿದು ಅಷ್ಟೊಂದು ಕೆಂಪಗೆ ಇದ್ದಾಳೆ. ಆಲ್ಬರ್ಟ್ ಹಂದಿ ತಿಂದು; ಅದು ಕರಗುವುದಕ್ಕೆ ಹೊಟ್ಟೆಗೆ ಬ್ರಾಂಡಿ ಸುರಿದುಕೊಂಡು ಅಷ್ಟು ಚೆಂದವಾಗಿದ್ದಾನೆ. ಹೊಟ್ಟೆಗೆ ಕೇಜಿಗಟ್ಲೆ ತುಪ್ಪ ಸುರಿದುಕೊಂಡವರು; ಹಸಿ ಮೊಟ್ಟೆ ಕುಡಿದವರು – ಭೇದಿ ಅನುಭವಿಸುತ್ತಾ, ಹಂದಿ ಮಾಂಸ ತಿಂದು ಪುರುಬ್ಬುವಿನ ಮಗನಿಗೆ ತಿಕ ಮಣ ತೂಗುತ್ತದೆ, ಮೇರಿಗೆ ಎದೆ ಸೊಕ್ಕು ಎಂದು ಹೇಳುತ್ತಿದ್ದರು. ಆ ದಿನ ಅವರು ಬಂದು ಇಳಿದಾಗ ಊರಿನ ಹುಡುಗರು ಸಂಭ್ರಮಿಸಿದ್ದು ಸತ್ಯ. ಮೇರಿ ಮತ್ತು ಆಲ್ಬರ್ಟ್‌ನಿಂದಾಗಿ ಸಂಸ್ಕೃತಿ ಬದಲಾಯಿತು ಎಂದು ಮರಿ ಸಾಹಿತಿಗಳು ಹೆಚ್ಚು ಕಂಟ್ರಿ ಸಾರಾಯಿ ಕುಡಿದು ಸಾಹಿತ್ಯದ ಚರ್ಚೆಯನ್ನು ಹೆಚ್ಚು ಆಳವಾಗಿ ಮಾಡಿ ತಮ್ಮ ಆರೋಗ್ಯ ಹಾಳು ಮಾಡಿಕೊಂಡರು.

ಸೋಜಾ ಮೇಷ್ಟ್ರು ಬಂದಿಳಿದದ್ದು ಒಂದು ಲಟಾರಿ ಲಾರಿಯಲ್ಲಿ. ಆ ಲಾರಿ ಬಂದುದು ಭಾನುವಾರ ಸಂಜೆ ನಾಲ್ಕೂವರೆ ಹೊತ್ತಿಗೆ. ಪುರುಬ್ಬು ಮೇಷ್ಟ್ರ ಮಗ ಮತ್ತಿಬ್ಬರು. ಅವರ ಜೊತೆಗೆ ಮೇಷ್ಟ್ರೂ ಕೂಡ. ಹಿಂದೆ ನಿಂತಿದ್ದರು. ಎದುರು ಕಡೆ ಬಾಯಮ್ಮ ಮತ್ತು ಮೇರಿ. ಲಾರಿಯಿಂದ ಮೊದಲು ಇಳಿದವಳು ಮೇರಿ. ಉದ್ದದ ಲಂಗ; ಬಿಗಿಯಾದ ರವಿಕೆ ಹಾಕಿಕೊಂಡಿದ್ದಳು. ಡ್ರೈವರನ ಪಕ್ಕದಿಂದ ಸರಕ್ಕನೆ ಹಾರಿದ ಅವಳ ಲಂಗವು ಪುಗ್ಗೆಯಂತೆ ಅರಳಿದ್ದನ್ನು ಸರಿಯಾಗಿ ಗಮನಿಸಿದವನು ಇಪ್ಪತ್ತರ ಹರೆಯದ ವಜ್ರವೇಲು – ವಡಿವೇಲುವಿನ ಮಗ.

ತನ್ನ ತುಟಿಯನ್ನು ಮೀರಿ ಹೊರಗೆ ಬಂದ ಹಲ್ಲನ್ನು ಮತ್ತಷ್ಟು ಬಿಟ್ಟ. ಅವನು ನೋಡಿದ ಯಾವ ತಮಿಳು ಪಿಕ್ಚರಲ್ಲೂ ಈ ರೀತಿಯಲ್ಲಿ ಲಾರಿಯಿಂದ ಹಾರಿದ್ದನ್ನು ಅವನು ಕಂಡಿರಲಿಲ್ಲ. ಓಂ ಕಾಳಿ ಜೈ ಕಾಳಿ ಪರಮೇಶ್ವರಿ ಎಂದು ಹಾಡುತ್ತಾ ಮುಖಕ್ಕೆ ಕೈಗೆ ಅರಸಿನ ಹಚ್ಚಿಕೊಂಡವರಂತೆ ಕುಣಿಯುವವರನ್ನು ಕಂಡಿದ್ದು ಅವನ ಪರಮ ಸತ್ಯ. ಮೇರಿ ಸುಂದರಿ ಎಂಬುದರಲ್ಲಿ ಅವನಿಗಿಂತಲೂ ಹೆಚ್ಚು ಸ್ವತಹ ಮೇರಿಗೆ ತಿಳಿದಿತ್ತು. ಅವರು ಬಂದದ್ದು ನವನೀತರ ಪಕ್ಕದ ಮನೆಗೆ. ಒಂದೊಂದೆ ಸಾಮಾನುಗಳು ಮನೆಯೊಳಗೆ ಹೋಯಿತು. ಮೇರಿ ಮತ್ತು ಬಾಯಮ್ಮ ಹಿಡಿಸೂಡಿ; ಕಸದ ಬುಟ್ಟಿ; ಅದು ಇದು – ಅಂತ ತೆಗೆದುಕೊಂಡು ಹೋದರು. ದೂರದಲ್ಲಿ ಆ ವಿವರಗಳನ್ನು ಕಣ್ಣುಗಳಲ್ಲಿ ದಾಖಲಿಸಿಕೊಳ್ಳುತ್ತಿದ್ದ ವಜ್ರವೇಲುವಿನತ್ರ ಡಾಕ್ಟರರು "ಹೋಗಿ ಸಾಮಾನು ಒಳಗಿಡಪ್ಪ" ಎಂದರು. ಡಾಕ್ಟರು ಹೇಳಿದ್ದು ಹಾಲು ಅನ್ನ ವೈದ್ಯ ಹೇಳಿದ್ದು ಕೂಡ ಅದನ್ನೇ ಎಂದು ಭಕ್ತನಂತೆ ಓಡಿದ ವಜ್ರವೇಲು ಪುರುಬ್ಬು ಮೇಷ್ತ್ರ ಕೈಯಿಂದ ಸಾಮಾನು ತೆಗೆದುಕೊಂಡು ಒಳಗಿರಿಸಿ ಮೇರಿಯತ್ರ ಬಂದು ತನ್ನ ತುಟಿಯನ್ನು ಅಗಲಗೊಳಿಸಿದ. ಆದರೆ ಮೇರಿ ಅದಕ್ಕೆ ಸೊಪ್ಪು ಹಾಕಲಿಲ್ಲ.

ಮೇರಿಯನ್ನು ನೋಡಿ ಸಾವಿತ್ರಿಯು 'ಇದು ಎಂತ ಪ್ಯಾಶನ್' ಎಂದೂ ಆಯಿತು. ಮೇರಿ ಮತ್ತು ಅಲ್ಬರ್ಟ್ ಸಣ್ಣ ಬಿರುಗಾಳಿಯನ್ನು ಜೊತೆಗೆ ತಂದಿದ್ದರು. ಮೇರಿಯ ಗಲ್ಲದಲ್ಲಿ ಗುಳಿಯಿತ್ತು – ಅಲ್ಬರ್ಟನ ದೇಹದಲ್ಲಿ ಉರಿಯಿತ್ತು. ಅದು ತಾಗಿದ್ದು ಡಾಕ್ತ್ರ ಬದುಕಿಗೆ. ಆದರೆ ಡಾಕ್ತ್ರ ಗಮನಕ್ಕೆ ಬರುವಾಗ ತಡವಾಯಿತು. ಹಡಗು ಮುಳುಗಿದ ಮೇಲೆ ಲಂಗರು ಹುಡುಕಿದ ಹಾಗೆ ಆಯಿತು ಅವರ ಸ್ಥಿತಿ. ಲಂಗರು ಸಿಕ್ಕುವಾಗ ಹಡಗು ಮುಂದೆ ಹೋಗಿ ಆಯಿತು.

* * * * *

–2–

ಹೆಚ್ಚು ಕಡಿಮೆ ಅದೇ ಸಮಯಕ್ಕೆ ಡಾಕ್ತ್ರು ರಾಜದೂತ್ ಬೈಕ್ ತೆಗೆದುಕೊಂಡು ಬೈಕು ಡಾಕ್ಟರು ಎಂದು ಪ್ರಸಿದ್ಧಿಯಾದರು. ಏನಿಲ್ಲವೆಂದರೂ ಜನರಿಗೆ ಅನುಕೂಲಯಾಯಿತು. ತಾಯಿಗೆ ಕೆಮ್ಮ; ಹೆಂಡತಿಗೆ ಸೊಂಟ ನೋವು; ಗಂಡ ಮಲಗಿದಲ್ಲಿಯೆ ಬಿಟ್ಟಿದ್ದಾನೆ ಎಂದು ಅವರ ಬೈಕಿನಲ್ಲಿಯೇ ಅವರನ್ನು ಕರೆದುಕೊಂಡು ಹೋಗುವವರ ಸಂಖ್ಯೆಯೂ ಹೆಚ್ಚಾಯಿತು. ಮೊದಲು ಎತ್ತಿನ ಗಾಡಿಯಲ್ಲಿ; ಕಂಬಳಿಯಲ್ಲಿ ಸುತ್ತಿ ರೋಗಿಷ್ಟರನ್ನು ತರುತಿದ್ದ ಜನರು ಈಗ ನವನೀತರ ಬೈಕೇರಿ ಮನೆಗೆ; ಕರೆಸಿಕೊಂಡು ಹತ್ತು ರೂಪಾಯಿ ಹದಿನೈದು ರೂಪಾಯಿ ಕೊಡಲು

ಶುರು ಮಾಡಿದರು. ಕೆಲವರು 'ನೀವು ದೇವರು; ನೀವು ಪರಮಾತುಮ;' ಎಂದು ಕೈಮುಗಿದು ಹಾಗೆಯೇ ಕಳಿಸಿದ್ದು ಇದೆ. ಎಲ್ಲ ರೀತಿಯ ಔಷಧಿ ಹಿಡಿದುಕೊಂಡು ಸಶಸ್ತ್ರ ಪೋಲಿಸು ಪಡೆಯಂತೆ ಡಾಕ್ಟ್ರು ತಮ್ಮ ಕರಿಯ ಬ್ಯಾಗಿನಲ್ಲಿ ಹೊರಡುತ್ತಿದ್ದರು.

ಜನರ ಸೇವೆ ಹೆಚ್ಚಾಗುತ್ತಿದ್ದಂತೆ ಸಾವಿತ್ರಿ ಜೋಯಿಸ್‌ಗೆ ಅವರ ಬಗ್ಗೆ ಅಸಹನೆಯು ಹೆಚ್ಚಾಗತೊಡಗಿತು. ಅದ್ಯಾಕೆ ಜನರ ಬಿಟ್ಟಿ ಚಾಕ್ರಿ ಮಾಡಬೇಕೆಂಬುದು ಅವಳ ವಾದ. ಅದರಲ್ಲಿಯೂ ಮೇರಿಯು ದಿನಕ್ಕೊಂದು ಬಗೆಯ ಡ್ರೆಸ್; ದಿನಕ್ಕೊಂದು ಬಗೆಯು ಕಿವಿಯೋಲೆ; ರಿಂಗು; ಕೊರಳಿಗೆ ಚೈನು ಹಾಕತೊಡಗಿದ್ದು ನೋಡತೊಡಗಿದ ಮೇಲೆ ಸಾವಿತ್ರಿಯ ಹೊಟ್ಟೆಗೆ ಗಾಂಧಾರಿಯ ಹೊಟ್ಟೆಯುರಿ ತಾಗತೊಡಗಿತು. ಶಾಲೆಯು ಮೇಷ್ಟ್ರ ಮಗಳಾದ ಮೇರಿಯೇ ಹೀಗೆ ಮೆರೆಯಬೇಕಾದರೆ ಡಾಕ್ಟ್ರ ಹೆಂಡತಿ ಇನ್ನು ಹೇಗಿರಬೇಕು ಎಂಬ ಗಂಭೀರ ವಾದ ಅವಳದು. ಜಾವಗಲ್ಲಿನ ಮೇನಕೆಯು ತಿಳಿದೋ ತಿಳಿಯದೆಯೋ ಒಂದೆರಡು ಸಲ ಕೇಳಿದ್ದೂ ಇದೆ. ಆಂಟಿ ನೀವು ಯಾಕೆ ಹೀಗೆ? ಯಾವಾಗ ನೋಡಿದರೂ ಒಂದೆ ರೀತಿಯ ಕಿವಿಯೋಲೆ ಹಾಕುತ್ತೀರಾ? ಈಗ ಹೊಸ ಹೊಸ ರೀತಿಯ ಓಲೆಗಳು ಬಂದಿವೆ.' ಅವಳು ಮನೆಯಿಂದ ಹೋದ ಮೇಲೆ "ಓ ದೇವರೆ" ಇವಳಿಗೆ ಸೊಕ್ಕು ಎಂದು ಸಾವಿತ್ರಿ ಲಟಿಕೆ ಮುರಿದು ಸೆರಗಿನಲ್ಲಿ ಕೈ ಒರಸಿದ್ದು ನಿಜ.

ಅಲ್ಲಿಂದ ಸಾವಿತ್ರಿಯು ಒಂದೊಂದೆ ಪ್ರಹಾರ ಮಾಡಿದಳು. ರಾತ್ರಿ ಯಾವ ಪೇಶಂಟು ಕರೆದರೂ ಹೋಗಬಾರದು; ಹೋದರೆ ಡಬ್ಬಲ್ ಚಾರ್ಜು ತೆಗೆದುಕೊಳ್ಳಬೇಕು; ಮತ್ತು ತನ್ನ ಕೈಯಲ್ಲಿ ತಂದಿಡಬೇಕು; ಆದಿತ್ಯವಾರ ಕೂಡ ಕ್ಲಿನಿಕ್ ತೆರೆದಿರಬೇಕು – ಇತ್ಯಾದಿ. ಡಾ. ಎಲ್ಲದಕ್ಕೂ 'ಹೂಂ' ಎಂದರು. ಸಾವಿತ್ರಿಯ ಸುಡು ಸುಡು ಹೆಚ್ಚಾಯಿತು.

'ಮನೆಯಲ್ಲಿ ನಾನಿರುವುದು ನಿಮಗೆ ಲೆಕ್ಕಕ್ಕಿಲ್ಲ'

'ನಿಮಗೆ ನಾನೆಂದ್ರೆ ತಾತ್ಸಾರ' ಹೀಗೆ ಏಳುವಾಗ ಸಾವಿತ್ರಿ ಕಿರಿ ಕಿರಿ ಮಾಡಿದಳು. ನವನೀತರು ಬೆಳಿಗ್ಗೆ ಏಳುವಾಗಲೆ ಪ್ರವಚನ; ರಾತ್ರಿ ಮಲಗುವಾಗಲೂ ಪ್ರವಚನ; ಚಪ್ಪಲಿ ಹಾಕುವಾಗ; ಚಪ್ಪಲಿ ಕಳಚಿಡುವಾಗ; ಹರಿಕಥೆ ಶುರುವಾಯಿತು. ಡಾಕ್ಟ್ರು ಪ್ರತಿ ವ್ಯೂಹ ಕಟ್ಟಿದರು. ಮನೆಗೆ ಬರುವಾಗ ತಡ ಮಾಡಲು ತೊಡಗಿದರು. ಕಾರಣ ಕೇಳಿದರೆ ಪೇಶಂಟ್ ಮನೆಗೆ ಹೋಗಿದ್ದೆ ಎನ್ನತೊಡಗಿದರು. ಬಾಯಿತುಂಬಾ ಎಲೆ ಅಡಿಕೆ; ಜರ್ದ ಹಾಕಿಕೊಂಡೋ; ಯಾಲಕ್ಕಿ; ಲವಂಗ ಜಗಿದೋ ಬರತೊಡಗಿದರು. ಬೆಳಿಗ್ಗೆ ಏಳುವಾಗ ತಡ ಮಾಡಿದರು. ಏಳೂವರೆಗೆ ಎದ್ದು

ಸ್ನಾನವನ್ನು ಗಡಿಬಡಿಯಲ್ಲಿ ಮುಗಿಸಿ ತಿಂಡಿ ತಿಂದು ಹೋದರೆ ಬರುವುದು ಎರಡೂವರೆಗೆ. ಮತ್ತೆ ಊಟ ಮಾಡಿ ನಿದ್ದೆ ಮಾಡಿದರೆ ಮತ್ತೆ ನಾಕು ಗಂಟೆಗೆ ಮತ್ತೆ ಕ್ಲಿನಿಕ್ಕು. ಹೀಗೆ ಸಾಗಿತು ಅವರ ಜೀವನ. ಹೆಂಡತಿಯದು ಒಂದು ಪೆಟ್ಟಾದರೆ ಡಾಕ್ಟ್ರ ಒಳಪೆಟ್ಟು ಎರಡು. ಸಾವಿತ್ರಿಗೆ ಮೊದಮೊದಲು ತಿಳಿಯಲಿಲ್ಲ. ಆ ಮೇಲೆ ತಿಳಿಯತೊಡಗಿತು. ಅದು ಒಂದಿನ ಆದಿತ್ಯವಾರ–

ಆ ದಿನ ಮಧ್ಯಾಹ್ನ ಡಾಕ್ಟ್ರು ಬಂದವರು ಬ್ಯಾಗಿಟ್ಟು ನೇರವಾಗಿ ಬಚ್ಚಲು ಮನೆಗೆ ಹೋಗಿ ಬಾಗಿಲು ಹಾಕಿಕೊಂಡರು. ಅವರು ಯಾವತ್ತೂ ಪ್ಯಾಂಟು ಸಮೇತ ಬಚ್ಚಲು ಮನೆಗೆ ಹೋದವರಲ್ಲ. ಹೋದವರು ಬಚ್ಚಲಲ್ಲಿ ಬಕೆಟ್ಗೆ ಜೋರಾಗಿ ನೀರು ಬಿಟ್ಟುಕೊಂಡರು. ಅದರ ಶಬ್ದ ಸಾವಿತ್ರಿಗೆ ಕೇಳಿಸಿತು. ಆದರೆ ಎಷ್ಟು ಹೊತ್ತಾದರೂ ಹೊರಗೆ ಬರದಿರುವುದನ್ನು ಗಮನಿಸಿ ಸಾವಿತ್ರಿಗೆ ಸಂಶಯ ಬಂತು. ಹೋಗಿ ಬಾಗಿಲು ತಟ್ಟಿದಳು. ಮೊದಲು ಬಾಗಿಲು ತೆರೆಯಲಿಲ್ಲ. ಒಂದು ಕ್ಷಣ ಬಿಟ್ಟು ಡಾಕ್ಟರರು ಬಾಗಿಲು ತೆರೆದರು. ಸಾವಿತ್ರಿಯ ಮೂಗು ಬೇಟೆ ನಾಯಿಯ ಮೂಗಾಯ್ತು. ಅವರು ತೆಗೆದ ತಕ್ಷಣ ಒಂದು ಬಗೆಯ ಅಡ್ಡ ಮೂರಿಯು ಬಂತು. ಅದು ಸಾವಿತ್ರಿಯ ಮೂಗಿಗೆ ಬಡಿಯಿತು. ಅವಳ ಪಿತ್ತ ನೆತ್ತಿಗೇರಿತು. ನವನೀತರ ಮುಖವು ಹಿಂಡಿದ ಲಿಂಬೆ ಕಾಯಾಯಿತು. ಸಾವಿತ್ರಿಯು ಸುತ್ತಮುತ್ತ ನೋಡಿದಳು. – ಬಕೆಟ್‌ನ ಪಕ್ಕದಲ್ಲಿ ಒಂದು ಸಣ್ಣ ಬಾಟ್ಲಿ; 'ಇದಾ ಕೆಲಸ? ಇದು ಯಾವ ಮನೆ ಹಾಳು ಮಾಡಲು? 'ಮಧ್ಯಾಹ್ನ ತಾನು ಕುಡಿದದ್ದು ತಪ್ಪಾಯಿತು ಅಂತನ್ನಿಸಿ ಸುಮ್ಮನೇ ಉಳಿದದ್ದು ನಿಜವಾಗಿ ತಪ್ಪಾಯಿತು, ಅವರ ಮೇಲೆ ಸಾವಿತ್ರಿಯು ಬಲಗೈ ಹಿಡಿತ ಸಾಧಿಸಿದಳು. ಡಾಕ್ಟರು ಸಣ್ಣ ಬಾಟ್ಲಿಯೇ ಒಂದು ಆಯುಧವಾಯಿತು. ಅವರಿಗೆ ತಾನು ಮಾಡುವುದು ತಪ್ಪೆಂದು ಅನಿಸಲಿಲ್ಲ. ಈ ವಿಷಯದಲ್ಲಿ ಗಟ್ಟಿಗಿತ್ತಿ. ಒಂದು ಬ್ರಹ್ಮಾಸ್ತ್ರ ತಯಾರು ಮಾಡಿದಳು. ಡಾಕ್ಟ್ರು ಕುಡಿತದ ಮೊದಲ ಸಾಕ್ಷಿಯಾದ ಸಣ್ಣ ವಿಸ್ಕಿ ಬಾಟ್ಲಿಯನ್ನು ಎಡಗೈಲಿ ಹಿಡಿದುಕೊಂಡು ಬಲಗೈಲಿ ಡಾಕ್ಟ್ರ ಕೈ ಹಿಡಿದುಕೊಂಡು ಸೀದ ಬೆಡ್‌ರೂಮಿಗೆ ಹೋದಳು. ಬಾಗಿಲು ಹಾಕಿಕೊಂಡಳು. ಭಗವತಿ ದೈವದ ಥರ ಬಾಟ್ಲಿಯನ್ನು ನೆಲಕ್ಕೆ ಕುಟ್ಟಿದಳು. ಬಾಟ್ಲಿ ನೂರೊಂದು ಚೂರುಗಳಾದವು.' 'ಇಲ್ಲಿ ನೋಡಿ, – ಇನ್ನು ಮುಂದೆ ನೀವು ಯಾವ ಪೇಶಂಟ್ಗಳನ್ನು ನೋಡಿದರೂ ಅವರು ಕೊಡುವ ದುಡ್ಡು ತೆಗೆದುಕೊಳ್ಳುವವಳು ನಾನು. ನಿಮಗೆ ಪೇಷಂಟು ನೋಡುವ ಕೆಲ್ಸ. ಇಲ್ಲವಾದರೆ ನಾನು ಸತ್ತು ಹೋಗುತ್ತೇನೆ.' "ಡಾಕ್ಟರರ ಕಾಲರ್ ಹಿಡಿದು ಸಾವಿತ್ರಿ ಜೋಯಿಸ್ ಹೇಳಿದಳು; ಪಣಿ" ಔಷಧಿ ಅಷ್ಟು ಹೊತ್ತಿಗೆ ಮೇರಿಯು ಬಂದು "ಆಂಟಿ – ಅಂಕಲ್ ಇಲ್ವಾ" ಎಂದು ಕೇಳಿದಳು. ಮನಸ್ಸಿನಲ್ಲಿ ಇದೊಂದು ಶನಿ ಎಂದು

ಬೈತಾ ಅವರಿಗೆ ತಲೆ ನೋವು ಎಂದಳು. ಮೇರಿ ಬಂದ ಹಾಗೆ ಹೋದಳು. ಸಾವಿತ್ರಿ ಜೋಯಿಸ್ ಬೋಲ್ಟ್ ಹಾಕಿದ ಮೇಲೆ ಡಾಕ್ಟ್ರು ಸಿಗರೇಟು ಸೇದಿ ನಿದ್ದೆ ಹೋದರು.

ಎರಡನೆಯ ಅಂಕದ ಪರದೆಯನ್ನು ತೆಗೆಯುವುದು ತಾನೋ ಅಥವಾ ಸಾವಿತ್ರಿಯೊ ಎಂದು ಯೋಚಿಸಿ ಡಾಕ್ಟ್ರಿಗೆ ಬಂತು. ಎಲ್ಲಾ ಕೋಟೆಗಳಿಗೆ ಒಂದೊಂದು ರೀತಿಯ ದ್ವಾರಗಳಿರುತ್ತವೆ ಎನ್ನುವುದು ಸಾವಿತ್ರಿಗೆ ಗೊತ್ತಿಲ್ಲ ಅಂತನ್ನಿಸಿತು. ಸ್ವಯಂರಕ್ಷಣೆ ಮತ್ತು ಸ್ವಯಂ ದಾರಿ ಎರಡು ಗೊತ್ತಿಲ್ಲವಾದರೆ ನಾನು ಇಲ್ಲಿ ನೆಲೆಸಬೇಕಾದ ಆವಶ್ಯಕತೆ ಇರಲಿಲ್ಲ ಎಂದುಕೊಂಡರು. ಒಂದು ಸಣ್ಣ ಬಾಟಲಿ ವಿಸ್ಕಿಯು ಘನ ಘೋರ ಅಪರಾಧವಾದರೆ.........ಅಲ್ಲಿಗೆ ನಿದ್ದೆ ಹೋದರು. ಎದ್ದದ್ದು ಮೂರು ಸಂಜೆಯ ಹೊತ್ತಿಗೆ. ದನಗಳು ಹಟ್ಟಿಗೆ ಬರುವ ಹೊತ್ತದು. ಮೆಲ್ಲನೆದ್ದು ಡಾಕ್ಟ್ರು ಬಾಗಿಲನ್ನು ತಟ್ಟಿದರು ಶಬ್ದವೇ ಕೇಳಿಸುತ್ತಿಲ್ಲ. ಮತ್ತೆ ಜೋರಾಗಿ ಬಾಗಿಲು ತಟ್ಟಿದರು. ನಿಶ್ಶಬ್ದ ನಂಬಿಯಾರರಿಗೆ ನಿಶ್ಚಯವಾಯಿತು: ಹಿತ್ತಲಲ್ಲಿ ನಿಂತು ಸಾವಿತ್ರಿಯು ಬಾಯಿಯ ಜೊತೆ ಪಟ್ಟಾಂಗ ಹೊಡೆಯುತ್ತಿದ್ದಾಳೆ. ಹಸಿವೆ ತಡೆಯಲಾಗಲಿಲ್ಲ. ಆದದ್ದು ಆಗಲಿಯೆಂದು ಮತ್ತೆ ಹಾಸಿಗೆಯಲ್ಲಿ ಬಿದ್ದುಕೊಂಡರು. ಸಾವಿತ್ರಿ ಜೋಯಿಸ್ ಬಂದು ಬಾಗಿಲು ತೆಗೆದದ್ದು ಎಂಟು ಗಂಟೆಗೆ.

* * * * *

ಆರು ತಿಂಗಳು ಸಾವಿತ್ರಿ ಜೋಯಿಸ್ ಬೆಳಿಗ್ಗೆ ಮತ್ತು ಸಂಜೆ ಕ್ಲಿನಿಕ್ಗೆ ಬಂದು ಕಲೆಕ್ಷನಿಗೆ ಕುಳಿತುಕೊಂಡಳು. ಅವಳು ಕುಳಿತುಕೊಂಡು ಕಲೆಕ್ಷನ್ ಮಾಡುತ್ತಿರುವುದು ತನಗೆ ಏನು ಸಂಬಂಧವಿಲ್ಲವೆನ್ನುವಂತೆ ನವನೀತರು ಪೇಶಂಟ್‌ಗಳನ್ನು ನೋಡಿದರು. ಅವರು ಹೆಚ್ಚು ಕಡಿಮೆ ತನ್ನ ಮಾತುಗಳನ್ನು ನುಂಗಿಕೊಂಡರು ಮೊದಲು ಹೆಚ್ಚು ರೋಗಿಗಳನ್ನು ನೋಡುತ್ತಿದ್ದವರು ಈಗ ಒಬ್ಬ ರೋಗಿಯನ್ನು ನೋಡಲು ಇಪ್ಪತ್ತು ನಿಮಿಷ ತೆಗೆದುಕೊಳ್ಳಲು ಪ್ರಾರಂಭಿಸಿದರು. ರೋಗಿಗಳು ಹೆಚ್ಚು ಮಾತಾಡಿದರೆ ಸಾವಿತ್ರಿ ಜೋಯಿಸ್‌ಗೆ ಕೇಳುವಂತೆ ಬೈಯ್ಯತೊಡಗಿದರು. ಮತ್ತೆ ಕೆಲವು ಸರ್ತಿ ಇದು ನನ್ನ ಕೈಲಿ ಸಾಧ್ಯವಿಲ್ಲ ಎಂದು ಹೇಳತೊಡಗಿದರು.

ಒಂದು ದಿನ ಒಬ್ಬ ಪೇಶಂಟ್ ಬಂದ. ಅವನ ಕಾಲಿಗೆ ಗಾಯವಾಗಿ ಊದಿಕೊಂಡಿತ್ತು. ಯಾವುದೋ ನಾಟಿ ಔಷಧಿ ಮಾಡಿ ರಶಿಗೆಯಾಗಿತ್ತು. ಗಾಯ ಮತ್ತು ಕೀವಿನಿಂದಾಗಿ ನೋವು ತಡೆಯಲಾಗುವುದಿಲ್ಲವೆಂದು ಸಾರಾಯಿ ಕುಡಿದು ಬಂದಿದ್ದ. ಅದರ ಮೇಲೆ ಬೀಡಿ. ಅವನು ಕ್ಲಿನಿಕ್ಕಿನ ಒಳಗಡೆಗೆ ಕಾಲಿಟ್ಟ ಕೂಡಲೆ ಅಸಹ್ಯವಾದ ವಾಸನೆಯು ತುಂಬಿಕೊಂಡಿತ್ತು. ಒಳಗಿದ್ದ ಡಾಕ್ಟ್ರು ಪರದೆ ಅತ್ಲಾಗಿ ಮಾಡಿ ನೋಡಿ ಸುಮ್ಮನಾದರು. ಸಾವಿತ್ರಿಗೆ ಹೊಟ್ಟೆ ತೊಳಸಿ ಬಂದಂತೆ ಆಯಿತು.

ಆ ಪೇಶಂಟು ತೂರಾಡುತ್ತ ಬಂದು ದೊಪ್ಪನೆ ಕ್ಲಿನಿಕ್ಕಿನ ಮಂಚದ ಮೇಲೆ ಕಾಲು ಚಾಚಿ ಮಲಗಿದ. ಸಾವಿತ್ರಿ ಜೋಯಿಸ್ ಕೂತ ಕಡೆಗೆ ಅವನ ಕಾಲಿತ್ತು. ಸಾವಿತ್ರಿ ಟವಲ್ ತೆಗೆದುಕೊಂಡು ಮೂಗಿಗೆ ಒತ್ತಿ ಹಿಡಿದು ಹೊರಗೆ ಬಂದಳು. ಅಲ್ಲಿಂದಲೇ 'ಬೇಗ ನೋಡಿ ಕಳಿಸಿ' ಎಂದಳು. ಡಾ. ಅವನಿಗಿಂತ ಮೊದಲು ಬಂದವರನ್ನು ನೋಡದೆ ಬೇರೆಯವರನ್ನು ನೋಡಲು ಆಗುವುದಿಲ್ಲವೆಂದರು. ಆಗ ಹೆಚ್ಚು ಕಡಿಮೆ 2 ಗಂಟೆ. ಅಂದು ಮಧ್ಯಾಹ್ನ ಅವಳಿಗೆ ಊಟ ಸೇರಲಿಲ್ಲ. ಅಂದಿನಿಂದ ಅವಳು ಆಸ್ಪತ್ರೆಗೆ ಹೋಗುವುದನ್ನೇ ನಿಲ್ಲಿಸಿದಳು. ಹಾಗೆಂತ ಅವಳು ಡಾಕ್ಟ್ರಿಂದ ದುಡ್ಡು ಕೇಳುವುದನ್ನು ಬಿಡಲಿಲ್ಲ. ಅವರು ಕೂಡ ರಾತ್ರಿ ಬಾಗಿಲು ಹಾಕುವ ಮೊದಲು ಕತ್ತಲೆಯಲ್ಲಿಯೇ ದಿನಾ ಒಂದೆರಡು ಪೆಗ್ ಹಾಕುವುದನ್ನು ರೂಢಿ ಮಾಡಿಕೊಂಡರು. ಮಧ್ಯಾಹ್ನ ಊಟಕ್ಕೆ ಹೋದರೆ ಹೋದರು; ಇಲ್ಲವಾದರೆ ಇಲ್ಲ. ಅವರ ಜೀವನದಲ್ಲಿ ಎಲ್ಲವೂ ಅನಿಯಮಿತ.

* * * * *

–3–

'ನಿಯಮಗಳು ನಮ್ಮನ್ನು ಕಟ್ಟಿಹಾಕುತ್ತವೆ

ಅನಿಯತವಾದುದರಲ್ಲಿಯೂ ಬದುಕುವುದು ಸಾಧ್ಯ'

ನವನೀತರು ತಮ್ಮ ಪಾಡಿಗೆ ಯೋಚಿಸಿದರು. ಅಂದು ಮಂಗಳವಾರ. ಜಾವಗಲ್ಲಿನಲ್ಲಿ ವಾರದ ಸಂತೆ. ವಾರದ ಸಂತೆಗೂ ರೋಗಕ್ಕೂ ಕ್ಲಿನಿಕ್ಕಿಗೂ ಸಂಬಂಧವಿರಬೇಕೆಂದಿಲ್ಲ. ಆದರೆ ವಾರದ ಸಂತೆಗೆ ಬಂದವರು ಕೆಮ್ಮು; ಕಾಯಿಲೆ; ತಲೆನೋವು; – ಹೀಗೆ ಏನೇನೋ ಕಾರಣ ಹೇಳಿ ಡಾಕ್ಟರರಿಗೆ ತೋರಿಸಿ ಹೋಗುತ್ತಿದ್ದರು.

ಆ ದಿನ ಅವರಿಗೂ ತಾಳ್ಮೆ ತಪ್ಪಿ ಹೋಯಿತು, ವಜ್ರವೇಲುವನ್ನು ಕರೆದು ಒಂದು ಕ್ವಾರ್ಟರ್ ತರಲು ಹೇಳಿದರು. ಅದು ಮಧ್ಯಾಹ್ನ ಹನ್ನೆರಡು ಗಂಟೆ. ಈ ವಿಷಯದಲ್ಲಿ ಅವನು ಅವರ ಅಸಲೀ ಬಂಟ. ಅದನ್ನು ಕುಡಿದು ನಂಬಿಯಾರ್ 'ವಜ್ರವೇಲು, ಮನೆಗೆ ಹೋಗಿ ಬರುತ್ತೇನೆ. ಯಾರಾದರೂ ಬಂದು ಕೇಳಿದರೆ ಡಾಕ್ಟ್ರು ನಾಲ್ಕು ಗಂಟೆ ಬರುತ್ತಾರೆ ಎಂದು ಹೇಳು' ಎಂದು ಕ್ಲಿನಿಕ್ಗೆ ಬಾಗಿಲು ಹಾಕಿ ಹೊರಟರು. ಡಾಕ್ಟ್ರು ರಾಜದೂತ್ಗೆ ಕಿಕ್ ಹೊಡೆದರು. ಅದು ಧಡ್ ಧಡ್ ಎಂದು ಶಬ್ದ ಹೊರಡಿಸ್ತಾ ಹೋಯಿತು. ಅರ್ಧ ದಾರಿಗೆ ತಲುಪುವಷ್ಟರಲ್ಲಿ ಗಾಡಿ ಕೈಕೊಟ್ಟಿತು. ಎರಡು ಸಾರಿ ಕಿಕ್ ಹೊಡೆದು ಸಾಕಾಗಿ ಪೆಟ್ರೋಲ್ ನೋಡಿದರೆ ಇಲ್ಲ. ಇನ್ನೇನು ಮನೆ ಹತ್ತಿರ ಬಂತಲ್ಲವೆಂದು ನವನೀತರು ನಡೆದುಕೊಂಡು

ಹೋದರು. ಮನೆಯ ಚಿಲಕ ಹಾಕಿತ್ತು. ಬಹುಶಃ ಸಾವಿತ್ರಿ ಸ್ನಾನ ಮಾಡುತ್ತಿರಬಹುದು ಎಂದು ಭಾವಿಸಿ ಕಾಯುವುದು ಯಾಕೆ ಎಂದು ಹಿತ್ತಲ ಕಡೆ ಹೋಗಿ ಬಾಗಿಲು ದೂಕಿದರು. ಬಾಗಿಲು ತೆರೆಯಿತು. ಕುಡಿದುದರಿಂದ ವಿಪರೀತ ಪಾಪಪ್ರಜ್ಞೆ ಕಾಡಿದಂತಾಗಿ; ಸದ್ದಿಲ್ಲದೆ ಮೆಲ್ಲನೆ ಹೋಗಿ ಮಲಗಿ ಬಿಡೋಣವೆಂದು ಭಾವಿಸಿಕೊಂಡು ಬೆಡ್‌ರೂಂನ ಹತ್ತಿರ ಬಂದರು. ಬೆಡ್ರೂಮಿನ ಮೇಲಿನ ಕಿಟಿಕಿ ತೆರೆದಿತ್ತು; ಕೆಳಗಿನ ಕಿಟಿಕಿ ಹಾಕಿಕೊಂಡಿತ್ತು. ಬಾಗಿಲಿನ ಬೋಲ್ಟ ಕೂಡಾ. ಒಂದೇ ಕ್ಷಣ ಕಿಟಿಕಿಯಲ್ಲಿ ನೋಡಿದರು. ಬೆಡ್ ಮೇಲೆ ಅಲ್ಬರ್ಟ್ ಮತ್ತು ಸಾವಿತ್ರಿ ಇಬ್ಬರೂ ಲೌಕಿಕ ಮರೆತಿದ್ದರು ನಗು: ಆಟದಲ್ಲಿ. ಡಾಕ್ಟ್ರ ತಲೆ ಗಿರಗಿರನೆ ಸುತ್ತಿತು. ಸದ್ದಿಲ್ಲದೆ ವಾಪಾಸಾದರು. ಕ್ಲಿನಿಕಿಗೆ ಬಂದು ವಜ್ರವೇಲುವಿಗೆ ಮತ್ತೆರಡು ಕ್ವಾರ್ಟರ್ ತರಲು ಹೇಳಿದರು. ಅವನು ಬಂದ ಕೂಡಲೇ ಮತ್ತೆರಡು ಚಪಾತಿ ಕಟ್ಟಿಸಿಕೊಂಡು ಬರಲು ಹೇಳಿದರು. ಅವರ ಹನುಮಂತ ತಂದ. ನವನೀತರು "ವಜ್ರವೇಲು ನನ್ನ ಬೈಕು ದಾರಿಯಲ್ಲಿ ನಿಂತಿದೆ; ಅದಕ್ಕೆ ಪೆಟ್ರೋಲ್ ಹಾಕು; ಕ್ಲಿನಿಕಿನ ಹೊರಗಡೆಯಿಂದ ಬೀಗ ಹಾಕು. ಎಂಟು ಗಂಟೆಗೆ ಬಾಗಿಲು ತೆರೆ ಎಂದರು. ಮತ್ತೆ ಎಂಟು ಗಂಟೆಗೆ ಡೈರಿಯಲ್ಲಿ ಬರೆದುಕೊಂಡರು. 'ಆಯ್ಕೆ ಮತ್ತು ಜವಾಬ್ದಾರಿ' ಎರಡನ್ನು ತಾವೇ ಹೊತ್ತುಕೊಳ್ಳಬೇಕು. ಸಾವಿತ್ರಿ ಎಂದಿನಂತೆ ಗಲಾಟೆ ಸುರು ಮಾಡಿದಳು. ಡಾಕ್ಟ್ರು ತಾವೇ ಅಡಿಗೆ ಮನೆಗೆ ಹೋಗಿ ತನಗೆ ಬೇಕಾದ್ದು ತಂದು ಚಾವಡಿಯಲ್ಲಿ ಕುಳಿತು ತಿಂದು ಮಲಗಿದರು. ಮತ್ತೆ ಶುರು ಬುಗ್ರಿಯಾಟ. ನವನೀತರು ಮಲಗಿದ ಮೇಲೆ ಸಾವಿತ್ರಿ ಜೋಯಿಸ್ ಅವರ ಜೇಬು ಹುಡುಕಿದಳು.

ಅಂದಿನಿಂದ ಡಾಕ್ಟರರು ಕುಗ್ಗಿದರು. ಎಷ್ಟೋ ದಿನ ಕ್ಲಿನಿಕಿನಲ್ಲಿ ಮಲಗಿದರು. ಅದಕ್ಕೆ ಸಾವಿತ್ರಿ ಜೋಯಿಸ್ ದುಃಖಿಸಲಿಲ್ಲ. 'ಅವರಿಗೆ ಚಟವಿರುವುದಕ್ಕೆ ನಾನೇನು ಮಾಡಲಿ? 'ಎಂದು ಎಲ್ಲರೊಂದಿಗೆ ಹೇಳುತ್ತಾ ಓಡಾಡಿದಳು. ಜನ ನಂಬಿದರು. ಅದು ಸಹಜ ನವನೀತರು ಜಗತ್ತಿಗೆ ಗೊತ್ತಾಯಿತು. ನವನೀತರು ಬೈಕು ಮಾರಿದರು. ಅದರ ದುಡ್ಡು ಅವಳ ಕೈ ಸೇರಿತು. ಕುಡಿತದ ಅಮಲಿನಲ್ಲಿ ನವನೀತರಿಗೆ ತನ್ನ ಕೈಯ ಉಂಗುರವು ಸಾವಿತ್ರಿ ಕೈ ಸೇರಿದ್ದು ತಿಳಿದರು ಮಾತಾಡಲು ಹೋಗಲಿಲ್ಲ.

ಬೆಳಿಗ್ಗೆ ಬಂದ ಕೂಡಲೆ ನಿಶೆ ಏರಬೇಕು. ನಿಶೆ ಇಳಿದ ಕೂಡಲೇ ಮತ್ತೆ ನಿಶೆ ಏರಬೇಕು. ಸಾಲ ಮಾಡಿದರು. ಅದು ವಿಷದಂತೆ ಏರಿತು. ಕುಡಿಯಲು ನವನೀತರು ಸಾಲ ಮಾಡುತ್ತಾ ಹೋದರು, – ಸಾವಿತ್ರಿ ಇದು ಯಾವುದಕ್ಕೂ ತಲೆಕಡಿಸಿಕೊಳ್ಳಲೇ ಇಲ್ಲ. ಅದು ಅವರ ಹಣೇಬರ ಎಂದು ಸಿಕ್ಕವರಲ್ಲಿ ಹೇಳಿದಳು. ಪರಿಸ್ಥಿತಿಯನ್ನು ತನ್ನ ಲಾಭಕ್ಕೆ ಬಳಸಿಕೊಂಡಳು. ಒಂದಿನ ಸಾಲದಿಂದಾಗಿ ಕ್ಲಿನಿಕ್ ಮುಚ್ಚಿ ಬಸ್ಸುಸ್ಟ್ಯಾಂಡಿನಲ್ಲಿ ಕುಳಿತರು.

ಅದೇ ಸಮಯಕ್ಕೆ ಜಾವಗಲ್ಲಿನಲ್ಲಿ ಡಾ.ಮಠದ್ ಬಸವೇಶ್ವರ ಆಸ್ಪತ್ರೆ ತೆಗೆದರು. ಅನಂತರ ಅವರು ಹೋದದ್ದು ಬೆಂಗಳೂರು. ನವನೀತರನ್ನು ಕೇಳುವವರೆ ಇಲ್ಲವಾಯಿತು. ಬಸ್‌ಸ್ಟಾಂಡ್ ಅವರ ಆಸ್ಪತ್ರೆಯಾಗಿ ಪರಿವರ್ತನೆಗೊಂಡಿತು. ಯಾರಾದರೂ ಪರಿಚಯದವರು ಸಿಕ್ಕಿದರೆ ಅವರ ಹತ್ತಿರ ನವನೀತರು; 'ಇಪ್ಪತ್ತು ರೂಪಾಯಿ ಇದ್ದರೆ ಕೊಡಿ' ಎಂದು ಕೇಳತೊಡಗಿದರು.

ಈಗಲೂ ಡಾಕ್ಟ್ರು ಹಾಗೆಯೇ ಇದ್ದಾರೆ. ಅವರು ಬಸ್ಟ್ಯಾಂಡಿನಲ್ಲಿ ಮಲಗಿದರೆ ಸಾವಿತ್ರಿ ಹೇಳುತ್ತಾಳೆ – 'ಅದು ಅವರ ಹಣೇಬರ.'

ಈ ಮಧ್ಯೆ ಒಂದು ಸಂಗತಿಯು ನಡೆಯಿತು; ಅಲ್ಬರ್ಟ್ ಕೆ. ಎಸ್. ಬಿ. ಟಿ ಯಲ್ಲಿ ಡ್ರೈವರಾಗಿ ಸೇರಿಕೊಂಡ. ಸಾವಿತ್ರಿಯು ಅವನಿಗೆ 'ನೀನು ಮೊದಲಿನಂತಿಲ್ಲ'ವೆಂದರೆ ತಪ್ಪಿಸಿಕೊಳ್ಳತೊಡಗಿದ. ಅವನು ಮಾಡಿಸಿಕೊಟ್ಟ ನೆಕ್ಲೇಸ್ ಅವಳ ಕೊರಳಲ್ಲಿ ಮಿನುಗುತ್ತಿದೆ. ನವನೀತರು ಕಥೆ ಹೇಳಿ ಮುಗಿಸಿದರು. ಮತ್ತೆ ದುಡ್ಡು ಕೇಳಿದರು ಕೊಟ್ಟೆ.

* * * * *

ನಾನು ಡಿಗ್ರಿಯಲ್ಲಿ ಓದಿದ ಗ್ರೀಕ್ ನಾಟಕದ ಸಾಲುಗಳು ನೆನಪಾದವು.
"ಮೇಲಕ್ಕೆ ಏರಿದ ಮನುಷ್ಯ ಬಿದ್ದರೆ ಅದು ದುರಂತ
ನೆಲದಲ್ಲಿಯೇ ಇರುವ ಮನುಷ್ಯ ಬಿದ್ದರೆ ಅದು ದುರಂತವಲ್ಲ"

**1992**
**ಡಿಸೆಂಬರ್**
**22**

"ಕೈ ನಡುಗುತ್ತಿತ್ತು. ಯಾವುದನ್ನು ಬರೆಯುತ್ತಿದ್ದಾರೆ ಅದರ ಅಕ್ಷರಗಳ ದೆಸೆಯಿಂದ ಸ್ಪಷ್ಟ ತಿಳಿಯುತ್ತಿರಲಿಲ್ಲ. ಮಾತಾಡುವುದು ಕೂಡಾ ತುಂಬಾ ಅಸಾಧ್ಯವಾದ ವೇದನೆಯನ್ನು ಕೊಡುತ್ತಿತ್ತು. ಹತ್ತಿರ ಸುಳಿಯಲು ಜನರಿರಲಿಲ್ಲ. ನೋವು ತಡೆಯಲಾಗದೆಂದು ತಿಳಿದುಕೊಂಡು ತೆಗೆದುಕೊಂಡ ಮಾತ್ರೆಯು ಕೂಡಾ ನಾಟುತ್ತಿರಲಿಲ್ಲ.

"ಇದು ಜೀವನದ ಕೆಟ್ಟಗಳಿಗೆ ಇನ್ನು ಬದುಕುತ್ತೇನೋ ಇಲ್ಲವೋ ಸರಿಯಾಗಿ ತಿಳಿಯದು. ಜೀವನದಲ್ಲಿ ನಾನು ತಿಳಿದು ಯಾರಿಗೂ ಕೆಟ್ಟದೂ ಅಂತ ಮಾಡಿಲ್ಲ. ಕೆಟ್ಟದೂ ಅಂತ ಮಾಡುವ ಮನುಷ್ಯ ಈ ಕಾಲದಲ್ಲಿ ಚೆನ್ನಾಗಿ ಬದುಕುತ್ತಾರೆ. ಅವರಿಗೆ ಗೌರವ ಹೆಚ್ಚು." ಅಂತ ಅಸ್ಪಷ್ಟವಾದ ಅಕ್ಷರದಲ್ಲಿ ಬರೆಯಲಾಗಿತ್ತು. ಅಕ್ಷರವು ಬರೆಯಲು ಕೂಡಾ ತುಂಬಾ ಕಷ್ಟಪಡಲಾಗಿತ್ತು. ಓದುವಾಗಲೇ ಅನಿಸುತ್ತಿತ್ತು. ನನಗೆ ತಂದೆಯ ಬಗ್ಗೆ ತುಂಬಾ ಪ್ರೀತಿ, ನಾನು ತುಂಬಾ ಹಚ್ಚಿಕೊಂಡದ್ದು ತಂದೆಯನ್ನು. ಹಾಗಾಗಿ ನನಗೆ ತಂದೆಯ ಬಗ್ಗೆ ಎಷ್ಟು ಪ್ರೀತಿಯೋ ಅಷ್ಟೆ ತಂದೆಯೂ ನನ್ನನ್ನು ಪ್ರೀತಿಸುತ್ತಿದ್ದರು. ನನ್ನ ತಂದೆ ಹೆಸರುಗಳಿಸಿದ ಮಹಾನ್ ವ್ಯಕ್ತಿಯಲ್ಲ. ಅವರ ಬಗ್ಗೆ ಮುಂದೆ ಯಾರೂ ಬರೆಯುವ ಸಾಧ್ಯತೆಯಿಲ್ಲ "ತನ್ನ ತಂದೆಯ ಬಗ್ಗೆ ನಿಶಿತ ದಿನಚರಿಯಲ್ಲಿ ಬರೆದು ಇಟ್ಟುಕೊಂಡಿದ್ದು ಶಾಂಭವಿ ಮತ್ತು ದೇವದಾಸರು ಮದುವೆಯಾಗಬೇಕಾದ ಎರಡು ವರ್ಷ ಮೊದಲು ಮತ್ತು ಅವನು ಶಾಂಭವಿ ಇನ್ನು ಪ್ರೀತಿಸುತ್ತಿದ್ದಾಳೆಂಬ ನಂಬಿಕೆಯಿದ್ದಾಗ. ಬದುಕಿ ಉಳಿಯುವ ಹಂಬಲವನ್ನು ಕಳೆದುಕೊಂಡ ಮನುಷ್ಯನ ಸ್ಥಿತಿಯು ಹೇಗಿರುತ್ತದೆ ಎಂದು ಊಹಿಸುವುದು ಕಷ್ಟ. ತಂದೆಯ ಜೀವನದಲ್ಲಿ ಒಳ್ಳೆಯ ಗಳಿಗೆಯಿತ್ತು ಎಂದು ಯಾವಾಗಲೂ ಅನಿಸುತ್ತಿರಲಿಲ್ಲ. ಮನೆಯು ಒಡೆದು ಹೋದ ರಾತ್ರಿ ಅಪ್ಪ ಗಳಗಳನೆ ಅತ್ತುಬಿಟ್ಟಿದ್ದರು. ಸಣ್ಣ ವಯಸ್ಸಿನಲ್ಲಿ ಅದೂ ಆಟವಾಡಬೇಕಾದ ವಯಸ್ಸಿನಲ್ಲಿ ಸಂಸಾರ ನೊಗ ಏರಿಸಿಕೊಂಡವನಿಗೆ ನಗು ಅರಳುವುದು; ನೆಮ್ಮದಿಯಿರುವುದು ಸಾಧ್ಯವಿರಲಿಲ್ಲ. ತಂದೆ – ತಾಯಿ ಇಬ್ಬರೂ ತೀರಿ ಹೋದ ಮೇಲೆ ಮುಂದಿನ ಕತೆಯೇನು ಅಂದ ಬುದ್ಧಿ ಯೋಚಿಸಿದ್ದು ನಿಜ. ಒಂದೆರಡು ವರ್ಷ ಸೋದರಮಾವ ಬಂದು ತೋಟ ಗೀಟ ನೋಡ್ತೇನೆ ಅಂತ ಹೇಳಿದ್ದೂ ಅಷ್ಟೇ ಸತ್ಯ. ಸೋದರ

ಮಾವನ ಹೆಸರು ಸುಬ್ರಾಯ. ಅಪ್ಪನ ಅಮ್ಮನ ತಮ್ಮ ಅಂದರೆ ಅಪ್ಪನಿಗೆ ಸೋದರ ಮಾವನಾದರೂ ಅಪ್ಪನಿಗಿಂತಲೂ ಒಂದು ಐದಾರು ವರ್ಷ ಹಿರಿಯರು. ಸಜ್ಜನ ಮತ್ತು ಸಾಧು ಸ್ವಭಾವದವರು. ಅವರಿಗೆ "ಸೂಜಿ ಸುಬ್ರಾಯ" ಅಂತ ಹೆಸರು ಬಂತು. ಅವರ ಹೆಂಡತಿಯ ಹೆಸರು ಲಕ್ಷ್ಮಿ. "ಮಂತು ಕೈ ಲಕ್ಷ್ಮಿ" ಅಂತ ಕರೆಯುತ್ತಿದ್ದರು. ರವಿಕೆಯನ್ನು ಕೈಯು ಮೊಸರು ಕಡೆಯುವ ಮಂತಿನ ಬುರುಡೆ ತರಹದ ವಿನ್ಯಾಸ ಮಾಡಿಸುತ್ತಿದ್ದರು. ಆ ಡಿಸೈನ್‌ನ ರವಿಕೆಯನ್ನೇ ಸದಾ ಹಾಕುತ್ತಿದ್ದರು. ಮಾವಿನ ಮಿಡಿಯ ಉಪ್ಪಿನಕಾಯಿ ಹಾಕುವುದರಲ್ಲಿ ಅವರಿಗೆ ವಿಶೇಷ ಪರಿಣತಿ. ಮಿಡಿ ಉಪ್ಪಿನಕಾಯಿ ಹಾಕುವುದರಲ್ಲಿ ಅವರಿಗಿದ್ದ ಪರಿಣತಿಯಿಂದಾಗಿ ಅವರೆದುರು ಉಪ್ಪಿನಕಾಯಿಗೆ ಗೋಗೆರೆಯುವವರು ಬಹಳ ಜನವಿದ್ದರು. ಎಷ್ಟು ಉಪ್ಪು ನೀರು ಬೇಕು ಎಷ್ಟು ಖಾರ ಬೇಕು. ಉಪ್ಪಿನ ಕಾಯಿಗೆ ಸಾಸಿವೆಯನ್ನು ಎಷ್ಟು ರುಬ್ಬಿ ಹಾಕಬೇಕೆಂಬುದು ಅವರಿಗಲ್ಲದೆ ಬೇರಾರಿಗೂ ಗೊತ್ತಾಗುತ್ತಿರಲಿಲ್ಲ. ಅವರು ಸಾಯುವ ತನಕವೂ ತಮ್ಮ ರವಿಕೆಯ ವಿನ್ಯಾಸವನ್ನು ಬದಲಾಯಿಸಲಿಲ್ಲ. ಉಪ್ಪಿನಕಾಯಿ ಹಾಕುವುದನ್ನು ಬಿಡಲಿಲ್ಲ. ಕಾಯಿಯಲ್ಲಿ ಅತ್ಯಂತ ಹುಳಿಯಾಗಿರುವ ಮಾವಿನ ಮಿಡಿಯು ಉಪ್ಪಿನಕಾಯಿ ಹಾಕಿದರೆ ಅದರ ರುಚಿಯೇ ಬೇರೆ. ಹುಳಿ ಮತ್ತು ಒಗರು ಎರಡೂ ಇರುವ ಮಾವಿನ ಮಿಡಿ ಉಪ್ಪು ನೀರಲ್ಲಿ ಮಿಂದು ಮಿಂದೂ ಬಾಡಿ ಹೋದ ಮೇಲೆ ಅದನ್ನು ಉಪ್ಪಿನ ಕಾಯಿ ಹಾಕಬೇಕು. ಅದಕ್ಕೆ ಹದ ಅಂತ ಬರುವುದು ಆವಾಗ ಎಂದು ಹೇಳುತ್ತಿದ್ದರು. ಹೀಗೆ ಹೇಳುವಾಗ ಅವರಿಗೆ ಅದು ಹೆಮ್ಮೆಯದೆನ್ನಿಸುತ್ತಿತ್ತು.

ತಂದೆಯ ಕೊನೆಯ ತಮ್ಮ ಆಗ ಸಣ್ಣ ವಯಸ್ಸಿನಲ್ಲಿ ತುಂಟನೆಂದರೆ ಬಹು ತುಂಟನಂತೆ. ಒಂಚೂರು ಹೇಳಿದ್ದೂ ಕೇಳುತ್ತಿರಲಿಲ್ಲವಂತೆ. ಅವರು ತಂಟೆ ಏನೇನು ಮಾಡುತ್ತಿದ್ದರು ಅಂತ ಹೇಳುವುದು ಕಷ್ಟ. ಈಸಿ ಚೆಯರಿನ ಕೋಲು ತೆಗೆದಿಡುವುದು ಅವರ ತುಂಟತನದ ಒಂದು ಸಾಕ್ಷಿ. ಒಂದು ದಿನ ತೋಟ ಸುತ್ತಾಡಿ ಬಂದು ಸುಬ್ರಾಯರು ಈಸಿ ಚೆಯರಿನ ಹಿಂಬದಿಯ ಕೋಲು ತೆಗೆದದ್ದು ತಿಳಿಯದೆ ಕುಳಿತರಂತೆ, ಅವರು ಆ ದಿನ ಬಿದ್ದಾಗ ಚಿಕ್ಕಪ್ಪ ಬಿದ್ದು ಬಿದ್ದು ನಗಾಡಿದರಂತೆ. ಆದರೆ ಸುಬ್ರಾಯರು ಚಿಕ್ಕಪ್ಪನಿಗೆ ಒಂಚೂರು ಬೈಯಲಿಲ್ಲ. ತಂದೆ ತಾಯಿಯಿಲ್ಲದ ಮಕ್ಕಳನ್ನು ಬೈದು ನಾನು ಯಾವ ನರಕಕ್ಕೆ ಹೋಗಲಿ ಎಂದು ಹೇಳುತ್ತಿದ್ದಾರಂತೆ.

ಒಂದು ದಿನ ಮರದ ಮಂಚಕ್ಕೆ ಒಂದು ಸೂಜಿ ಚುಚ್ಚಿ ಇಟ್ಟಿದ್ದರು ಚಿಕ್ಕಪ್ಪ. ಸುಬ್ರಾಯರು ಬಂದು ಮಂಚದ ಒಂದು ಭಾಗದಲ್ಲಿ ಕುಳಿತರು. ಸೂಜಿ ಕುಂಡೆಗೆ ಚುಚ್ಚಿತು. ಕುಂಡೆಯ ಮಾಂಸ ಖಂಡವನ್ನು ಆಪರೇಶನ್ ಮಾಡಿ ಸೂಜಿ ತೆಗೆಯಬೇಕಾಯಿತಂತೆ. ಅದಕ್ಕೆ ಅವರಿಗೆ ಸೂಜಿ ಸುಬ್ರಾಯರು ಅಂತ ಹೆಸರು

ಬಂತು. ಒಂದೆರಡು ವರ್ಷ ತಂದೆ ತಾಯಿ ಇಲ್ಲದ ಮಕ್ಕಳನ್ನು ನೋಡಿ ಅನಂತರ ನನ್ನ ಅಪ್ಪನಿಗೆ ಜವಾಬ್ದಾರಿ ಒಪ್ಪಿಸಿ ಬೇರೆ ಜಾಗ ಮಾಡಿಕೊಂಡರು. ಅಲ್ಲಿಂದ ಪ್ರಾರಂಭವಾದದ್ದು ತಂದೆಯ ಹಣೆಯ ಮೇಲೆ ಗೆರೆಗಳು. ಸರಿಯಾಗಿ ಅಡ್ಡಗೆರೆಯನ್ನು ಕೊಯ್ದಂತೆ ನಾಲ್ಕು ಗೆರೆಗಳು ಮತ್ತು ಆಗಾಗ ಕಟ್ಟುತ್ತಿರುವ ಮೂಗನ್ನು ಸಲೀಸುಗೊಳಿಸಲು ಶ್ರೀಕೃಷ್ಣನಶ್ಯಪುಡಿ. ಒಂದು ಸಣ್ಣ ಡಬ್ಬಿಯಲ್ಲಿ ನಶ್ಯ ತುಂಬಿಕೊಂಡು ಸೊಂಟದಲ್ಲಿಟ್ಟುಕೊಳ್ಳುವ ರೂಢಿ ಜೊತೆಯಲ್ಲಿ. ತಂದೆ ತಾಯಿ ಇದ್ದರೆ ತಂದೆಯ ಹಣೆಯ ರೇಖೆ ಬದಲಾಗುತ್ತಿತ್ತೋ ಏನೋ ಎಂದು ಬಹಳ ಬಾರಿ ನಿಶಿತ ಯೋಚಿಸಿದ್ದಾನೆ. ಅಕಾಲಿಕವಾಗಿ ತಂದೆಯ ಪಾಲಿಗೆ ಬಂದುದು ಒಂದು ಪಿತೃತ್ವದ ಜವಾಬ್ದಾರಿ. ಇದು ಮಿಡಿಯನ್ನು ಕೂಡಾ ಹಣ್ಣು ಮಾಡುತ್ತದೆ. ಕುಸುಗಾಯಿಯು ಒಗರನ್ನು ಮಾತ್ರ ಕೊನೆಯ ತನಕ ಹಾಗೆಯೇ ಇಟ್ಟುಕೊಳ್ಳುತ್ತದೆ. ಬಾಲ್ಯದಲ್ಲಿಯೇ ತಂದೆ – ತಾಯಿಯರನ್ನು ಕಳೆದುಕೊಂಡು ನಿಷ್ಠುರ ಅನುಭವದ ಬಿಸಿಗೆ; ಮೈ ಮನಸ್ಸು ಒಡ್ಡಿ ನಿಂತವರಿಗೆ ಇರುವುದು ಎರಡೇ ಆಯ್ಕೆ: ಒಂದೋ ಎಲ್ಲವನ್ನೂ ಧಿಕ್ಕರಿಸಿ ನಿರಂತರವಾಗಿ ಎದುರು ಇದ್ದವರಿಗೆ ಹಾಯುವುದನ್ನು ಕಲಿಯುವುದು ಮತ್ತು ಹಿಂದೆ ನಿಂತವರಿಗೆ ಘಟೀರನೆ ಒದೆಯುವುದು. ಹಾಗೆ ಮಾಡದೆ ಹೋದರೆ ತಾನು, ತನ್ನ ಆಸ್ತಿತ್ವ ಎರಡೂ ಉಳಿಯುವುದಿಲ್ಲ ಎಂಬ ಅರಿವು ಇರಬೇಕು. ಇಲ್ಲವೇ ವಿನಾಕಾರಣ ತನ್ನೊಳಗೆ ತಾನೇ ಮೃದುವಾಗಿ ವಿಧಿಯ ಎದುರು ಕೈಯೊಡ್ಡಿ ನಿಂತು ಪಾಲಿಗೆ ಬಂದುದು ಪಂಚಾಮೃತವೆಂದು ತುಳಸಿನೀರು ಕುಡಿಯುವುದು. ಅಪ್ಪ ಎರಡನೆಯ ಜಾತಿಯವರು. ಮನುಷ್ಯ ಅಹಂಕಾರವನ್ನು: ಶೋಕಿಯನ್ನು ಕಳೆದುಕೊಂಡು ಬದುಕಬೇಕೆಂದು ಅವನಿಗೆ ಅನಿಸಿರಲಿಲ್ಲ. ಅದು ಏಕೆಂದರೆ ಅದು ಯಾವುದೂ ಅವರಲ್ಲಿ ಇರಲಿಲ್ಲ. ಬದುಕಿನಲ್ಲಿ ರುಬ್ಬಿ ಹೋದ ಮನುಷ್ಯರಲ್ಲಿ ಇರಬಹುದಾದ ಎಲ್ಲಾ ಲಕ್ಷಣಗಳೂ ಅಪ್ಪನಲ್ಲಿತ್ತು. ಒಂದಲ್ಲ ಒಂದು ಕಷ್ಟಗಳು ಒದ್ದು ಸಮಯಕ್ಕೆ ಕಾದಂತೆ ಒಂದರ ಮೇಲೆ ಒಂದು ಬಂದೆರಗಿದವು. ಅಜ್ಜ ತೀರಿ ಹೋದಾಗ, ಅಜ್ಜಿಯೂ ಇಲ್ಲವಾದಾಗ – ಜಗತ್ತಿನ ಬಗ್ಗೆ ಯಾವ ಜ್ಞಾನವೂ ಸರಿಯಾಗಿ ಮೊಳೆದೋರಲಿಲ್ಲ. ಇದ್ದ ಒಂದೆಕ್ರೆ ಅಡಕೆಯ ತೋಟ ಹಾಳುಬಿತ್ತು. ಹೊಸ ತೋಟದಲ್ಲಿ ಅಡಿಕೆಯ ಬುಡ ಬಿಡಿಸುವವರಿಲ್ಲ. ಅಡಿಕೆ ಹೆಕ್ಕುವವರಿಲ್ಲ. ಒಲೆಯ ಮುಂದೆ ಮೂರೂ ಹೊತ್ತು ಕುಳಿತುಕೊಳ್ಳಬೇಕು ಅಡುಗೆ ಮಾಡುವುದು, ನೆಲ ಒರೆಸುವುದು, ಬಟ್ಟೆ ಒಗೆಯುವುದರಲ್ಲಿ ಕಳೆದುಹೋದ ಕಾಲವನ್ನು ಲೆಕ್ಕ ಹಾಕುವುದು ಕಷ್ಟ. ಮುಂದೆ ಎಲ್ಲಾ ಸಮಸ್ಯೆಗಳು ಬಗೆಹರಿಯಲು ತಂದೆ ಮಾಡಿದ ಉಪಾಯವೆಂದರೆ ಹರಕೆ ಅಷ್ಟೆ! ಮನುಷ್ಯನ ಶಕ್ತಿಯನ್ನು ಮೀರಿದ ದೈವಕ್ಕೆ ಮುಖ ಮಾಡಿ ನಿಂತ ತಂದೆಗೆ ಏನೇನು ಅನುಭವಗಳಾದವು ಅದನ್ನು ಪೂರ್ತಿಯಾಗಿ ದಾಖಲಿಸುವುದು ಅಸಾಧ್ಯ. ತಂದೆಯ ಜೀವನದ ಚರಿತ್ರೆಯ

ಕೆಲವು ಭಾಗಗಳು ತನ್ನ ಅರಿವಿಗೆ ಬಂದ ಮೇಲೆ ತಾನು ನಿರೀಶ್ವರವಾದಿಯಾದೆ. ಜಾತಿಯ ಬಳ್ಳಿಯನ್ನು ಕತ್ತರಿಸಿದೆ. ಅದು ಅಪ್ಪನಿಂದ ಕಲಿತೆ. ಅಪ್ಪನಿಗೆ ಇದ್ದ ಸಜ್ಜನಿಕೆಯುನ್ನು ದುರ್ಬಳಕೆ ಮಾಡಿಕೊಂಡ ಮನುಷ್ಯರಿಂದಾಗಿ ತಾನು ನಿಷ್ಠುರವಾದಿಯಾಗಬೇಕಾಗಿ ಬಂತು ಎಂದು ನಿಶಿತ ಯೋಚಿಸಿದ.

ತಂದೆಯ ಬಗೆಗಿನ ಕೆಲವು ಮರೆಯಲಾಗದ ಚಿತ್ರಗಳು ಅಗ್ಗಿಷ್ಟಿಕೆಯಂತೆ ಒಳಗೆ ಬೆಂಕಿಯ ಕಾವು ಮೂಡಿಸುತ್ತದೆ; ಅದರಿಂದ ತಪ್ಪಿಸಿಕೊಳ್ಳುವುದು ಕಷ್ಟವೆಂದು ಬೇರಾರಿಗೂ ಅಲ್ಲ ಸ್ವತಃ ನಿಶಿತನಿಗೂ ಗೊತ್ತು.

ಅಂದು ಶುಕ್ರವಾರ ಮಾಚಣ್ಣನ ಮನೆಯಲ್ಲಿ ಶಕ್ತಿ ಅಮ್ಮನವರ ಪೂಜೆ. ಶಕ್ತಿ ಅಮ್ಮನವರ ಪೂಜೆ ಎಂದರೆ ಅದು ಹಗಲಲ್ಲ, ಮಧ್ಯರಾತ್ರಿ ಹನ್ನೆರಡು ಗಂಟೆಯಲ್ಲದೆ ಪೂಜೆ ಮುಗಿಯುವಂತಿಲ್ಲ. ಪೂಜೆಯು ಅತ್ಯಂತ ರಹಸ್ಯವಾಗಿ ನಡೆಯುತ್ತಿತ್ತು. ಅಮ್ಮನವರ ಪೂಜೆ ಎಂದರೆ ಶಕ್ತಿ ಅಮ್ಮನವರ ಪೂಜೆ; ದೇವಿ ಪೂಜೆ ಎಂದು ಕರೆಯುತ್ತಿದ್ದರು. ಯಾರಾದರೂ ಬಾಳೆಯೆಲೆ ಕೊಯ್ಯುವಾಗ; ಅದರಲ್ಲಿ ಕೇಪುಳದ(ಸ್ಕಾರ)ಹೂವನ್ನೂ ಕೊಯ್ಯುವಾಗ ಯಾಕೆ ಬಾಳೆ? ಎಂದು ಕೇಳಿದರೆ "ಪೂಜೆ"ಗೆ ಅಂತ ಹೇಳಬೇಕೇ ಹೊರತು, ಯಾವ ಪೂಜೆ ಅಂತ ಹೇಳಲೇಬಾರದು. ಯಾವ ಮನೆತನದಲ್ಲಿ ಶಕ್ತಿ ಅಮ್ಮನವರ ಪೂಜೆ ಇದೆಯೋ ಅವರಿಗೆ ಮಾತ್ರ ಪೂಜೆಯ ಹೇಳಿಕೆ ಇರುತ್ತಿತ್ತು. ಪೂಜೆಗೆ ಇದ್ದ ನೆಂಟರಿಸ್ಟರಿಗೆ ಹೇಳುವ ಕ್ರಮವಿಲ್ಲ. ಅಮ್ಮನವರ ಪೂಜೆ ಇರುವ ಕುಟುಂಬದ ಹೆಣ್ಣನ್ನು ಬೇರೆಯವರ ಕುಟುಂಬಕ್ಕೆ ಕೊಟ್ಟರೆ ಅವಳಿಗೂ ಪ್ರವೇಶವಿಲ್ಲ. ಮಕ್ಕಳಿಗೂ ಶಕ್ತಿ ಅಮ್ಮನವರ ಪೂಜೆಯ ರಹಸ್ಯ ತಿಳಿಯುತ್ತಿರಲಿಲ್ಲ. ಅದೂ ನಿಗೂಢವಾಗಿತ್ತು. ನೂರೆಂಟು ಜೋಡಿ ಕಿಸ್ಕಾರದ ಅಗತ್ಯವಿದ್ದುದರಿಂದ ಆ ಹೂವನ್ನು ಹುಡುಕಿಕೊಂಡು ಹೋಗುವುದು; ಗುಡ್ಡ ಗುಡ್ಡ ತಿರುಗುವುದು ಮಾತ್ರ ನಮಗೆ ತುಂಬಾ ಖುಶಿ ತರುತ್ತಿತ್ತು. ಬಲಿತ ಕೇಪುಳ ಹಣ್ಣೆಂದರೆ ಬಲು ರುಚಿ. ಕೇಪುಳ ಹಣ್ಣನ್ನು ಬಾಯಲ್ಲಿಟ್ಟುಕೊಳ್ಳುವುದು ಮತ್ತು ಅದರ ಹೂ ಕೊಯ್ಯುವುದು ನಮಗೆ ಆಗ ಬಹಳ ಇಷ್ಟ. ಯಾರು ಹೆಚ್ಚು ಹೂ ಕೊಯ್ಯುತ್ತಾರೆನ್ನುವುದಕ್ಕೆ ನಮ್ಮಲ್ಲಿ ಸ್ಪರ್ಧೆ ಏರ್ಪಡುತ್ತಿತ್ತು. ಯಾವಾಗಲೂ ಸೋಲು ಉಣ್ಣುವವನು ನಾನು. ಸೋತುದಕ್ಕೆ ಯಾವ ಕಾರಣವಾದರೂ ಹೇಳಿ ಜಗಳ ತೆಗೆದು ಅರ್ಧದಿಂದ ಓಡಿ ಬರುತ್ತಿದ್ದೆ. ಯಾಕೆಂದರೆ ತಿನ್ನುವಷ್ಟು ಕಿಸ್ಕಾರ ಹಣ್ಣು ಸಿಕ್ಕಿದ ಮೇಲೆ ನನಗೆ ಏನು ಕೆಲಸ? ಕಾಲು ಕೆರೆದು ಸಣ್ಣ ಯುದ್ಧ ಮಾಡಿ ಮನೆಗೆ ಓಡಿ ಯುದ್ಧದ ಸಕಾರಣವನ್ನು ಉಪ್ಪು, ಕಾರ ಹಚ್ಚಿ ಹೇಳುತ್ತಿದ್ದೆ. ಆದರೆ ಅದು ಉಪಯೋಗಕ್ಕೆ ಬರುತ್ತಿರಲಿಲ್ಲ. ಯಾಕೆಂದರೆ ಉಳಿದವರು ಕಿಸ್ಕಾರ ಹೂ ಕೊಯ್ಯುವುದೆಂದರೆ ಪವಿತ್ರ ಕೆಲಸವೆಂದೇ ನಂಬಿದ್ದರು.

ಶಕ್ತಿಯಮ್ಮನವರ ಪೂಜೆ ಎಂದರೆ ಆ ದಿನ ರಾತ್ರಿ ಆ ಮನೆತನಕ್ಕೆ ಸಂಬಂಧಿಸಿದವರು, ಹಿಂದಿನಿಂದಲೂ ಆ ಪೂಜೆಯನ್ನು ಮಾಡಿಕೊಂಡು ಬಂದವರು; ಭಾಗವಹಿಸುತ್ತಿದ್ದರು ಪ್ರಸಾದ ರೂಪವಾಗಿ ಅಕ್ಕಿಯಿಂದ ತಯಾರಿಸಿದ ವಿಶೇಷ ತಿಂಡಿ ಮತ್ತು ಬಾಳೆಕಾಯಿಯ ಸಾಂಬಾರು ಅಥವಾ ಆಲೂಗಡ್ಡೆಯ ಪದಾರ್ಥ ಸೇವಿಸುತ್ತಿದ್ದರು. ಮಕ್ಕಳಿಗೆ ಆಲೂಗಡ್ಡೆಯ ಪದಾರ್ಥವೆಂದರೆ ತುಂಬಾ ಇಷ್ಟ. ಬಟಾಣಿಯನ್ನು ಹೆಚ್ಚು ತಿನ್ನಬೇಡಿ. ಹೂಸು ಬಿಡುತ್ತೀರಿ ಅದು ವಾಯು ಅಂದರೆ ಯಾರು ಕೇಳಿಸಿಕೊಳ್ಳುತ್ತಿರಲಿಲ್ಲ. ಬಟಾಣಿಯನ್ನು ತಿನ್ನುವುದು ದೊಡ್ಡದೋ ಹೂಸು ಬಿಡುವುದು ದೊಡ್ಡದೊ? ಅದೂ ಅಲ್ಲದೆ ಯಾರು ಇಲ್ಲದ ಜಾಗ ನೋಡಿ ಹೂಸು ಬಿಟ್ಟರಾಯಿತು. ಆ ಮೇಲೆ, ಹೂಸು ಬಿಟ್ಟವರಾರು?

ಕಾಸು ಕೊಟ್ಟವರಾರು

ನನಗೂ ದೇವರಿಗೂ ಒಂದೇ ಮಾತು"

ಅಂತ ಹೇಳಿ ಮೊದಲು ಮಾತಾಡುತ್ತಾರೋ ಅವರೇ ಹೂಸು ಬಿಟ್ಟದ್ದು ಅಂತ ಸಾರಿದರೆ ಸರಿಯಾಯಿತು.

ದೇವಿಯ ಪೂಜೆಯೆಂದರೆ ಅದು ಅತ್ಯಂತ ರಹಸ್ಯವಾಗಿ ನಡೆಯುವಂತದ್ದು. ಹಿಂದೆ ಬಿಳಿಯ ದೊರೆಗಳು ಆಳುತ್ತಿದ್ದಾಗ ಶಕ್ತಿಯಮ್ಮನವರ ಪೂಜೆಯ ಮಧ್ಯರಾತ್ರಿಯ ಅನಂತರ ನಡೆಯುತ್ತಿತ್ತಂತೆ. ಆ ಕಾಲದಲ್ಲಿ ಪೂಜೆಯು ಹನ್ನೆರಡು ಗಂಟೆಗೆ ನಡೆಯುತ್ತಿತ್ತಂತೆ. ಪೂಜೆಯ ಕಾರ್ಯದಲ್ಲಿ ಭಾಗವಹಿಸುವ ಮನೆತನದವರು ಪೂಜೆ ನಡೆಯುವ ಮನೆಯಲ್ಲಿ ಸೇರುತ್ತಿದ್ದುದೇ ಹನ್ನೆರಡು ಗಂಟೆ ರಾತ್ರಿಯ ವೇಳೆಯಲ್ಲಿ. ಕತ್ತಲೆಯಲ್ಲಿಯೇ ಅವರೆಲ್ಲರು ಬಂದು ಸೇರುತ್ತಿದ್ದರು. ಚಾವಡಿಯಲ್ಲಿ ಬೆಳಕು ಇಟ್ಟುಕೊಳ್ಳುತ್ತಿರಲಿಲ್ಲ ಮತ್ತು ಚಾವಡಿಗೆ ಬಾಗಿಲು ಇದ್ದವರು ಬಾಗಿಲು ಹಾಕಿಕೊಂಡು ಬಿಡುತ್ತಿದ್ದರಂತೆ. ಏನು ರಹಸ್ಯವಾದ ಚಟುವಟಿಕೆಯನ್ನು ಕೆಲವು ಬ್ರಾಹ್ಮಣರು ಮಾಡುತ್ತಿದ್ದರೆಂದು ತಿಳಿದ ಕಂಪನಿಯ ದೊರೆಗಳು ಬಂಟ್ವಾಳದಲ್ಲಿ ಮೊಕ್ಕಂ ಹೂಡಿದವರು ಬ್ರಾಹ್ಮಣರ ಪುರೋಹಿತರನ್ನು ಕರೆಸಿದರಂತೆ. ಪುರೋಹಿತರು ಅದು ನಮ್ಮ ಪೂಜೆಯ ಕಾರ್ಯ. ಕಂಪೆನಿ ಸರ್ಕಾರದ ವಿರುದ್ಧದ ಚಟುವಟಿಕೆಯಲ್ಲ ಎಂದು ವಿವರಿಸಿ ಹೇಳಿದ ಮೇಲೆ ಅವರಿಗೆ ನಂಬಿಕೆ ಬಂತು ಅಂತ ಊರವರು ಹೇಳುತ್ತಾರೆ. ಪೂಜೆಯ ಹೆಸರೆತ್ತಿ ಹೇಳುವುದು ಅಮ್ಮನವರ ಶಾಪಕ್ಕೆ ಕಾರಣವಾಗಬಹುದೆಂದು ಎಲ್ಲರೂ ಭಯಪಡುತ್ತಿದ್ದರು.

ರಾತ್ರಿ ಅಮ್ಮನವರ ಪೂಜೆಯನ್ನು ಮಾಡುತ್ತಿದ್ದುದು ಪುರೋಹಿತರು. ಪೂಜೆಯಲ್ಲಿ ಏನೇನು ನಡೆಯುತ್ತದೆ ಎಂದು ತಿಳಿಯುತ್ತಿರಲಿಲ್ಲ. ಒಂದು ಸಾರಿ

ಮಾತ್ರ ರಾತ್ರಿ ಮಾಚಣ್ಣನವರ ಮನೆಯಲ್ಲಿ ಪೂಜೆ ನಡೆಯುವಾಗ ದೊಪ್ಪಯಮ್ಮನನ್ನು ಪುರೋಹಿತರು ಕರೆಯುವರು. ಅವರು ದೇವರು ಕೋಣೆಯ ಬಾಗಿಲು ಹಾಕಿಕೊಂಡರು. ಅಂತಹ ಸಂದರ್ಭದಲ್ಲಿ ದೇವರ ಕೋಣೆಯತ್ರ ಮಕ್ಕಳು ಹೋಗದಂತೆ ಎಚ್ಚರವಹಿಸುತ್ತಿದ್ದರು. ನನಗೆ ಇದು ಅತ್ಯಂತ ಕುತೂಹಲಕರವಾದ ವಿಷಯವಾಗಿತ್ತು. ಮೆಲ್ಲನೆ ಬಾಗಿಲಿನ ಸಂದಿಯಲ್ಲಿ ಇಣಕಿ ನೋಡಿದೆ. ಮಾಚಣ್ಣನ ಹೆಂಡತಿಯ ಪಾದಪೂಜೆ ಮಾಡಿದರು. ಇಷ್ಟು ನೋಡುತ್ತಿರುವಾಗ ನನ್ನ ಬೆನ್ನಿಗೆ ಪಟ್ ಅಂತ ನನ್ನ ಎರಡು ಬಿಗಿದು ಹಾಗೆಲ್ಲ ನೋಡಬಾರದು ಅಂತ ಹೇಳಿದರು. ಇದರಿಂದ ನನಗೆ ಪೂರ್ತಿ ವೀಕ್ಷಣೆಯು ಸಾಧ್ಯವಾಗಲಿಲ್ಲ. ದೊಡ್ಡವನಾದ ಮೇಲೆ ತಿಳಿಯಿತು. ಶಕ್ತಿರೂಪಿಣಿಯರಾದ ಹೆಂಗಸರನ್ನು ಪೂಜೆಮಾಡಲಾಗುತ್ತಿದೆ. ಅಮ್ಮನವರಿಗೆ ಮದ್ಯ ಮಾಂಸದ ನೈವೇದ್ಯವಾಗಬೇಕು. ನೈವೇದ್ಯಕ್ಕೆ ಕೋಳಿ ಕುಯ್ಯುವ ಕೆಲಸ ಸಾಮಾನ್ಯವಾಗಿ ಚಂದುನಾಯ್ಕನಿಗೆ. ನೈವೇದ್ಯಕ್ಕೆ ಬೇಕಾದ ಒಳ್ಳೆಯ ಹುಂಜವನ್ನು ಅವನು ಗುಟ್ಟಾಗಿ ಆಯ್ಕೆಮಾಡಿ ಇರಿಸಿಕೊಳ್ಳುತ್ತಿದ್ದ. ನೈವೇದ್ಯವಾದ ಮೇಲೆ ಕೋಳಿಯ ಬಲಿಯಾಗಲಿ; ಅವರ ರುಚಿಯಾಗಲಿ ಗೊತ್ತಿಲ್ಲವಾದುದ್ದರಿಂದ ಚಂದುನಾಯ್ಕ ಅದಕ್ಕಾಗಿ ಬೇಕಾದ ತಂತ್ರವನ್ನು ರೂಪಿಸುತ್ತಿದ್ದ. ಚಂದುನಾಯ್ಕ ಬಲಿತ ಕೋಳಿಯು ಕಣ್ಣಿಗೆ ಬಿದ್ದರೆ ಅದರ ತಲೆಕಡಿಯುವುದು ಹೇಗೆಂದು ಯೋಚಿಸುತ್ತಿದ್ದ. ಕೋಳಿಯನ್ನು ಸಾಕಿದವರು ಅದನ್ನು ಮಾರಲು ಒಪ್ಪದಿದ್ದರೆ ಖಡಾಖಂಡಿತವಾಗಿ ಹೇಳುತ್ತಿದ್ದ, ಕೋಳಿಯು ಪೂಜೆಗಿಡುವುದು ಅದನ್ನು ಕೊಡದಿದ್ದರೆ ನಿಮ್ಮ ಮನೆತನಕ್ಕೆ ಶಾಪ ತಗಲುತ್ತದೆ. ಕೋಳಿಯನ್ನು ಯಾವ ಪೂಜೆಯಲ್ಲಿ ಬಲಿ ಕೊಡಲಾಗುತ್ತದೆ ಎಂದು ಹೇಳುತ್ತಿರಲಿಲ್ಲ. ಕೋಳಿ ಪದಾರ್ಥ ಮಾಡಿ ಹಿಂಬಾಗಿಲಿನಲ್ಲಿ ತಂದು ಪೂಜೆಯ ವೇಳೆಗೆ ತಲುಪಿಸುತ್ತಿದ್ದ ಹಾಗೇ ಮದ್ಯವನ್ನು ತಂದುಕೊಡುವ ಕೆಲಸವು ಅವನಿಗೆ ಮದ್ಯವನ್ನು ಹೊಟ್ಟೆಗೆ ಇಳಿಸಿ ಅನಂತರ ಪೂಜೆಗೆಂದುತಂದುಕೊಡುತ್ತಿದ್ದ. ಮದ್ಯಕ್ಕೆ ಒಂದು ಚೂರು ನೀರು ಸೇರಿಸಿ ಅನಂತರ ಯಾವ ಹೆಂಗಸರಿಗೆ ಪೂಜೆ ಮಾಡಲಾಗಿದೆಯೇ ಅದೇ ಹೆಂಗಸಿಗೆ ಮತ್ತು ಆ ಮನೆತನದ ಗಂಡಸರಿಗೆ ಒಂದೊಂದು ಸಣ್ಣ ಬೆಳ್ಳಿ ಪಾತ್ರೆಯಲ್ಲಿ ಕುಡಿಯಲು ಕೊಡುತ್ತಿದ್ದರು. ಶಕ್ತಿಯಮ್ಮನವರ ಸೇವೆಯೂ ಈ ಕಾರಣದಿಂದ ನಮಗೆ ಕುತೂಹಲ ಕೆರಳಿಸುವ ಮಾದರಿಯದಾಗಿರುತ್ತಿತ್ತು. ನಾನು ಇದನ್ನು ನೋಡಿದ ಮೇಲೆ ಬ್ರಾಹ್ಮಣರು ಕೋಳಿ ತಿನ್ನುವುದು ಮತ್ತು ಗುಂಡು ಹಾಕುವುದು ಎರಡೂ ನಿಷಿದ್ಧವಲ್ಲವೆಂಬ ತೀರ್ಮಾನಕ್ಕೆ ಬಂದಿದ್ದೆ. ನಾನು ಶಾಂಭವಿಯು ನನ್ನನ್ನು ನಿರಾಕರಿಸಿದ ಮೇಲೆ ಈ ಸೇವೆಯು ಹೆಚ್ಚು ಉಪಯುಕ್ತವಾಗಿತ್ತು. ಸಾರಾಯಿ ಎನ್ನುವುದು ಕರುಳನ್ನು ಹಿಂಡುವ ತನಕ ಖುಶಿ ಕೊಡುತ್ತಿತ್ತು. ಅಮಲು ಎನ್ನುವುದೂ ಹೇಗೂ ಇರಬಹುದು: ಅಧಿಕಾರ; ಪ್ರೇಮ,

ಕುಡಿತ, ಅಹಂಕಾರ; ಹೆಣ್ಣಿನ ಎದೆಯ ತೂರಿ, ಹೆಣ್ಣಿಗೆ ಗಂಡಿನ ಸಪಾಟಾದ ಎದೆ. ಮಾದಕದ ಮಾತು ಹೀಗೆ ಅನೇಕ. ಅಯ್ಯೋ, ಈ ಜಗತ್ತಿನಲ್ಲಿ ಎಷ್ಟೊಂದು ಅಮಲುಗಳಿವೆ? ಮದುವೆಯಾಗಿ ಹತ್ತು ವರ್ಷದ ಮಗನಿರುವ ಹೆಂಗಸಿಗೆ ನಿಮಗೆ ಇಷ್ಟು ದೊಡ್ಡ ಮಗನಿದ್ದಾನಾ? ಅಂತ ಕೇಳಿ ನೋಡಿ ಎಷ್ಟು ಬೇಗ ಆ ಹೆಂಗಸಿಗೆ ಅಮಲೇರುತ್ತದೆ? ಅಯ್ಯೋ, ನಿಮಗೆ ಅಂಥ ಅನಾಗರಿಕ ಗಂಡನಾ? ಅಂತ ತರಗತಿಗೆ ಹೇಳಿ ಇದ್ದಕ್ಕಿದ್ದಂತೆ ಅವಳಿಗೆ ಅಮಲೇರುತ್ತೆ – ಅಂತ ಈಗ ಅನಿಸುತ್ತದೆ. ನನ್ನ ವಿಕ್ಷಿಪ್ತವೆನ್ನಬಹುದಾದ ಚರಿತ್ರೆಯ ಪುಟಗಳಲ್ಲಿ ಇಂಥವರು ಬಹಳ ಜನರಿದ್ದಾರೆ ಹದ್ದುಗಳಂತೆ, ಇಲಿಗಳಂತೆ, ಹಾರಿಹೋಗುವ ಕಾಗೆಗಳಂತೆ. ಕೆಲವರು ಮಾಂಸಕ್ಕೆ ಕಾಯುತ್ತಾರೆ. ಕೆಲವರು ಇಲಿ – ಹೆಗ್ಗಣಗಳಂತೆ ಬಿಲದೊಳಗೆ ಇಳಿದುಬರುತ್ತಾರೆ. ಕಾಗೆಗಳಂತೆ ಹಾರಿ ಯಾರದೋ ಮನೆಯ ಮಾಡಿನ ಛಾವಣಿಯಲ್ಲಿ ಕುಳಿತು ಕ್ಯಾ. ಕ್ಯಾ ಅಂತೆನ್ನುತ್ತಾರೆ.

ಒಂದು ದಿನ ನನ್ನ ಅಪ್ಪ ಅನುಭವಿಸಿದ ದೊಡ್ಡ ಅವಮಾನದ ಸಂದರ್ಭವೊಂದು ನಡೆಯಿತು. ಅದು ಜರುಗಿದ್ದು ಮಾಚಣ್ಣನ ಮನೆಯಲ್ಲಿ. ಆಗ ಮಾಚಣ್ಣನ ದರ್ಬಾರು ಜೋರಾಗಿ ನಡೆಯುತ್ತಿತ್ತು ದುಡ್ಡು ಮತ್ತು ನೀರು ಅವೆರಡರ ವ್ಯತ್ಯಾಸ ಅವನಿಗೆ ಇರಲಿಲ್ಲ. ಸುಬ್ಬಣ್ಣನ ಜೊತೆಗಿನ ದೋಸ್ತಿಯೂ ಹೆಚ್ಚಾಗಿ ಅವರಿಬ್ಬರೂ ಗಳಸ್ಯಕಂಠಸ್ಯರಾದ ಕಾಲವದು. ಅವರಿಬ್ಬರ ನಡುವಣ ವಿಶ್ವಾಸ ಎಷ್ಟೊಂದು ತೀವ್ರವಾಗಿತ್ತೆಂದರೆ ಮಾಚಣ್ಣ ಕಡ್ಡಿಯನ್ನು ತೆಗೆದಿಡಬೇಕೆಂದರೆ ಅದಕ್ಕೆ ಬಡ್ಡಿ ಸುಬ್ಬಣ್ಣನ ಒಪ್ಪಿಗೆ ಬೇಕು. ಈವತ್ತು ನಮ್ಮ ಮನೆಯಲ್ಲಿ ಹೆಗ್ಗಣ ಬಿದ್ದಿತು. ಎಂದು ಹೇಳುವ ಮಟ್ಟಿಗಿನ ಸಲುಗೆಯಿದ್ದ ಕಾಲವದು. ಸುಬ್ಬಣ್ಣ, ಈವತ್ತು ಹೆಂಡತಿ ಮುಟ್ಟು. ಚೆಂಬು ಕವುಚಿ ಇಟ್ಟು ಬಿಟ್ಟಿದ್ದಾಳೆ. ಎಂದು ಹೇಳುತ್ತಿದ್ದ 'ಹೌದನಾ ಮಾರಾಯ, ನಿನ್ನೆ ಮನೆಗೆ ಹೋದಾಗ ರಾತ್ರಿ ಒಂಭತ್ತು ಗಂಟೆ. ದಾರಿಯಲ್ಲಿ ಹೋಗುವಾಗ ಏನೋ ಯೋಚನೆ ಮಾಡ್ತಾ ಹೋಗಿದ್ದೆ. ಮನೆಗೆ ಹೋದರೆ ನಮ್ಮ ಲಕ್ಷ್ಮಿ ಚೆಂಬು ಕವುಚಿಟ್ಟು ಬಿಟ್ಟಿದ್ದಾಳೆ. ಏನು ಮಾಡುವುದು? ರಾತ್ರಿ ಮಲಗುವಾಗ ನನಗಂತೂ ನಮಃ ಶಿವಾಯಮಂತ್ರ ಮಾತ್ರ ಉಳಿಯಿತು.' ಎಂದು ಸುಬ್ಬಣ್ಣ ಹೇಳುತ್ತಿದ್ದ ಸುಬ್ಬಣ್ಣ ತನ್ನ ಹೆಂಡತಿಯನ್ನು ಲಕ್ಷ್ಮೀಯೆಂಬ ಬಹುವಚನ ಪ್ರಯೋಗದ ಮೂಲಕ ಹೇಳುತ್ತಿದ್ದರೂ ಅದಕ್ಕೆ ವಿಶೇಷ ಅರ್ಥವಿರುತ್ತಿರಲಿಲ್ಲ.

ಮಾಚಣ್ಣನ ಮನೆಯಲ್ಲಿ ರಾತ್ರಿಯ ಪೂಜೆ. ಆ ದಿನ ಮಕ್ಕಳೆಲ್ಲರೂ ಹೂ ಕ್ಯೊದು. ಬರಬೇಕೆಂದು ಹೇಳಿದ್ದ ಮಕ್ಕಳೆಲ್ಲಾ ಕಿಸ್ಕಾರ ಹೂಕೊಯ್ದು ಕೊಡಬೇಕು. ಯಾರೂ ಹೆಚ್ಚು ಹೂ ಕೊಯ್ದು ಕೊಡುತ್ತಾರೋ, ಅವರಿಗೆ ಒಂದೊಂದು ಚಾಕಲೇಟು ಕೊಡ್ತೇನೆ. ಆ ದಿನಗಳಲ್ಲಿ ಚಾಕಲೇಟು ಎಂದರೆ ನಮಗೆಲ್ಲಾ ತುಂಬಾ

ವಿಶೇಷವಾದುದು. ಹಿರಿಯರನ್ನು ಕೇಳದೆ ಹತ್ತು ಪೈಸೆಯ ಹುರಿಕಡ್ಲೆ ತೆಗೆದುಕೊಳ್ಳುವುದೇ ಅಪರಾಧವೆಂದೆನ್ನಿಸಿದ ದಿನಗಳವು. ಕಿಸ್ಕಾರವನ್ನು ಪ್ರತ್ಯೇಕ ತಟ್ಟೆಯಲ್ಲಿಡುವಾಗ ಸಂಜೆ ಆರೂವರೆ ದಾಟಿಹೋಗಿತ್ತು. ಮಾಚಣ್ಣ ಮಗನೆ ಹೆಚ್ಚು ಹೂಕ್ಯೊದುದರಿಂದ ಚಾಕಲೇಟು ನನಗೆ ಸಿಗಲಿಲ್ಲ. ಅವನು ತಿನ್ನುವುದನ್ನು ನೋಡುತ್ತಾ ಕುಳಿತುದುದಾಯಿತು ಜೊಲ್ಲು ಸುರಿಸುತ್ತಾ. ಅನಂತರ ಮನೆಗೆ ಹೋಗಿ ಎಲ್ಲರನ್ನು ಪೂಜೆಗೆ ಕಳಿಸಿದೆ. ನಾನು ಮನೆಯಲ್ಲಿ ಉಳಿದುಕೊಂಡೆ.

ತಂದೆ ಆ ದಿನ ಎರಡು ಬಾಳೆ ಗೊನೆಯನ್ನು ಮಹಮ್ಮದ್ ಬ್ಯಾರಿಯ ಅಂಗಡಿಗೆ ಮಾರಿ ಬರುವಾಗ ರಾತ್ರಿ ಎಂಟು ಗಂಟೆ. ಮನೆಯಲ್ಲಿ ನನ್ನ ಒಬ್ಬನ ಹೊರತು ಯಾರೂ ಇಲ್ಲ. ತಂದೆ ಸ್ನಾನ ಮುಗಿಸಿ ಬಿಳಿಯ ಪಂಚೆ ಮತ್ತು ಹೆಗಲಿಗೆ ಒಂದು ಬೈರಾಸ ಹಾಕಿಕೊಂಡು ಹೊರಟರು. ಅವರ ಜೊತೆಗೆ ನಾನು, ಹೊರಡುವಾಗ ಅಪ್ಪನಿಗೆ ಹೇಳಿದೆ ಅಪ್ಪಾ ಎಲ್ಲರೂ ವೇಸ್ಟಿ ಉಟ್ಟುಕೊಂಡು (ವೇಸ್ಟಿಯೆಂದರೆ ತೆಳುವಿನ. ಅದು ಹೆಚ್ಚು ಬೆಲೆ ಬಾಳುವಂಥದ್ದು) ನೀವ್ಯಾಕೆ ಹೀಗೆ ಮಾಡ್ತಿರಾ? ಅದಕ್ಕೆ ತಂದೆ ಅಂದರು: 'ಅದನ್ನು ಕೊಂಡುಕೊಳ್ಳುವುದಕ್ಕೆ ಶಕ್ತಿ ಬೇಕು. ನೀನು ಕೆಲಸಕ್ಕೆ ಸೇರಿದ ಮೇಲೆ ನೀನೇ ಕೊಡಿಸು. ಮುಂದೆ ಈ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲ.' ಯಾಕೆಂದರೆ ನಾನು ಕೆಲಸಕ್ಕೆ ಸೇರುವ ವೇಳೆಯಲ್ಲಿ ತಂದೆಯವರು ಜೀವಂತ ಉಳಿಯಲಿಲ್ಲ.

ಮಾಚಣ್ಣನ ಮನೆಗೆ ತಲುಪಿದಾಗ ತಂದೆಯವರಿಗೆ 'ಬಾಯಾರಿಕೆ ಬೇಕಾ' ಅಂತ ಯಾರೂ ಕೇಳಲಿಲ್ಲ. ತಂದೆ ಬಾಯಿ ಬಿಟ್ಟು ಕುಡಿಯುವುದಕ್ಕೆ ಏನಾರೂ ಬೇಕಿತ್ತು. ಅಂದರು ಅದಕ್ಕೆ ಮಾಚಣ್ಣನ ಮಗ ಒಂದು ಲೋಟ ನೀರು ತಂದುಕೊಟ್ಟ. ತಂದೆಯವರು ಅವರ ಮನೆಯ ಚಾವಡಿಯಲ್ಲಿನ ಚೆಯರಿನಲ್ಲಿ ಕುಳಿತರು. ಸ್ವಲ್ಪ ಹೊತ್ತಿಗೆ ಅಲ್ಲಿಗೆ ಸುಬ್ಬಣ್ಣ ಬಂದಾಗ ಮಾಚಣ್ಣನ ಮಗ ಬಂದ: 'ನೀವು ಓ ಅಲ್ಲಿ ಕುಳಿತುಕೊಳ್ಳಿ' ಎಂದು ಹೇಳಿ ಸುಬ್ಬಣ್ಣನಿಗೆ ಚೆಯರಿನಲ್ಲಿ ಕುಳಿತುಕೊಳ್ಳಲು ಹೇಳಿದ ಮತ್ತು ಸುಬ್ಬಣ್ಣನಿಗೆ ಬಿಸಿ ಬಿಸಿಯಾದ ಕಾಫಿ ತಂದು ಕೊಟ್ಟ. ಊಟಕ್ಕೆ ಕುಳಿತುಕೊಳ್ಳುವಾಗಲೂ ಬಾಳೆಲೆಯ ಮುಂದೆ ಕುಳಿತ ನನ್ನ ತಂದೆಯನ್ನು ಎಬ್ಬಿಸಿ ಎರಡನೆಯ ಪಂಕ್ತಿಗೆ ಕೂತುಕೊಳ್ಳಲು ಹೇಳಿದ. ಹೀಗಾದುದು ಮಾತ್ರ ನನ್ನ ಮಟ್ಟಿಗೆ ದೊಡ್ಡ ಅವಮಾನ ಎಂದೆನ್ನಿಸಿತು. ನನ್ನ ಮನಸ್ಸಿನ ಮೇಲೆ ಗಾಢವಾಗಿ ಪ್ರಭಾವಿಸಿದ ಸಂಗತಿಗಳಿವು. ಅವಮಾನವು ಎಷ್ಟೊಂದು ರೀತಿಯ ಪಾಠವನ್ನು ಹೇಳುತ್ತದೆಯೆಂದರೆ ಅದನ್ನು ಜೀವಮಾನದಲ್ಲಿ ಒರಸಿ ಹಾಕಲು ಸಾಧ್ಯವಾಗುವುದಿಲ್ಲ. ತಂದೆ ಇದರಿಂದ ತುಂಬಾ ಯಾತನೆ ಅನುಭವಿಸಿರಬೇಕು – ಅದು ಅವರ ಅಂತರಂಗದಲ್ಲಿ ಗೊಡ್ಡು ಕಟ್ಟಿದ್ದಿರಬೇಕು. ಊಟಕ್ಕೆ ಕೂತವನನ್ನು ಎಬ್ಬಿಸಿದ್ದು

ಒಂದು ಕ್ರೌರ್ಯ ಅಂತಲೇ ಈಗಲೂ ಅನಿಸುತ್ತದೆ. ಮಹಾ ಸಂಕೋಚದ ಸಜ್ಜನಿಕೆಯ ವ್ಯಕ್ತಿಯಾಗಿ ತಂದೆ ಅನುಭವಿಸಿದ ಯಾತನೆ ತನ್ನ ಕಣ್ಣ ಮುಂದೆ ಸುಳಿಯುತ್ತಿದೆ. ಅದು ತನ್ನನ್ನು ಜಾತಿ ಮತ್ತು ಧರ್ಮದ ವಿರೋಧಿಯಾಗಿಸಿತ್ತು ಎಂದುಕೊಂಡಿದ್ದ ನಿಶಿತ.

ಇದ್ದಕ್ಕಿದ್ದಂತೆ ಒಂದು ಮಳೆಗಾಲದಲ್ಲಿ ಹಳೆಯ ಅಡಿಕೆಯ ಮರಗಳು ಸೊಂಟ ಮುರಿದುಕೊಂಡು ಬಿದ್ದವು. ನೆಟ್ಟ ಅಡಿಕೆಯ ಸಸಿಗಳು ಫಲಕೊಡಲು ಇನ್ನೂ ಕಾಯಬೇಕು ಅಂಥ ಪರಿಸ್ಥಿತಿಯಲ್ಲಿ ತಂದೆ ಕೈತುಂಬಾ: ಮೈತುಂಬಾ ಸಾಲ. ತಂದೆಯಾದವನ ಕಣ್ಣಲ್ಲಿ ಇರುವುದು ಮಕ್ಕಳ ಭವಿಷ್ಯ. ತಂದೆಯಾಗಿರುವುದು ಎಂದರೆ ಅಷ್ಟೆ: ಸಂಸಾರದ ಕಷ್ಟಗಳನ್ನು ಕರುಳಲ್ಲಿ ಇಟ್ಟುಕೊಂಡು ಬದುಕುವುದು. ನನ್ನ ತಂದೆ ಮಾಡಿದ್ದು ಅದನ್ನು: ಅಕ್ಕಿಯನ್ನು ಕೊಂಡುಕೊಳ್ಳುವುದಕ್ಕೆ ದುಡ್ಡಿಲ್ಲವಾದಾಗ ಮರಗೆಣಸು ತಿಂದರು. ಜೋಳ ತಿಂದರು, ಹಲಸಿನ ಕಾಯಿಯ ಪಲ್ಯ ಮಾಡಿ ಅನ್ನ ತಿನ್ನದೆ ಬದುಕಿದರು. ಕಷ್ಟಗಳು ಬೆನ್ನು ಹಿಡಿದು ನೆರಳಿನಂತೆ ಬಂದಾಗ ಹೋಟೆಲಿನಲ್ಲಿ ಚಟ್ನಿ ಹಾಕಿಕೊಟ್ಟರು. ಅಡುಗೆಗೆ ಹೋದರೆ ಕೊನೆಗೆ ಉಳಿದದ್ದು ಒಂದು ಆಕಾಶ ಮತ್ತು ಮನೆಯ ಎದುರಿನ ಹಲಸಿನ ಮರ ಮಾತ್ರ.

* * * * *

ಬಡವರು ಸತ್ತರೆ ಸುಡಲು ಸೌದೆಗಳಿಲ್ಲ, ಒಡಲುರಿಗಳೆ ಸೌದೆಗಳು

**1992**
**ಡಿಸೆಂಬರ್**
**24**

"ನನಗೆ ಉಂಟಾಗುವ ವಿಪರೀತವಾದ ಅಳುಕು ಒಂದೆರಡು ಕಾರಣಕ್ಕೆಂದು ನನಗೆ ಅನಿಸುತ್ತಿಲ್ಲ. ಇಷ್ಟು ವರ್ಷಗಳ ಕಾಲ ನಾನು ಗುಟ್ಟುಗಳನ್ನು ಹೀಗೆಯೇ ಕಾಯ್ದಿರಿಸಿಕೊಂಡಿದ್ದೇನೆ. ಈಗ ನಾನು ಇವುಗಳಿಂದ ವಿದಾಯ ಹೇಳುವ ಕಾಲ ಬಂದಿದೆ: ನಾನು ಮುಕ್ತವಾಗಬೇಕಾಗಿದೆ. ಹೇಳದೆ ಉಳಿದಿರುವ ಸಂಗತಿಗಳಿವೆ."

ಆ ದಿನಗಳು ನನ್ನ ಮಟ್ಟಿಗೆ ದಾರುಣವೆನಿಸಿದ ದಿನಗಳೂ ಹೌದು. ತುಂಬಾ ಕಷ್ಟ. ನಾನು ಆಗ ಓದಿದ್ದು ಕೇವಲ ಬಿ. ಎ. ಯಾರು ನನಗೆ ಕೆಲಸ ಕೊಡುತ್ತಾರೆ. ಯಾರು ನನಗಾಗಿ ಕಾದಿದ್ದಾರೆ? ಮಲ್ಲಿಗೆ ಒಂದೊಂದೇ ದಳಗಳನ್ನು ಪುಟ್ಟ ಮಕ್ಕಳು ಕಿತ್ತು ಬಿಸಾಡುವಂತೆ ನನ್ನ ಭಾವನೆಗಳು ನುಚ್ಚು ನೂರಾಗಿದ್ದವು. ಅಂಗೈಯಲ್ಲಿನ; ಹಣೆಯ ರೇಖೆಗಳು ನನ್ನ ಮಟ್ಟಿಗೆ ಅರ್ಥಹೀನವೆನಿಸಿದವು. ಗಂಟೆಗಟ್ಟಲೆ ಹೊರಗೆ ನೋಡುತ್ತಿದ್ದೆ. ಮಧ್ಯಾಹ್ನ ಊಟ ಮಾಡಿದರೆ ಮಾಡಿದೆ; ಬಿಟ್ಟರೆ ಬಿಟ್ಟೆ.

ಒಮ್ಮೊಮ್ಮೆ ತಂದೆಯ ನೆನಪು ಬರುತ್ತಿತ್ತು. ದಾರಿಯಲ್ಲಿ ಹೋಗುವ ಹುಡುಗಿಯರನ್ನು ಕಂಡಾಗ ಶಾಂಭವಿಯ ನೆನಪು. ನನ್ನ ಆ ವಯಸ್ಸಿನಲ್ಲಿ ಅದು ತಾರ್ಕಿಕವಾಗಿತ್ತು. ಬೀರದಕಟ್ಟೆಯ ತಾಳಮದ್ದಳೆಯಲ್ಲಿ ಅದು ನನ್ನ ಕಣ್ಣಂಚಿನ ನೀರಿಗೆ ಕಾರಣವಾಯಿತು. ಬೀರದಕಟ್ಟೆ ತಾಳಮದ್ದಳೆಗೆ ನಾನು ಹೋದದ್ದು ತುಂಬಾ ತಡವಾಗಿ. ಆಗ ನನ್ನಲ್ಲಿ ಅನೇಕ ಗೊಂದಲಗಳಿದ್ದು; ಅವುಗಳಿಗೆ ಒಂದು ತೀರವೆಂಬುದು ಇರಲಿಲ್ಲ. ಶ್ರಾವಣಮಾಸ. ಮಳೆಯ ಅಬ್ಬರ ಬೇರೇ. ಆ ದಿವಸ ನಾನು ಬೆಳಿಗ್ಗೆ ತಿಂಡಿ ತಿಂದಿರಲಿಲ್ಲ. ಮಧ್ಯಾಹ್ನ ಹಸಿವೆ ತಡೆಯಲು ಆಗದೆ ಶಾಮಣ್ಣನ ಹೋಟೆಲಿಗೆ ಹೋದರೆ ಅಲ್ಲಿ ಅವಲಕ್ಕಿ ಮತ್ತು ಸಜ್ಜಿಗೆ ಮಾತ್ರವಿತ್ತು. ಬೆಳಿಗ್ಗೆ ಮಾಡಿಟ್ಟ ಸಜ್ಜಿಗ ಬೇಡವೆಂದು ಅವಲಕ್ಕಿ ಮಾತ್ರ ತಿನ್ನುತ್ತಾ ಕೂತಿದ್ದೆ. ಆಗ ಮೇಲ್ಮನೆಯ ರಾಮಣ್ಣ ಬಂದರು. ಬಂದವರು ಬೀರದ ಕಟ್ಟೆಗೆ ಕರೆದರು. ಜೇಬು ಹುಡುಕಿದರೆ ನನ್ನ ಕೈಯಲ್ಲಿ ಆ ದಿವಸ ಇದ್ದದ್ದು ಒಟ್ಟು ಹತ್ತು ರೂಪಾಯಿ. ತಿಂಡಿ ಬಾಬ್ತು ಶಾಮಣ್ಣನಿಗೆ ಮೂರು ರೂಪಾಯಿ ಕೊಟ್ಟರೆ ನನ್ನ ಕೈಯಲ್ಲಿ ಮತ್ತೆ ಏಳು ರೂಪಾಯಿ ಮಾತ್ರ. ರಾಮಣ್ಣನಿಗೆ ನನ್ನ ಪರಿಸ್ಥಿತಿ ಅರ್ಥವಾಯಿತು. ಅವರೇ;

"ಈವತ್ತು  ಬೀರದ ಕಟ್ಟೆಯಲ್ಲಿ ತಾಳಮದ್ದಲೆ. ಇಲ್ಲಿಂದಲೇ ಹೋಗುವ ನಿನ್ನ ಖರ್ಚಿಗೆ ನಾನೇ ಕೊಡಿಸುತ್ತೇನೆ" ಎಂದರು.  ನಾನೂ ಹೊರಟೆ.

ಬೀರದಕಟ್ಟೆಗೆ  ಆ ಮಳೆಯಲ್ಲಿ ಇಬ್ಬರೂ ನಡೆದು ಕೊಂಡು ಹೊರಟೆವು. ಒಂದು ಗುಡ್ಡ ದಾಟಿ  ಅನಂತರ ಸ್ವಲ್ಪ ದೂರ ಅಡ್ಕದಲ್ಲಿ ನಡೆಯಬೇಕು. ಮಳೆ ಮತ್ತು ಗಾಳಿ. ಕೊಡೆಯು ಗಾಳಿಗೆ ಹಾರಿ ಹೋಗುತ್ತದೆಯೆಂದು ಇಬ್ಬರೂ ಮಡಿಸಿ ಹಿಡಿದು ಕೊಂಡೆವು. ಆ ಮಳೆಗೆ ಎಲ್ಲಿಯ ಕರುಣೆ? ಒದ್ದೆ ಮಾಡಿತು. ನಾವು ಅದರ ರಭಸಕ್ಕೆ ಪೂರ್ತಿಯಾಗಿ ಒದ್ದೆ ಆದೆವು. ನಮ್ಮಿಬ್ಬರ ಮುಖದ ಮೇಲೆ ಜೋರಾಗಿ ಮಳೆಯ ಹನಿಗಳು ಹೊಡೆಯತ್ತಿತ್ತು. ಮಳೆಗಾಲದಲ್ಲಿ ಅಡ್ಕದ ಮೇಲೆ ನಡೆಯುವ ಕಷ್ಟ ಯಾರಿಗೂ ಬೇಡ.  ನಮ್ಮ ಕಣ್ಣೆದುರಿಗೆಯೇ ಎದುರುಗಡೆಯಿರುವ ಹುಣಿಸೆಯ ಮರಕ್ಕೆ ಮಿಂಚು ಹೊಡೆಯಿತು. ಹುಣಿಸೆ ಮರ ಸುಟ್ಟು ಕರಕಲಾಯಿತು. ದೂರದಲ್ಲಿ ಮತ್ತೆ ಗುಡುಗು. ಗುಡುಗು ಮಿಂಚಿನ ಮಳೆಯು ಭಯಾನಕ. ಅಡ್ಕದಲ್ಲಿ ಯಾರೂ ಇಲ್ಲ. ನಾನು ರಾಮಣ್ಣ ಇಬ್ಬರೇ. ರಾಮಣ್ಣನ ಹಲ್ಲು ಕಟಕಟವೆನ್ನುತ್ತಿತ್ತು. 'ರಾಮಣ್ಣ, ಇನ್ನು ಈ ಮಳೆಗೆ ನಡೆಯಲು ಸಾಧ್ಯವಿಲ್ಲ' ಎಂದೆ. ಆ ವಿಶಾಲವಾದ ಅಡ್ಕದಲ್ಲಿ ಎಲ್ಲಿಯಾದರು ನಿಲ್ಲೋಣವೆಂದರೆ ಎಲ್ಲಿಯೂ ಜಾಗವಿಲ್ಲ. ಕೊನೆಗೆ ದಾರಿಯಿಲ್ಲವೆಂದು ಕೊಡೆ ಬಿಡಿಸಿ ಅಡ್ಕದ ಮೂಲೆಯಲ್ಲಿ ಕುಳಿತೆವು. ರಾಮಣ್ಣನ ಅಂಡರ್‌ವೇರಿನಲ್ಲಿ ಇದ್ದ  ಬೀಡಿಯನ್ನು  ತೆಗೆದರೆ ಅದೂ  ಒದ್ದೆ. ಒದ್ದೆಯಾದರೂ ಸರಿಯೇ  ಬೀಡಿಯನ್ನು  ತುಟಿಗಿಡದಿದ್ದರೆ  ಇಬ್ಬರೂ ಆ ಚಳಿಗೆ ಸತ್ತೆ ಹೋದೇವು ಎಂದು ಅನಿಸಿ, ಬೆಂಕಿಕಡ್ಡಿ ಗೀರಿದರೆ ಅದೂ ಕೈ ಕೊಟ್ಟಿತು. ಭಗೀರಥ ಪ್ರಯತ್ನ ಮಾಡಿ  ಕಡ್ಡಿ ಉರಿಸಿದೆವು. ಬೀಡಿಯ ಕನರು ಕುಡಿದೆವು. 'ಅಲ್ಲಾ, ರಾಮಣ್ಣ  ಈ ಮಳೆಗೆ ಇನ್ನೂ ಮೂರು ಮೈಲು ನಡೆಯುವುದು ಹೇಗೆ? ಈ ತಾಳಮದ್ದಲೆಯೂ ಬೇಡ, ಈ ಚಳಿಯೂ ಬೇಡ' ಎಂದೆ.

ರಾಮಣ್ಣ : 'ನಿನ್ನ ಪ್ರಾಯ ಎಷ್ಟು?'

ನಾನು : "ಇಪ್ಪತ್ತಮೂರು"

ರಾಮಣ್ಣ : 'ಕಲ್ಲು ತಿಂದು ಕರಗಿಸುವ ಪ್ರಾಯ ಇದು'

ನಾನು : 'ಮಳೆ ನೀರು ಜೋರಾಗಿದೆ'

ರಾಮಣ್ಣ : 'ಯಾಕೆ?

ನಾನು : 'ಮಳೆ ನೀರಿಂದ ತಿನ್ನುವುದಕ್ಕೆ ಕಲ್ಲು ಸಿಗುವುದು ಕಷ್ಟ'

ರಾಮಣ್ಣ ಬೀಡಿಯನ್ನು ಜೋರಾಗಿ ಎಳೆದು ಹೊಗೆಯನ್ನು ಸಣ್ಣ ಕರುಳಿಗೆ ಮುಟ್ಟಿಸಿ, 'ಈ ಸೂಳೆಮಗ ಪ್ರಯೋಜನ ಇಲ್ಲ' ಎಂದು ಬೀಡಿಗೆ ಶಾಪ ಹಾಕಿ;



22

ಅದನ್ನು ಮುರಿದು ಬಿಸಾಡಿದರು. ಜೋರಾಗಿ ಕ್ಯಾಕರಿಸಿ ಉಗಳಿದರು. ಮತ್ತೆ ಗಾಳಿ ಬಂತು. ಗಾಳಿಗೆ ಬೀಡಿಯು ನಂದಿ ಹೋಗದಿರಲಿ ಎಂದು ಅಡ್ಡ ಹಿಡಿದುಕೊಂಡದ್ದ ಅವರ ಕೊಡೆಯು ರಪಕ್ಕನೆ ಮುಖ ತಿರುಗಿಸಿತು. 'ಏನು ಹೇಳಿದೆ_ ತಿನ್ನುವುದಕ್ಕೆ ಕಲ್ಲು ಸಿಗುವುದು ಕಷ್ಟ ಅಂತಲೊ? ಹೊಯಿಗೆ ತಿಂದರೆ? ಆಯಿತು.' ಎಂದರು.

'ಅಲ್ಲ ರಾಮಣ್ಣ; ಈ ಮಳೆ ಬಿಡುವ ಲಕ್ಷಣ ಕಾಣುವುದಿಲ್ಲ. ಏನು ಇಲ್ಲಿಯೇ ನಾವು ತಾಳಮದ್ದಲೆ ಮಾಡುವುದೋ?' ಎನ್ನುತ್ತಾ ಮುಖದ ಮೇಲೆ ಬಿದ್ದ ಮಳೆ ನೀರನ್ನು ತೆಗೆದೆ. ರಾಮಣ್ಣ ಕೊಡೆಯೊಟ್ಟಿಗೆ ಸರ್ಕ್ಸ್ ಮಾಡುತ್ತಾ, 'ಏನು ವಾಪಾಸಾಗುವ ಲಕ್ಷಣ ಕಾಣುತ್ತಾ ಇದೆ' ಎಂದರು. ರಾಮಣ್ಣ ಹೇಳುವಾಗ ನಾನು ಎರಡು ವಿಷಯ ಆಲೋಚನೆ ಮಾಡುತ್ತಿದ್ದೆ, ಮತ್ತೆ ರೂಮಿಗೆ ಹೋದರೆ ರಾತ್ರಿಗೆ ನನ್ನ ಕಥೆ ಏನು? ರಾತ್ರಿ ಏನು ತಿನ್ನಲಿ? ಚಾ ಕುಡಿದು ಹಸಿವೆಯನ್ನು ಹಿಡಿದು ನಿಲ್ಲಿಸುವುದಾದರೂ ಎಷ್ಟು ಹೊತ್ತು? ಸ್ವಲ್ಪ ಹೊತ್ತಿಗೆ ಹೊಟ್ಟೆಯಲ್ಲಿ ಸಂಕಟ ಕಾಣಿಸಿಕೊಳ್ಳುತ್ತದೆ. ಕಣ್ಣುಕತ್ತಲೆ ಹೋದ ಹಾಗೆ ಆಗುತ್ತದೆ. ತಾಳಮದ್ದಲೆಯಲ್ಲಿ ಅರ್ಥ ಹೇಳಲು ಹೋದರೆ ರಾತ್ರಿಯ ಊಟಕ್ಕೆ ತೊಂದರೆಯಿಲ್ಲ; ಒಂದು ಸಮಸ್ಯೆ ಬಗೆಹರಿಯುತ್ತದೆ. ರೂಮಿನಲ್ಲಿ ಇದ್ದರೆ ಮಳೆ; ಸಂಜೆಯ ಏಕಾಂಗಿತನ; ಹಳತು ನೆನಪುಗಳು; ಕರುಳಿನಲ್ಲಿ ಉರಿ ಏಳಬೇಕೆಂದು ಅನಿಸುವುದು; ಆ ಹಿಂಸೆ–ಇವೆಲ್ಲಾ ಯಾರಿಗೆ ಬೇಕು? "ಇಲ್ಲ ರಾಮಣ್ಣ–ತಡವಾದ್ರೂ ಪರವಾಗಿಲ್ಲ; ತಾಳಮದ್ದಲೆಗೆ ಹೋಗುವ" ಎಂದೆ.

'ಹಾಗಿದ್ದರೆ ಹೋಗುವಾ' ಎಂದರು ರಾಮಣ್ಣ. ಅಂಗೈಯನ್ನು ಜೋರಾಗಿ ತಿಕ್ಕಿಕೊಂಡೆ. ಶೀತವೇರಿದ್ದ ಕೈಗೆ ಸ್ವಲ್ಪ ಬಿಸಿಯೇರಿತು. ಕೂತವನು ಎದ್ದು ನಿಂತೆ. ರಾಮಣ್ಣ ಕೂಡಾ ಎದ್ದು ನಿಂತರು. ಮತ್ತೆ ಜೋರಾಗಿ ಗುಡುಗಿತು. ಅದರ ತಂಗಿ ಮಿಂಚು ಆಕಾಶದಲ್ಲಿ ಒಮ್ಮೆಗೆ ಸುಳಿದು ಮಾಯವಾದಳು. ಗುಡುಗಿನ ಆರ್ಭಟ, ಮಿಂಚಿನ ವೈಯ್ಯಾರ; ಕೆಲವೇ ಕ್ಷಣದ ಹಿಂದೆ ಜೀವ ಕಳೆದು ಕೊಂಡ ಹುಣಸೆಮರ; ಎಲ್ಲವೂ ನನ್ನ ಜೀವನದ ರೂಪಕವಿರಬಹುದು ಎಂದು ಅನಿಸಿತು. 'ಸಂಸಾರ ಶರಧಿಯನು ದಾಂಟುವರು ಬನ್ನಿ– ಮೋಕ್ಷಗಾಮಿಗಳು' ಮೋಕ್ಷಪಥದಲ್ಲಿ ನಡೆವವರಿಗೆ ಇಹದ ಹಂಗೇನು ಎಂದೆನ್ನಿಸಿತು. ಅಪ್ಪ ಸತ್ತಾಗ ಇದ್ದುದೇನು? ಮೈಯಿಡೀ ಶೀತ ಕೋಡಿತ್ತು. ಕೆಲವು ಕ್ಷಣಗಳ ಹಿಂದೆ ಜೀವಂತವಿದ್ದ ಶರೀರ ಕಣ್ಣೆದುರು ಜೀವ ಕಳೆದುಕೊಂಡಿತು. ಎಷ್ಟು ಸಂಕಟವಾಯಿತೋ ಏನು ಕತೆಯೋ–ಜೀವ ಹೋಗುವ ಮೊದಲು ಅಪ್ಪ ಕೈ ಸನ್ನೆ ಮಾಡಿದ್ದರು. ಏನು ಹೇಳಿದರು ಅಂತ ತಿಳಿಯಲಿಲ್ಲ. ನಾಲಿಗೆಯ ಹುಣ್ಣು ಜಾಸ್ತಿಯಾಗಿತ್ತು. ನಾಲಿಗೆ ಹೊರಳುತ್ತಿರಲಿಲ್ಲ. ಬಾಯಿ

ತೆಗೆಯಲೂ ಆಗುತ್ತಿರಲಿಲ್ಲ. ಗಟ್ಟಿಮುಟ್ಟಾಗಿದ್ದ ಅಪ್ಪನ ಶರೀರ ಸಪೂರವಾದ ಕಡ್ಡಿಯಂತೆ ಆಗಿತ್ತು. ಬಾರ್ಲಿ ನೀರು ಗಂಟಲಲ್ಲಿ ಇಳಿಯುತ್ತಿರಲಿಲ್ಲ. ಏಡಿಹುಣ್ಣು ಎಂದರೆ ಏಡಿ ಹುಣ್ಣು. ಏಡಿ ಕಚ್ಚಿದಂತೆ–ಕೊಂಡಿಗಳು. ಬಿಗಿಯಾಗಿ ಅಪ್ಪನ ಗಂಟಲು ಹಿಡಿದುಕೊಂಡಿದೆ. ಬಾರ್ಲಿನೀರು ಕುಡಿಸಲು; ಸಣ್ಣದೊಂದು ಲೋಟದಲ್ಲಿ ಅದನ್ನು ತುಂಬಿಸಿದ್ದೆ ಒಂಚೂರು ಅವರ ಗಂಟಲಿಗೆ ನಿಧಾನವಾಗಿ ಎರೆಯತ್ತಾ ಹೋದೆ. ನುಂಗಲು ಕಷ್ಟ ಅನುಭವಿಸಿದರು. ಸಾಕೆಂದು ಸೂಚಿಸಿದರು. ಆ ದೇಹಕ್ಕೆ ಇದ್ದುದು ಹಸಿವೆಯೇ; ಬಾಯಾರಿಕೆಯೆ? ಕೆಲವು ನಿಮಿಷ ಅವರ ಕಣ್ಣು ಪಟಪಟನೆ ಹೊಡೆದುಕೊಂಡಿತು. ಗಂಟಲಿನಿಂದ ಸಣ್ಣನೆಯ ಗೂರಲು ಧ್ವನಿ. ತೆರೆದಿದ್ದ ಬಾಯಿ. ಒಮ್ಮೆ ಕಾಲು ಮುಟ್ಟಿದರು. ಕಾಲು ಮಡಿಸುತ್ತಾರೇನೋ ಎಂದುಕೊಂಡೆ. ಅವರಿಗೆ ಕಾಲು ಮಡಿಸುವಷ್ಟು ಶಕ್ತಿ ಇರಲಿಲ್ಲ. ಮೆಲ್ಲಗೆ ಅವರ ಕಾಲು ಮಡಿಸಿದೆ. ನೋವಾಯಿತು ಎಂದು ಕಾಣಿಸುತ್ತದೆ ಮುಖ ಕಿವುಚಿಕೊಂಡರು. ನಾನೂ ಏನೂ ಮಾಡುವಂತಿರಲಿಲ್ಲ. ನಾನು ಪುರುವಾಗಿರಲಿಲ್ಲ. ನನ್ನ ತಂದೆ ಯಯಾತಿಯೂ ಆಗಿರಲಿಲ್ಲ. ತಂದೆಯ ನೋವನ್ನು ಮಗನಾಗಿ ನಾನು ಪಡೆಯುವಂತಿರಲಿ; ಅದನ್ನು ಅನುಭವಿಸುವುದಕ್ಕೂ ಸಾಧ್ಯವಿರಲಿಲ್ಲ. “ಅಪ್ಪಾ ನೋವಾಗುತ್ತಿದೆಯಾ?” ಎಂದು ಕೇಳಿದ್ದೆ. ತಲೆಯಾಡಿಸಿದರು. ‘ಸ್ವಲ್ಪ ಸಹಿಸಿಕೊಳ್ಳಿ’ ಎಂದೆ. ನೋವು ಅನುಭವಿಸುವವನಿಗೆ ಗೊತ್ತು–ನೋವೆಂದರೇನು ಅಂತ. ಇದ್ದಕ್ಕಿಂದಂತೆ ಕೈ ಕಾಲುಗಳನ್ನು ಕುರುಕಿಸಿದರು. ಜೀವ ಹೊರಟೇಹೋಯಿತು. ತೆರೆದ ಅಪ್ಪನ ಕಣ್ಣುಗುಡ್ಡೆ ಅತ್ತಿತ್ತ ಹೊರಳುತ್ತಿಲ್ಲ. ಎದೆಗೂಡು ನಿಶ್ಶಬ್ದವಾಗಿದೆ. ಏಡಿಹುಣ್ಣಿಗೆ ಕರುಣೆಯಿಲ್ಲ. ಆ ಕ್ಷಣಕ್ಕಿಂತ ಅನಂತರದ ದಿನಗಳಲ್ಲಿಯೇ ಅಪ್ಪನ ಅಗಲಿಕೆಯ ನೋವು ನನಗೆ ಕಾಣಿಸಿತು. ಅರೆ ತೆರಿದಿದ್ದ ಅಪ್ಪನ ಕಣ್ಣು ಮುಚ್ಚಿದ್ದೆ. ಮಡಿಸಿದ ಕಾಲು ಮೆಲ್ಲಗೆಬಿಡಿಸಿದೆ.

ತಂದೆಯ ದೇಹವು ಈಗ ನಿಶ್ಚಲ ಚಲನೆಯಿಲ್ಲ. ಇನ್ನು ಅವರು ಕರೆದು ಮಾತಾಡುವುದಿಲ್ಲ. ಮನೆಯಂಗಳದ ಎದುರಿನ ತೊಂಡೆ ಚಪ್ಪರದಡಿ ನಿಂತು ಹಲ್ಲು ಉಜ್ಜುವುದಿಲ್ಲ. ಬಾಯಿ ಮುಕ್ಕುಳಿಸುವುದಿಲ್ಲ ತಿಂಗಳಾನುಗಟ್ಟಲೆ ಏಡಿಹುಣ್ಣಿನ ಜೊತೆ ಯುದ್ಧ ಮಾಡಿ ಸಾಕಾಗಿದ್ದ ಜೀವ ಅವರ ದೇಹವನ್ನು ಬಿಟ್ಟು ಹೋಗಿದೆ. ನಿಜವಾಗಿಯೂ ಆ ಕ್ಷಣವನ್ನು ನಾನು ಹೇಗೆ ಎದುರಿಸಿದೆನೋ ಆ ದೇವರೇ ಬಲ್ಲ. ಅವರ ಕೈಗಳು ಆ ಕಡೆ ಈಕಡೆ ಬಿದ್ದಿದ್ದು, ಅವುಗಳನ್ನು ಮೆಲ್ಲಗೆ ಮುಟ್ಟಿದೆ. ಎಲ್ಲಿ ಅವರಿಗೆ ನೋವಾಗುತ್ತದೆಯೋ ಎನ್ನುವಂತೆ ಮೆಲ್ಲಗೆ ಅವರ ಕೈಗಳನ್ನು ಮೇಲೆತ್ತಿ ಅವರ ಎದೆ ಮೇಲಿಟ್ಟೆ. ಕಾಲುಗಳನ್ನು ಹತ್ತಿರ ಜೋಡಿಸಿದೆ. ತುಂಬಾ ಹೊತ್ತಾದರೆ ಮತ್ತೆ ಅವುಗಳನ್ನು ಮಡಿಸುವುದು ಕಷ್ಟವಿತ್ತು. ಅವರ ಅರೆ ತೆರೆದ ಕಣ್ಣುಗಳನ್ನು ಮುಚ್ಚಿದೆ. ಅವರ ಬಾಯಿ ತೆರೆದಿತ್ತು. ಸಾಯುವ ಗಳಿಗೆಯಲ್ಲಿ

ವಿಪರೀತ ನೋವು ಅನುಭವಿಸಿದಂತೆ ಕಾಣಿಸುತ್ತಿತ್ತು. ಒಮ್ಮೆಗೇ ಅವರು ಉಸಿರು ಬಿಟ್ಟಿದ್ದರೆಂದು ಕಾಣಿಸುತ್ತದೆ. ಅವರತೆರೆದ ಬಾಯಿ ಅದನ್ನು ಸೂಚಿಸುತ್ತಿತ್ತು. ಅವರ ತೆರೆದ ಬಾಯಿಯನ್ನು ಮುಚ್ಚಲು ಹೋದೆ. ಅವರ ಬಾಯಿಯನ್ನು ಮುಚ್ಚುವುದಕ್ಕೆಂದು ಕೆಳಗಲ್ಲವನ್ನು ಒತ್ತುವ ಪ್ರಯತ್ನ ಮಾಡಿದೆ. ಹಲ್ಲಿನ ನಡುವೆ ಅವರ ನಾಲಗೆ ಸಿಕ್ಕಿತ್ತೆಂದು ಅನಿಸಿತು. ಅವರ ಕೆಳ ಗಲ್ಲವನ್ನು ಒತ್ತುವುದು ನಿಲ್ಲಿಸಿದೆ. ನನ್ನ ತೋರು ಬೆರಳುಗಳಲ್ಲಿ ಅವರ ನಾಲಗೆಯನ್ನು ಸರಿಸಿದೆ. ಸಾಯುವ ಮೊದಲು ಅವರ ನಾಲಗೆಯನ್ನು ಇನ್ನಿಲ್ಲದಂತೆ; ನಳಚಕ್ರವರ್ತಿಗೆ; ರಾಜಾ ವಿಕ್ರಮರಂತವರಿಗೆ ಕಾಡಿದ ಶನಿಯಂತೆ-ಅಪ್ಪನ ನಾಲಗೆಯನ್ನು ಕಾಡಿದ ಏಡಿಹುಣ್ಣು ಅವರ ನಾಲಗೆಯನ್ನು ದಪ್ಪ ಮಾಡಿತ್ತು. ಅವರ ನಾಲಗೆ ದಪ್ಪವಾಗಿತ್ತು, ಗಂಟಲ ಭಾಗ ಊದಿಕೊಂಡಿತ್ತು. ಅಪ್ಪನ ಬಾಯೊಳಗೆ ಕೈಹಾಕಿದಾಗ ಎಲ್ಲಿ ನೋವಿನಿಂದ ಕಿರುಚುತ್ತಾರೊ ಎಂದು ಅನಿಸಿತು. ಅವರ ಬಾಲ್ಯದಲ್ಲಿ ಅವರ ಅಮ್ಮ ಅವರ ನಾಲಗೆಗೆ ಕೈ ಹಾಕಿದ್ದು ಬಿಟ್ಟರೆ ಮತ್ಯಾರು ಅವರ ಬಾಯಿಗೆ ಕೈ ಹಾಕಿದ್ದಿರಲಿಕ್ಕಿಲ್ಲ. ಜೀವಂತವಿದ್ದರೆ ಅವರು ಬಾಯಿಗೆ ಕೈಹಾಕಲು ಬಿಡುತ್ತಿರಲಿಲ್ಲ. ಆಗ ನಾನು ನನ್ನ ಕೆಳತುಟಿಯನ್ನು ಕಚ್ಚಿಕೊಂಡಿದ್ದೆ. ಮನೆಯಲ್ಲಿ ದುಃಖ ಹರಡಿಕೊಂಡತ್ತು. ಒತ್ತಿಕೊಂಡು ಬಂದ ಕಣ್ಣೀರು ಕೋಡಿಗಳ ನಡುವೆ ಅಮ್ಮ ತಂಗಿ ತಮ್ಮ ಅಕ್ಕ ಕುಳಿತಿದ್ದರು. ಅವರ ಕಣ್ಣುಗಳು ಅತ್ತು ಅತ್ತು ಕೆಂಪಾಗಿದ್ದವು.

ನನಗೆ ಸಾಧ್ಯವಾದಷ್ಟು ತಂದೆಯ ನಾಲಗೆ ಮಡಿಚಿ, ಅವರ ಬಾಯಿ ಮುಚ್ಚುವಂತೆ ನೋಡಿಕೊಂಡೆ. ಸಾವು ಎಂಬುದು ಅನಪೇಕ್ಷಿತ. ಆದರೂ ಅದು ಬರುತ್ತದೆ. ಅದಕ್ಕೆ ಯಾರೂ ಆಮಂತ್ರಣ ಕೊಡಬೇಕಾಗಿಲ್ಲ. ಬಾ ಕುಳಿತುಕೊ ಎಂದು ಕರೆಯಬೇಕಾಗಿಲ್ಲ. ಬರುವ ಸಮಯಕ್ಕೆ ಸರಿಯಾಗಿ ಬಂದು ನಮ್ಮ ನಮ್ಮ ಜೀವ ಎಳೆದು ಕೊಂಡೊಯ್ಯುತ್ತದೆ. ಬರುವ ಕಾಲಕೆ ಏನು ಮಾಡಿದರೂ ಹೇಳಿದ್ದು ಕೇಳುವುದಿಲ್ಲ. ನಾವು ತಿನ್ನುವ ಮಾತ್ರೆಗಳು, ಕುಡಿಯುವ ಔಷಧಿಗಳು ಅದನ್ನು ಬರಬೇಡವೆಂದು ಹೇಳಬಹುದು- ಅಷ್ಟೇ! ಮಾತ್ರೆಗಳು ಕೂಡಾ-ಸಾವಿನ ಕುಣಿಕೆಯಲ್ಲಿ ನಿರ್ವೀಯವಾಗುತ್ತವೆ. ಈವತ್ತು ತಂದೆ; ನಾಳೆ ನಾನು. ಸರದಿ ಬಂದಾಗ ಬಿಟ್ಟು ಹೊರಡಬೇಕು. ನಾಳೆ ಇವರು ದೈವಾಧೀನರಾದರು ಎಂಬುದು ಬಿಟ್ಟರೆ- ಇವರ ಪುಣ್ಯತಿಥಿಯೆಂದು ಬಿಳಿಯ ಕಾಗದದಲ್ಲಿ ಬರೆದು ಬಂಧು ಬಾಂಧವರನ್ನು ಕರೆಯುತ್ತಾರೆ. ಅಷ್ಟು ಬಿಟ್ಟರೆ ಮತ್ತೇನು ಇರುತ್ತದೆ.? ಕಾಲ ಅನಂತ. ಕಾಲದ ಜೊತೆಗಿನ ಸಾಂಗತ್ಯ ಯಾರಿಗೂ ಇಲ್ಲ. ಜೀವನವು ಮುಕ್ತಾಯಕ್ಕೆ ಬರುತ್ತಿರುವಂತೆ ನಾವು ನಮ್ಮ ಬದುಕಿನ ಕೊನೆಯ ಚರಣಗಳನ್ನು ಹೇಳುತ್ತೇವೆ. ತಂದೆಯ ಸಾವು ಬದುಕಿನ ಉದ್ದಕ್ಕೂ ಕಾಡುತ್ತದೆಯೆಂದು ಹೊಳೆದಿರಲಿಲ್ಲ.

ಈವತ್ತು ಜೀವಂತವಿದ್ದ ವ್ಯಕ್ತಿಯು ಮುರುಗಳಿಗೆಯಲ್ಲಿ ಸಾವನ್ನು ಅಪ್ಪಿಕೊಳ್ಳುವುದೆಂದರೇನು? ಹುಟ್ಟು ಸಂಭ್ರಮ, ಸಾವು ಭಯಾನಕ. ಒಂದು ಪ್ರಾರಂಭಿಸುತ್ತಾ ಕೀಲಿ ತಿರುಗಿಸುತ್ತದೆ. ಮತ್ತೊಂದು ಸಾಕಿನ್ನು ಹೊರಡು ಎಂದು ಹೇಳುತ್ತದೆ. ತಂದೆಯ ಸಾವು; ಶಾಂಭವಿಯ ಅಪ್ಪಟ ಪ್ರೇಮಕ್ಕೆ ನಾನು ಶರಣು ಹೊಂದಿದೆನೆ –ತಿಳಿಯುತ್ತಿಲ್ಲ. ಆ ವಿಷಯಗಳೆರಡು ಜೊತೆಯಲ್ಲಿ ಬಂದುದು ನಿಜ. ಅವನ್ನು ಬಿಡಿಸಿಕೊಳ್ಳಲಾಗಲಿಲ್ಲ.

ಹಲಸಿನ ಮಯಣವಾದರೆ ಅದನ್ನು ತೆಂಗಿನೆಣ್ಣೆ ಹಾಕಿ ತೆಗೆಯಬಹುದು. ಗೇರುಬೀಜದ ಸೊನೆಯಾದರೆ ಕಲೆಯಾಗದ ಹಾಗೆ ನೋಡಿಕೊಳ್ಳಬಹುದು. ಆದರೆ ಸಂಬಂಧಗಳು ಹಾಗೆಯೇ? ಅದನ್ನು ಒರಸಿ ಹಾಕುವುದಾದರು ಹೇಗೇ? ತಂದೆಯದು ಆಕಸ್ಮಿಕ ಸಾವಲ್ಲ. ಏಡಿಹುಣ್ಣು ಅವರನ್ನು ಬಲಿ ತೆಗೆಯಿತು. ತಂದೆ ಸಾಯುವಾಗ; ಅಲ್ಲ ಅವರು ಸಾಯುವ ಧೈರ್ಯ ಮಾಡಿದಾಗ; ಅವರಿಗೆ ಏಡಿ ಕಚ್ಚಿದೆಯೆಂದು ತಿಳಿಯದಿದ್ದರೂ ಕೂಡಾ ರೋಗವೊಂದು ಬಂದು ನಾಲಗೆಯಲ್ಲಿ ಕುಳಿತಿದ್ದಾಗ ಸಾವೇ ನಿಶ್ಚಿತವಂದು ಅರಿವಿದ್ದರೂ ಅದನ್ನು ಯಾವ ಚೈತನ್ಯದಲ್ಲಿ ಎದುರಿಸಿದರು? ಶಾಂಭವಿಯು ಎರಡೇ ನಿಮಿಷದಲ್ಲಿ ನಿನ್ನ ಸಹವಾಸ ಸಾಕೋ ಮಾರಾಯಾ ಎಂದು ಕೈ ತೊಳೆದಾಗ ಅವಳಿಗೆ ಏನೂ ಅನಿಸಲಿಲ್ಲವೇ? ಮನಸೆಂಬುದು ಅತ್ತಿಯ ಹಣ್ಣೆ ಬಿಚ್ಚಿ ತೋರುವುದಕ್ಕೆ? ಎಲ್ಲಿಯಾದರು ಮನಸ್ಸು ಬಿಚ್ಚಿ ತೋರಿಸುವಂತಿದ್ದರೆ ಅದರೊಳಗಿಂದ ಪಿತಪಿತನೆ ಎಷ್ಟು ಹುಳಗಳು ಬೀಳುತ್ತಿದ್ದವೊ ಏನೋ? 'ಪ್ರಜ್ಞೆಯೆಂಬುದು ತೊಳೆದಿಟ್ಟ ಕನ್ನಡಿಯಲ್ಲ, ನಮ್ಮ ಗ್ರಹಿಕೆಗೆ ಅನುಸಾರವಾಗಿ ಮನುಷ್ಯರನ್ನು ನೋಡುತ್ತೇವೆ.' ಕಾಲಿನ ಮೇಲೆ ಗಮನವಲ್ಲ–ಮನಸ್ಸಿನ ಮೇಲೆ ಗಮನವಿರಬೇಕು. ಇದನ್ನೇ ಆಲೋಚಿಸುತ್ತಿದ್ದೆ.

"ಏನು ನಿನಗೆ ಚಳಿಯಾಗುವುದಿಲ್ಲವಾ?" ರಾಮಣ್ಣ ಕೇಳುವದಕ್ಕೂ; ಆ ಜಡಿ ಮಳೆಯಲ್ಲಿ ನನ್ನ ಕಾಲು ಜಾರುವದಕ್ಕೂ ಸರಿ ಹೋಯಿತು. ಆ ಅಡ್ಕದಲ್ಲಿ ದೊಪ್ಪನೆ ಬಿದ್ದೆ. ಕೆಸರು ಮೈಮೇಲೆ ಎರಚಿತು. ಮುಖದಲ್ಲಿ ಕೆಸರು. ಬಟ್ಟೆಯಲ್ಲಿ ಕೆಸರು. ಗರಿಕೆ ಹುಲ್ಲಿನಲ್ಲಿ ತಕ್ಷಣ ಕಾಲು ಜಾರಿತು ಅಷ್ಟೇ–ಮಳೆಗಾಲದಲ್ಲಿಯೂ ಕಾಲು ಜಾರದಿದ್ದವನೇ ಹೆಡ್ಡ! ಅಲ್ವೋ ಮಾರಾಯ, ಪ್ರಾಯ ಇದೆ ಅಂತ ಎಲ್ಲೆಲ್ಲಾ ಜಾರುವುದಾ? ಜಾರಿ ಬಿದ್ದರೆ–ಜಾರಿ ಬಿದ್ದಿದ್ದಾನೆ ಅಂತ ಯಾರಿಗೂ ಗೊತ್ತಾಗಬಾರದು, ಅದರಲ್ಲಿ ಇರುವುದು ಹಿಕ್ಮತ್. ನಮ್ಮ ಶರೀರವೆಂದರೆ ಅದೇನು ಹಲಸಿನ ಕಾಯಿಯ? ಹಲಸಿನ ಕಾಯಿಯಾದರೂ ಜೋರು ಬಿದ್ದರೆ ಬಾಯಿ ತೆಗೆಯುತ್ತದೆ. ನಿನಗೆ ಗೊತ್ತುಂಟಾ? ಎಂದು ರಾಮಣ್ಣ ನಗುತ್ತಾ ಕೇಳಿದರು. ನಾನೇ ಏನು ಆಗಿಲ್ಲವೆಂದೆ. ಪೆಚ್ಚು ನಗೆ ಬೀರಿದೆ. ಮೈಮೇಲೆ ಆದ ಕೆಸರನ್ನು ಸ್ವಲ್ಪ

ತೊಳೆಯ ಬೇಕೆಂದುಕೊಂಡು ಅಲ್ಲಿಯೇ ಇದ್ದ ನೀರನ್ನು ನನ್ನ ಬಟ್ಟೆಯ ಮೇಲೆ ಚೆಲ್ಲಿಕೊಂಡೆ. ಕೆಸರು ಪೂರ್ತಿ ಹೋಗುವುದಂತು ಸಾಧ್ಯವಿರಲಿಲ್ಲ.:

"ಪ್ರೇಮವು ಅನಿಕೇತನ

ಪ್ರೇಮವು ಚಿರನೂತನ

ಪ್ರೇಮವೆಂಬುದು ದೈವ ಸ್ವರೂಪ

ಬಾಳಬೆಳಗುವ ನಂದಾದೀಪ"

ಸುಮ್ಮನೆ ಯಕ್ಷಗಾನದ ಹಾಡು ಗೊಣಗಿದೆ. ಮನಸ್ಸಿನಲ್ಲಿ ಮತ್ತೆ ಮೊರೆತ. ರಾಮಣ್ಣ "ಹೇಳುವುದಾದರೂ ಸರಿಯಾಗಿ ಹೇಳಬಾರದಾ"? ಎಂದು ಕೇಳಿದರು. "ಪೇಳಲೇನದ ಹಿಂದೆ ನೀಳ ಶರಧಿಗೆ"........ ಎಂದು ಜೋರಾಗಿ ಹೇಳಿದೆ.

ರಾಮಣ್ಣ 'ಝಂಪೆ ತಾಳ, ಭೈರವಿ ರಾಗ' ಎಂದರು.

ನಾನು: ನೀರಿನಲ್ಲಿ ನನ್ನ ಹವಾಯಿ ಚಪ್ಪಲಿ ತೊಳೆದೆ.

"ನೀನೆಂತ ಹೆಡ್ಡನೋ ಮಾರಾಯ, ಈ ಮಳೆಗಾಲದಲ್ಲಿ ಅದೂ ನೆಲ ಜಾರುವ ಸಮಯದಲ್ಲಿ ಕಾಲಿಗೆ

ಹಾಕಿಕೊಳ್ಳುವುದಕ್ಕೆ ಬೇರೆ ಯಾವ ಚಪ್ಪಲಿಯೂ ದೊರೆಯಲಿಲ್ಲವೋ? ಹೋಗಿ ಹೋಗಿ ಮತ್ತೆ ಈ ಮಳೆಗಾಲದಲ್ಲಿ ಕಾಲಿಟ್ಟರೆ ಘುಸಕ್ಕನೆ ಜಾರುವ ಚಪ್ಪಲಿ ಬೇರೆ ಕೇಡು" ಎಂದರು. ಮತ್ತೆ ಹೇಳಿದರು. "ಈ ಮಳೆ ಹೇಗೆ ಹಿಡಿದುಕೊಂಡಿದ್ದರೆ-ಹುರಿದ ಹುಣಿಸೆಯ ಬೀಜ ಬಾಯಿಗೆ ಹಾಕಿಕೊಂಡರೆ ಅದನ್ನು ಜಗಿಯ ಬೇಕೂಂತ ಇಲ್ಲ. ಕಟಕಟ ಅಂತ ಹೇಳುವ ನಮ್ಮ ಹಲ್ಲೆ ಹುಣಿಸೆಯ ಬೀಜವನ್ನು ಪುಡಿಪುಡಿ ಮೂಡುತ್ತದೆ."

ನಾನು : "ಹುಣಿಸೆಯ ಬೀಜವೊ ? ಕೋಳಿಯ ಕಾಲೋ"

ರಾಮಣ್ಣ : "ನಿಮಗೇನು ಗೊತ್ತು ಬಾಳೆಯ ದಿಂಡು ತಿನ್ನುವವರಿಗೆ?"

ನಾನು : ಕೋಳಿ ಅಷ್ಟು ರುಚಿಯಾ?"

ರಾಮಣ್ಣ : ನೀವು ಭಟ್ರುಗಳೆಂದರೆ: ನಿಮಗೆ ಸರಿಯಾಗಿ ತಿನ್ನುವುದಕ್ಕೆ ಸರಿಯಾಗಿ ಗೊತ್ತಿಲ್ಲ ಮಾರಾಯ.

"ದಿಂಡು ತಿಂದರು

ದಾರಿಲ್ದೇತರು

ಕುಂಡೆ ತೊಳೆಯದೆ

ಮನೆಗೆ ಹೋದರು." ಅಷ್ಟೇ!

ನಾನು : ನಿಮಗೆ ಮತ್ತೊಂದು ಗೊತ್ತಿಲ್ಲವೆಂದು ಕಾಣುತ್ತದೆ. ಶೆಟ್ಟರ ಹೊಟ್ಟೆ ಉಪ್ಪಿನ ಮರಿಗೆ'

ರಾಮಣ್ಣ : ಏನು ಹೊಟ್ಟೆನೋ ಮಾರಾಯ? ಸರಿಯಾಗಿ ಹೇಳಿದರೆ ನಮಗೆ ಅಬ್ಬರವೇ ಜಾಸ್ತಿ. ಶೆಟ್ರರ ಅಬ್ಬರ ಏನೂಂತ ನಿನಗೆ ಗೊತ್ತಲ್ವಾ?

ನಾನು:– 'ಗೊತ್ತುಂಟು ಗೊತ್ತುಂಟು;'

ಮಾತಾಡುತ್ತಾ ಅಡ್ಕದಿಂದ ಕೆಳಗಿಳಿಯ ತೊಡಗಿದೆವು. ಗಿಡ ಮರಗಳು ಒಳ್ಳೆಯ ಸ್ನಾನ ಮಾಡಿದ ಸಂಭ್ರಮದಲ್ಲಿದ್ದವು. ಸುಟ್ಟ ಹುಣಿಸೆಯ ಮರವು ಅಸೂಯೆಯಿಂದ ನೋಡಿದಂತೆ ಭಾಸವಾಗುತ್ತಿತ್ತು ಅದರ ಮುಖವು ಕಂಗಾಲಾಗಿತ್ತು. ತುಂಬಾ ನೀರು ಕುಡಿದ ಗೇರುಮರಗಳು ಆ ಕಡೆ ಈ ಕಡೆ ಹಸಿರೆಲೆಗಳನ್ನು ತೂಗುತ್ತಾ ಬನ್ನಿ ಬನ್ನಿ ಎಂದು ವೈಯಾರದಿಂದ ಕರೆಯುವಂತೆ ಕಾಣಿಸುತ್ತಿತ್ತು. ನಾವು ಬೀಜ ಹಾಕಿ ನೆಟ್ಟ ಮರಗಳೆ ಮುಖ ಸೊಟ್ಟ ಮಾಡಿಕೊಂಡಿರುತ್ತವೆ. ಎಷ್ಟೇ ನೀರು ಗೊಬ್ಬರ ಹಾಕಿದರೂ ಕಾನ್ವೆಂಟ್ ಹುಡುಗಿಯರ ಹಾಗೆ ಕೂ ಹು ಹು; ಎನ್ನುತ್ತವೆ. ಬಿಸಿಲು ಬಂದರೆ ತಲೆ ಕೆಳಗೆ ಮಾಡುತ್ತವೆ. ನೀರು ನೀರು ಎನ್ನುತ್ತವೆ. ಹೆಚ್ಚು ಮಳೆ ಬಂದರೆ ಶೀತ ಶೀತ ಎನ್ನುತ್ತವೆ. ಅಂಗಳದ ಗಿಡಗಳ ಸೊಡ್ಡು ನೋಡಿದರೆ ಸಿಟ್ಟು ಬರುತ್ತದೆ.ಕಾಡಿನ ಮರಗಳು ಹಾಗಲ್ಲ. ಯಾರಾದರೂ ನೀರು ಹಾಕಿ ಅಂತ ಕಾಯುವದಿಲ್ಲ. ಗೊಬ್ಬರ ಕೊಡಿ ಅಂತ ಬೇಡುವುದಿಲ್ಲ. ಒಂದರ ಕೈಹಿಡಿದು ತಲೆಯೆತ್ತಿ ನಿಲ್ಲುತ್ತವೆ. ಹೌದು, ನಾನೇಕೆ ಬೇರೆಯವರು ಬಂದು ಕೈ ಹಿಡಿದು ಎತ್ತಲಿ ಎಂದು ಕಾಯಲಿ? ಏನಾಗಿದೆ ನನಗೆ? ಮನಸ್ಸು ಅಸ್ತವ್ಯಸ್ತಗೊಂಡಾಗ ಇನ್ನೊಬ್ಬರು ಹೇಳುವ ಮಾತು ನಮಗೆ ಕೇಳಿಸುವುದೇ ಇಲ್ಲವಲ್ವಾ?

ರಾಮಣ್ಣ; ಎಲ್ಲಿ ನೋಡ್ತಿಯೋ ಮಾರಾಯ? "ಎಲ್ಲಿ ಕಾಲಿಡುತ್ತೇವೆಯೋ ಅಲ್ಲಿ ನಮ್ಮ ಮನಸ್ಸಿರಬೇಕು. ಆಟದವನಾದ ನಿನಗೆ ಕಲಿಸಿಕೊಡಬೇಕಾ?"

ಮತ್ತೆ ನಮ್ಮ ಮಾತು ಮುಂದುವರಿಯುವ ಹವಣಿಕೆಯಲ್ಲಿತ್ತು. "ಸರಿ ರಾಮಣ್ಣ' ಎಂದೆನಾದರೂ ನನ್ನ ಮನಸ್ಸು ಆಮೆ ಚಿಪ್ಪಿನಿಂದ ಹೊರಗೆ ಬರಲಿಲ್ಲ.

ರಾಮಣ್ಣ : "ಒಳ್ಳೇ ಖಡಕ್ ಚಾ ಇದ್ದರೆ ಕುಡಿಯಬಹುದಿತ್ತು."

ನಾನು : "ಕುಡಿಯುವ ವಿಷಯ ಹಾಗಿರಲಿ; ಮೊದಲು ನಾವು ತಾಳಮದ್ದಲೆಯ ಜಾಗಕ್ಕೆ ಹೋಗುವ. ಈ ಮಳೆಯಲ್ಲಿ ಹೊತ್ತು ಎಷ್ಟಾಯಿತು ಅಂತ ತಿಳಿಯುವುದಿಲ್ಲ."

ರಾಮಣ್ಣ : 'ಹೊತ್ತು ಕಟ್ಟಿಕೊಂಡು ನಾವೇನು ಮಾಡುವುದು? ಗೊತ್ತು ಮಾಡಿದಲ್ಲಿಗೆ ನಾವು ಮುಟ್ಟಿದರೆ ಸೈ.' ನಾನು: 'ನಮಗೀಗ ಹೊತ್ತು ಇಲ್ಲ; ಸರಿಯಾದ ಗೊತ್ತು ಇಲ್ಲ' ರಾಮಣ್ಣ: "ತಾಳಮದ್ದಲೆಯವರಿಗೆ ಹೊತ್ತೇನು ಗೊತ್ತೇನು? ಎಲ್ಲಾ ಒಂದೇ ಹೊತ್ತು ಹೋಗುತ್ತದೆ. ರಾಮಣ್ಣ ಮತ್ತು ನಾನು ಆ ಅಡ್ಕದಲ್ಲಿ ಇಬ್ಬರೇ ಇದ್ದೆವು. ನಮ್ಮ ಹಾಗೆ ಆ ಮಳೆಯಲ್ಲಿ ಯಾರು ಮನೆಯಿಂದ ಹೊರಗೆ ಬರಲು ಹುಚ್ಚೇ? ನಾವೋ ನಮ್ಮ ತಾಳಮದ್ದಳೆ ಕತೆಯಿಂದ ಚಳಿಗೆ ಸಿಕ್ಕಿದ್ದೆವು ಅಷ್ಟೇ. ಅಡ್ಕದಿಂದ ಕೆಳಗಿಳಿದ ಕೂಡಲೇ ಸಿಕ್ಕಿದ್ದು ಒಂದು ಸಣ್ಣ ಕಾಡು. ಸಣ್ಣ ಕಾಲು ಹಾದಿ. ಹೆಚ್ಚು ಜನರು ಓಡಾಡುವ ದಾರಿಯಲ್ಲವೇನೊ ಎಂದು ಭಾಸವಾಗುತ್ತಿತ್ತು. ಅದರ ನಡುವೆ ನಡೆಯುವಾಗ ಅಬ್ಬರದ ಮಳೆಯು ಕಡಿಮೆಯಾಗತೊಡಗಿತು. ಮಳೆ ಸಣ್ಣಕಾಯಿತೊ ಏನೊ? ಅಥವಾ ಗೇರುಬೀಜ; ಮಾವು; ಕುಂಟಾಲ; ಸರೊಳಿ; ಗಿಡಗಳ ನಡುವೆ ನಡೆವಾಗ ಆ ಅನುಭವವಾಯಿತೋ ಏನೋ? ಅವುಗಳ ನಡುವೆ ಗಾಳಿ ಕಡಿಮೆಯಾಗತೊಡಗಿತ್ತು. ದೊಪ ದೊಪನೆ ಬೀಳುವ ಅಡ್ಡಮಳೆ ಕಡಿಮೆಯಾಗತೊಡಗಿತು. ನಮ್ಮ ದೇಹದ ಎಡ ಬಲ; ತಲೆಯ ಬಾಗ ಒದ್ದೆಯಾಗಿದ್ದುದರಿಂದ ಚಳಿ ಜಾಸ್ತಿಯಾಯಿತು. ಮರದ ಕೆಳಗೆ ನಡೆಯುವಾಗಲಂತು ಇನ್ನು ಕಷ್ಟವಾಯಿತು. ಮರದ ಸಪ್ಪುಗಳಿಂದ; ಗೆಲ್ಲುಗಳಿಂದ ದೊಡ್ಡ ದೊಡ್ಡ ಹನಿಗಳು ತಲೆಯ ಮೇಲೆ ಹರಳು ಕಲ್ಲುಗಳಂತೆ ಬೀಳುತ್ತಿದ್ದವು. ಸಣ್ಣ ಕಾಲು ಹಾದಿಯಾಗಿರುತ್ತಿದ್ದುರಿಂದ ಸಣ್ಣ ಸಣ್ಣ ಗಿಡಗಳು ಕಾಲಿಗೆ ತಾಗುತ್ತಿದ್ದವು. ಆ ಕಾಲು ಹಾದಿಯಲ್ಲಿ ಜನ ಓಡಾಡುತ್ತಿದ್ದುದರಿಂದ ಭೂಮಿಯು ಸಾರಿಸಿಟ್ಟ ನೆಲದಂತಾಗಿತ್ತು. ನಾನು ಅಷ್ಟು ಭಾವಿಸಿದ್ದೇ ತಡ ಅದು ರಾಮಣ್ಣನಿಗೆ ಹೇಗೆ ಗೊತ್ತಾಯಿತೊ ಏನೋ ಅವರು ಜೋರಾಗಿ–

"ಅರಿಯದೆ ಬಿದ್ದಿರೆ ಭಾವ

ಓ ಭಾವ –ಅರಿಯದೆ ಬಿದ್ದರೆ'

ಎಂದು ಜೋರಾಗಿ ಪದ ಹೇಳಿದರು.

ಈಗ ನನಗೆ ಅವಕಾಶ ಸಿಕ್ಕಿತು; "ರಾಮಣ್ಣ ಇದು ಯಾವ ರಾಗ?"

ರಾಮಣ್ಣ : ಸರಾಗ

ನಾನು : ತಾಳ?

ರಾಮಣ್ಣ : ಭೇತಾಳ.

ನಾನು, "ಅಲ್ಲ; ರಾಮಣ್ಣ, ಈಗ ಹಾದಿಯಲ್ಲಿ ನೀವು ಅಷ್ಟು ಜೋರಾಗಿ ಪದ ಹೇಳಿದರೆ ಕೇಳುವರು ಯಾರು? ಎಲ್ಲಿಯಾದರು ದಾರಿ ತಪ್ಪಿದವರು ಕೇಳಿಕೊಂಡರೆ ಇವರಿಗೆ ಮರ್ಲ್ ಅಂತ ಹೇಳುವುದು ಗ್ಯಾರಂಟಿ. ರಾಮಣ್ಣ: "ಮರ್ಲ್ ಮರುಳಯ್ಯೊ ಮರುಳು ಆ ದೇವನಾಡುವ ಅದೆಂಥ ಪೊಲ್ರ್ಲು" ಅವರು ತುಳುವನ್ನು ಹೊಂದಾಣಿಸಿ ಬಿಟ್ಟಿದ್ದರು. ರಾಮಣ್ಣನನ್ನು ಕೆಣಬೇಕೆಂಬ ಉದ್ದೇಶದಿಂದ ಕೇಳಿದೆ: "ಅಲ್ಲ. ಕನ್ನಡ ಜೊತೆಗೆ ನೀವು ತುಳುವನ್ನು ಅಷ್ಟೊಂದು ಸಲೀಸಾಗಿ ಸೇರಿಸುತ್ತಿದ್ದೀರ?"

ರಾಮಣ್ಣ : ಪ್ರಾಸ ಸೇರಿದರೆ ಆಯಿತು–ಅದರಲ್ಲಿ ಏನು? ಪ್ರಾಸಕ್ಕೆ ಪ್ರಾಸ. ಹೆಚ್ಚಾದರೆ ಪ್ರಯಾಸ. ಗೊತ್ತಾಯಿತಾ?

ನಾನು : ಎಷ್ಟೇ ಪ್ರಾಸ ಬಂದರೆ; ಏನು ಬಂತು? ಮಳೆ ಚಳಿ ನಿಲ್ಲುತ್ತದಾ?

ರಾಮಣ್ಣ : ಸ್ವಲ್ಪ ನಿಲ್ಲು –ಏನು ಹೇಳಿದೆ? ಸರಿಯಾಗಿ ಹೇಳಬೇಕು ಇಲ್ಲಾಂದರೆ ಕಷ್ಟ.

ನಾನು : ಕಷ್ಟ?

ರಾಮಣ್ಣ : ಮದುವೆಯಾಗದ ನಿನ್ನಂಥವರಿಗೆ 'ಳ ಮತ್ತು 'ಲ' ದ ವ್ಯತ್ಯಾಸ ಸರಿಯಾಗಿ ಗೊತ್ತಿಲ್ಲ. ಮೊದಲ 'ಲ' ಕಾರವನ್ನು 'ಏ' ಕಾರ ಮಾಡಿದರೆ ಸುಖ ಸಿಗುತ್ತದೆ. ಳಕಾರ ಳಕಾರವಾಗಿಯೇ ಉಳಿದರೆ  ಜೀವನಕ್ಕೆ ಅರ್ಥವಿಲ್ಲ.

ನಾನು : "ಅಯ್ಯೋ ಮಾರಾಯರೇ"

ರಾಮಣ್ಣ : "ಅಯ್ಯೋ ಅಂತಾಗುವುದು ಅನಂತ್ರ.ಮೊದಲು ಆಹಾ ಎಂದಾಗುತ್ತದೆ.

ನಾನು : ನೀವೊಬ್ಬರು– ಎಲ್ಲದಕ್ಕೂ ಹೊಸ ಹೊಸ ಅರ್ಥ ಕಟ್ಟುತ್ತೀರಿ.

ರಾಮಣ್ಣ : ನೋಡು, ಇದೆಲ್ಲ ಚೌಕಿಯ ಮಾತು;ನಮಗೆ ಮಾತಿನಲ್ಲಿ ಏ, ಬಿ, ಸಿ ಅಂತಿಲ್ಲ.  ಇರಬಾರದು. ಅಡಿಕೆ ಸುಲಿಯುವಾಗ; ಚೌಕಿಯಲ್ಲಿ ಇರುವಾಗ; ಗಂಡಸರೆ ನಡೆಯುವಾಗ ನಮಗೆ ಪೋಲಿ ಮಾತುಗಳು ಅಂತ ಇರುವುದಿಲ್ಲ; ಅದೆಲ್ಲಕ್ಕಿಂತ ನಾನು ಅರ್ಥಧಾರಿ. ನೀನು ವೇಷಧಾರಿ. ವೇಷಹಾಕುವವರು  ಮಾತಲ್ಲಿ ಎರಡೆರಡು ಅರ್ಥ ಇಟ್ಟುಕೊಳ್ಳಲೇ ಬೇಕು." "ಮತ್ತೆ ಶಾಂಭವಿ ನೆನಪಿಗೆ ಬಂದಳು. ಅವಳನ್ನು ನೆನಪಿಟ್ಟುಕೊಂಡು ಕೇಳಿದೆ.

'ಹುಡುಗಿಯರು?'

"ಅವರದು ಹಗಲುವೇಷ. ಅದರಲ್ಲಿ ಅನುಮಾನ ಬೇಡ"

ಅಷ್ಟು ಹೊತ್ತಿಗೆ ಎದ್ರು ಕಡೆಯಿಂದ ಕೊಡೆ ಹಿಡಿದುಕೊಂಡು ಒಬ್ಬರು ನಡುಪ್ರಾಯದವರು ಬಂದರು. ಬಿಳಿಯ ಪಂಚೆ, ಬಿಳಿಯ ಶರಟು. ಬಂಗಾರದ ಮೈ ಬಣ್ಣ., ದುಂಡಗಿನ ಮುಖ; ಹೆಚ್ಚು ಎತ್ತರವಿಲ್ಲ. ಸಪೂರದ ಕಾಲು ಹಾದಿಯಾಗಿರುವುದರಿಂದ ಎದುರು ಬದುರು ಆಗಲೇಬೇಕಾಯಿತು. ಅವರೆದುರು ನಿಂತೆವು. ಅವರು ಕೇಳಿದರು : ಓಯ್ ನೀವು ದೂರ?'

ರಾಮಣ್ಣ : "ಇಲ್ಲಿಯೇ ಹತ್ತಿರ."

ಅವರು : 'ಅಂದರೆ?'

ರಾಮಣ್ಣ : ಈವತ್ತು ತಾಳಮದ್ದಳೆ ಇದೆಯಲ್ಲ ಆ ತಾಳಮದ್ದಳೆ ಕೂಟಕ್ಕೆ.

ಅವರು : ಓ ಹಾಗೆಯಾ?

ರಾಮಣ್ಣ : ಹೌದು.

ಅವರು : ಒಳ್ಳೆಯ ಮಳೆಯಲ್ಲಿ ಒದ್ದೆಯಾಗಿ ಮುದ್ದೆಯಾಗಿ ಬಂದಿರಿ.

ರಾಮಣ್ಣ : ಒದ್ದೆಯಾದ್ದು·ನಮ್ಮ ಮೈ ಮಾತ್ರ. ನಾವು ಮುದ್ದೆಯಾಗಿಲ್ಲ; ಮುದ್ದೆಯಾದ್ದು ನಮ್ಮ ಬಟ್ಟೆ.

ನಾನು : 'ರಾಮಣ್ಣನದು ಮಾತು ಜೋರು.'

ಅವರು : ಓ ರಾಮಣ್ಣನವರು?

ನಾನು : "ಹೌದು ಮತ್ತೆ."

ಅವರು : "ನಮಸ್ಕಾರ ರಾಮಣ್ಣನವರೆ ನೀವು ಬಹಳ ದೊಡ್ಡ
ಅರ್ಥಧಾರಿಯಂತೆ."

ನಾನು : ಅಂತೆ ಏನು ಬಂತು? ನಿಜವಾಗಿಯೂ ಬಹಳ ದೊಡ್ಡ ಅರ್ಥದಾರಿ. ಅದರಲ್ಲಿ ಸಂಶಯವಿಲ್ಲ.

ರಾಮಣ್ಣ : ಅದಕ್ಕೆ ರಾಮನ ಜೊತೆಗೆ ಅಣ್ಣನೆಂದು ಸೇರಿಸಿದ್ದಾರೆ.

ಅವರು : ತಾಳಮದ್ದಳೆಗೆ ಬಂದರೆನೋ?

ರಾಮಣ್ಣ : ಹೌದು ಹೌದು.

ಅವರು : ನಾನು ನಿಜ ಹೇಳ್ಬೇಕಾ. ಈ ತಾಳಮದ್ದಳೆ ಆಟ–ಕೂಟ ಅದು–ಇದು ಅಂತ ಕೆಲಸ ಇಲ್ಲದವರು ಮಾಡುವ ವ್ಯಾಪಾರ. ಇದಕ್ಕೆ ಪುಕುಳಿ ಸೊಕ್ಕು ಎಂದು ಕರೆಯುತ್ತಾರೆ.

ರಾಮಣ್ಣ : ಹೌದು, ಹೌದು, ಕೆಲಸ ಇಲ್ಲದವರಿಗೆ ತಾಳಮದ್ದಳೆ ನಡೆಯತ್ತದೆ. ಕೆಲಸ ಇಲ್ಲದವರು ಮಾಡುವ ವ್ಯಾಪಾರವೆಂದರೆ ಆಟ. ನೋಡಿ ಇವರೇ, ನಿಜಾ ಹೇಳಿ ರಾತ್ರಿ ಹತ್ತೂ ಗಂಟೆಯಿಂದ ಬೆಳಗಿನವರೆಗೆ ನೀವು ಮಾಡುವ ಬಹಳ ದೊಡ್ಡ ಕೆಲಸವೇನು? ಮಳೆಗಾಲದಲ್ಲಿ ಹೊದಿಕೆ ಮುಚ್ಚಿಕೊಂಡು ಗೊರಕೆ ಹೊಡೆಯುವುದು. ಬೇಸಿಗೆಯಲ್ಲಿ ಸೆಕೆ ಸೆಕೆ ಅಂತ ಶರಟು ಬಿಚ್ಚಿಕೊಂಡು ಚಂಡಿ ವಸ್ತ್ರದ ಗಾಳಿ ಹಾಕಿಕೊಳ್ಳುವುದು. ನೀವು ಏನು ಬೇಜಾರು ಮಾಡಿಕೊಳ್ಳಬೇಡಿ ನನ್ನದು ಒಂದು ಪೆಟ್ಟು ಎರಡು ತುಂಡು ಅಷ್ಟೆ.

ಅವರ ಮುಖ ಚಿರುಟಿದ ಮಾವಿನಕಾಯಿ ಆಯಿತು. ನಾನದನ್ನು ಗಮನಿಸಿದೆ.

ನಾನು : ಹೋಗಲಿ ಬಿಡಿ ರಾಮಣ್ಣ. ಯಾರೋ ಏನೋ ಹೇಳಿದರೆಂದು ನಾವು

ಯಾಕೆ ತಲೆ ಕೆಡಿಸಿಕೊಳ್ಳಬೇಕು? ಈ ಮಳೆಯಲ್ಲಿ; ಈ ಚಳಿಯಲ್ಲಿ ಅರ್ಧದಾರಿಯಲ್ಲಿ ನಿಂತುಕೊಂಡು ಚರ್ಚೆ ಮಾಡಲು ಏನಿದೆ? ನಾವು ಹೋಗೋಣ.

ಅವರು : "ಅದಷ್ಟೆ: ನಾವು ಚರ್ಚೆ ಮಾಡುವುದರಿಂದ ಯಾವ ಪ್ರಯೋಜನ ಇಲ್ಲ. ನನ್ಗೆ ಅನಿಸಿದ್ದನ್ನು ಹೇಳಿದೆ. ನನ್ನದೂ ಅಷ್ಟೇ ಪೆಟ್ಟೊಂದು ತುಂಡೆರಡು."

ನಾನು : ಈ ಮಳೆಯಲ್ಲಿ ನೀವಿಬ್ಬರೂ ಪೆಟ್ಟೊಂದು ತುಂಡೆರಡು ಮಾಡುತ್ತಾ ನಿಲ್ಲಬೇಡಿ, ನಿಮ್ಮಷ್ಟು ಬುದ್ದಿ ನನಗಿಲ್ಲ; ಅನುಭವ ನನಗಿಲ್ಲ. ನಾನಿನ್ನೂ ಎಳಸು. ಆದರೂ ಹೇಳುತ್ತೇನೆ. ಈಗಿನ ಕಾಲದಲ್ಲಿ ಒಂದು ಪೆಟ್ಟಿಗೆ ಹಲಸಿನ ಕಾಯಿಯೇ ಎರಡು ಭಾಗವಾಗುವುದಿಲ್ಲ.

ರಾಮಣ್ಣ : "ಸಂಧಿಯ ಬೆಸುಗೆ ಪತ್ತದು. ಸಂಧಿಯಿಲ್ಲದಿರೆ ಬರಿದೆ ಮಾತಿಂದ ಫಲವೇನು?"

ಅವರು : ಇರಲಿ,ಇರಲಿ ,ಪರ ಊರಿಂದ ಬಂದ್ದಿದ್ದೀರಿ;ಈ ಮಳೆಯಲ್ಲಿ ನಿಮ್ಮತ್ರ ಚರ್ಚೆಯೇನು?

ರಾಮಣ್ಣ : "ಮೊಸಳೆಗೆ ನೀರೊಳಗಿದ್ದರೆ ಶಕ್ತಿ ಹೆಚ್ಚು. ನೆಲದ ಮೇಲೆ ಆನೆಗೆ ಶಕ್ತಿ."

ಅವರು : "ಇದರಲ್ಲಿ ಮೊಸಳೆ ಯಾರು? ಆನೆ ಯಾರು?"

ನಾನು : "ಆನೆ ನೀವು, ರಾಮಣ್ಣ"....(ಅವರಹೊಟ್ಟೆ ನೋಡುತ್ತಾ ಹೇಳಿದೆ.) ರಾಮಣ್ಣ ನಗಾಡಿದರು. ಅವರಿಗೆ ಅವಮಾನವಾದಂತಾಯಿತು. ಮತ್ತೆ ರಾಮಣ್ಣ ಹೇಳಿದರು;

ನಾನು : "ಮೊಸಳೆ; ಸರಿ ಒಪ್ಪಿಕೊಳ್ಳುತ್ತೇನೆ. ಆದರೆ ನೀನು?"

ನಾನು : ಆನೆ ಮೊಸಳೆಯರ ನಡುವಣ ಇಲಿ. ಬೆಟ್ಟಕ್ಕೆ ಇಲಿಯೇ ಸರಿ. ಏನು ಹೇಳುತ್ತೀರಿ?

ನನ್ನ ಮಾತಿಗೆ ಅವರಿಬ್ಬರು ನಗಾಡಿದರು. ಆ ನಗೆಗೆ ಅರ್ಥವಿರಲಿಲ್ಲ. ರಾಮಣ್ಣ ಸಮಸ್ಯೆ ತಿಳಿಗೊಳಿಸಲು ನಗಾಡಿದರು. ಅಂತ ಅನಿಸಿಸಿತು. ನಮಗೆ ತಾಳಮದ್ದಲೆಯವರಿಗೆ ವಾದ ಸಂವಾದವೆಂದರೆ ವೇದಿಕೆಯದು ಮಾತ್ರ. ಅಲ್ಲಿ ವೇದಿಕೆಯಲ್ಲಿ ನಾವು ನಾಯಿ ಬೆಕ್ಕುಗಳಂತೆ ಜಗಳಾಡುತ್ತೇವೆ. ರಂಗದಿಂದ ಇಳಿದರೆ ಒಟ್ಟಿಗೆ ಬೀಡಿ ಸೇದುತ್ತೇವೆ. ಅವರು ಹಾಗಿರಲಿಲ್ಲವೋ ಏನೋ? ರಾಮಣ್ಣ ನಗುವುದೇ ಹಾಗೆ" ಬೇರೆಯವರು ನಗುವಂತೆ. ಅವರೂ ನಗಾಡಿದರು. ನಾನೇ ಅವರೊಂದಿಗೆ "ನಾವಿನ್ನು ಬರುತ್ತೇವೆ" ಎಂದೆ. ಅವರೆಂದರು, "ನಾನು ಮಾತಾಡಿದ್ದಕ್ಕೆ ಬೇಜಾರು ಮಾಡಿಕೊಳ್ಳಬೇಡಿ. ತಮಾಷೆಗೆ ಮಾತಾಡಿದೆ. ಹೇಗೂ ನಮ್ಮೂರಿಗೆ ಬಂದಿದ್ದೀರಿ. ಒಂದು ನಿಮಿಷ ನನ್ನ ಮನೆಯೊಳಗೆ ಹೊಕ್ಕು ಹೋಗಿ. ಇಲ್ಲಿಯೇ ಕೆಳಗಿಳಿದು ಹೋದರೆ ಮೂರು ದಾರಿ ಸೇರುವ ದಾರಿಯಿದೆ; ಅಲ್ಲಿ ಎಡಗಡೆಗೆ ಹೋದರೆ ನೀವು ಹೋಗುವ ಶಾಲೆ ಸಿಗುತ್ತದೆ. ಬಲಬದಿಗೆ ಹೋದರೆ ಪಂಚಲಿಂಗೇಶ್ವರನ ದೇವಸ್ಥಾನ ಸಿಗುತ್ತದೆ. ಅಲ್ಲಿಂದ ಕೆಳಗೆ, ಸ್ವಲ್ಪ ದೂರ ಹೋದರೆ ಒಂದು ಅಶ್ವತ್ಥಮರ ಸಿಗುತ್ತದೆ; ಅದರಿಂದ ಮುಂದೆ ಒಂದು ಕೋಟಿ ಚೆನ್ನಯರ ಗರಡಿ ಸಿಗುತ್ತದೆ, ಅಲ್ಲಿ ಒಂದು ತೋಡು ಸಿಗತ್ತದೆ, ಅದನ್ನು ದಾಟಿದರೆ ಸಿಗುವುದು ಸಣ್ಣ ಗದ್ದೆಗಳು. ಗದ್ದೆಗಳ ಹುಣಿಯಲ್ಲಿ ಹೋದರೆ ನಮ್ಮ ಮನೆ ಸಿಗುತ್ತದೆ. ಗುರ್ತಕ್ಕೆ ಬೇಕಿದ್ದರೆ ಮನೆಯ ಹಿಂದೆ ಮತ್ತೆ ಸಣ್ಣ ಗೇರುಬೀಜದ ಗುಡ್ಡೆ ಕಾಣಿಸುತ್ತದೆ. ಅಲ್ಲಿ ಹೋದರೆ ನನ್ನ ಮನೆಯಲ್ಲಿ ನನ್ನ ಹೆಂಡತಿ ಮತ್ತು ನನ್ನ ಮಗಳು ಇದ್ದಾರೆ, ಏನಿಲ್ಲವಾದರೂ ಈ ಚಳಿಗೆ ನಿಮಗೆ ಚಾ ಕಾಸಿಕೊಟ್ಟಾರು. ಹೆಚ್ಚು ದೂರವಿಲ್ಲ ಜೋರಾಗಿ ಕೂಕಿಲು ಹಾಕಿದರೆ ಮನೆಗೆ ಕೇಳಿಸಬಹುದು. ಅಷ್ಟು ಹತ್ರ. ನಮ್ಮ ದಾಸು ಬೊಗಳಿದರೆ ಇಲ್ಲಿಗೆ ಕೇಳಿಸುವುದಿದೆ" ಎಂದರು. ಅವರ ಮಾತು ಮುಗಿಯುವ ಮೊದಲೆ ರಾಮಣ್ಣ ನಗಾಡಿದರು.

ಅವರು : ಯಾಕೆ ರಾಮಣ್ಣ, ನಗಾಡಿದಿರಿ?

ರಾಮಣ್ಣ : "ನಗಾಡದೆ ಇನ್ನೇನು ಅಳ್ಬೇಕಾ?"

ಅವರು : 'ಅಳುವುದಿದ್ದರೆ ಅತ್ತುಬಿಡಿ, ಅದಕ್ಯಾಕೆ ಚಿಂತೆ?' ಈ ಇಬ್ಬರು ಹಾವು-ಮುಂಗುಸಿಗಳ ಥರ ಕಚ್ಚಾಡುವುದು ನೋಡಿ ನನಗೆ ಆಶ್ಚರ್ಯವಾಯಿತು. 'ಈ ಜಡಿ ಮಳೆಯಲ್ಲಿ ಇಬ್ಬರು ಹಾದಿಯಲ್ಲಿ ಯಾಕೆ ಚರ್ಚೆ ಮಾಡುತ್ತೀರಿ ಅಂತ ತಿಳಿಯುವುದಿಲ್ಲ' ಅಂತ ಹೇಳಿದೆ.

ರಾಮಣ್ಣ : "ತುಳುವಿನಲ್ಲಿ ಒಂದು ಗಾದೆಯಿದೆ-ಜಾತಿಗೆ ಜಾತಿ ಹಗೆ ಅಂತ ನಮ್ಮದೂ ಹಾಗೆಯೇ."

ನಾನು : "ಅಂದರೆ?"

ಅವರು : "ನಾಯಿಗೆ ನಾಯಿ; ಬೆಕ್ಕಿಗೆ ಬೆಕ್ಕು ಹಗೆ"

ನಾನು : "ಅಂದರೆ...... ನೀವು............."

ರಾಮಣ್ಣ : "ತಿಳಿಯಿತು ತಿಳಿಯಿತು............ ನೀನು ಹೇಳುತ್ತಿರುವದು-ನಾಯಿಗೆ ನಾಯಿ ಹಗೆ. ಹಾಗೆಯೇ ನಾವು ಅಂತಲ್ವಾ?"

ನಾನು : ಛೇ, ಛೇ, ರಾಮಣ್ಣ ಇದು ತಾಳಮದ್ದಲೆಯ ಮಾತು ಇದು,

ಅವರು : ಹೋಗ್ಲಿ ಆ ವಿಚಾರ ಬಿಡಿ ನಾನು ಅಂಗಡಿಗೆ ಹೋಗಿ ಬರುತ್ತೇನೆ. ಮನೆಗೆ ಹೋಗಿ; ನಾನಿನ್ನು ಬರ್ಲಾ?

"ಅವರು ಹೊರಡಲು ತಿರುಗಿದರು. ನಾವು ತಿರುಗಿದೆವು.

ನಾನು: 'ಆಯಿತು ಹೋಗಿ ಬನ್ನಿ, ಸಾಧ್ಯವಾದರೆ ರಾತ್ರಿ ಶಾಲೆಗೆ ಬನ್ನಿ' ಅವರು ಅಡ್ಡದ ಕಡೆಗೆ ಹೆಜ್ಜೆ ಹಾಕಿದರು. ನಾವು ಇಳಿಜಾರಿನಲ್ಲಿ ಇಳಿಯತೊಡಗಿದೆವು. ಮಳೆಗಾಲದಲ್ಲಿ, ಅದೂ ಜೋರು ಮಳೆ ಬರುವ ಸಮಯದಲ್ಲಿ ಗುಡ್ಡದಿಂದ ಕೆಳಗಿಳಿಯುವುದೆಂದರೆ ಒಂದು ರೀತಿ ಡೊಂಬರಾಟವೇ ಸರಿ. ಸ್ವಲ್ಪ ಹೆಜ್ಜೆ ತಪ್ಪಿದರೂ ಮೂರು ಉರುಳು; ಒಂದು ಎಲುಬು ಪುಡಿಯಾಗಲಿಕ್ಕಿಲ್ಲ, ಮಾಂಸವನ್ನು ಮಾತ್ರ ತೂಕದ ಲೆಕ್ಕದಲ್ಲಿ ಮಾರ ಬಹುದು. ಮೊದಲೆ ನನ್ನದು ಇಳಿಜಾರಿನಲ್ಲಿ ಯಾವ ರೀತಿ ಬೇಕಾದರೂ ಜಾರಬಹುದಾದ ಚಪ್ಪಲಿ, ಹಗ್ಗದ ಮೇಲೆ ನಡೆಯುವಂತೆ ನಡೆಯುವಂತೆ ನಡೆಯಬೇಕಾಯಿತು. ಕಾಲುಹಾದಿ ಎಲ್ಲರೂ ನಡೆಯುವ ಹಾದಿ. ದಾರಿಯೇ ಹಾಗಿತ್ತು ನಡೆದು ನಡೆದು ನುಣುಪಾಗಿತ್ತು. ನುಣುಪಾದ ಕೆಮ್ಮಣ್ಣು. ಮಣ್ಣಿನಲ್ಲಿ ಯಾವುದೆ ರೀತಿಯ ಕಲ್ಲುಗಳು ಇರಲಿಲ್ಲ. ಹಾಗಾಗಿ ಜಾರುವ ಅಪಾಯಗಳು ಹೆಚ್ಚಿದ್ದವು. ದೊಡ್ಡ ಮಳೆಹೋಗಿ ಜಿನುಗು ಮಳೆ ಪಾರಂಭವಾಗಿತ್ತು.

ಆ ಕಾಲು ಹಾದಿ ಪಕ್ಕದಲ್ಲಿ ಕುಂಟಾಲ ಸರೋಳಿ ಗಿಡಗಳಿದ್ದವು. ಅವುಗಳನ್ನು ಹಿಡಿ ಕೊಂಡು ಇಳಿಯುತ್ತಿದ್ದರಿಂದ ಜೊತೆಗೆ ಕುಂಟಾಲದ ಹಣ್ಣುಗಳು ಕೈಗೆ ಸಿಗುತ್ತಿದ್ದವು. ಮಳೆಯ ದೆಸೆಯಿಂದ ಅವು ಬಿದ್ದಿದ್ದವು. ಕೈಗೆ ಸಿಕ್ಕಿದ್ದನ್ನು ತಿನ್ನುತ್ತಾ ಕೆಳಗಿಳಿದೆ. ನಡೆದುದರಿಂದ ಹಸಿವೆಯಾಗುತ್ತಿತ್ತು. ನೀರು ಸೇರಿಕೊಂಡುದರಿಂದ ಅಷ್ಟೊಂದು ರುಚಿಯಿರಲಿಲ್ಲ. ಮಧ್ಯೆ ಮಧ್ಯೆ ಸರೊಳಿ ಹಣ್ಣುಗಳನ್ನು ಬಾಯಿಗೆ ಹಾಕಿಕೊಂಡೆ. ಕಾಲು ಜಾರುವ ಅಪಾಯ ಕಾಣಿಸಿಕೊಂಡಾಗ ಅವುಗಳೇ ನನಗೆ ಆಸರೆಯಾದವು.

"ಅಲ್ಲ ಮಾರಾಯ, ಅದೇಕೋ ಅಷ್ಟೊಂದು ಜೀವಭಯ? ಶಾಲೆಯ ಹುಡುಗರು ಸಲೀಸಾಗಿ ಓಡಾಡುತ್ತಾರೆ, ಅವರಿಗೆ ಜೀವ ಭಯ ಇಲ್ಲ. ನಿನಗೆ ಯಾಕೆ ಇಷ್ಟೊಂದು ಜೀವಭಯ? ಕಾಲು ಜಾರಿ ಬಿದ್ದರೆ ಹೆಚ್ಚು ಏನಾದೀತು?' ನಾನು ಈಗ ಸರಿಯಾದ ಸಮಯವೆಂದು ತಿಳಿದುಕೊಂಡು ಹೇಳಿದೆ: 'ಕಾಲು ಜಾರಿ ಬೀಳುವ ಪ್ರಾಯವಲ್ಲ – ನನ್ನದು.'

ರಾಮಣ್ಣ: "ಓ ನನ್ಗೆ ತಿರುಗಿಸಿ ಬಿಟ್ಟೆಯಾ? ಚಾಟನಂ ಪ್ರತಿಚಾಟನಂ – ಅಲ್ವಾ?"

ನಾನು ನಗಾಡಿದೆ. ಆದರೆ ಅದು ನನ್ನ ಸ್ವಭಾವ. ಯಾರಾದರೂ ಏನಾದರೂ ಹೇಳಿದರೆ ಸಮಯ ಸಿಕ್ಕಿದಾಗ ಅವರ ಮಾತನ್ನು ತಿರುಗಿಸಿ ಬಿಡುತ್ತಿದ್ದೆ. ಹಾವಿಗೆ ಹದಿನಾರು ವರ್ಷ–ಸಿಟ್ಟಾದರೆ ನನಗೆ ಹದಿನಾರೇನು ಇಪ್ಪತ್ತು ವರ್ಷ ಕಾಯುತ್ತೇನೆ. ವಾಪಾಸು ಕಚ್ಚದೆ ಬಿಡುವುದಿಲ್ಲ. ನನ್ನ ಹೆಸರೇ ನಿಶಿತ. ನಿಶಿತವಾಗಿದೆ ಮನಸ್ಸು. ಕೆಳಗಿಳಿದು ಬಂದರೆ ಸಣ್ಣದೊಂದು ತೋಡು ಸಿಕ್ಕಿತು. ಮಳೆಯ ಕಾರಣದಿಂದ ತೋಡಿನಲ್ಲಿ ಕಲಂಕಿದ ನೀರು ಬರುತ್ತಿತ್ತು. ಅದನ್ನು ನೋಡಿದರೆ ಒಳ್ಳೆಯ ಚಹಾದಂತೆ ಕಾಣಿಸುತ್ತಿತ್ತು. ತೋಡು ದಾಟಲು ಅಡಿಕೆಯ ಸಂಕ ಮಾಡಿದ್ದರು. ಹಿಡಿದುಕೊಳ್ಳಲು ಕೈ ಸಂಕ ಮಾಡಿದ್ದರು. ಕಾಲು ಜಾರದ ಹಾಗೆ ಆಮು ಹಾಕಿದ್ದರು. ಮಳೆಗಾಲದಲ್ಲಿ ಅವರಿವರು ದಾಟಿ ಸಂಕ ನುಣುಪಾಗಿತ್ತು. ತುಂಬಾ ಜಾಗ್ರತೆಯಲ್ಲಿ ದಾಟಿದೆವು. ಇನ್ನೇನು ದಾಟಬೇಕು ಅಷ್ಟರಲ್ಲಿ ತಲೆಗೆ ಒಂದು ಗೊರಬು ಹಾಕಿಕೊಂಡು ಒಬ್ಬಳು ಹುಡುಗಿ ಹೆಚ್ಚೆಂದರೆ ಇಪ್ಪತ್ತು ವರ್ಷವಿರಬಹುದು. ಅವಳು ದನ ಹೊಡೆಯುವುದು ಕಾಣಿಸಿತು.ಅವಳು ಹೊಡೆದ ಪೆಟ್ಟಿಗೆ ದನವು ನಮ್ಮ ಹತ್ತಿರ ಬಂತು. ನಾವು ಹೆದರಿಸಿದೆವು. ದನವು ಹುಚ್ಚುಗಟ್ಟಿದಂತೆ ವಾಪಾಸು ಅವಳ ಹತ್ತಿರ ಓಡಿತು. ಅವಳಿಗೆ ಸಿಟ್ಟು ಬಂತು ಅಂತ ಕಾಣಿಸಿತು.

'ಯಾರು ನೀವು? ಕಣ್ಣು ಕಾಣಿಸುವದಿಲ್ಲವಾ? ನಾನು ಆ ಕಡೆ ಹೊಡೆದರೆ ನೀವು ಈ ಕಡೆಗೆ ಹೊಡೆಯುತ್ತೀರಲ್ಲಾ? ಈ ದನಗಳಿಗೆ ದಣಪೆ ಅಂತ ಇಲ್ಲ;

ಅಗಳು ಅಂತ ಇಲ್ಲಾ-ಬಂದು ಗದ್ದೆ ಮೇಯುತ್ತವೆ, ನೇಜಿ ಎಂತಕೆ ಆಗಬೇಕು? ನಿಮಗೇನು ಸ್ವಯಗಿಯ ಇದೆಯಾ? ಥೂ ಥೂ ನಿನ್ನ ಕಾಲು ಮುರಿಯುತ್ತೇನೆ-ಧರ್ಮಕ್ಕೆ ಸಿಕ್ಕಿದರೆ ಶರ್ಮರ ಎಮ್ಮೆಯಾದರೇನು ಮತ್ತೊಂದಾದರೇನು?' ಆ ಹುಡುಗಿ ನಮ್ಮನ್ನು ಬೈದಾದ್ದಾ-ದನಕ್ಕೆ ಬೈದದ್ದಾ ಅಂತ ತಿಳಿಯಲಿಲ್ಲ. ಅವಳ ಹತ್ತಿರ ಬಂದ ದನಕ್ಕೆ ಕೋಲಿನಲ್ಲಿ ಹೊಡೆದಳು. ಆ ದನವು ಹೆದರಿ ಬಾಲ ಎತ್ತಿಕೊಂಡು ಓಡಲು ಪ್ರಾರಂಭಿಸಿತು. ಅದರ ಹಿಂದೆ ಅವಳು ಕಲ್ಲು ಹೊಡೆಯುತ್ತಾ ಓಡಿಸಿದಳು. ಸಿಕ್ಕಾ ಬಟ್ಟೆ ಬೈಯ್ಯತೊಡಗಿದಳು.

'ಅಲ್ವೋ ಮಾರಾಯ, ಈ ಹುಡುಗಿ ಒಂದೋ ಶೂರ್ಪನಖಿಯ ತಂಗಿಯಿರಬೇಕು, ತಪ್ಪಿದರೆ ತಾಟಕಿಯ ಅವತಾರ ಇರಬೇಕು. ಅಬ್ಬಾ ಜೋರೆ. ಮೆಣಸೇ ಖಾರ, ಅದರಲ್ಲಿಯೂ ಗಾಂಧಾರಿ ಮೆಣಸು ಮತ್ತೂ ಖಾರ. ಇವಳನ್ನು ನೋಡಿದರೆ ಇವಳ ನಾಲಿಗೆಗೆ ಯಾರಪ್ಪ, ಮೊದಲು ಜೇನುತುಪ್ಪ ನಕ್ಕಿಸಿದ್ದು?' ರಾಮಣ್ಣ ಸಂಕ ದಾಟಿದರು. ನಾನು ಅವರ ಹಿಂದೆ ಇದ್ದೆ.

ಆ ಹುಡುಗಿ ಮತ್ತೆ ಜೋರಾಗಿ ಹೇಳಿದಳು' ಈ ಕಾಟು ದನಗಳಿಗೆ ಒಂಚೂರು ಜಾಗೆ ಸಿಕ್ಕಿದರೂ ಸಾಕು ನುಗ್ಗಿ ಬಿಡುತ್ತವೆ. ಅಗಳಾದರು ಒಂದೆ; ಬೇಲಿಯಾದ್ರೂ ಒಂದೆ. ಈ ಕಾಟು ದನಗಳಿಗೆಕೊರಡು ಕಟ್ಟಿ ಬಿಡಬೇಕು. ಏನು ಕರ್ಮವೋ ಏನೊ?.......... ಈ ಮಳೆಗಾಲದಲ್ಲಿ ಹಸಿರು ಹುಲ್ಲಿಗೇನು ಕಡಿಮೆಯಾ? ಹೊರಗಡೆ ಮೇಯುವುದು ಬಿಟ್ಟು ಸಿಕ್ಕಿದ ಗದ್ದೆಗೆ ನುಗ್ಗುತ್ತವೆ. ಕಾಲು-ಕಾಲು ಮುರಿದು ಹಾಕಬೇಕು.......... ಆಗ ಗೊತ್ತಾಗುತ್ತದೆ. 'ಎಂದು ವಿವಿಧ ವಿನೋದಾವಳಿ ಪ್ರದರ್ಶಿಸಿದಳು. 'ಇವಳು ತಾಟಕಿಯೂ ಅಲ್ಲ' ಶೂರ್ಪನಖಿಯು ಅಲ್ಲ, ನನಗನ್ನಿಸುವ ಹಾಗೆ ಇವಳು ಪಿಲಿಚಾಮುಂಡಿ' ಎಂದೆ. 'ಓ,ಪಿಲಿಚಾಮುಂಡಿ'-ಹೆಸರು ಚೆನ್ನಾಗಿದೆ. ಹುಡುಗಿಯರಿಗೆ ಹೆಸರಿಡಲು ನೀನೇ ಸರಿ, ವಯಸ್ಸಿಗೆ ಬಂದ ಹುಡುಗಿಯರಿಗೆ ವಯಸ್ಸಿಗೆ ಬಂದ ಹುಡುಗರು ಹೆಸರಿಟ್ಟರೆ ಅದಕ್ಕೊಂದು ಚೆಂದವಿದೆ. ಇದಕ್ಕೆ ಹೇಳುವುದು ವಯಸ್ಸಾದವರು ಜಗತ್ತು ನೋಡುವುದಕ್ಕೂ ಚಿಗುರು ಮೀಸೆಯ ಹುಡುಗರು ನೋಡುವುದಕ್ಕೂ ವ್ಯತ್ಯಾಸವಿದೆ ಅಂತ"

"ಅದು ನನಗೂಗೊತ್ತು- ಚಿಗುರು ಮೀಸೆಯ ಹುಡುಗರಿಗೆ ಜಗತ್ತು ಕಾಣಿಸುವುದಿಲ್ಲ"

ರಾಮಣ್ಣ : ..... ಮೂಡಿ ಬಂದ ಹುಡುಗಿಯರಿಗೂ ಕೂಡಾ'

ನಾನು : ಇರಲಿ, ಆ ಬಗ್ಗೆ ಇನ್ನು ಹೆಚ್ಚು ಮಾತಾಡುವುದು ಬೇಡ ಎಂದುದು ಮಾತ್ರ, ಆಹುಡುಗಿ ದನ ಹೊಡೆದುಕೊಂಡು ನಮ್ಮ ಹತ್ತಿರ ಬಂದಳು. ತುಂಬಾ

ಓಡಿಸಿದ್ದರಿಂದ ಅವಳು ಏದುಸಿರು ಬಿಡತ್ತಿದ್ದಳು. ರಾಮಣ್ಣನು ಹೇಳಿದ್ದರಿಂದಲೊ; ಅಥವಾ ನನ್ನ ಯೌವನ ದೆಸೆಯಿಂದಲೊಯೇನೊ-ಅವಳನ್ನು ನೋಡಿದೆ. ಅವಳನ್ನು ತಲೆಯಿಂದ ಕಾಲಿನವರೆಗೆ ನೋಡಿದೆ. ಅವಳೆದೆಯು ಕಣ್ಣಿಗೆ ಬಿತ್ತು. ಕಣ್ಣಿಗೆ ಬಿದ್ದುದಲ್ಲ, ನಾನು ಉದ್ದೇಶಪೂರ್ವಕವಾಗಿ ನೋಡಿದ್ದು. ಎಲ್ಲರನ್ನು ಹಾಗೆ ನೋಡಲಾಗುವುದಿಲ್ಲ; ನೋಡಲಾರೆವು. ನನ್ನ ಮಟ್ಟಿಗೆ ಅದು ನಿರುದ್ದೇಶವಲ್ಲ. ಅನುದ್ದೇಶವೂ ಅಲ್ಲ. ಎಲ್ಲಾ ಹುಡುಗಿಯರು ಇಂಥಾ ಸಂದರ್ಭದಲ್ಲಿ ವರ್ತಿಸುವ ಕ್ರಮಗಳೆಂದರೆ- ಸೆರಗನ್ನೋ; ರವಿಕೆಯನ್ನೋ ಸರಿಪಡಿಸಿಕೊಳ್ಳುವುದು. ಹೆಂಗಸರಿಗೆ ಇವುಗಳನ್ನು ಸರಿಪಡಿಸುವಾಗ ಎದುರಿನಲ್ಲಿ ಇರುವ ಗಂಡಸರ ಬಗ್ಗೆಯೂ ತಿಳಿದಿರುತ್ತದೆ. ಅವರು ಎದುರು ಇದ್ದ ಗಂಡಸರಿಗೆ ಅರ್ಥವಾಗದ ರೀತಿಯಲ್ಲಿ ಸರಿ ಮಾಡುವುದೂ ನಿಜ. ಹಿಂದಿನಿಂದ ಎಳೆದುಕೊಂಡರೆ ಎದುರು ಕಡೆ ಪರ್ದೆ ಬೀಳುತ್ತದೆ. ಇದೊಂದು ಸಣ್ಣ ಟೆಕ್ನಿಕ್. ಅದನ್ನೇ ಆ ಹುಡುಗಿಯು ಮಾಡಿದಳು. ನಾನು ನೋಡುತ್ತಿರುವುದು ಅವಳಿಗೆ ತಿಳಿಯಿತು ಎಂಬುದರ ಸ್ಪಷ್ಟ ಸೂಚನೆಯದು. ಆ ಸಂದರ್ಭದಲ್ಲಿ ನಾನು ಕೂಡಾ ಅವಿನಯ ಸೂಚಿಸುವುದು ಸರಿಯಲ್ಲ. ತಿರುಗಿ ನೋಡಿ ನಾನು ಅವಳು ಮೆಚ್ಚಬಹುದಾದ ಕೆಲಸ ಮಾಡಿದೆ. ದೂರದಲ್ಲಿ ನನ್ನ ಕಣ್ಣು ನೆಟ್ಟೆ. ರಾಮಣ್ಣ, 'ಏನಮ್ಮ ನಿನ್ನ ಹೆಸರು' ಎಂದು ಕೇಳಿದರು.

ಅವಳು-" ನಾನೇನು ಅಮ್ಮನಲ್ಲ" ಎಂದಳು.

ಅವಳು ಕೆಣಕುವುದಕ್ಕಾಗಿ ಹೇಳಿದಳು ಎಂದು ತಿಳಿಯಿತು. ಅವಳ ನಗು ಆ ರೀತಿಯಿತ್ತು.

ರಾಮಣ್ಣ : ಹೋಗಲಿ, ನಿನ್ನ ಹೆಸರು?

ಅವಳು : ಹೆಸರು ಕಾಳು.

ನಾನು ಅವಳ ಅಧಿಕ ಪ್ರಸಂಗ ನೋಡಿ ಸಿಟ್ಟುಗೊಂಡೆ. ನಾನು ಹೇಳಿದೆ 'ಹೆಸರುಕಾಳು ಅಂತ ಯಾಕೆ? ಕಡ್ಲೆಬೇಳೆ ಅಂತ ಇಟ್ಟುಕೋ.'

ಅವಳು : 'ಕಡಲೆ ಬೇಳೆ ಅಂತಿಟ್ಟು ಕೊಂಡರೇನು?' ರಾಮಣ್ಣ ಸಹಿಸುವಷ್ಟು ಸಹಿಸಿದರು ಎಂದು ಕಾಣುತ್ತದೆ ಸ್ವಲ್ಪ ಸಿಟ್ಟಿನಲ್ಲಿಯೇ ಹೇಳಿದರು. "ಇದಕ್ಕೆ ಹೆಸರು ಉಪ್ಪಾಟೆ ಅಂತ. ನೋಡು ಅವರವರ ಭಾವಕ್ಕೆ ಸರಿಯಾಗಿ; ಗುಣಕ್ಕೆ ಸರಿಯಾಗಿ ಹೆಸರು ಇಟ್ಟುಕೊಳ್ಳಬಹುದು;"

ಅವರ ಸಿಟ್ಟು ನೋಡಿ -ಅವಳು ಹೇಳಿದಳು" ನನ್ನ ಹೆಸರು ಶರಧಿ'

ರಾಮಣ್ಣ : "ಯಾರ ಮಗಳು?"

ಶರಧಿ : "ಚಂದು ಅವರ ಮಗಳು"

ರಾಮಣ್ಣ : "ಚಂದು ಎಂದರೆ ......."

ಶರಧಿ : "ಈಗ ಹೋದರಲ್ಲ. ನಿಮಗೆ ಎದುರು ಸಿಕ್ಕಿರಬೇಕು. ಅವರ ಅಂಗಡಿ ಅಡ್ಡದಿಂದ ಆ ಕಡೆಗೆ ಇದೆ."

ರಾಮಣ್ಣ : "ಓ ಅವ್ರು ಸರಿ ಬಿಡು – ಈಗ ದಾರಿಯಲ್ಲಿ ಸಿಕ್ಕಿದರು ಸ್ವಲ್ಪ ಮಿದುಳಿಗೆ ಕೈ ಹಾಕಿದರು. ನೀನು ಅಪ್ಪನಿಗೆ ತಕ್ಕ ಮಗಳು"

ಶರಧಿ : "ಯಾಕೆ?"

ರಾಮಣ್ಣ : "ಅವರು ಮಿದುಳಿಗೆ ಕೈ ಹಾಕಿದರು. ಈಗ ನೀನು............."

ಶರಧಿ : "ಓ ಹಾಗಾ."

ನಾನು : "ರಾಮಣ್ಣ ನಾವಿನ್ನು ಇವಳ ಮಿದುಳಿಗೆ ಕೈಹಾಕುವುದು ಬೇಡ."

ರಾಮಣ್ಣ : ನಾವು ತಾಳಮದ್ದಲೆಗೆ ಹೊರಟವರು. ದಾರಿಯಲ್ಲಿ ನಿನ್ನ ಅಪ್ಪ ಸಿಕ್ಕಿದರು ಮನೆಯವರೆಗೆ ಹೋಗಿ ಚಾ ಕುಡಿದು ಒದ್ದೆ ಬಟ್ಟೆ ಹಿಂಡಿ ಹಾಕಿಕೊಂಡು ಹೋಗಿ ಎಂದರು. ಅದ್ಕೆ ಹೊರಟೆವು.

ಶರಧಿ : "ನನ್ನ ಮುಖ ನೋಡಿದಳು. ಇವರನ್ನು ನೋಡಿದರೆ ಮೇಲು ಜಾತಿಯವರ ಹಾಗೆ ಕಾಣಿಸುತ್ತದೆ ಮನೆಗೆ ಬರ್ತಾರೊ ಇಲ್ಲವೊ–ನಾವು ಕೆಳಜಾತಿಯವರು.ಇವರಿಗೆ ಹಗಲು ಮಡಿ ಮೈಲಿಗೆ ಹೆಚ್ಚು."

ನಾನು : "ಹಗಲು ಅಂದರೆ......."

ಶರಧಿ : "ಹಗಲು ಅಂದರೆ ಹಗಲು, ರಾತ್ರಿಯೆಂದರೆ ಇರುಳು."

ರಾಮಣ್ಣ : "ಅಲ್ಲ ಮಾರಾಯಿತಿ ನಿನ್ನ ನಾಲಿಗೆಗೆ ಮೊದಲು ಜೇನು ತುಪ್ಪ ನಕ್ಕಿಸಿದವರು ಯಾರು? ನಿನ್ನ ನಾಲಗೆ ಕೇರೆ ಹಾವು ಹೊರಳಿದಂತೆ ಹೊರಳುತ್ತದೆ"

ಶರಧಿ : ಅದೆಲ್ಲಾ ನನ್ನ ಹತ್ತಿರ ಕೇಳಬೇಡಿ . ಅದೆಲ್ಲ ನನ್ನ ಅಪ್ಪನ ಹತ್ತಿರವೊ ಅಮ್ಮನ ಹತ್ತಿರವೋ ಕೇಳಿ; ಈಗ ಮನೆಗೆ ಬರುತ್ತೀರಾ ಅದು ಹೇಳಿ. ಬರುತ್ತೀರಿ ಅಂತಾದರೆ ಬನ್ನಿ–ಕರೆದುಕೊಂಡು ಹೋಗುತ್ತೇನೆ. ಇಲ್ಲದ ಪಂಚಾತಿಗೆ ಎಂತದಕ್ಕೆ?



23

ನಾನು : "ನಮಗೆ; ಆಟದವರಿಗೆ ಜಾತಿಯೇ ಇಲ್ಲ. ಎಲ್ಲಿಗೆ ಹೋಗುತ್ತೇವೋ ಅದೇ ನಮ್ಮ ಮನೆ."

ಶರಧಿ : "ಅದಲ್ಲ,"

ನಾನು : "ಅದಲ್ಲ ಇದಲ್ಲ – ಮತ್ತೆಲ್ಲ ಅಚ್ಚಿನಬೆಲ್ಲ. ಒಂದು ಪದ್ಯವಿದೆ – 'ನಲ್ಲ ಓ ನಲ್ಲ ಅಚ್ಚಿನಬೆಲ್ಲ."

ಶರಧಿ : "ಇದೆಲ್ಲ ಮಾತಾಡುವುದಕ್ಕೆ ನನಗೆ ಪುರುಸೊತ್ತು ಇಲ್ಲ. ಚಳಿಯಲ್ಲಿ ಸಾಯುತ್ತೇನೆ."

ರಾಮಣ್ಣ : "ನಾವಿಲ್ಲಿಯೇ ಇರುತ್ತೇವೆ. ನೀನು ದನ ಓಡಿಸಿ ಬಾ ಅನಂತ್ರ ನಿನ್ನ ಮನೆಗೆ ಹೋಗುವಾ." ಮತ್ತೆ ಅವಳು ಸ್ವಲ್ಪ ಲಂಗ ಎತ್ತಿಕಟ್ಟಿ ದನ ಓಡಿಸಲು ಹೋದಳು.

ಶರಧಿಯ ಅವಳ ಮನೆಯ ಚಾವಡಿಯಲ್ಲಿ ಕೂರಿಸಿ 'ಮೊದಲು ಬಟ್ಟೆ ಬದಲಾಯಿಸಿಕೊಳ್ಳಿ. ಈ ಮಳೆಯಲ್ಲಿ ನೆನೆದರೆ ಎಂಥವರಿಗೂ ಶೀತವಾದೀತು." ಎಂದಳು. ಅವಳ ಮಾತಿನಲ್ಲಿ ಸಣ್ಣನೆಯ ನುಣುಪು ಇತ್ತು. ನಯವಿತ್ತು. ನಾನು ಆ ಕಡೆ ಈ ಕಡೆ ನೋಡಿದೆ. ಅವಳಿಗೆ ಅರ್ಥವಾಯಿತು. 'ನೋಡಿ ಈ ಮನೆಯಲ್ಲಿ ನಾನು ಮತ್ತು ನನ್ನ ಅಮ್ಮ ಇಬ್ಬರೇ ಇದ್ದೇವೆ. ನಿಮ್ಗೆ ಅಷ್ಟು ನಾಚಿಕೆಯಾದ್ರೆ ಬಿಸಿನೀರ ಕೊಟ್ಟಿಗೆಗೆ ಕರೆದುಕೊಂಡು ಹೋಗುತ್ತೇನೆ.' ಎಂದಳು.

ರಾಮಣ್ಣ : ಅಷ್ಟು ನಾಚಿಗೆ ಇಲ್ಲದವರು ಅಂತಾ ತಿಳಿದುಕೊಂಡೆಯಾ?

ಶರಧಿ : ನಾನು ಹಾಗಲ್ಲ ಹೇಳಿದ್ದು. ಬೇಕಿದ್ದರೆ ಮಾತ್ರ. ಬಿಸಿನೀರಿನ ಕರೆದುಕೊಂಡು ಹೋಗುತ್ತೇನೆ.

ನಾನು : "ಆಯ್ತು ಮಾರಾಯಿತಿ, ಮೊದಲು ನನ್ನನ್ನು ಕರೆದುಕೊಂಡು ಹೋಗು ಈ ಚಳಿ ತಡೆಯಲಾಗುವುದಿಲ್ಲ' ಎಂದೆ. ಅವಳು ಮನೆಯ ಹಿಂದುಗಡೆ ಕಟ್ಟಿಸಿದ ಸ್ವಲ್ಪ ದೂರದಲ್ಲಿ ಇದ್ದ ಬಚ್ಚಲು ಮನೆಗೆ ಕರೆದುಕೊಂಡು ಹೋದಳು. ಮತ್ತೂ ಮಳೆಯು ಬಿಟ್ಟಿರಲಿಲ್ಲ. ಅದರಿಂದ ಬಚ್ಚಲು ಮನೆಯಲ್ಲಿ ಕತ್ತಲು ತುಂಬಿಕೊಂಡಿತ್ತು. ಕತ್ತಲೆಯೆಂದರೆ ಕತ್ತಲೆ. ಕಾರ್ಗಣ ಕತ್ತಲೆ. 'ಇದರಲ್ಲಿ ಕಾಲಿಡುವುದು ಹೇಗೆ' ಎಂದೆ. ಶರಧಿ–'ಹೋಗಿ ಚಿಮಿಣಿದೀಪ ಹೊತ್ತಿಸಿಕೊಂಡು ಬರಲಾ?' ಎಂದು ಕೇಳಿದಳು ನಾನು "ಬೇಡಪ್ಪಾ ಇನ್ನು ನೀನು ಅಡುಗೆ ಮನೆ ಹೋಗಿ ಚಿಮಿಣಿದೀಪ ಹೊತ್ತಿಸಿಕೊಂಡು ಬರುವುದು ಯಾವ ರಾಯನ ಕಾಲಕ್ಕೆ?' ಎಂದೆ. ಅವಳು;" ಬೇಡವಾದರೆ ಬೇಡ – ನನಗೇನು?' ಎಂದಳು. ನಾನು ಕೇಳಿದೆ

"ಹಂಡೆ ಎಲ್ಲಿದೆ? ಮೆಟ್ಟುಕಲ್ಲು ಎಲ್ಲಿ– ಅಷ್ಟು ತೋರಿಸು ಸಾಕು"– ನಾವಿಬ್ಬರೂ ಕತ್ತಲೆಯಲ್ಲಿ ಪರದಾಡಬೇಕಾದ ಪರಿಸ್ಥಿತಿಯಿತ್ತು. 'ಓ ಈ ಪ್ರಾಯದಲ್ಲಿಯೇ ನಿಮಗೆ ಕಣ್ಣು ಕಾಣಿಸುವುದಿಲ್ಲವಾ?" ಎಂದಳು. 'ಪ್ರಾಯ ಬಂದರೆ ಯಾರಿಗೂ ಕಣ್ಣು ಕಾಣಿಸುವುದಿಲ್ಲವೆಂದು ರಾಮಣ್ಣ ಹೇಳುತಿದ್ದರು' ಎಂದೆ. 'ಪ್ರಾಯವೋ ಮತ್ತೊಂದೋ– ಆ ಪ್ರಶ್ನೆ ಯಾಕೀಗ? ಸ್ವಲ್ಪ ಮುಂದೆ ಬನ್ನಿ. ಇಲ್ಲಿದೆ: ಹಂಡೆ. 'ಸ್ವಲ್ಪ ಮುಂದೆ ಕಾಲಿಟ್ಟರೆ ಮೆಟ್ಟುಕಲ್ಲು ಸಿಗುತ್ತದೆ. ಒಳ್ಳೆಯ ಬಿಸಿ ನೀರಿದೆ. ಕೈ ಕಾಲಿಗೆ ಬಿಸಿನೀರು ಹಾಕಿಕೊಳ್ಳಿ; ಚಳಿ ಹೇಳದೆ ಕೇಳದೆ ಓಡಿ ಹೋಗುತ್ತದೆ.' ಎಂದಳು. ಅವಳ ಮಾತು ಮಾತ್ರ ಕೇಳಿಸುತ್ತಿತ್ತೇ ವಿನಃ ಅವಳು ಎಲ್ಲಿದ್ದಾಳೆ ಎಂದು ತಿಳಿಯಲಿಲ್ಲ. ಬಚ್ಚಲು ಮನೆಯ ಕತ್ತಲು ನನಗೆ ಉದ್ದೀಪನ. ಕೆಲವು ವರುಷಗಳ ಹಿಂದಿನ "ಅವಳು" –"ಶಾಂಭವಿ" ಎಲ್ಲರೂ ಮನದಲ್ಲಿ ಸುತ್ತುವರಿದರು. "ಹಂಡೆಯೆಲ್ಲಿದೆ?" ಮತ್ತೆ ಕೇಳಿದೆ. "ಏನು ಮುಟ್ಟಿ ತೋರಿಸಬೇಕಾ?" ಎಂದು ಕೈ ಚಾಚಿದಳು ನನ್ನ ಆಕಸ್ಮಿಕವಾಗಿ ಆ ಕತ್ತಲೆಯಲ್ಲಿ ಅವಳ ಕೈಯನ್ನು ಮುಟ್ಟಿತ್ತು. ಅದನ್ನು ಮುಟ್ಟಿದಾಗ ರೇಸಿಮೆಯ ಬಟ್ಟೆಯನ್ನು ಮುಟ್ಟಿದಂತಾಯಿತು. ಒಂದೇ ಒಂದು ಕ್ಷಣ–ಅವಳ ಕೈಯತ್ತಿ ತುಟಿಗಿಟ್ಟೆ. ಅದು ನನಗೆ ಅವಳಿಗೆ ತಪ್ಪಾಗಿರಲಿಲ್ಲ.

ಈಗ ಜೆಸಿಂತಾಬಾಯಿಯ ಒಂಟಿ ರೂಂನಲ್ಲಿ ಕುಳಿತಿದ್ದೇನೆ. ಆ ದಿನದ ತಾಳ ಮದ್ದಲೆಯ ದಿನವನ್ನು ಕುರಿತು ಯೋಚಿಸುತ್ತೇನೆ. ಅದನ್ನು ನಾನು ಅನೈತಿಕವೆಂದು ಕರೆಯಲಾರೆ. ಶರಧಿಯ ಕೈಯಲ್ಲಿ ಜೀವಶಕ್ತಿಯಿತ್ತು." ಅವಳ ಮೆತ್ತನೆಯ ಕೈ ಮತ್ತು ನನ್ನ ತುಟಿ....................

ನಾನು ಕಳೆದು ಹೋದದ್ದನ್ನು ಹುಡುಕುತ್ತಿದ್ದೆ. ಶಾಂಭವಿ ನನ್ನನ್ನು ಬಿಟ್ಟಿದ್ದರೂ ನನಗೆ ಅವಳನ್ನು ಬಿಡಲಾಗಲಿಲ್ಲ. ಶರಧಿಯಲ್ಲಿ ನಾನು ಹುಡುಕಿದ್ದು ಅದನ್ನು. ಅವಳ ಕೈ ಮುಟ್ಟಿದಾಗ ನಾನು ಭಾವುಕನಾಗಿದ್ದೆ. ನನಗೆ ನನ್ನ ಭಾವುಕತೆಯನ್ನು ಕೊನೆಯ ತನಕ ಬಿಡಲಾಗಲಿಲ್ಲ. ನಿಜ ಹೇಳುತ್ತೇನೆ–ನನಗೆ ಆ ದಿನಗಳಲ್ಲಿ ಒಬ್ಬಳು ಹುಡುಗಿ ಬೇಕೇ ಬೇಕಾಗಿದ್ದಳು. ಹುಡುಗಿಯ ಆಲಿಂಗನ ಬೇಕಿತ್ತು. ಹುಡುಗಿಯ ಸ್ಪರ್ಶ ಬೇಕಾಗಿತ್ತು. ಬೀಡಿ, ಕುಡಿತ; ಕುಣಿತ;. ಹುಡುಗಿಯೊಬ್ಬಳ ಸಾಂಗತ್ಯದಲ್ಲಿ ನಾನು ನನ್ನನ್ನು ಮರೆ ಮಾಡಿಕೊಳ್ಳಬೇಕಾಗಿತ್ತು. ಶರಧಿಯ ಕೈ ಮುಟ್ಟಿದಾಗ–ನನ್ನ ಮೈಯ ರಕ್ತ ಸಂಚಾರವೆಲ್ಲ ತಲೆಗೆ ನುಗ್ಗಿದಂತಾಯಿತು. ಅದು ನನಗೆ ಒದಗಿದ ಪುಣ್ಯ.

* * * * *

ಹೆಣ್ಣಿನ ಅಪ್ಪುಗೆ; ಹೆಂಡದ ಒಗರು;
ಹಾಡುಗಳ ಸುಖ
ನಾಟ್ಯದ ಲಾಸ್ಯ
ಬೀಡಿಯ ಹೊಗೆ
ಪ್ರೀತಿಸಿದ ಜೀವಗಳು
ನಮ್ಮ ತಲೆ ಮೇಲೆ
ಬೆರಳಾಡಿಸುವಲ್ಲಿನ ಸುಖಕ್ಕೆ ಬೇರೆ ಪರ್ಯಾಯಗಳಿಲ್ಲ.

## 1992
## ಡಿಸೆಂಬರ್
## 25

ನಿಶಿತ ಬರೆದುಕೊಂಡಿದ್ದ.-ತನ್ನದಿನಚರಿಯಲ್ಲಿ. ಮತ್ತೊಂದು ಪುಟದಲ್ಲಿ ಮುಂದುವರಿಸಿದ್ದ.

"ನಿಧಾನವಾಗಿ ತನಗೆ ತಾನೇ ವಿಷ ಕೊಟ್ಟುಕೊಂಡು ಸಾಯುವುದು ಬೇರೆ. ಇರಿಯುವ ಬೆಂಕಿಯಲ್ಲಿ ಅರೆಸುಟ್ಟುಕೊಂಡು ಆಸ್ಪತ್ರೆಯಲ್ಲಿ ಹಸಿಹಸಿಯಾದ ತನ್ನ ಮೈಯ ವಾಸನೆಯನ್ನು, ತನ್ನ ಮೈಯ ನೋವನ್ನು ತಾನೇ ತಿಂದುಕೊಂಡು ನರಳುತ್ತಾ ಸಾಯುವುದು ಬೇರೆ. ಏನಿದ್ದರೂ ತನ್ನದು ಮೊದಲ ಆಯ್ಕೆ. ಅದು ತನಗೆ ನೆಮ್ಮದಿ. ನೆಮ್ಮದಿಯನ್ನು ವೃಥಾ ಕಾಣಲು ಬಯಸುವುದು ಯಾವುದಕ್ಕೆಂಬುದು ಕೂಡಾ ಅರ್ಥವಾಗಲಿಲ್ಲ. ಮತ್ತೆ ಖಿನ್ನತೆಯು ಆವರಿಸಿಕೊಂಡಿತು. ಒದ್ದೆಯಾದ ಬಟ್ಟೆ; ತಲೆಗೂದಲು; ಒದ್ದೆಯಾದ ಚಾಪೆ, ಒದ್ದೆಯಾದ ಕೊಠಡಿ ಎಲ್ಲವೂ ಮುದ್ದೆಗೊಂಡ ಸ್ಥಿತಿಯಲ್ಲಿಯೇ ಉಳಿದಿವೆ. ಪುಸ್ತಕದಲ್ಲಿ ಬರೆಯತೊಡಗಿದೆ. "ಇದು ನನ್ನ ಕೊನೆಯ ಪುಟಗಳು ಎಂಬುದು ಗೊತ್ತು. ಆದರೂ ಜನರು ನಂಬುವ ರೀತಿಯಲ್ಲಿ ಹೇಳಬೇಕೆಂದರೆ-ನಾನು ದಾರಿ ತಪ್ಪಿದ್ದೇನೆ. ತಪ್ಪಿನ ದಾರಿಯನ್ನು ಸರಿಪಡಿಸುವ ಉದ್ದೇಶವೂ ನನಗಿಲ್ಲ. ಮದುವೆಯಾಗಲಿಲ್ಲ. ಮದುವೆಯಾಗಬೇಕೆಂಬ ಹಂಬಲವಿರಲಿಲ್ಲ. ಉರಿಯುವ ಚಿತೆಯಲ್ಲಿ ನಾನೇ ಉರಿಯುವುದು ನನಗೆ ಖುಷಿ. ನನ್ನನ್ನೇ ಸುಟ್ಟುಕೊಳ್ಳುತ್ತೇನೆ."

* * * * *

"ಮತ್ತೊಬ್ಬಳು ಜೀವನ ಸಂಗಾತಿ ಬಂದು ನನ್ನ ಈ ದಿನಚರಿಯ ಪುಟಗಳನ್ನು ಮಗುಚಿ ಹಾಕುತ್ತಾಳೆಂದು ನಾನು ಯಾವತ್ತೂ ಬಾವಿಸಿರಲಿಲ್ಲ. ನನಗೆ ಆ ಭ್ರಮೆ ಇರಲಿಲ್ಲ. ಜೀವನದಲ್ಲಿ 'ಅವಳು' ಮತ್ತು ಶಾಂಭವಿ ನನಗೆ ಪಾಠ ಕಲಿಸಿರುವುದಂತೂ ನಿಜ. ಶಾಂಭವಿಯದು - ನಾನು ತಿಳಿದಂತೆ ಸ್ಲೇಟಿನಲ್ಲಿ ಬರೆದು ಮತ್ತೆ ಉಜ್ಜಿ ಹಾಕಬಹುದಾದ ವ್ಯಕ್ತಿತ್ವವಂತೂ ಅಲ್ಲ. ಹಸ್ತಿನಿ ಜಾತಿಯ ಹೆಣ್ಣು. ಮಂದಹಾಸವಿತ್ತು ಅವಳ ಮುಖದಲ್ಲಿ. ಶರಧಿಯದು ಅದಕ್ಕಿಂತ ಉಲ್ಟಾ ವ್ಯಕ್ತಿತ್ವ. ಆ ದಿವಸ ತಾಳಮದ್ದಲೆಯು ನನ್ನ ಜೀವನದ ಒಂದು ನಿರ್ಣಾಯಕ ಘಟ್ಟ ತಲುಪುವುದು ಸಾಧ್ಯವಿರಲಿಲ್ಲ. ಶರಧಿ ಶಂಕಿನಿಜಾತಿಯ ಹೆಣ್ಣು. ಅವಳೆದೆಯ ನಡುವಲ್ಲಿ ಒಂದು ಕಿರು ಬೆರಳು ಹೋಗಲು ಸಾಧ್ಯವಿರಲಿಲ್ಲ. ದಪ್ಪನೆಯ

ಗುಂಗುರು ಕೂದಲು. ಶಾಂಭವಿಯನ್ನು ಹೋಲಿಸಿದರೆ ಶರಧಿಯದು ಹೆಚ್ಚು ಗೌರವರ್ಣ. ಥೇಟು ಕೇದಿಗೆಯೆ. ನಾಚಿಕೆಯಾದರೆ ಸಳಕ್ಕನೆ ಗಲ್ಲವು ಕೆಂಪೇರುತ್ತದೆ. ಮೇ ಫ್ಲವರಿನ ಹೂವಿನ ಎಸಳು ಅವಳ ಕೈ. ಹೆಚ್ಚು ಎತ್ತರವಿಲ್ಲ. ತೆಳುವಾದ ಸೊಂಟ. ಸ್ವಲ್ಪ ಚಂಚಲವೆನ್ನಬಹುದಾದ ಕಣ್ಣುಗಳು. ಅವಳ ಮನಸ್ಸಿನಲ್ಲಿ ಇದ್ದುದನ್ನು ಅವಳ ಕಣ್ಣುಗಳು ಹೇಳುತ್ತಿದ್ದವು. ಬಯಕೆ – ನಿರಾಸೆ ಎರಡು ಅವಳ ಕಣ್ಣುಗಳಲ್ಲಿ ಪ್ರತಿಫಲಿಸುತ್ತಿತ್ತು. ಹುಟ್ಟಿಕೊಳ್ಳುವ ಆಸೆಯನ್ನು ಅದುಮಿ ಇಡಲಾರಳು. ಹೊಳೆಯಲ್ಲಿನ ಸುಳಿಯಂತೆ ಒಳಗೆಳೆದುಕೊಳ್ಳುವವಳು. ಸಣ್ಣ ಹಣೆ. ಹೆಚ್ಚೇನು ದೊಡ್ಡದಲ್ಲದ ಮೂಗು. ನೋಡಿದ ಕೂಡಲೇ ಅನಿಸಿತ್ತು. ನಿಜ ಹೇಳ್ಬೇಕಂದರೆ – ಮಳೆಹನಿಗಾಗಿ ಕಾಯುತ್ತಿರುವ ತುಟಿ ಮಾತ್ರ ಆಸ್ವಾದನೀಯ ಎಂಬುದರಲ್ಲಿ ಎರಡು ಮಾತಿರಲಿಲ್ಲ. ಲಂಗಕ್ಕಿಂತಲೂ ಸೀರೆಯು ಒಪ್ಪುತ್ತಿತ್ತು. ಅದರಲ್ಲಿ ಅವಳು ಚೆಂದ ಕಾಣಿಸುತ್ತಿದ್ದಳು. ಕಣ್ಣಿಗೆ ಕಾಡಿಗೆ ಹಚ್ಚುತ್ತಿದ್ದುದರಿಂದ ಕಣ್ಣಿನ ಬೆಳಕು ಹೆಚ್ಚು. – ಮೀನಿನ ಹೊಳಪು ಮತ್ತು ಅದಕ್ಕೆ. ಶರಧಿ ಮೃದ್ವಂಗಿ ಜಾತಿಯವಳು. ಮೆಯ್ಯಲ್ಲಿ ಎಲುಬು ಕಾಣಿಸುವುದಿಲ್ಲ. ಬಿಸುಪಿದೆ ನುಣುಪಿದೆ. ನಯವಿದೆ; ಮೈಯನ್ನು ಎಲ್ಲಿ ಮುಟ್ಟಿದರೂ ಕೈ ಜಾರಿ ಎಲ್ಲಿಯೂ ಹೋಗಬಹುದಷ್ಟು; ಚರ್ಮಕ್ಕೆ ತೆಂಗಿನೆಣ್ಣೆ ಹಾಕಿದಂತೆ ರೋಮರಹಿತ ತೋಳು. ಜಂಭವಿದೆ ಮಾತಿನಲ್ಲಿ. ಖಡಾ ಖಂಡಿತವಾದ ನಿಲುವು. ತನ್ನ ಮಾತೇ ನಡೆಯಬೇಕೆಂಬ ಹಂಬಲ ಬೇರೆ. ಎದುರಿಗಿರುವವರನ್ನು ಭಂಗಿಸುವದರಲ್ಲಿ ನಿಪುಣೆ. ಶರಧಿ – ಆ ದಿನ ಕೊಟ್ಟ ಅನುಭವ ಅಪೂರ್ವ ಅವಕಾಶವನ್ನು ಮರೆಯಲಾರೆ. ನಾನು ಮುಟ್ಟಿದಾಗ ನನ್ನ ಕೈಗಳಿಗೆ ಜೀವ ಕೊಟ್ಟಳು. – ಅದಕ್ಕಾಗಿಯೇ ಕಾದವಳಂತೆ. ಅವಳನ್ನು ಮೊದಲು ನೋಡಿರಲಿಲ್ಲ. ಆ ಮರೆಯಲಾಗದ ಕ್ಷಣ ನಮ್ಮ ನಡುವೆ ಹುಟ್ಟಿಕೊಂಡದಕ್ಕೆ ವಿಧಿ ಕಾರಣವಲ್ಲ. ಚರ್ಮೇಂದ್ರಿಯದ ಸುಖ ಮನೋಂದ್ರಿಯದ ಸುಖಕ್ಕಿಂತ ದೊಡ್ಡದು ಎಂದು ತೋರಿಸಿಕೊಟ್ಟಳು. ಇಂದ್ರಿಯದ ನಿಗ್ರಹದ ಅಗತ್ಯವಿಲ್ಲವೆಂದು ಒಂದೇ ಒಂದು ಕ್ಷಣದಲ್ಲಿ ತೋರಿಸಿಕೊಟ್ಟಳು. ಗಂಡು ಹೆಣ್ಣನ್ನು ಮುಟ್ಟುವಲ್ಲಿನ ಹೊಸ ಅರ್ಥವನ್ನು ತೋರಿಸಿ ಕೊಟ್ಟ ಮೊದಲ ಹೆಣ್ಣು ಶರಧಿ. ಒಂದೇ ನಿಮಿಷದಲ್ಲಿ ಯಾಕೆ ಶರಧಿ ನನ್ನನ್ನು – ಆ ಸಂಜೆ ಅಂಗೀಕರಿಸಿದಳು ಎಂಬುದಕ್ಕೆ ಸರಿಯಾದ ಕಾರಣ ಕೊಡಲಾರೆ. ಜೀವನದ ಅಕಸ್ಮಿಕದಲ್ಲಿ ಅದೂ ಒಂದು ಇರಬಹುದೆ ಎಂಬ ಸಂಶಯಗಳು ಕಾಡುತ್ತಿದ್ದುದು ನಿಜ. ನಮ್ಮ ಮನಸ್ಸುಗಳು ಮುಂದುವರಿಯಿರಿ ಎಂದರೂ ಮುಂದುವರಿಯಲಿಲ್ಲ ಎಂಬುದಕ್ಕೆ ಪಾಪದ ಭಯ ಕಾರಣವೇ, ಅಥವಾ ಬೇರೆಯೇನಾದರೂ ಇದ್ದಿತೇ? – ಅನಂತರದ ಅನೇಕ ವರ್ಷ ನನ್ನನ್ನು ಕಾಡಿದೆ. ತಾಳಮದ್ದಲೆಯಲ್ಲಿ ಅರ್ಥ ಹೇಳುವಾಗ ರಾಮಣ್ಣನ ಮುಖವನ್ನೊಮ್ಮೆ; ಶರಧಿಯ ಮುಖವನ್ನೊಮ್ಮೆ ನೋಡುತ್ತಿದ್ದೆ. ಯಾರಾದರೂ ನಮ್ಮನ್ನು ನೋಡುತ್ತಿದ್ದಾರೆಂದು ತಿಳಿದಾಗ ನಮ್ಮ

ನಡವಳಿಕೆಯಲ್ಲಿ ಅನಪೇಕ್ಷಿತವಾಗಿ ಕಾಣಿಸಿಕೊಳ್ಳುವ ಒಂದು ನಾಟಕೀಯತೆಯು ಶರಧಿಯಲ್ಲಿತ್ತು. ಎಲ್ಲಾ ಯೌವನಸ್ಥೆಯರಂತೆ ಪಕ್ಕದಲ್ಲಿ ಕುಳಿತ ಹುಡುಗಿಯನ್ನು ತಟ್ಟಿ ಮಾತಾಡಿಸುತ್ತಿದ್ದಳು. ಆಗಾಗ ನಗುತ್ತಿದ್ದಳು. ಕೈಕರಣ ಮಾಡುತ್ತಿದ್ದಳು. ನಾನು ಗಮನಿಸುತ್ತೇನೆ ಎಂದು ತಿಳಿದಾಗ; ಅವಳ ಚಟುವಟಿಕೆಯು ಹೆಚ್ಚಾಯಿತು. ವಾಲಿವಧೆಯ ರಾಮ ನನಗೆ ಪರಿಚಿತ ಪಾತ್ರವಲ್ಲ.ಅದೂ ರಾಮಣ್ಣನ ಎದುರು ಅರ್ಥ ಹೇಳುವುದು ಸುಲಭವಲ್ಲ. ಭಾಗವತರು ಪದ್ಯ ಎತ್ತಿಕೊಂಡರು: “ನೋಡಿ ನಿರ್ಮಲ ಜಲಸಮೀಪದಿ ಮಾಡಿಕೊಂಡರು ಪರ್ಣಶಾಲೆಯ............ ರೂಢಿಪಾಲರು ಪಂಚವಟಿಯ..............." ನಾನು ಮಾತಾಡಬೇಕು, ಮಾತು ಉಗ್ಗಡಿಸಿತು... ಏನು ಹೇಳುವುದೆಂದು ತಿಳಿಯಲಿಲ್ಲ. “ಲಕ್ಷ್ಮಣ ನಾವು ಬಂದು ನಿಂತಂಥ ಜಾಗ ಪಂಚವಟಿಯುಲ್ಲವೇ? ಪಂಚವಟವೃಕ್ಷಗಳಿಂದ ಕೂಡಿರುವ ಇದಕ್ಕೆ ಪಂಚವಟಿಯೆಂದು ಕರೆಯುತ್ತಾರೆ. ಎಂತಹ ನಿರ್ಮಲವಾದ ಜಾಗವಿದು." – ಅಷ್ಟೇ ಹೇಳಿದ್ದೆ. ರಾಮಣ್ಣನವರದು ವಾಲಿಯಾಗಿರುವುದರಿಂದ ಅವರಿನ್ನೂ ವೇದಿಕೆ ಹತ್ತಿರಲಿಲ್ಲ. ವೇದಿಕೆಯ ಮೇಲೆ ಎರಡು ಗ್ಯಾಸ್ ಲೈಟು ಇಟ್ಟಿದ್ದರು. ಒಂದು; ಭಾಗವತರ ಹತ್ತಿರ. ಇದರಿಂದ ಅವರಿಗೆ ಪದ ಹೇಳಲು ಅನುಕೂಲವಿತ್ತು. ಇನ್ನೊಂದು, ನಡು ವೇದಿಕೆಯಲ್ಲಿ. ಇದರ ಬೆಳಕು ನಮ್ಮ ಮುಖದ ಮೇಲೆ ಬೀಳುತ್ತಿತ್ತು. ಪ್ರೇಕ್ಷಕರ ಮೇಲೆ ಗ್ಯಾಸ್ ಲೈಟಿನ ಬೆಳಕು ಬೀಳಬಾರದು ಎಂದು ಅವರ ಕಡೆಗೆ ರಟ್ಟು ಇಟ್ಟಿದ್ದರು, ಹೀಗಾಗಿ ನನ್ನ ಮುಖದ ಮೇಲೆ ಬೆಳಕು ಬೀಳುತ್ತಿತ್ತು. ಲೈಟಿನ ಮೇಲೆ ಕೂತ ಚಿಟ್ಟೆಗಳು ಉರಿಗೆ ಬಿದ್ದು; ರೆಕ್ಕೆ ಸುಟ್ಟು ಬಿದ್ದು ಹಸಿಯಾದ ವಾಸನೆಯು ಹಬ್ಬತೊಡಗಿತು. ಅದೊಂದು ವಿಚಿತ್ರ ವಾಸನೆ. ಅರ್ಥಹೇಳಲು ನನಗೆ ಹೆದರಿಕೆ. ಮೊದಲೇ ನಾಕಾರು ಜನರ ಎದುರು ಮಾತಾಡಲು ನನಗೆ ಅಂಜಿಕೆ. ನನ್ನ ಕೈಗಳು ನಡುಗುತ್ತಿದ್ದವು. ಪಂಚವಟಿ ಪ್ರಸಂಗ ಮುಗಿಸಿದೆ. ಆದರೆ ವಾಲಿವಧೆಗೆ ರಾಮಣ್ಣ ಬಂದು ಕುಳಿತಾಗಲಂತೂ ನಾನು ತಡವರಿಸಿದೆ. ರಾಮಣ್ಣ ಎದುರಾಳಿಯ ಮುಖ ನೋಡುವದಿಲ್ಲ. ಸಭಿಕರನ್ನು ನೋಡುವ ಅಭ್ಯಾಸ ಅವರಿಗೆ. ವಾಲಿ ವಧೆಯ ಕೊನೆಯ ಬಾಗದಲ್ಲಿ “ವಾಲಿಯು ರಾಮನಿಗೆ ಹೇಳುವ ಪದ್ಯ ಬಂತು;' “ಕೋಡಗನ ಮಾಂಸವನು ಮೆಲಬಹುದೆ?". ರಾಮಣ್ಣ ಹುರುಪಿನಿಂದ ಇದ್ದರು;– 'ನೀನು ಆರ್ಯಾವರ್ತ ದಶರಥ ಚಕ್ರವರ್ತಿಯ ಮಗನೆಂಬುದು ಗೊತ್ತು. ರಾಮ ನೀನು ಬಯಸಿದಲ್ಲಿ – ನೀನು...... ಈ ಸುಗ್ರೀವನ ಸಖ್ಯವನ್ನು ಬಯಸದೆ – ನನ್ನ ಸ್ನೇಹ ಬಯಸಿದ್ದಲ್ಲಿ ನಿನಗೆ ಎಷ್ಟು ಜಿಂಕೆ ಬೇಕು ಅಷ್ಟು ಜಿಂಕೆಗಳ ಮಾಂಸಗಳನ್ನು ಊಟಕ್ಕೆ ತಂದು ಬಡಿಸುತ್ತಿದ್ದೆ. ರಾಮ ನೀನು ಕೊಳೆತ ಮಾಂಸವನ್ನು ತಿನ್ನುವುದಿಲ್ಲವೆಂದು ಗೊತ್ತು. ಆರ್ಯಾವರ್ತದ ರಾಜರು ತಾವು ಬೇಟೆಯಾಡಿ ಯಾವ ಪ್ರಾಣಿಗಳನ್ನು ಕೊಂದಿದ್ದಾರೊ ಅದರ ಮಾಂಸ

ಮಾತ್ರ ತಿನ್ನುತ್ತಾರೆಂಬುದು ನಾನು ಕೇಳಿ ತಿಳಿದುಕೊಂಡ್ಡಿದ್ದೇನೆ. ಅಲ್ಲ ರಾಮ, ಒಂದು ವಿಷಯವನ್ನು ನಿನಗೆ ಕೇಳುತ್ತೇನೆ. ನನ್ನ ಮಾಂಸವನ್ನು ತಿನ್ನಲು ಆಸೆ ಮಾಡಿದ್ದಿ ಎಂದ್ರೆ ನಿನ್ನಕತೆಯೆಲ್ಲಿಗೆ ತಲುಪಿಯದೆ? ಕ್ಷತ್ರಿಯರು ಮಂಗನ ಮಾಂಸವನ್ನು ತಿನ್ನಬಹುದೆ? ನಾವು ಕಾಡುಕಪಿಗಳು. ನಮ್ಮಿಂದ ನೀವು, ನಿಮ್ಮಿಂದ ನಾವಲ್ಲ. ನಿಮ್ಮ ಪೂರ್ವಜರು ನಾವು. ನಮಗೆ ನೀವು ಹೇಳುವುದು ಮಂಗಗಳ ಬುದ್ಧಿ ಅಂತ. ಆದ್ರೆ ನನ್ನ ಮಾಂಸಭಕ್ಷಣೆ ನಿನಗೆ ಯೋಗ್ಯವಾದುದೆ?'

ರಾಮಣ್ಣ ವಾಲಿಯ ಅರ್ಥವನ್ನು ತುಂಬಾ ಸಮರ್ಥವಾಗಿ ನಿರ್ವಹಿಸುತ್ತಿದ್ದರು. ವಾಲಿಮೋಕ್ಷದಲ್ಲಿ ರಾಮನ ಬಾಣ ತಾಗಿದ ಮೇಲೆ ವಾಲಿಯು ರಾಮನನ್ನು ಜರೆಯುತ್ತಾನೆ. ರಾಮನು ತಕ್ಷಣ ಉತ್ತರಿಸಬೇಕಾದ ಅಗತ್ಯವಿರಲಿಲ್ಲ. ಆ ಸಂದರ್ಭದಲ್ಲಿ ವಾಲಿಯ ಮಾತುಗಳೂ ಹಾಗೆಯೇ ಇವೆ. ಅದೊಂದು ಸ್ವಗತದ ಮಾದರಿಯದು. ಸುಮಾರು ಪದ್ಯಗಳಿವೆ. ರಾಮಣ್ಣನಿಗೆ ಆ ಪದ್ಯಗಳು ಕಂಠಪಾಠ. ಅದೂ ಅಲ್ಲದೆ ವಾಲಿಯ ಆ ಮಾತುಗಳು ನಡೆಯುತ್ತಿರುವ ಸಂದರ್ಭದಲ್ಲಿಯೇ ಚಾ ಬಂತು. ಹೊರಗಡೆಗೆ ಮಳೆಯು ಸುರಿಯುತಿತ್ತು – ಗುಡುಗು ಸಿಡಿಲೊಂದಿಗೆ. ಭೋರ್ಗರೆವ ಮಳೆ ಮತ್ತೆ ಆಗಾಗ ಗುಡುಗುಟ್ಟುವ ಗುಡುಗು, ಅದಕ್ಕೆ ಸರಿಯಾಗಿ ಸುಳಿದು ಮಾಯವಾಗುವ ಮಿಂಚು. ಗುಡುಗು ಗಂಡು ಮಿಂಚು ಅದರ ಹೆಂಡತಿ. ಇನ್ನೂ ತುಂಬಾ ಹೊತ್ತು ರಾಮಣ್ಣ ಮಾತಾಡಬಹುದೆಂದು ಭಾವಿಸಿಕೊಂಡೆ. ನಾನು ಅಲ್ಲಿಯೇ ಕುಳಿತು ಏನು ಮಾಡುವುದು ಎಂದು ತಿಳಿಯದೆ ವೇದಿಕೆ ಇಳಿದು ಬಂದೆ. ವೇದಿಕೆಯೆಂದರೆ ಬಲಬದಿಗೆ ನಾಕು ಬೆಂಚು ಎಡಬದಿಗೆ ನಾಕು ಬೆಂಚು. ನಾನು ಮೈಮುರಿದುಕೊಂಡು ಶಾಲೆಯ ಜಗುಲಿಯ ಒಂದು ಮೂಲೆಯಲ್ಲಿ ಬೀಡಿ ಸೇದುತ್ತಾ ನಿಂತೆ. ಅದೇ ಸಮಯಕ್ಕೆ ಸರಿಯಾಗಿ ಶರಧಿ ಹೊರಗೆ ಬಂದಳು. ಅವಳ ಜೊತೆಗೆ ಮತ್ತೊಬ್ಬಳು. ಶರಧಿ ನೋಡಿಯೂ ನೋಡದಂತೆ ಹೋದಳು. ಚಳಿ ಹಿಡಿದ ಬೀಡಿಯನ್ನು ಬಿಸಾಕಿ ಮತ್ತೆ ವೇದಿಕೆ ಹತ್ತಿದೆ.

ಭಾಗವತರು, 'ಇನ್ನು ಬದುಕಬೇಕೆಂಬಾಸೆಯೇ?' ಎಂಬ ಪದ್ಯ ಎತ್ತಿಕೊಂಡರು. "ವಾಲಿ ಇನ್ನು ನಿನ್ಗೆ ಬದುಕುವ ಆಸೆಯಿದ್ದರೆ ಹೇಳು ನಾನು ಬಿಟ್ಟ ಬಾಣವನ್ನು ಮತ್ತೆ ಮರಳಿ ಪಡೆಯುತ್ತೇನೆ" ಎಂದಷ್ಟೇ ಹೇಳಿದೆ. ಮುಂದೆ ಅರ್ಥ ಮುಂದುವರಿಸಲು ಆಗಲಿಲ್ಲ.

'ಹೂಂ ಇನ್ನು ಬದುಕುವ ಆಸೆ ವಿಷಯಬಿಡು. ನಿನಗೆ ಅದು ಬಿಟ್ಟರೆ ಬೇರೆ ಮಾತು ಈಗ ಬರುವುದಿಲ್ಲ. ಇದ್ದ ಒಬ್ಬಳು ಹೆಂಡತಿಯುನ್ನು ಕಳೆದುಕೊಂಡವನು ನೀನು. ಮರೆಯಲ್ಲಿ ನಿಂತು ಬಾಣ ಬಿಟ್ಟ ನಿನಗೆ ಬದುಕಬೇಕೆಂಬ ಆಸೆಯಿದೆಯೇ ಎಂದು ಕೇಳುವ ಹಕ್ಕಿದೆಯೇ?'

ನಾನು ಸುಮ್ಮನಾದೆ. ಶರಧಿ ಪಕ್ಕದಲ್ಲಿ ಕೂತವಳ ತೊಡೆತಟ್ಟಿದಳು. ನೋಡಿದೆ.

ರಾಮಣ್ಣ ಮಾತು ಮುಂದುವರಿಸಿದರು. "ರಾಮಾ ನೀನು ಈಗ ಉತ್ತರ ಕೊಡಲಾರೆ.

ನಾನು" ವಾಲಿ, ನೀನು ಅನುಜನ ಸತಿಯನ್ನು ಬಯಸಿದ್ದಕ್ಕೆ ಈ ಶಿಕ್ಷೆ."

ವಾಲಿ – "ಅದು ಪೌರುಷ"

ರಾಮು – "ಇಬ್ಬರು ಸತಿಯರನ್ನು ಬಯಸಿದೆಯಲ್ಲ. ವಾಲಿ ನ್ಯಾಯವೇ ತಮ್ಮನ ಸತಿಯ ಮುಟ್ಟುವುದು."

ವಾಲಿ – "ಅಣ್ಣ ತಮ್ಮನ ಪ್ರಶ್ನೆ ಬಿಡು – ನಾವು ಮೂಲತಃ ಮಂಗಗಳು. ನಮ್ಮ ನೀತಿಯೇ ಬೇರೆ. ನಿಮ್ಮ ನೀತಿಯೇ ಬೇರೆ.

ರಾಮಣ್ಣನ ವಾಲಿಯು ಚಪ್ಪಾಳೆಗಿಟ್ಟಿಸಿತು. ನಾನು ಮಂಕಾದೆ. ತಲೆತಗ್ಗಿಸಿ ಕುಳಿತೆ. ಶರಧಿಯು ಕೈ ಚಪ್ಪಾಳೆ ಹೊಡೆದುದು ಕಾಣಿಸಿತು. ಮತ್ತೊಮ್ಮೆ ಸಂಕೋಚದ ಮುದ್ದೆಯಾದೆ. ಒಮ್ಮೆ ತಾಳಮದ್ದಲೆ ಮುಗಿದರೆ ಸಾಕು ಎಂದು ಅನಿಸಿತು.

ಭಾಗವತರು "ಮಂಗಲಂ ಜಯಮಂಗಲಂ" ಹೇಳಿದ ಕೂಡಲೇ ನಾನು ಎದ್ದು ನಿಂತು, ವೇದಿಕೆಯಿಳಿದು ಶಾಲೆಯ ವಠಾರಕ್ಕೆ ಬಂದೆ. ಸಭಿಕರು ಒಬ್ಬರಿಗೊಬ್ಬರು ಮಾತಾಡುತ್ತಾ ಹೊರಟರು.

ಶರಧಿಯು ಕೂಡ ಹೋಗಿ ರಾಮಣ್ಣನತ್ರ, "ನೀವು ಚೆನ್ನಾಗಿ ಅರ್ಥ ಹೇಳುತ್ತೀರಿ. ನೀವು ಹೀಗೆಲ್ಲಾ ಅರ್ಥ ಹೇಳುತ್ತೀರಿ ಅಂತ ಗೊತ್ತೇ ಇರಲಿಲ್ಲ." ಎಂದಳು. ನನಗೆ ಹೊಟ್ಟೆ ಕಿಚ್ಚಾಯಿತು. ಅವಳು ನನ್ನ ಕಡೆ ನೋಡಿ ನೀವು ಚೆನ್ನಾಗಿ ಹೇಳಿಲ್ಲ ಎಂಬುದನ್ನು ಸೂಚಿಸಿದಳು. ಶರಧಿಯ ನೋಟ ನನ್ನನ್ನು ಕುಗ್ಗಿಸಿತು. ಸಂಜೆ ಆರು ಏಳು ಗಂಟೆಯ ಸುಮಾರಿನ ಶರಧಿಗೂ ಈಗಿನ ಶರಧಿಗೂ ವ್ಯತ್ಯಾಸವಿತ್ತು. ನನಗೆ ಅಲ್ಲಿ ಯಾವ ಕೆಲಸವು ಇರಲಿಲ್ಲ. ಅವಳು, ಶಾಂಭವಿ; ಈಗ ಶರಧಿ – ಹೀಗೆ ಮೂವರು ನನ್ನ ಎದುರು ಸುಳಿದರು. ಈಗ ಜೆಸಿಂತಾ ಬಾಯಿಯ ಕಂಪೌಂಡಿನಲ್ಲಿ ಕುಳಿತು ಆ ದಿನಗಳ ಕುರಿತು ಯೋಚಿಸುತ್ತೇನೆ – ಅದು ಯಾವುದಕ್ಕೂ ಅರ್ಥವಿರಲಿಲ್ಲ. ನನಗೆ ನನ್ನ ದೇಹವೆಂದರೇನು; ಹುಡುಗಿಯರು ಎಂದರೇನು ಎಂದು ತಿಳಿಯದ ಕಾಲದಲ್ಲಿ 'ಅವಳು' ಸಿಕ್ಕಿದ್ದಳು; ತಡವಿ ಹೋದಳು; ಶಾಂಭವಿ, 'ನೀನು ಓದಬೇಕು; ನನಗೆ ನೀನು ಮುಖ್ಯ' ಎಂದವಳು ಕೊನೆಗೆ ಕೈ ತೊಳೆದಳು.

ನನಗೆ ಇದು ಯಾವೂದೂ ಗೊತ್ತಿರಲಿಲ್ಲ; ನನ್ನ ಜೀವನದಲ್ಲಿ 'ಅವಳು' ಬಂದಾಗ ಯಾವ ಆಕರ್ಷಣೆ ಇತ್ತು ಅಂತ ಹೇಳಲಾರೆ; ನನಗೆ ತಪ್ಪು ಸರಿಗಳ ನಡುವಣ ವ್ಯತ್ಯಾಸ ತಿಳಿದಿರಲಿಲ್ಲ. ಅವಳು ನನ್ನ ದೇಹವಿಡಿ ಹುಡುಕಿ; ಲಂಗ ಕೊಡವಿ ಹೋದಳು. ಅಲ್ಲಿಗೆ ಮುಗಿಯಿತು. ಸಕ್ಕರೆಯಂಥ ಶಾಂಭವಿ ನೀರಲ್ಲಿ ಕರಗಿ ಹೋದಳು. ಈ ಹುಡುಗಿಯರು ಈ ನಮೂನೆ ಗುಟ್ಟುಗಳನ್ನು ಎಲ್ಲಿ ಇಟ್ಟಿರುತ್ತಾರೆ.? ಶಾಲೆಯ ಹೊರಗೆ ನಾನೊಬ್ಬನೇ ಕುಳಿತು ಯೋಚಿಸುತ್ತಿದ್ದೆ– ಮಳೆ ಬಿಟ್ಟಿದ್ದರೂ ಮಳೆ ಬಿದ್ದು ಹೋದ ಲಕ್ಷಣಗಳಿದ್ದವು. ನಿಧಾನವಾಗಿ ಚುಮುಚುಮು ಬೆಳಕು. ಒಬ್ಬರೊಬ್ಬರೇ ಶಾಲೆಯ ಮೆಟ್ಟಿಲು ಇಳಿಯ ತೊಡಗಿದರು. ಅವರ ಕಣ್ಣುಗಳಲ್ಲಿ ನಿದ್ದೆಯ ಅಮಲು ಕಾಣಿಸುತ್ತಿತ್ತು. ತಾಳಮದ್ದಲೆ ಮುಗಿದ ಮೇಲೆ ಜನರಿಗೇನು ಕೆಲಸ? ಕೆಸರು ತುಳಿಯುತ್ತಾ ಹೋದರು. ಶರಧಿಯ ಚಂಚಲ ಕಣ್ಣುಗಳು ಕೂಡಾ ನೆಲ ನೋಡುತ್ತಿದ್ದವು. ಅವಳು ನನ್ನನ್ನು ನೋಡಲಿಲ್ಲ. ಈ ಹುಡುಗಿಯರ ಮನೋ ಸುಳಿಯಲ್ಲಿ ಏನೇನು ಇದೆಯೋ ದೇವರಿಗೆ ಗೊತ್ತು. ನಾನು ಶಾಲೆಯ ಕಟ್ಟೆಯ ಮೇಲೆ ಕುಳಿತುಕೊಂಡು ಯೋಚಿಸುತ್ತಿದ್ದೆ. ಲೌಕಿಕ ಮರೆತಿದ್ದ ಮಳೆಯು ಲೋಕದ ಆಗು ಹೋಗುಗಳಿಗೆ ಸಾಕ್ಷಿಯಾಗಲು ನಿಂತಿತ್ತು. ಕಟ್ಟೆಯ ಮೇಲೆ ಕುಳಿತವನಿಗೆ ಇದೇ ಚಿಂತೆ. ಬಹುಶಃ ನನ್ನದೇ ತಪ್ಪಿರಬೇಕು.

ಹಿಂದಿನಿಂದ ಬಂದು ರಾಮಣ್ಣ ನನ್ನ ಬೆನ್ನಿಗೆ ತಟ್ಟಿದಾಗ ಅಳ್ಳಿಬಿದ್ದೆ. 'ಅಯ್ಯೋ ಮಾರಾಯ ಅಷ್ಟು ಹೆದರುವುದು ಎಂತದಕ್ಕೆ? ನಾನೇನು ಹುಲಿಯೋ ಕರಡಿಯೊ? ಯಾಕೆ ಸಪ್ಪಗಿದ್ದಿ? ನೋಡು – ನೀನು ತುಂಬಾ ಚೆನ್ನಾಗಿ ಅರ್ಥ ಹೇಳಿದೆ. ನಿನ್ನದು ಸಣ್ಣ ಪ್ರಾಯ. ಮುಂದೆ ಒಳ್ಳೇ ಅರ್ಥಧಾರಿ ಆಗುತ್ತೀಯಾ. ಅದರಲ್ಲಿ ಸಂಶಯವಿಲ್ಲ.' ರಾಮಣ್ಣ ಹೇಳಿದರು. ಭಾಗವತರು 'ಹೌದು' ಎಂಬಂತೆ ತಲೆಯಾಡಿಸಿದರು. 'ನೋಡು, ನಿಶಿತ ನಾವು ಅರ್ಥ ಹೇಳಿದಲ್ಲಿಗೆ ನಮ್ಮ ಕೆಲಸ ಮುಗಿಯಿತು. ನಮಗೆ ಬೇಕಾದ ಹಾಗೆ ನಾವು ಅರ್ಥ ಹೇಳುತ್ತೇವೆ. ಸಭಿಕರು ಅವರಿಗೆ ಬೇಕಾದ ಹಾಗೆ ನಮ್ಮ ಅರ್ಥವನ್ನು ಅರ್ಥ ಮಾಡಿಕೊಳ್ಳುತ್ತಾರೆ ಅಷ್ಟೇ – ಅಲ್ಲಿಗೆ ಮುಗಿಯಿತು. ತಾಳಮದ್ದಳೆ ಮುಗಿದ ಮೇಲೆ ಹೋಗಿ ಅವರತ್ರ ನನ್ನ ಅರ್ಥ ಹೇಗಾಯಿತು ಅಂತ ಕೇಳಬಾರದು ಅದರಿಂದ ನಮಗೆ ಯಾವ ಪ್ರಯೋಜನವೂ ಇಲ್ಲ. ಮತ್ತೊಂದು ಹೇಳುತ್ತೇನೆ – ಈವತ್ತು ಇಲ್ಲಿ ಅರ್ಥ ಹೇಳುತ್ತೇವೆ; ನಾಳೆ ಇನ್ನೊಂದು ಕಡೆಗೆ ಅಷ್ಟೇ. ಈವತ್ತು ಅರ್ಥ ಕೇಳಿದವರು ನಾಳೆ ಕೇಳುವುದಿಲ್ಲ. ಅವರೆಲ್ಲ ನಮ್ಮ ಮಟ್ಟಿಗೆ ಅಪರಿಚಿತರು. ಒಬ್ಬೊಬ್ಬರಿಗೆ ನಮ್ಮ ಮಾತು ಒಂದೊಂದು ರೀತಿ ಇರಬಹುದು. ಅದನ್ನು ಕೇಳಿ ನಾವು ನಮ್ಮ ಅರ್ಥ ಹೇಳುವ ಕ್ರಮ ಬದಲಾಯಿಸಲು ಆಗುತ್ತದೆಯಾ? ಪ್ರಸಂಗಕ್ಕೆ ನಾವು ಹೇಗೆ

ನ್ಯಾಯ ಒದಗಿಸಿದ್ದೇವೆ ಎನ್ನುವುದು ಮುಖ್ಯ. ಅಪರೂಪಕ್ಕೆ ಚೆಂಡೆಯ ಶಬ್ದ ಕೇಳುವುದಕ್ಕೂ ನಿತ್ಯ ಕೇಳುವದಕ್ಕೂ ವ್ಯತ್ಯಾಸವಿದೆ. ನಿತ್ಯ ಕೇಳುವ ನಾವು ಚಂಡೆಯ ಶಬ್ದದ ತಾಳ ಯಾವುದು ಎಂದು ನೋಡುತ್ತೇವೆ. ಜನರು ಹಾಗಲ್ಲ, ಅವರಿಗೆ ಅದರ ಶಬ್ದವೇ ಅವರ ಎದೆಯ ಬಡಿತ ಹೆಚ್ಚಿಸುತ್ತದೆ. ನಾವು ಹಾಗೆಯಾ? ಭಾಗವತರ ಪದ ನಮಗೆ ಒಂದು ರೀತಿ ಕೇಳಿಸುತ್ತದೆ. ಸಭಿಕರಿಗೆ ಬೇರೆ ರೀತಿ. ನಾವು ಅರ್ಥ ಹೇಳಿ ಮುಗಿಸಿ ಹೊರಟು ಬಿಡಬೇಕು ಅಷ್ಟೇ. ಒಂದು ತಾಳಮದ್ದಳೆ ಮುಗಿದ ಮೇಲೆ ಅದರ ಸುದ್ದಿಗೆ ಮತ್ತೆ ಹೋಗುವುದು ಬೇಡ." ಮತ್ತೆ ರಾಮಣ್ಣ ನನ್ನ ಬೆನ್ನು ತಟ್ಟಿದರು. ಅದರಿಂದ ಬುದ್ಧಿ ಕಲಿತೆ. ಮುಂದೆ ಯಾವತ್ತೂ ನಾನು ನನ್ನ ವೇಷದ ಕುರಿತು ಕೇಳಲಿಲ್ಲ. ಯಾರ ಅಭಿಪ್ರಾಯಕ್ಕೂ ಕಾಯಲಿಲ್ಲ. ಹತ್ತು ಅಡಿ ಅಗಲ ಹನ್ನೆರಡು ಅಡಿ ಉದ್ದದ ರಂಗ ಸ್ಥಳವಷ್ಟೇ ನನಗೆ ಮುಖ್ಯವಾಯಿತು. ಕತ್ತಲಲ್ಲಿ ಕುಳಿತ ಜನರು ಏನು ಮಾಡುತ್ತಾರೆಂದು ನಾನು ಯೋಚಿಸಲಿಲ್ಲ. ಸಣ್ಣದೊಂದು ಸ್ಟೇಜು ನನಗೆ ಸರ್ವಸ್ವವಾಯಿತು ಅದರ ಮೇಲೆ ಅತ್ತೆ. ನಗಾಡಿದೆ. ಪ್ರೇಮಿಸಿದೆ. ಹೆಣ್ಣಿನ ಬಲಾತ್ಕಾರ ಮಾಡಿದೆ; ನಾಯಕ; ಖಳನಾಯಕ; ವಿದೂಷಕ, ಎಲ್ಲವೂ ಆದೆ – ಬಹಳ ವರ್ಷ. ಕೀಚಕನಾದಾಗ ಅವಳ ನೆನಪು ಆಗುತ್ತಿತ್ತು. ಸೀತೆಯನ್ನು ಕಳೆದುಕೊಂಡ ರಾಮನಾದಾಗ ಶಾಂಭವಿ ನೆನಪಾಗುತ್ತಿದ್ದಳು. ಭಸ್ಮಾಸುರನಾದಾಗ ಶರಧಿ ನೆನಪಾಗುತ್ತಿದ್ದಳು. ಒಂದು ಸಂಗತಿ ಸತ್ಯ – ಸೀರೆಯನ್ನು ಕಂಡಾಗ ತಾ ತೈ ಧೀಂ ತೈ ಎಂದು ಜೊಲ್ಲು ಸುರಿಸುವವನಾಗಲೇ ಇಲ್ಲ. ಆಗಲಾಗಲಿಲ್ಲ. ಅವಳು ದೇಹ ಕೊಟ್ಟಳು; ಶಾಂಭವಿ ಪ್ರೀತಿ ಕೊಟ್ಟಳು; ಶರಧಿ ಸ್ಪರ್ಶ ಕೊಟ್ಟಳು. ಆ ದಿನ ಬೆಳಿಗ್ಗೆ ಶರಧಿಗೆ ಯಾವ ಲಕ್ಷ್ಮಣ ರೇಖೆಯಿತ್ತೊ ಯಾರಿಗೆ ಗೊತ್ತು? ಆ ದಿನ ರಾಮಣ್ಣ ನನಗೆ ಹೊಸದನ್ನು ಕಲಿಸಿ ಕೊಟ್ಟರು. ಅದು ನನ್ನ ಜೀವನದ ಸತ್ಯವಾಯಿತು. ಆದರೆ ಮತ್ತೆ ಹದಿನೈದು ದಿನಗಳಲ್ಲಿ ಶರಧಿ ಮತ್ತು ರಾಮಣ್ಣರನ್ನು ತಾಳಮದ್ದಲೆಯ ನೆಪದಲ್ಲಿ ಅದೇ ಊರಿನ ಪಂಚಲಿಂಗೇಶ್ವರನ ಸನ್ನಿಧಿಯಲ್ಲಿ ಭೇಟಿಯಾಗಿದ್ದೆ. ಮತ್ತ ಅದೇ ವಾಲಿಯಾಗಿ ರಾಮಣ್ಣ ಮತ್ತು ರಾಮನಾಗಿ ನಾನು. ರೈಗಳು ನನಗೆ ಬಟವಾಡೆ ಮಾಡಿದರು. ಅದನ್ನು ಕಿಸೆಗೆ ಹಾಕಿಕೊಂಡು ಹೊರಟೆ.

* * * * *

ಅದೇ ರಾಮು – ಅದೇ ವಾಲಿ. ಪಂಚಲಿಂಗೇಶ್ವರನ ದೇವರ ಸನ್ನಿಧಿಯಲ್ಲಿ, ಹದಿನೈದು ದಿನಗಳು ಕಳೆದ ಮೇಲೆ ಮತ್ತೆ ತಾಳಮದ್ದಳೆ ನಡೆಯಿತು. ಆ ತಾಳಮದ್ದಳೆ ನಡೆದುದು ಬೇರೆ ಕಾರಣಕ್ಕೆ. ಅದು ನನಗೆ ಧಡಕ್ಕನೆ ಎದುರಾದ ಸಂದರ್ಭ. ಆ ಕುರಿತು ಯೋಚಿಸಿರಲಿಲ್ಲ. ಅದ ನಡೆದದ್ದು ಬೇರೆ ಕಾರಣಕ್ಕೆ. ಶಾಲೆಯ ಮೆನೇಜ್ಮೆಂಟ್

ಕಮಿಟಿಯ ಐತ್ತಪ್ಪ ರೈ ಮತ್ತು ರಾಮಣ್ಣ ಇಬ್ಬರೂ ಸೇರಿಕೊಂಡು ಏನೋ ಮಸಲತ್ತು ನಡೆಸಿದ್ದಾರೆಂದೂ; ಅದರಲ್ಲಿ ಬ್ರಾಹ್ಮಣನಾದ ನನ್ನ ಮಾನ ಹಾನಿ ಮಾಡಿದ್ದಾರೆಂದು ಗಾಳಿಸುದ್ದಿಯು ಹರಡಿತು ಅಂತ ಅನಂತ್ರ ತಿಳಿಯಿತು. ರಾಮಣ್ಣ ಮತ್ತು ನಾನು ಚೆನ್ನಾಗಿಯೇ ಇದ್ದೆವು. ಅವರು ಬಂಟರೆಂದು ನಾನು ಬಾಹ್ಮಣನೆಂದು ಯಾವತ್ತು ತಿಳಿದಿರಲಿಲ್ಲ. ಅವರು ನನಗೆ ಹಿರಿಯಣ್ಣನಂತಿದ್ದರು. ಸಲಹೆ ಕೊಡುತ್ತಿದ್ದರು. ಪಂಚಲಿಂಗೇಶ್ವರ ದೇವಸ್ಥಾನದ ತಾಳಮದ್ದಳೆಯು ಆಗುವವರೆಗೆ ಈ ವಿಷಯಗಳು ನನಗಾಗಲಿ, ರಾಮಣ್ಣನಿಗಾಗಲಿ ತಿಳಿಯುವುದು ಸಾಧ್ಯವಿರಲಿಲ್ಲ. ಬೀರದ ಕಟ್ಟೆ ಶಾಲೆಯ ತಾಳಮದ್ದಳೆಯ ಮರುದಿನ ನಾನೂ ಬೇಗ ಹೊರಟು ಬಿಟ್ಟದ್ದೆ, ಮನಸ್ಸು ಕಲಕಿತ್ತು. ರಾಮಣ್ಣ ಬೇರೆಲ್ಲೊ ಹೋಗಿದ್ದರು.

ಪಂಚಲಿಂಗೇಶ್ವರ ದೇವಸ್ಥಾನದ ಮೊಕ್ತೇಸರರು ಕೊಳತ್ತಾಯರು. ಕೊಳತ್ತಾಯರಿಗೂ ಐತ್ತಪ್ಪರೈಯವರಿಗೂ ಸಂಬಂಧ ಅಷ್ಟಕಷ್ಟೆ. ಕೊಳತ್ತಾಯರ ಮತ್ತು ರೈಯವರ ತೋಟ ಹತ್ತಿರ ಹತ್ತಿರ. ಅವರಿಬ್ಬರ ಬೇಲಿಯ ಜಗಳ ಕೋರ್ಟಿನ ಮೆಟ್ಟಲು ಹತ್ತಿತ್ತು. ನಡೆದದ್ದು ಇಪ್ಪತ್ತಡಿ ಜಾಗಕ್ಕೆ ಮಾತ್ರ. 'ಕೊಳತ್ತಾಯರು ಸಪೂರ ಕಡ್ಡಿ. ಉದ್ದ ಮುಖದ ಕೊಕ್ಕರೆ ಅವರು.' ಎಂದು ಐತ್ತಪ್ಪ ರೈಯವರ ಅಂಬೋಣ.' 'ಈ ಐತ್ತಪ್ಪನೆಂದರೆ ಬರೀ ಅಬ್ಬರ ಅಷ್ಟೇ. ನೋಡುವುದಕ್ಕೆ ದೊಡ್ಡ ಡೋಲಿನ ಹಾಗಿದ್ದಾನೆ ಅಷ್ಟೇ, ಒಳಗೆ ಟೊಳ್ಳು ಅಂದರೆ ಟೊಳ್ಳು.' ಎಂದು ಕೊಳ್ಳತ್ತಾಯರು. ಹೇಳುತ್ತಿದ್ದರು. ಊರಿನ ಮಟ್ಟಿಗೆ ಅದೊಂದು ತಮಾಷೆಯ ವಿಷಯ.

ಐತ್ತಪ್ಪ ರೈಯರು ಮಾಡಿಸಿದ ತಾಳಮದ್ದಲೆಯ ಕೂಟವು ಜನರ ಬಾಯಲ್ಲಿ ಕುಣಿದಾಡಿತು. ಕೊಳತ್ತಾಯರಿಗೆ ಹೊಟ್ಟೆ ಕಿಚ್ಚು ತಡೆಯಾಗಲಿಲ್ಲ. ಅದಕ್ಕೆ ಅವರು ಕೊಟ್ಟ ಕಾರಣವೆಂದರೆ ಐತ್ತಪ್ಪ ರೈ ಅವನಿಗೆ ಬೇಕಾದ ಹಾಗೆ ತಾಳಮದ್ದಳೆ ಮಾಡಿಸಿದ. "ತಲೆಗೆ ಹೊಡೆದರೆ ಅವನ ತಲೆಯಿಂದ ನಾಕು ಅಕ್ಷರ ಉದುರುವುದಿಲ್ಲ. ಅವನಿಗೆ ರಳ ಕುಳವೇ ಗೊತ್ತಿಲ್ಲ. ಅಂಥವನು ನಮಗೆ ಯಾರಿಗೂ ಏನೂ ಕೇಳದೆ – ತಾಳಮದ್ದಲೆ ಮಾಡಿಸುವುದು ಎಂದರೆ ಏನರ್ಥ?" – ಎಂದು ಕೊಳತ್ತಾಯರು ಕೂಗಾಡುತ್ತಿರುವ ಸ್ವರವು ರೈಯರ ಕಿವಿಗೆ ಮುಟ್ಟಿತು. ರೈಯವರು, 'ಈ ಬ್ರಾಣನಿಗೇನು ಕೇಳುವುದು? ನಾನೇ ನನ್ನ ಕುಮ್ಕಿಯಲ್ಲಿ ಶಾಲೆಗೆ ಬಿಟ್ಟು ಕೊಟ್ಟೆ. ಶಾಲೆಗೆ ಅಂತ ಪುಕುಳಿ ಊರುವಷ್ಟು ಜಾಗ ಈ ಬ್ರಾಣ ಕೊಡಲಿಲ್ಲ"ವೆಂದು ಐತ್ತಪ್ಪ ರೈ ಹೇಳಿದ್ದೇ ಹೇಳಿದ್ದು. ಅದಕ್ಕೆ ಪ್ರತಿಯಾಗಿ ಕೊಳತ್ತಾಯರು 'ಅವನು ನನ್ನ ಹೂಸಿಗೆ ಸಮ' ಎಂದರು 'ಸಾಧ್ಯವಾದರೆ ನಮ್ಮ ರಾಮಣ್ಣನನ್ನು ತಾಕತ್ತಿದ್ದವರು ಮಣ್ಣು ಮುಕ್ಕಿಸಲಿ ಆಮೇಲೆ ಉಳಿದ ಮಾತು' ಎಂದು ರೈಯರು ತಮ್ಮ ಸೊಂಟಕ್ಕೆ ಪಟ್ಟೆಪಟ್ಟೆ ಲುಂಗಿ ಉಟ್ಟುಕೊಂಟೇ ಬಿಟ್ಟರು. ಬೀರದ ಕಟ್ಟೆಯಲ್ಲಿ ಎರಡು

ಗುಂಪುಗಳಾದವು. ಒಂದು ಬ್ರಾಹ್ಮಣರದು. ಮತ್ತೊಂದು ಬ್ರಾಹ್ಮಣೇತರರದು. ನನಗೆ ಮತ್ತು ರಾಮಣ್ಣನಿಗೆ ಇಬ್ಬರಿಗೂ ಇದರ ಉದ್ದ – ಅಗಲ – ಆಳವು ತಿಳಿದಿರಲಿಲ್ಲ. ತಾಳಮದ್ದಳೆ ಮುಗಿಯುವರೆಗೂ ಈ ಕುರಿತು ತಿಳಿದಿರಲಿಲ್ಲ.

ಆ ದಿನಕ್ಕಿಂತ ಹಿಂದಿನ ದಿನ ನಾನು ಬಜಪೆಯ ದೇವಿ ಮಹಾತ್ಮೆಯಲ್ಲಿ ವೇಷ ಮಾಡಿ ಸುಸ್ತಾಗಿದ್ದೆ. ಎರಡೆರಡು ವೇಷಗಳೆಂದರೆ ನಮ್ಮ ಹಬ್ಬ ಹೊರಗೆ – ಅಂತವೇ ಲೆಕ್ಕ. ಜೆಸಿಂತಾ ಬಾಯಿಯ ಕಂಪೌಂಡ್ನಲ್ಲಿ ಮಲಗಿ ಬಿಟ್ಟೆ.

ಆಗ ಕೊಳತ್ತಾಯರ ಜನ ಬಂದು ನನ್ನನ್ನು ಕರೆದರು. ನಾನು ನಿದ್ದೆಯ ಗುಂಗಿನಲ್ಲಿದ್ದವನು ಅವರತ್ರ 'ಸಂಜೆ ಬರುತ್ತೇನೆ' ಎಂದು ಹೇಳಿ ಕಳಿಸಿದೆ. ಬಾಯಮ್ಮನೇ ಬಂದು ಎಬ್ಬಿಸಿದ್ದಕ್ಕೆ ಬಚಾವ್. ಕಳೆದ ಅನುಭವದಿಂದ ನಾನು ಬೀರದಕಟ್ಟೆಗೆ ರಾತ್ರಿ ಎಂಟು ಗಂಟೆಗೆ ತಲುಪಿದೆ. ನಾನು ಪಂಚಲಿಂಗೇಶ್ವರನ ಸನ್ನಿಧಿ ಮುಟ್ಟಿ ದೇವರಿಗೆ ಬಲವಂದು ನಮಸ್ಕರಿಸಿದೆ. ದೇವರಿಗೆ ಮೂರು ಸುತ್ತು ಬರುವಾಗಲೂ ನನ್ನ ಮನಸ್ಸಿನ ತುಂಬಾ ಶರಧಿ. ಅವಳ ಮನೆಗೆ ಹೋಗಬೇಕೆಂದು ಅನಿಸಿದರೂ ಹುಡುಗಿಯರು ಬೆಂಕಿಯಿದ್ದಂತೆ ಎಂಬುದನ್ನು ಕಲಿಸಿ ಕೊಟ್ಟ ಅವಳ ನೆನಪು ಬಂದು; ಯಾರನ್ನು ಮಾತಾಡಿಸದೆ ಹೊರಗೆ ಬಂದು ಕತ್ತಲೆಯ ಕಡೆಗೆ ಹೋದೆ. ನಿದ್ದೆಗೆಟ್ಟದ್ದರಿಂದ ಮತ್ತು ಶರಧಿಯ ನೆನಪು ಬಂದುದರಿಂದ ನಾನು ನಿರಂತರ ಬೀಡಿ ಸೇದಿದೆ. ಸ್ವಲ್ಪ ಹೊತ್ತಿಗೆ ನನ್ನ ಮನಸಿನ ಉಯ್ಯಾಲೆ ನಿಂತಿತು. ಊಟ ಮಾಡಲೆಂದು ಒಳಗೆ ಹೋದಾಗ ಅಲ್ಲಿ, ದೇವಸ್ಥಾನ ಅಂಗಣದಲ್ಲಿ ತಾಳಮದ್ದಲೆಯ ಅರ್ಥಧಾರಿಗಳಿಗೆ ಅನ್ನ ಬಡಿಸುತ್ತಿದ್ದರು. ನಾನು ಒಳಗೆ ಕಾಲಿಟ್ಟಾಗ ರಾಮಣ್ಣ, ಬಾ ಬಾ, ಊಟಮಾಡು' ಎಂದರು. ತಾಳಮದ್ದಲೆಯ ಮತ್ತು ಆಟದ ಕಲಾವಿದರಿಗೆ ಅಂತಲೇ ವಿಶೇಷ ಅಡುಗೆಯಿದೆ. ಕುಂಬಳಕಾಯಿಯ ಸಾಂಬಾರ್; ಹುಣಿಸೆ ಹಣ್ಣು ಕಿವುಚಿದ ಉದ್ದ ಸಾರು, ಮತ್ತು ಸ್ಥಳೀಯ ತರಕಾರಿಯ ಪಲ್ಯ; ಹೆಸರು ಅಥವಾ ಕಡಲೆ ಕಾಯಿಯ ಪಾಯಸ; ಮಜ್ಜಿಗೆ ನೀರು. ನೀರು ಮಜ್ಜಿಗೆಯೂ ಹೌದು. ಕುಂಬಳಕಾಯಿಯ ಸಾಂಬಾರಿಗೆ ತೆಂಗಿನಕಾಯಿ ಮುಟ್ಟಿಸಿದರೆ ಮುಟ್ಟಿಸಬಹುದು; ಇಲ್ಲವಾದರೆ ಇಲ್ಲ. ಹಿಂದಿನ ದಿನದ ಆಯಾಸ; ಶರಧಿಯ ನೆನಪು ಯಾರೊಂದಿಗೆ ಮಾತಾಡಲಾರದಂತೆ ಮಾಡಿತು. ಒಂಬತ್ತು ಗಂಟೆಗೆ ಸರಿಯಾಗಿ ಪ್ರಸಂಗ, ಮತ್ತು ಪಾತ್ರದ ವಿವರವನ್ನು ಓದಿದರು. ಮತ್ತೆ ಪಂಚವಟಿ – ವಾಲಿ ವಧೆ. ವಾಲಿಯಾಗಿ ರಾಮಣ್ಣ; ರಾಮನಾಗಿ ನಿಶಿತ; ಸುಗ್ರೀವನಾಗಿ ಎಡಪಡಿತ್ತಾಯರು, ತಾರೆಯಾಗಿ ಶಾನುಭೋಗರು. ರಾಮಣ್ಣನ ಹುಬ್ಬು ಒಮ್ಮೆ ಮೇಲೇರಿತು. ನನಗೆ ಎಡಪಡಿತ್ತಾಯರ; ಶಾನುಭೋಗರ ಪರಿಚಯವಿರಲಿಲ್ಲ. ಶಾನುಭೋಗರು ಬಹಳ ದೊಡ್ಡ ಅರ್ಥಧಾರಿಗಳೆಂದು ಮಾತ್ರ ಗೊತ್ತಿತ್ತು. ನೋಡಿ

ಗೊತ್ತಿರಲಿಲ್ಲ. ನಾನು ವೇಷ ಮಾಡಲು ಪ್ರಾರಂಭಿಸಿದಾಗಲೇ ಅವರು ತಾಳಮದ್ದಲೆಗೆ ಹೋಗಿ ಅರ್ಥ ಹೇಳುವುದು ಕಡಿಮೆಯಾಗಿತ್ತು. ಎಡಪಡಿತ್ತಾಯರ ಮಕ್ಕಳು ಡಾಕ್ಟರಿಕೆ; ವಕಾಲತ್ತು ಅಂತ ಕಲಿತು;' ಇನ್ನು ಈ ವಯಸ್ಸಿಗೆ ಹೋಗಿ ತಾಳಮದ್ದಳೆಗೆ ಅರ್ಥ ಹೇಳಿ ಆಗಬೇಕಾದ್ದು ಏನೂ ಇಲ್ಲ. ಉಬ್ಬಸ ಕಡಿಮೆ ಮಾಡಿಕೊಳ್ಳಿ" ಎಂದ್ದಿದರು. ಶಾನುಭೋಗರು ಬಹಳ ದೊಡ್ಡ ಹಿಡುವಳಿದಾರರು. ಅವರಿಗೆ ಇರುವ  ತೋಟ ನೋಡಿಕೊಳ್ಳಲು ಪುರುಸೊತ್ತಿಲ್ಲದವರು. ಅದರ ಮೇಲೆ ಅವರ ಜೀವನದಲ್ಲಿ ಒಂದು ಕಹಿ ಘಟನೆಯು ಜರುಗಿ ಹೋಗಿತ್ತು. ಅವರ ಅಣ್ಣನಿಗೆ ತೋಟ ಇದ್ದುದು ಸುಳ್ಯದಲ್ಲಿ. ಆಗಲೂ ಕರೆಂಟಿನದು ಸಮಸ್ಯೆ. ಒಂದು ದಿವಸ ರಾತ್ರಿ ಪಂಪು ಸ್ಟಾರ್ಟ್ ಮಾಡಲು ಹೋಗಿ ಕರೆಂಟು ಹೊಡೆದು ಕರಕಲಾದರು. ಇದರಿಂದ ಶಾನುಭೋಗರಿಗೆ ಅಣ್ಣನ ಹೆಂಡತಿ ಮತ್ತು ಅವರ ಮಗನ ಜವಾಬ್ದಾರಿ ತಲೆಮೇಲೆ ಬಿತ್ತು. ಇದರಿಂದ ಅವರು ಬಚ್ಚಿದರು. ತಾಳಮದ್ದಲೆಗಿಂತ  ಅಡಿಕೆಯ ತೋಟವೇ ದೊಡ್ಡದು ಅಂತ ಪಕ್ಕಾ ವ್ಯವಹಾರಸ್ಥರಾದ ಅವರಿಗೆ ಬೇರೆಯವರು ಹೇಳಬೇಕಾಗಿರಲಿಲ್ಲ. ಕೈಯಲ್ಲಿ ವಜ್ರದ ಉಂಗುರತಳತಳ  ಹೊಳೆಯುತ್ತಿತ್ತು. ಬಿಳಿಯ ಜುಬ್ಬ; ಬಿಳಿಯ ಶಾಲು; ಬಿಳಿಯ ಪಂಚೆ – ಅವರು ಪೇಟೆಗೆ ಹೋಗುವಾಗಿನ ಸಮವಸ್ತ್ರ. ಕೊರಳಲ್ಲಿ ಹುಲಿಯುಗುರಿನಿಂದ ಕಟ್ಟಿಸಿದ ಚಿನ್ನದ ಸರವನ್ನು ಜನರಿಗೆ ಕಾಣಿಸಲಿ ಎಂದು ಹಾಕಿಕೊಳ್ಳುತ್ತಾರೆ. ಹುಲಿಯುಗುರಿನಿಂದ ಕಟ್ಟಿಸಿಕೊಂಡ ಪದಕವು ತನ್ನನ್ನು ಹುಲಿಯಾಗಿ ಮಾಡಿದೆಯೆಂದು ತಿಳಿದುಕೊಂಡಿದ್ರು. ಬೆಳ್ಳಿಯಿಂದ ಕಟ್ಟಿಸಿಕೊಂಡ ಕನ್ನಡಕ; ಸ್ಟೀಲಿನ ಎಲೆಪೆಟ್ಟಿಗೆ.  ಬೇಕೋ ಬೇಡವೋ ಎಂಬಂತಿರುವ ನಗು. ನಗಾಡಿದರೆ ನಮ್ಮನ್ನು ಸಲಿಗೆ ತಿಳಿದುಕೊಳ್ಳುತ್ತಾರೆ. – ಎನ್ನುವುದೇ ಅವರ ಕಟ್ಟು ನಿಟ್ಟಾದ ನಿಲುವು. ನಗೆಯ ವಿವಿಧ ಭಂಗಿ ಅವರಿಗೆ ತಿಳಿದಿದೆ – ಆಳುಗಳ ಜೊತೆಗೆ ನಗಾಡಬಾರದು. ತಮ್ಮ ಜಾತಿಯ ಸಿರಿವಂತರಲ್ಲಿ ಬಿಚ್ಚು ನಗೆ ಸಾಧ್ಯ; ಪೇಟೆಯಲ್ಲಿ ದಿನಸಿ ಅಂಗಡಿಯವರ ಜೊತೆಗೆ ಒಂದು ರೀತಿಯ ನಗು – ದಿನಸಿಯ ರೇಟು ಕಡಿಮೆ ಮಾಡಿಸುತ್ತದೆ. ಬಂದರಿನಲ್ಲಿ ಅಡಿಕೆ ಮಾರಾಟ ಮಾಡುವಾಗ  ನಗು ನಗುತ್ತಲೇ ಮಾತಾಡಿ ರೇಟು ಜಾಸ್ತಿ ಮಾಡಿಸಬೇಕು. ಈ ಬ್ಯಾರಿಗಳ ಒಟ್ಟಿಗೆ ನೈಸಾಗಿ ಕೆಲಸ ಮಾಡಿಸಬೇಕು; ಎಂದು ಹೇಳಿಕೊಳ್ಳುತ್ತಾರೆ. ಎಲ್ಲಿಗೆ ಹೋಗುವುದ್ದಿದ್ದರೂ ಮಹೇಂದ್ರ ಜೀಪು ಬಿಟ್ಟವರಲ್ಲ. ಶೂದ್ರರೆಂದರೆ ಅಷ್ಟಕ್ಕಷ್ಟೆ. ಏನಿದ್ದರೂ ತಾಳಮದ್ದಲೆಯು ಬ್ರಾಹ್ಮಣರಿಗೆ ಸರಿ. ಈ ಶೂದ್ರರು ಎಲ್ಲಿ ಮಹಾಭಾರತ, ರಾಮಾಯಣ ಓದುತ್ತಾರೆ? ಸಂಸ್ಕೃತದ ಜ್ಞಾನವಿಲ್ಲದ್ದಿದ್ದರೆ ತಾಳಮದ್ದಳೆಯಲ್ಲಿ ಅರ್ಥ ಹೇಳಲು ಸಾಧ್ಯವೇ ಇಲ್ಲವೆಂದು ನಂಬಿದ್ದರು.

ಇಂಥ ಎಡಪಡಿತ್ತಾಯರು ಮತ್ತು ಶಾನುಭೋಗರು ಲವ – ಕುಶರಂತೆ ಒಟ್ಟಿಗೆ ಬಂದರು. ಅಷ್ಟು ಹೊತ್ತಿಗಾಗಲೆ ಪಾತ್ರದ ಪಟ್ಟಿ ಓದಿಯಾಗಿತ್ತು. ಶಾನುಭೋಗರು ಗತ್ತಿನಿಂದ ಬರುವಾಗ ಜನ, 'ಓ ಶಾನುಭೋಗರು ಎಡಪಡಿತ್ತಾಯರು ಬಂದರು' ಎಂದು ಹೇಳಿದರು. ಕೂಡ್ಲೇ ಕೊಳತ್ತಾಯರು;' "ಓ ಬನ್ನಿ ಬನ್ನಿ; ನಿಮಗೆ ಕಾಯುತ್ತಿದ್ದೆವು." ಎಂದು ಸ್ವಾಗತಿಸಿದರು. ಅವರಿಬ್ಬರನ್ನು ಕಂಡು ಭಾಗವತರು ಸಮೇತ ನಮಸ್ಕಾರವೆಂದು ವಿನಯ ತೋರಿಸಿದರು. ಅದೊಂದು ನಾಟಕೀಯ ಸನ್ನಿವೇಶ. ಶಾನುಭೋಗರು;– "ಯಾವುದಂತೆ ಪ್ರಸಂಗ?" ಎಂದು ಕೇಳಿದರು. ಭಾಗವತರು ಎಲ್ಲಾ ವಿವರ ಒಪ್ಪಿಸಿದರು. 'ಓ ರಾಮಣ್ಣನದು ವಾಲಿಯೋ; ಅಡ್ಡಿಯಿಲ್ಲ ಅಡ್ಡಿಯಿಲ್ಲ; ನನ್ನದು ತಾರೆಯೋ; ಏನು ಎಡಪಡಿತ್ತಾಯರು ಸುಗ್ರೀವನೋ, – ಸರಿ ಸರಿ. ಯಾರಿದು ಈ ನಿಶಿತನೆಂದರೆ – ಎಲ್ಲೂ ಹೆಸರೇ ಕೇಳಲಿಲ್ಲ. ಅಲ್ಲಾ: ಯಾರಾದರೆ ನನಗೇನು – ವಿಷಯ ಕೇಳಿದ್ದು, ಅಷ್ಟೇ; ಹೇಗೂ ಪ್ರಸಂಗದಲ್ಲಿ ತಾರೆ ಮತ್ತು ರಾಮ ಮಾತಾಡವುದಿಲ್ಲವಲ್ಲ. ಇಲ್ಲದಿದ್ದರೆ ಈ ಹೊಸ ಹುಡುಗರೊಟ್ಟಿಗೆ ಅರ್ಥ ಹೇಳುವುದೇ ಕಷ್ಟ. ಮೊದಲ ಪದ್ಯ ಯಾವುದು ಕೊನೆಯ ಪದ್ಯ ಯಾವುದು ಅಂತ ತಿಳಿದಿರುವುದಿಲ್ಲ' ಎಂದರು. ಅವರ ಮಾತಿನಲ್ಲಿ ಠೇಂಕಾರವಿತ್ತು. ಅಹಂಕಾರವಿತ್ತು. ಸೆಡವು ಕರುಳಿನಲ್ಲಿತ್ತು. ರಾಮಣ್ಣ ಸಣ್ಣಗೆ ನಗಾಡಿ ಹೊರಗೆ ಹೋಗಿ ಬಂದರು. ಕೊಳತ್ತಾಯರು "ಓಯ್ ಇಲ್ಲಿ ಬನ್ನಿ, ಇವರು ಶಾನುಭೋಗರು, ಇವರು ಎಡಪಡಿತ್ತಾಯರು." ಎಂದು ಪರಿಚಯಿಸಿದರು. ನಾನು ಸುಮ್ಮನೇ ನಮಸ್ಕಾರವೆಂದು ಹೇಳಿ ಹಿಂಬದಿಯಲ್ಲಿ ಕುಳಿತುಕೊಂಡೆ.

ಭಾಗವತರು "ಶಾನುಭೋಗರೆ, ಪ್ರಸಂಗ ಪ್ರಾರಂಭಿಸೋಣ್ವಾ?" ಎಂದು ಅಪ್ಪಣೆ ಪಡೆದರು. ಶಾನುಭೋಗರು,' "ಹೂಂ ಹೂಂ; ಪ್ರಾರಂಭವಾಗಲಿ; ಮತ್ತೆ ವಾಲಿವಧೆಗೆ ಸಮಯ ಸಾಕಾಗಿಲ್ಲ ಅಂತ ನೀವೂ ಪದ್ಯ ಹಾರಿಸುವುದು ಬೇಡ. ಹೇಗೂ ಪಂಚವಟಿ ಸಪ್ಪೆ ಪ್ರಸಂಗ. ಮತ್ತೆ ಎಲ್ಲ ಹೊಸ ಅರ್ಥಧಾರಿಗಳಿದ್ದಾರೆ. ಪಂಚವಟಿ ಬೇಗ ಮುಗಿಸಿ ವಾಲಿವಧೆಗೆ ಹೆಚ್ಚು ಸಮಯ ಕೊಡಿ. ಮತ್ತೆ ರಾಮಣ್ಣ ವಾಲಿವಧೆಯಲ್ಲಿ ವಾಲಿಗೆ ಮೋಕ್ಷವೇ ಆಗಿಲ್ಲಾಂತ ಹೇಳುವುದು ಬೇಡ. ಏನು ಹೇಳುತ್ತೀರಿ ರಾಮಣ್ಣ,?" ಎಂದರಾದರೂ, ಅವರು ಎಡಪಡಿತ್ತಾಯರಿಗೆ ಕಣ್ಣು ಹೊಡೆದ್ದದ್ದು; ಎಡಪಡಿತ್ತಾಯರು ಜೋರಾಗಿ ನಗಾಡಿದ್ದು ಕಾಣಿಸಿತು. ರಾಮಣ್ಣ ಹೌದೆಂಬಂತೆ ತಲೆಯಾಡಿಸಿದರು. ಈ ಕೂಟದಲ್ಲಿ ನಾನು ಹುಲಿಗಳೆದುರಿನ ಇಲಿ ಎಂದು ಅನಿಸಿತು. ರಾಮಣ್ಣ ಎದ್ದು ನಿಂತು,' ಶಾನುಭೋಗರು ಹೇಳಿದ್ದಕ್ಕೆ ನನ್ನ ಅಪೀಲು ಇಲ್ಲ. ಅವರು ಹೇಳಿದರೆ ಮುಗಿಯಿತು, ಮತ್ತೆ ಪ್ರಶ್ನೆಯೇ ಇಲ್ಲ. ಅವರು ಅನುಭವಸ್ಥರು. ಅವರು ಹೇಳಿದ ಹಾಗೆ ವಾಲಿಮೋಕ್ಷಕ್ಕೆ ತಡವಾಗಬಾರದು.' ಎಂದು ಹೇಳಿ ಎದ್ದು ಹೊರಗೆ ಹೋದರು.

ಕಳೆದ ಕೆಲವು ದಿನಗಳ ಹಿಂದೆ ನಡೆದ ತಾಳಮದ್ದಳೆಗೂ ಇದಕ್ಕೂ ವ್ಯತ್ಯಾಸವಿದೆ. ಭಾಗವತರು 'ನೋಡಿ ನಿರ್ಮಲ ಜಲ ಸಮೀಪದಿ.........' ಪದ್ಯ ಎತ್ತಿಕೊಂಡರು. ಶಾನುಭೋಗರು ಬೆರಳಿನಿಂದಲೇ 'ಹೋಗಿ ಕೂತುಕೋ' ಎಂಬಂತೆ ಕೈ ಸನ್ನೆ ಮಾಡಿದರು. ಅವರ ದೊಡ್ಡಸ್ತಿಕೆ ನೋಡಿ ಸಿಟ್ಟು ಬಂತು. ಆದರೂ ನಾನು ಏನೂ ಮಾಡುವ ಹಾಗಿರಲಿಲ್ಲ. ಹೋಗಿ ಕುಳಿತೆ. ಎಲ್ಲರೂ ನನ್ನನ್ನೇ ನೋಡುತ್ತಿದ್ದಾರೆಂದು ಭಾಸವಾಯಿತು. ನಾನು ನೀರಿನಲ್ಲಿ ನೆನೆದ ಗುಬ್ಬಿ ಹಕ್ಕಿಯಂತೆ ಆಗಿದ್ದೆ. ಎಡಪಡಿತ್ತಾಯರ ಮತ್ತು ಶಾನುಭೋಗರನ್ನು ನೋಡಿಯೇ ಗಾಬರಿಯಾಗಿದ್ದೆ. ಅವರೆದುರು ವೇದಿಕೆಯಲ್ಲಿ ಕುಳಿತುಕೊಳ್ಳುವದೆಂದರೆ ಭಯವೆ. ಆಟದಲ್ಲಿ ವೇಷ ಮಾಡುವುದೆಂದರೆ ಚಿಂತೆಯಿಲ್ಲ – ವೇಷ; ಬಣ್ಣ; ಕುಣಿತದಲ್ಲಿ ತುಂಬಿಸಿಕೊಳ್ಳಬಹುದು. ಇಲ್ಲಿ ಹಾಗಲ್ಲ. ಎಲ್ಲವೂ ಮಾತಿನಲ್ಲಿ ತುಂಬಿಸಿಕೊಳ್ಳಬೇಕು. ಬಣ್ಣ ಮತ್ತು ವೇಷ ಭೂಷಣಗಳ ಗುರಾಣಿಯಿಲ್ಲಿ ಇಲ್ಲ. ಭಾಗವತರು ಪದ್ಯ ಮುಗಿಸಿದರು. ರಾಮನಾಗಿ ನನ್ನ ಸ್ವಗತ ಶುರು ಮಾಡಿದೆ; 'ತಮ್ಮ ಲಕ್ಷ್ಮಣ ನೋಡು, ನಾವು ಬಂದು ನಿಂತಿರುವ ಜಾಗವಿದು ಪಂಚವಟಿ. ಇಲ್ಲಿ ಹುಲಿ, ಕರಡಿಯಿದೆ. ಮಂಗಗಳ ಚೇಷ್ಟೆಯಿದೆಯೆಂದು ನಾವೀಗ ಯೋಚಿಸುತ್ತಾ ಕೂರುವ ಕಾಲವಿದಲ್ಲ.'

ನಾನು ಕೊಟ್ಟಿರುವುದು ಎಡಪಡಿತ್ತಾಯರಿಗೆ ಮತ್ತು ಶಾನುಭೋಗರಿಗೆ ತಾಗಿತು. ಅವರಿಬ್ಬರು ಪರಸ್ಪರ ಮಾತಾಡತ್ತಾ ಎದ್ದು ಹೋಗಿರುವುದು ಕಾಣಿಸಿತು. ಜೊತೆಗೆ ಮತ್ತೆ ಕೆಲವರು – ಬಾಲದ ಜೊತೆಗೆ ಬೀಲ ಎನ್ನುವ ಹಾಗೆ ಹೋದರು. ನಾನಿನ್ನು ಮಾತು ಮುಂದುವರಿಸಬೇಕಾಗಿತ್ತು' ಈ 'ಪಂಚವಟಿ' ಎಂದು ಪ್ರಾರಂಭಿಸಿದ್ದೆ; – ಆಗ ಬಂದಳು ಶರಧಿ. ಅದೇ ನಗು. ಅವಳ ತುಟಿಯಿಂದ ತುಳುಕುತ್ತಿತ್ತು. ಅದೇ ಲಾಸ್ಯ. ಕೇದಿಗೆ, ಶುದ್ಧ ಕೇದಿಗೆಯೇ. ಮೊದಲೇ ನಿದ್ದೆಗೆಟ್ಟ ಕಣ್ಣು ನನ್ನದು. ನಿದ್ದೆ ಅಮಲಿನಲ್ಲಿ ಇದ್ದವನಿಗೆ ಇನ್ನಷ್ಟು ಸುಂದರಿಯಾಗಿ ಕಂಡಳು. ನಾನೆತ್ತಿದ್ದ ಮಾತು ಅಕ್ಷರಶಃ ನಿಂತಿತು. ಅವಳ ಮುಖ ನೋಡಿದೆ. ನನ್ನನ್ನು ನೋಡಿ ಅವಳು ಮತ್ತೆ ಪಕ್ಕದಲ್ಲಿದ್ದವರನ್ನು ಆ ಕಡೆಗೆ ಹೋಗಿ ಎಂದು ಸರಿಸಿ ಬದಿಯಲ್ಲಿ ಕೂತಳು. ಕಪ್ಪು ಬಣ್ಣದ ಹಾಫ್ ಸೀರೆಯನ್ನು ಉಟ್ಟಿದ್ದರಿಂದ ಮತ್ತಷ್ಟು ಚೆಂದ ಕಾಣಿಸುತ್ತಿದ್ದಳು. ನನ್ನ ಅರ್ಥ ಸಪ್ಪೆಯಾಗುತ್ತಿದೆಯೆಂದು ಅನಿಸತೊಡಗುವಾಗಲೇ ಚೇತರಿಸತೊಡಗಿದೆ. ಕಾರಣ–ಹೊರಗೆ ಹೋದ ಎಡಪಡಿತ್ತಾಯರು; ಶಾನುಭೋಗರು ತಮಾಷೆ ಮಾಡುತ್ತಿರುವರೆಂಬ ಭಾವ. ಆಗ ಕೈಗೆ ಇಡಿಯ ಸೂತ್ರ ಸಿಕ್ಕಿತು. ನಾನು ನನ್ನ ಗಮನವನ್ನು ಪ್ರಸಂಗದ ಕಡೆಗೆ ಕೊಟ್ಟೆ. ಅದು ಅನನ್ಯತೆಯ ಪ್ರಶ್ನೆ. ಅದು ಶರಧಿಯ ಎದುರು ಮೆರೆಯಬೇಕಾದ ಪ್ರಶ್ನೆ. ನನ್ನ ಕೈಲಿರುವ ಕುಟ್ಟಿ ದೊಣ್ಣೆಯಲ್ಲಿ ಎಡಪಡಿತ್ತಾಯರ; ಶಾನುಭೋಗರ

ಜೊತೆಯಲಿ ಆಡಬೇಕಾದ ನನ್ನ ಮಟ್ಟಿಗಿನ ಅನಿವಾರ್ಯವೂ ಹೌದು. ಮಾಯಾ ಶೂರ್ಪನಖಿ ಬಂದು ರಾಮನತ್ರ ಮಾತಾಡುವಾಗಿನ ಸಂದರ್ಭದಲ್ಲಿ ಅದನ್ನು ತೋರಿಸಿಕೊಟ್ಟೆ. ಭಾಗವತರು ಶೂರ್ಪನಖಿಯ ಪದ್ಯ ಎತ್ತಿಕೊಂಡರು. "ರಾಘವ ನರಪತೇ ಶರಣು ಮಮ ವಚನಂ". ಎದುರು ಅರ್ಥಧಾರಿ "ರಾಘವ" ಎಂದು ಹೇಳುವಾಗಲೇ ನಾನು ಕೇಳಿದೆ. 'ನೀನು, ಅಪರಿಚಿತ ಹೆಣ್ಣು. ಇದ್ದಕ್ಕಿದ್ದಂತೆ ಬಂದು ರಾಘವ ಎಂದು ಕರೆಯುತ್ತಿದ್ದೀಯ,'

ಶೂರ್ಪನಖಿ "ನೀನು ನರಪತಿ"

ನಾನು "ಸದ್ಯ ನರಪತಿ ಹೌದು. ಯಾರಿಗೋ ಪತಿಯೆಂದು ಹೇಳಿಲ್ಲವಷ್ಟೆ"

ಶೂರ್ಪನಖಿ, 'ನನ್ನ ಮಾತು ಕೇಳು'

ನಾನು, 'ನಾನು ಹಿರಿಯರ ಮತ್ತು ಹೆಣ್ಣಿನ ಮಾತು ಕೇಳುತ್ತೇನೆ'

ಶೂರ್ಪನಖಿ "ಅಂದರೆ"

ನಾನು 'ಕೆಲವರಿಗೆ ವಯಸ್ಸಾಗಿರುತ್ತದೆ. ಸುಮ್ಮನೆ ದಂಡ ಆದರೂ ಗೌರವಿಸುತ್ತೇನೆ'

ಶೂರ್ಪನಖಿ "ಹೆಣ್ಣಿನ ಮಾತು ಕೇಳುತ್ತೀರಲ್ಲ?"

ನಾನು "ಕೇಳಬಹುದಾದುದನ್ನು"

ಮಾತುಕತೆ ಇದೇ ರೀತಿಯಲ್ಲಿ ಹೋಯಿತು. ಆಗಾಗ ಶರಧಿ ನಗಾಡುತ್ತಿದ್ದಳು. ಆದರೆ ನಾನು ವಾಲಿ ವಧೆಗೆ ಕಾಯುತ್ತಿದ್ದೆ. ಅದಕ್ಕಾಗಿ ನಾನು ಪಂಚವಟಿ ಬೇಗ ಮುಗಿಸಿದೆ.

ವಾಲಿವಧೆಯು ಪ್ರಾರಂಭವಾಯಿತು. ಸುಗ್ರೀವನ ಸ್ವಗತವೂ ಪ್ರಾರಂಭವಾಯಿತು. ಎಡಪಡಿತ್ತಾಯರು ಸುಗ್ರೀವನಾಗಿ ಅರ್ಥ ಹೇಳತೊಡಗಿದರು, 'ನ್ಯಾಯ ಅನ್ಯಾಯ ಎನ್ನುವುದು ಎಲ್ಲರಿಗೂ ಒಂದೆ, ಅದರಲ್ಲಿ ಮನುಷ್ಯರು: ಮಂಗಗಳು ಅಂತ ವ್ಯತ್ಯಾಸವಿಲ್ಲ. ನನ್ನಣ್ಣ ವಾಲಿ ದುರಹಂಕಾರಿ. ಇನ್ನೊಬ್ಬರ ಮಾತು ಕೇಳಲಾಗದ ಕಡು ಮೂರ್ಖ. ಹೆಣ್ಣು ಹುಚ್ಚ.' ಹದಿನೈದು ದಿನಗಳ ಹಿಂದೆ ರಾಮಣ್ಣ ಹೇಳಿದ ಮಾತಿಗೆ ಪ್ರತಿಯಾಗಿ ಈವತ್ತಿನ ಸುಗ್ರೀವ ಅರ್ಥ ಹೇಳುತ್ತಿದ್ದಾನೆ. ಭಾಗವತರ ಬಲಮಗ್ಗುಲಲ್ಲಿ; ಎಡಪಡಿತ್ತಾಯರು; ಎದುರು ಕುಳಿತ ರಾಮಣ್ಣ ಈ ಮಾತುಗಳನ್ನು ಕೇಳಿಸಿಕೊಂಡರು. ಆದರೆ ತಲೆ ತಗ್ಗಿಸಿ ಕೂತವರು ತಲೆಯೆತ್ತಿಯೂ ನೋಡಲಿಲ್ಲ. ಅವರು ತಲೆ ತಗ್ಗಿ ಕೂತುದನ್ನು ನೋಡಿ ಮತ್ತೆ

ಎಡಪಡಿತ್ತಾಯರು ಮುಂದುವರಿಸಿದರು." "ಯಾರೋ ಇಬ್ಬರು ಸಣ್ಣ ಹುಡುಗರು ಋಷ್ಯಮೂಖ ಪರ್ವತದ ಕೆಳಗೆಯೇನೋ ಹುಡುಕುತ್ತಿದ್ದಾರೆ. ಬಹುಶಃ ನನ್ನಂಥವನನ್ನು ಭಂಗಿಸಲು ವಾಲಿಯು ಹುಡುಗರನ್ನು ಬಿಟ್ಟಿರಬೇಕು. ನನ್ನಣ್ಣ ವಾಲಿಗೆ ಸಿಗುವವರು ಈ ರೀತಿಯ ಹುಡುಗರು ಮಾತ್ರ. ಒಬ್ಬ ಲಂಪಟನಿಗೆ ಬಿಟ್ಟರೆ ಇಂಥವರು ಬೇರೆ ಯಾರು ಸಿಗಲು ಸಾಧ್ಯ?" ಈಗ ಎಡಪಡಿತ್ತಾಯರು ನನ್ನನ್ನು ಗುರಿಯಾಗಿಸಿ ಕೊಂಡಿದ್ದಾರೆಂದು ಸ್ಪಷ್ಟವಾಯಿತು. ಎಡಪಡಿತ್ತಾಯರು; ಅವರು ಯಾರು? ಎಲ್ಲಿಂದ ಬಂದವರು? ಏನು ಕತೆ? ಯಾಕೆ ಹೀಗೆ? ಇದು ತಿಳಿಯದೆ ನಾನು ಯಾವ ನಿರ್ಧಾರವನ್ನು ಕೈಗೊಳ್ಳಲಾರೆ. ಯಾವ ಹುತ್ತದಲ್ಲಿ ಯಾವ ಹಾವಿದೆಯೋ ದೇವರೇ ಬಲ್ಲ, ನೀರಿನ ಉದ್ದಗಲ ಮೀನಿಗೆ ಅಥವಾ ಮೊಸಳೆಗೆ ಗೊತ್ತೇ ವಿನಾ ಆನೆಗಂತೂ ಗೊತ್ತಿರಲು ಸಾಧ್ಯವಿಲ್ಲ,' "ಈ ಮಾತು ಕೇಳುವವರೆಗೆ ನಾನು ಗಮನವಿಟ್ಟು ಕೇಳಿದ್ದೆ. ತಾಳಮದ್ದಲೆಯಲ್ಲಿ ಕೆಲವರು ಪೀಠಿಕೆಯಲ್ಲಿಯೇ ತಮ್ಮ ಅಡಿಪಾಯ ಗಟ್ಟಿ ಮಾಡಿಕೊಳ್ಳುತ್ತಾರೆ. ಮತ್ತೆ ಕೆಲವರು ಸ್ವಗತದಲ್ಲಿ ಹೆಚ್ಚು ಮಾತಾಡದೆ ಸಂವಾದದಲ್ಲಿ ತಮ್ಮ ವಾದವನ್ನು ಪುಷ್ಟೀಕರಿಸಿಕೊಳ್ಳುತ್ತಾರೆ. ಎಡಪಡಿತ್ತಾಯರು ಮೊದಲ ಜಾತಿಗೆ ಸೇರಿದವರು." ಈ ಕಿಷ್ಕಿಂಧೆಗೆ ಇಲ್ಲಿಯವರೆಗೆ ಇಂಥವರು ಬಂದುದನ್ನು ನಾನು ನೋಡಿಲ್ಲ. ನನಗೆ ಅನಿಸುವುದು ಈ ಮಂಗಗಳ ಕೂಟಕ್ಕೆ ಬಂದವರು ಯಾರು? ಮನುಷ್ಯರು ಬಂದರೆ? ಈ ಕೂಟಕ್ಕೆ ಇಂಥವರು ಯಾಕೆ ಬರುತ್ತಾರೆ? ನಮ್ಮ ಮಂಗಗಳಲ್ಲಿಯೂ ನಿಶಿತ ಬುದ್ಧಿವಂತಿಗೆ ಇರುವವರು ಇದ್ದಾರೆ." ಸಭಿಕರು ನಗಾಡಿದರು. ಅವರು ಪರೋಕ್ಷವಾಗಿ ನನ್ನನ್ನು ಈ ಕೂಟಕ್ಕೆ ಸಲ್ಲದವನು ಎಂಬರ್ಥದಲ್ಲಿ ಮಾತಾಡಿದ್ದರು. ನಾನು ಭಂಗಿತನಾದೆ. ರಾಮಣ್ಣನಂತೆ ನಾನು ತಲೆ ಅಡಿಗೆ ಹಾಕಿ ಕುಳಿತೆ.

ಕಳೆದ ತಾಳಮದ್ದಲೆಯಲ್ಲಿ ಹೊತ್ತಿಸಿದ್ದು ಮೂರೆ ಮೂರು ಗ್ಯಾಸ್‌ಲೈಟ್. ಆದ್ರೆ ಈ ತಾಳಮದ್ದಲೆಯಲ್ಲಿ ಒಟ್ಟು ಐದು ಗ್ಯಾಸ್‌ಲೈಟ್‌ಗಳು. ಒಂದು ಭಾಗವತರಿಗೆ; ಮತ್ತೆ ನಾಲ್ಕು ಅರ್ಥಧಾರಿಗಳಿಗೆ. ನನ್ನ ಎದುರು ಒಂದು ಗ್ಯಾಸ್‌ಲೈಟು ಕುಳಿತಿತ್ತು. ಅದರ ಬೆಳಕು ನಮ್ಮ ಮುಖಕ್ಕೆ ಬೀಳುತ್ತಿತ್ತು. ಎಲ್ಲರೂ ಎಡಪಡಿತ್ತಾಯರ ಮಾತು ಕೇಳಿ ಎಲ್ಲರೂ ನಗಾಡಿದರು. ಮೊದಲೆ ಜಾರಿ ಬೀಳಬಹುದು ಎಂಬ ಭಯದಲ್ಲಿದ್ದವನು ಈಗ ಕೆಸರಿಗೆ ಬಿದ್ದಂತೆ ಆಯಿತು. ಶಾನುಭೋಗರ ನಗು ಮತ್ತೂ ನನ್ನನ್ನು ಗುಂಡಿಗೆ ಹಾಕಿತು.

ಹನುಮಂತ ಬಂದು ರಾಮನಲ್ಲಿ ಕೇಳುತ್ತಾನೆ; "ಯಾರು ನೀವು? ಎಲ್ಲಿಂದ ಬಂದವರು? ಎಲ್ಲಿಗೆ ಹೋಗುವವರು?"

ರಾಮನಾಗಿ ನಾನು ಉತ್ತರಿಸಬೇಕು – ರಾಮಣ್ಣನ ಮುಖ ನೋಡಿದೆ. ಅವರು ತಲೆತಗ್ಗಿಸಿದವರು ತಲೆ ಎತ್ತಲಿಲ್ಲ. ಮತ್ತೆ ಶರಧಿಯನ್ನು ನೋಡಿದೆ ಉತ್ತರಿಸಲು ಸಿದ್ಧನಾದೆ. 'ಮಂಗಗಳು ಮಾತಾಡುತ್ತವೆ ಎಂಬುದೇ ಈ ಯುಗದ ವೈಶಿಷ್ಟ್ಯ. ಮಂಗಗಳಿಗೆ ಮೈ ಕೆರೆಯುವುದು ಮಾತ್ರವಲ್ಲ; ಹೆಚ್ಚು ಮಾತಾಡಲೂ ಬರುತ್ತದೆ ಎನ್ನುವುದು ತಿಳಿಯಿತು. ನಿನಗೆ ನಾನು ಯಾರು? ಎತ್ತ? ಯಾಕೆ? ಎಂದು ತಿಳಿಯಬೇಕು ಎಂಬ ಕುತೂಹಲವಿರುವುದು ನಿಜವಾಗಿಯೂ ನಿನ್ನ ಮನೋಧರ್ಮವನ್ನು ಸೂಚಿಸುತ್ತದೆ.' ನಾನು ಎಡಪಡಿತ್ತಾಯರಿಗೆ ವ್ಯಂಗ್ಯದ ಬಾಣ ಬಿಟ್ಟೆ. ರಾಮಣ್ಣ ಸ್ವಲ್ಪ ನಗಾಡಿದರು.

ಸ್ವಲ್ಪ ಹೊತ್ತಿನಲ್ಲಿ ರಾಮಣ್ಣನ ಮಾತು ಶುರುವಾಯಿತು. ಆ ದಿನದ ತಾಳಮದ್ದಲೆಯು ನನ್ನ ವೃತ್ತಿ ಜೀವನದ ಮರೆಯಲಾಗದ ತಾಳಮದ್ದಲೆಯು ಹೌದು. ರಾಮಣ್ಣ ಹೊಸ ವರಸೆ ತೋರಿಸಿದ್ದರು.

ವಾಲಿಯಾದ ರಾಮಣ್ಣ, ಎಡಪಡಿತ್ತಾಯರ ಮಾತುಗಳು ಈಗ ಅಸ್ಪಷ್ಟ ನೆನಪಿಗೆ ಬರುತ್ತಿದೆ. ಸುಗ್ರೀವ, 'ಅಣ್ಣಾ ವಾಲಿ ಯುದ್ಧಕ್ಕೆ ಬಾ'

ವಾಲಿ: ಹೂಂ ಕರೆದೆಯಾ? ಕರೆದ ಧ್ವನಿಯಲ್ಲಿ ವ್ಯತ್ಯಾಸವಿದೆ. ನೀನು ನನ್ನನ್ನು ಕರೆಯವುದು – ನನ್ನ ಕೈಯಿಂದ ಗುದ್ದು ತಿನ್ನುವುದು – ಮತ್ತೆ ಓಡಿ ಹೋಗುವುದು ನಿನಗೆ ಅಭ್ಯಾಸವಾಗಿದೆ.

ಸುಗ್ರೀವ – "ನಿನಗೆ ನನ್ನನ್ನು ಮತ್ತೆ ಸೋಲಿಸಬಹುದು ಎಂಬ ಭಾವನೆ ಇದ್ದರೆ ತಪ್ಪು.'

ವಾಲಿ– "ನಾನು ಸರಿ ಸಮಾನರೊಂದಿಗೆ ಯುದ್ಧ ಮಾಡುತ್ತೇನೆ. ನೀನೋ ..."

ಸುಗ್ರೀವ: "ಹೂಂ

ವಾಲಿ: "ನಿನಗೆ ಇದು ಚಟವಾಗಿದೆ ಹೆಂಡತಿಯ ನೆನಪಾದರೆ ಸಾಕು ಹೊತ್ತು ಅಂತ ಇಲ್ಲ ಗೊತ್ತು ಅಂತ ಇಲ್ಲ – ಅಣ್ಣಾ ರುಮೆಯನ್ನು ಕೊಡು ಅಂತ ಕೇಳುವುದು"

ಸುಗ್ರೀವ: 'ಅವಳು ನನ್ನ ಹೆಂಡತಿ.'

ವಾಲಿ: "ಹೆಂಡತಿಗಿಲ್ಲದ ಸಮಸ್ಯೆ ಗಂಡನಿಗೆ ಯಾಕೆ? ನನಗೆ ಸಂಶಯ – ನಿನಗೆ ಯಾರೂ ಸಿಗಲಿಲ್ಲವೆಂದು ಕಾಣುತ್ತದೆ." ಈ ರೀತಿಯ ಮಾತುಗಳು ಪ್ರೇಕ್ಷಕರ ಗಮನ ಸೆಳೆಯಿತು. ಅವರೆಲ್ಲಾ ಸಂತೋಷಪಟ್ಟರು.

ಆಗ ನನಗೆ ಉತ್ಸಾಹವಿತ್ತು. ಚಂಡೆ; ಮದ್ದಳೆ ಜಾಗಟೆ ಶಬ್ದಗಳು ನನ್ನ ಹೃದಯದ ಬಡಿತವನ್ನು ಹೆಚ್ಚಿಸುತ್ತಿದ್ದವು, ಎಲ್ಲೋ ಊಟ; ಎಲ್ಲೋ ಚಾ. ಯಾರದೋ ಮನೆಯ ಚಾಪೆ; ಅರೆ ನಿದ್ದೆ; ಬೆಳಗಿನ ಜಾವದ ಚಳಿ; ಮಧ್ಯಾಹ್ನ ಉರಿ ಬಿಸಿಲಲ್ಲಿ ಯಾವುದೋ ಮರದ ಕೆಳಗಿನ ನಿದ್ದೆ. ಇವು ಅಭ್ಯಾಸವಾಗಿತ್ತು. ರಾಕ್ಷಸ ವೇಷಗಳು ದಪ್ಪವಾಗಲಿಯೆಂದು ಒಳಗೆ ತುಂಬಿಸಿಕೊಂಡ ಗೋಣಿಚೀಲಗಳು ಕೂಡಾ ಕುಣಿದ ಮೇಲೆ ಒದ್ದೆಯಾಗಿರುತ್ತಿದ್ದವು. ಮಧ್ಯರಾತ್ರಿ ಎದ್ದು ಮೇಕಪ್ ಮಾಡಿಕೊಳ್ಳುವುದು: ರಂಗ ಸ್ಥಳಕ್ಕೆ ಬರುವುದು; ನಗುವುದು; ಅಳುವುದು; ಪ್ರಳಯ ಕಾಲದ ರುದ್ರನಾಗುವುದು; ಕೇಡಿನ ಕೀಚಕನಾಗುವುದು; ಹೀಗೆ – ಅಸಂಖ್ಯ. ಒಳಗೆ ದುಃಖವಿದ್ದರೂ ಅಳುವುದನ್ನು ಬಿಟ್ಟು ನಗಲು ರಂಗಸ್ಥಳ ಕಲಿಸಿಕೊಟ್ಟಿತು. ಅವೆಲ್ಲವನ್ನು ಕಲಿಯಬೇಕಾಯಿತು. – ಬದುಕಿನಲ್ಲಿ; ಗೆಜ್ಜೆಯಲ್ಲಿ; ತಾಳದಲ್ಲಿ; ರಾಗಗಳಲ್ಲಿ. ವರ್ಷಗಳು ಕ್ಯಾಲೆಂಡರಿನಲ್ಲಿ ಬದಲಾಗುವುದು ಮಾತ್ರವಲ್ಲ – ಜೀವನವೂ ಬದಲಾಗುತ್ತದೆ. ಶಾಲೆಗೆ ಹೋದವರು ಮಾತ್ರ ಕಲಿಯುವುದಲ್ಲ. ಪುಸ್ತಕಗಳು ಮಾತ್ರ ಪಾಠ ಕಲಿಸುವದಲ್ಲ. ಪುಸ್ತಕ ಓದಿ ಕಲಿತಿದ್ದೇವೆ ಎಂದು ಹೇಳಿಕೊಳ್ಳುವುದು ಶಾಲೆಗೆ ಹೋದವರ ಅಹಂಕಾರ ಮಾತ್ರ. ಅದು ಅವರ ಗತ್ತು. ಬಿಳಿಯ ಅಂಗಿಗಳ ಹಾರಾಟ ಅದು. ಪೇಪರಿನಲ್ಲಿ ಬರುವ ಫೋಟೋ ನೋಡಿ ಕುಪ್ಪಳಿಸಿ ಹಾರುವ ಕೋಡಂಗಿಗಳು. ಅದರಿಂದ ಏನು ಪ್ರಯೋಜನವೋ ನನಗಂತು ಗೊತ್ತಿಲ್ಲ. ಕಲ್ತವರು ಕಡಿದು ಕಟ್ಟೆ ಹಾಕಿದ್ದು ಅಷ್ಟರಲ್ಲಿಯೇ ಇದೆ, ಒಮ್ಮೊಮ್ಮೆ ಅನಿಸುತ್ತದೆ – ಎಲ್ಲವೂ ಕಳೆದ ಮೇಲೆ ಇನ್ನು ಇದರ ಕುರಿತು ಯೋಚಿಸಿ ಫಲವಿಲ್ಲ. ನನ್ನ ದೌರ್ಬಲ್ಯವೇ ಹೌದಾದರೆ ಅದನ್ನು ಒಪ್ಪಿಕೊಳುತ್ತೇನೆ – ಶಾಂಭವಿಯನ್ನು ಮರೆಯಲು ಶರಧಿಯ ತೋಳು ಬಯಸಿದೆ. ಒಂದು ಕ್ಷಣ ಶರಧಿ ಎದೆಗೆ ತಲೆಯಿಟ್ಟು ಮಲಗಿದೆ. ಆ ಗಳಿಗೆಗಳಲ್ಲಿ ಹುಡುಗಿಯರಿಗೆ ಮಾಂತ್ರಿಕ ಸ್ಪರ್ಶವಿದೆಯೆಂದು ಭಾವಿಸಿದ್ದೆ. ಶಾಂಭವಿಯನ್ನು ಮರೆಯಬೇಕಿತ್ತು – ಇಲ್ಲದಿದ್ದರೆ ನನಗೆ ಮತ್ತೆ ಏಳುವ ಅವಕಾಶವೇ ಇರುತ್ತಿರಲಿಲ್ಲ.

ಪಂಚಲಿಂಗೇಶ್ವರ ದೇವಸ್ಥಾನದ ತಾಳ ಮದ್ದಲೆಯು ಮುಗಿದದ್ದು ಬೆಳಿಗ್ಗೆ ಆರೂವರೆಗೆ. ಯಾವಾಗಲೂ ಐದು ಅಥವಾ ಐದೂವರೆಗೆ ತಾಳಮದ್ದಲೆಯು ಮುಗಿಯುತ್ತದೆ, ಆ ದಿವಸ ಆರೂವರೆಯ ಮೇಲೆ ಮುಗಿಯಿತು. ಕಾರಣ – ಶ್ಯಾನುಭೋಗರ ಮತ್ತು ರಾಮಣ್ಣನ ನಡುವಣ ಚರ್ಚೆ; ಒಬ್ಬರು ಬಾಲ ಬಿಡುವುದಿಲ್ಲ; ಮತ್ತೊಬ್ಬರು ತಲೆ ಬಿಡುವುದಿಲ್ಲ.

ನಾನು ಜೆಸಿಂತಾಬಾಯಿಯ ರೂಂನಲ್ಲಿರುವಾಗ; ಅದೆಲ್ಲಾ ನನ್ನ ನೆನಪಿಗೆ ಬರುತ್ತದೆ. – ಅವುಗಳನ್ನು ಹೆಕ್ಕಿ ಹೆಕ್ಕಿ ಬರೆಯುತ್ತಿದ್ದೇನೆ. ಆ ಬೀರದಕಟ್ಟೆಯ ತಾಳಮದ್ದಳೆಯು ನನಗೆ ಅವಿಸ್ಮರಣೀಯ. ಅದು ನನಗೆ ಮತ್ತು ಶರಧಿಗೆ ಜೀವ

ಕೊಟ್ಟ ದಿನವೂ ಹೌದು. ಹಾಗೆಯೇ ರಾಮಣ್ಣನ ಶಕ್ತಿ ಸಾಮರ್ಥ್ಯ ತೋರಿಸಿಕೊಟ್ಟ ದಿನವೂ ಹೌದು. ಶಾನುಭೋಗರು ಮತ್ತು ರಾಮಣ್ಣರ ನಡುವೆ ತಿಕ್ಕಾಟ ನಡೆಯುತ್ತದೆಯೆಂದು ಯಾರೂ ಊಹಿಸಿರಲಿಲ್ಲ. ರಾಮಣ್ಣನ ವಾಲಿಗೆ ಶಾನುಭೋಗರ ತಾರೆಯು ಕೆಣಕದ್ದು ಬಿರುಸಿನ ವಾದ ವಿವಾದಕ್ಕೆ ಕಾರಣವಾಯಿತು. ಆ ದಿನದ ವಾಲಿ ತಾರೆಯರ ಮಾತುಕತೆಗಳು ನನಗೆ ಅಸ್ಪಷ್ಟ ನೆನಪಿದೆ.

ಭಾಗವತರು, "ಚಿತ್ರ ತರಾಂಗಿ ಬಾಲೆ ಬಲು ವಿಚಿತ್ರವಾಯಿತು ನಿನ್ನಯ ಮಾತು" ಎಂಬ ಪದವನ್ನು ಹೇಳಿದರು.

ವಾಲಿ: "ತಾರೆ ನಿನ್ನಯ ಮಾತು ......."

ತಾರೆ: 'ಗೊತ್ತಿದೆ'

ವಾಲಿ: "ಏನು?"

ತಾರೆ: "ನೀವು ಮುಂದೆ ಹೇಳುವ ಮಾತು"

ವಾಲಿ: "ಸರಿಯಪ್ಪ – ಮುಂದೆ ನಾನು ಹೇಳುವ ಮಾತು......"

ತಾರೆ: "ನೀವು ಶೂರರು ರಸಿಕರು; ಚಿತ್ರ ತರಾಂಗಿ ಅಂತಂದ್ರೆ..."

ವಾಲಿ: 'ಸರಿ'

ತಾರೆ: "ಚಿತ್ರ ತರಾಂಗಿ ಕೇಳು ಎಲೆ ಬಾಲೆ ಬಲು ವಿಚಿತ್ರವಾಯಿತು ನಿನ್ನಯ ಮಾತು: "ಸಾಕಾ?"

ವಾಲಿ: 'ಇನ್ನು ಮುಂದಿನದು ಹೇಳಿದರೆ ಮತ್ತೆ ನನ್ನ ಕೆಲಸ ಏನೂ ಇಲ್ಲ,'

ತಾರೆ: "ನಾನು ಹೇಳಬಹುದು, ನಿಮಗೆ ಇನ್ನು ಹೇಳುವುದಕ್ಕೆ ಏನೂ ಗೊತ್ತಾಗುವುದಿಲ್ಲವಾದರೆ,"

ರಾಮಣ್ಣನ ಮುಖ ಉರಿಯತೊಡಗಿತು. ಅವರ ವಾಲಿಯ ಅರ್ಥಕ್ಕೆ ಯಾವ ಖಾಲಿ ಜಾಗೆಯೂ ಉಳಿದಿರಲಿಲ್ಲ. ಅವರು ಒಮ್ಮೆ ಭಾಗವತರ ಮುಖ ನೋಡಿದರು. ತಾಳಮದ್ದಳೆ ಸಂಘಟಿಸಿದ ಕೊಳತ್ತಾಯರ ಮುಖ ಅರಳಿತು. ಭಾಗವತರ ಮುಖ ಸುಟ್ಟ ಬದನೆಕಾಯಿಯ ರೀತಿಯಾಯಿತು. ಯಾಕೆಂದರೆ, ಅವರಿಗೂ ಮುಂದಿನ ಪದ್ಯ ಎತ್ತಿಕೊಳ್ಳುವ ಅವಕಾಶವಿರಲಿಲ್ಲ. ನನಗೂ ವಿಷಯ ಅರ್ಥವಾಯಿತು. ಆದರೂ ರಾಮಣ್ಣ ಮತ್ತೆ ಮುಂದುವರಿಸಿದರು.

ವಾಲಿ: 'ತಾರೆ, ಗಂಡನಿಗೆ ಸರಿಯಾದ ಹೆಂಡತಿ ನೀನು. ನಾನು ಮುಂದೆ ಏನು ಹೇಳುತ್ತೇನೆ ಅದನ್ನೇ ನೀನು ಊಹಿಸುತ್ತೀಯ ಎಂದರೆ..........'

ತಾರೆ: ಹೌದು ನನಗೆ ನಿಮಗಿಂತ ಹೆಚ್ಚು ತಿಳುವಳಿಕೆ ಇದೆ.......

ವಾಲಿ: ಯಾವುದನ್ನು ಎಲ್ಲಿ ಹೇಗೆ ಯಾಕೆ ಎಂಬುದರ ಔಚಿತ್ಯ ಜ್ಞಾನ ಇರಬೇಕು

ತಾರೆ: 'ನನಗೆ ಅದಿಲ್ಲವೇ?'

ವಾಲಿ: "ಅದಿದ್ದರೆ ನೀನು ಹೀಗೆ ಮಾತಾಡುತ್ತಿರಲಿಲ್ಲ........."

ತಾರೆ: "ನನಗೇನು ಹುಚ್ಚಾ? ಬೇಕಾದ್ದು ಬೇಡವಾದ್ದು ಮಾತಾಡಲು?"

ವಾಲಿ: 'ಮತ್ತೆ ಅದನ್ನು ಬಿಡಿಸಿ ಹೇಳಬೇಕಾ'

ತಾರೆ: 'ಮೊದಲು ಸರಿಯಾಗಿ ಮಾತಾಡಿ'

ಭಾಗವತರು ಇದು ಎಲ್ಲೆಲ್ಲಿಯೊ ಹೋಗುತ್ತಿದೆ ಎಂದು ತಿಳಿದುಕೊಂಡು ಸಾಕು ಎಂಬಂತೆ ಜಾಗಟೆಗೆ ಕುಟ್ಟಿದರು. ಶಾನುಭೋಗರು ಅವರ ಕಡೆಗೆ ನೋಡಿ "ಹೂಂ ಮತ್ತೊಮ್ಮೆ ಪದ ಹೇಳಿ" ಎಂದರು. ರಾಮಣ್ಣನೂ 'ಹೇಳಿ' ಎಂದರು. ಭಾಗವತರು ಮತ್ತೆ 'ಚಿತ್ರ ತರಾಂಗಿ ಬಾಲೆ ಬಲು ವಿಚಿತ್ರವಾಯಿತು ನಿನ್ನ ಮಾತು' ಎಂದು ಹೇಳಿದರು. ತಕ್ಷಣ ರಾಮಣ್ಣ, "ಇದಕ್ಕೆ ನೀವೇ ಅರ್ಥ ಹೇಳಿದರೆ ನಾವೇನು ಅವಲಕ್ಕಿ ಕುಟ್ಟುವುದಾ? ನಾವೇನು ಇಲ್ಲಿ ಕೋಡಂಗಿ ಕುಣಿಸಲು ಬಂದಿದ್ದೇವೆ ಅಂತ ತಿಳಿದುಕೊಂಡಿದ್ದೀರಾ, ಏನು ಕತೆ?".

ಶಾನುಭೋಗರು, "ನಿಮ್ಮ ಯೋಗ್ಯತೆ ಅಷ್ಟೇ 'ನೀವು ಏನು ಅಂತ ಹದಿನೈದು ದಿನ ಹಿಂದೆ ತೋರಿಸಿ ಕೊಟ್ಟಿದ್ದೀರಿ "ನಮ್ಮ ಒಂದು ಕೂದಲು ನೀವು ತೆಗೆಯಲು ಸಾಧ್ಯವಿಲ್ಲ ತಿಳಿಯಿತಾ" ಎಂದರು.

"ನನ್ನದನ್ನು ಬೇಕಿದ್ದರೆ ತೆಗೆಯಿರಿ" ಎಂದು ರಾಮಣ್ಣ ಹೇಳಿದರು. ವಾದ – ವಿವಾದ ನಡೆದು ತಾಳ ಮದ್ದಳೆಯು ಅರ್ಧಕ್ಕೆ ನಿಂತು ಹೋಯಿತು. ಮಾತುಕತೆ ಜೋರಾಗಿ ನಡೆದವು. ಯಾರೋ ಈ ವಿಷಯವನ್ನು ಐತ್ತಪ್ಪ ರೈಯವರಿಗೆ ಮುಟ್ಟಿಸಿದರು. ಅವರು ತಮ್ಮವರೊಂದಿಗೆ ಬರುತ್ತಿದ್ದರೆ; ಇತ್ತ ಎಡಪಡಿತ್ತಾಯರು ಶಾನುಭೋಗರಿಗೆ "ಅಲ್ಲಾ ಶಾನುಭೋಗರೆ ಭಾಷೆ ಇರುವವರೊಂದಿಗೆ ಮಾತಾಡಬೇಕು ನಮಗಿಂತ ಕೀಳು ಜನರೊಂದಿಗೆ ಮಾತಾಡುವುದರಿಂದ ಪ್ರಯೋಜನ ಇಲ್ಲ.'

ರಾಮಣ್ಣ 'ಏನದು ಹಾಗೆಂದರೆ?' ಎಡಪಡಿತ್ತಾಯರೇ "ಹೋಗ್ಲಿ ಬಿಡಿ" ಎಂದು ತೇಪೆ ಹಚ್ಚಿದರೆ ಉಳಿದವರು ಈ ತಾಳಮದ್ದಲೆಯ ಮಜಾ ನೋಡುತ್ತಿದ್ದರು. ಊರಿನ ಜಗಳ ಪ್ರಿಯರು ರೈಯವರು ತೈನಾತಿಗಳೊಂದಿಗೆ ಬರುವ ವಿಷಯವನ್ನು ಕೊಳತ್ತಾಯರಿಗೆ ವಿಷಯ ತಿಳಿಸಿದರು. ನೇರ ಪೆಟ್ಟುಗುಟ್ಟಿನ ವಿಷಯದಲ್ಲಿ ಕೊಳತ್ತಾಯರು ಹಿಂದೆ. ರಕ್ತ ಕಂಡರೆ ಹೆದರಿಕೆ. "ಇದು ದೇವಸ್ಥಾನ; ಪಂಚಲಿಂಗೇಶ್ವರನ ಸನ್ನಿಧಿಯಲ್ಲಿ ಯಾವುದೇ ಜಗಳ ಬೇಡ" ಎಂದ. ಕೊಳತ್ತಾಯರಿಗೆ ರಾಮಣ್ಣನೆಂದರು "ಕಾಲು ಕೆರೆದು ಜಗಳಕ್ಕೆ ಬರುವುದು ನೀವು. ಮತ್ತೆ ನಮ್ಮ ತಲೆಗೆ ಕೊಡೆ ಹಿಡಿಯುವವರೂ ನೀವೆ" ಅವರ ಮಾತು ಕತೆಯ ನಡುವೆಯೇ ಐತ್ತಪ್ಪ ರೈಯವರು ಬಂದವರು 'ಏನಂತೆ ರಾಮಣ್ಣ;' ಎಂದು ಕೇಳಿದರು. ರಾಮಣ್ಣ;" ನೀವ್ಯಾಕೆ ಬರಲು ಹೋದಿರಿ?' ಎಂದಾಗ; "ಅಲ್ಲಾ ರಾಮಣ್ಣ; ಇಲ್ಲೇನು ಗಲಾಟೆ ಅಂತ ಬೇಕಲ್ಲ? ನಮ್ಮೂರಿಗೆ ಬಂದವರು ನೀವು – ನಿಮಗೇನಾದರೂ ನಾನು ಸುಮ್ಮನೇ ಬಿಡುವವನಲ್ಲ, ಇಷ್ಟರವರೆಗೆ ನಾನು ಒಂದು ಹೇನು ಕೂಡಾ ತಲೆಯೆತ್ತದ ಹಾಗೆ ನೋಡಿದ್ದೇನೆ.' ಎಂದ ಐತ್ತಪ್ಪ ರೈಯರು ಸುತ್ತ ನೋಡಿದರು. ಅವರ ಮಾತಿನ ರಭಸ ನೋಡಿದ ಶಾನುಭೋಗರು,' "ನಾನು ಈ ಕ್ಷಣದಿಂದ ಈ ವಿಷಯ ಬಿಟ್ಟು ಹಾಕಿದ್ದೇನೆ; ನಾನಿನ್ನು ಈ ಊರಿಗೆ ತಲೆಯಿಟ್ಟು ಮಲಗುವವನಲ್ಲ. ಬನ್ನಿ ಎಡಪಡಿತ್ತಾಯರೆ; ಈ ಹೊಲಸಿಗೆ ಕಲ್ಲುಹಾಕಿದರೆ ನಮ್ಮ ಮುಖಕ್ಕೆ ಬೀಳುವುದು. ಈ ಊರಿನ ಸಹವಾಸ ಬೇಡ" ಎಂದು ಹೇಳುತ್ತಾ ಹೋದರು. ಹಿಮ್ಮೇಳದವರು ಮುಕ್ತಾಯದ ಪದವಿಲ್ಲದೆ ಮುಗಿಸಿದರು. ಎಳ್ಳು ದಾನ ತೆಗೆದುಕೊಂಡವರಂತೆ ಶಾನುಭೋಗರು; ಎಡಪಡಿತ್ತಾಯರು ಕೊಳತ್ತಾಯರು ಹೊರಟುಹೋದರು. ರಾಮಣ್ಣ ಮಾತ್ರ ಇದು ಯಾವುದಕ್ಕೂ ತಲೆಕೆಡಿಸಿಕೊಳ್ಳದವರಂತೆ ಹೊರಗಡೆ ಬಂದು ಬೀಡಿ ಸೇದುತ್ತಾ ನಿಂತರು. ಅವರ ಜೊತೆಗೆ ರೈಯವರು ಕೂಡಾ. ನಾನು ಇದೊಳ್ಳೆ ತಲೆ ನೋವಾಯಿತ್ತಲ್ಲ ಎಂದುಕೊಂಡು ದೇವರಿಗೆ ಸುತ್ತು ಬಂದು ಹೊರಗೆ ಬಂದೆ. ಸಭಿಕರು ಹೊರಟರು. ಎಲ್ಲಾ ಹೆಂಗಸರ ನಡುವೆ ಶರಧಿಯಿದ್ದಳು. ದೇವಸ್ಥಾನದ ಹೊರಗಿನ ಗದ್ದೆ ಹುಣಿಯಲ್ಲಿ ಹೋಗುತ್ತಾ ಒಂದು ಕ್ಷಣ ನನ್ನನ್ನು ಓರೆ ಕಣ್ಣಲ್ಲಿ ನೋಡಿದಳು. ನಾನು ನೇರವಾಗಿಯೇ ನೋಡಿದೆ. ನೋಟಗಳು ಮಿಲನ ಹೊಂದಿದವು. ಆ ನೋಟಕ್ಕೆ ನಿಜವಾದ ವ್ಯಾಖ್ಯೆಯನ್ನು ಇದುವರೆಗೆ ಮಾಡಲು ಸಾಧ್ಯವಾಗಲಿಲ್ಲ. ನೋಟಗಳು ಒಮ್ಮೊಮ್ಮೆ ಕಾಡುತ್ತವೆ – ಬಹಳ ದಿನದವರೆಗೆ. ಆ ನೋಟ ಮುಂದಿನ ಗಳಿಗೆಗಳಿಗೆ ಪೀಠಿಕೆಗೆ ಬರೆಯುತ್ತವೆಯೆಂದು – ಆಗ ಗೊತ್ತಿರಲಿಲ್ಲ!

* * * * *

ಶರಧಿ ಮತ್ತು ನಾನು ಆ ತಾಳಮದ್ದಳೆಯ ಗಲಾಟೆ ನಡೆದ ಅನಂತರ ಭೇಟಿಯಾಗಲಾರೆವು – ಆ ದಡದಲ್ಲಿರುವ ಅವಳು ಮತ್ತು ಈ ದಡದಲ್ಲಿರುವ ನಾನು ಕೈ ಮುಟ್ಟಿಕೊಳ್ಳಲಾರೆವು ಎಂದು ಭಾವಿಸಿಕೊಂಡಿದ್ದೆ. ಬೆಳಗಿನ ಜಾವವದು. ಅವಳು ಹೋದ ನಂತರ ತುಂಬಾ ಹೊತ್ತು ಅವಳು ಹೋದ ದಾರಿ ನೋಡುತ್ತಾ ನಿಂತಿದ್ದೆ.

ರಾಮಣ್ಣ ಆ ಗಲಾಟೆಯ ನಡುವೆಯು ಹೊರಗೆ ಹೋಗಿ ಬೀಡಿ ಸೇದುತ್ತಾ ನಿಂತಿದ್ದರು. ಅವರು ಅದರ ಕುರಿತು ಚಿಂತಿಸಿದ ಹಾಗೆ ಕಾಣಲಿಲ್ಲ. ಐತ್ತಪ್ಪ ರೈಯವರು ಅವರನ್ನು ಪುಸಲಾಯಿಸಿ ಕೋಳಿ ರೊಟ್ಟಿ ತಿನ್ನಲು ಕರೆದುಕೊಂಡು ಹೋದರು. ಕೊನೆಗೆ ಉಳಿದವನು ನಾನು ಮಾತ್ರ. ಎರಡು ಮೂರು ದಿನ ನಿದ್ದೆಯಿಲ್ಲದೆ ಕಣ್ಣು ಬೆಳಗಾಗುತ್ತಾ ಉರಿಯತೊಡಗಿತು. ಅರೆ ಕ್ಷಣ ಮಲಗದೆ ಮುಂದೆ ಕಾಲಿಡಲು ಸಾಧ್ಯವಿಲ್ಲವೆಂದನಿಸಿತು. ಕಾರ್ಯಕ್ರಮದ ಮೊದಲು ನಮ್ಮನ್ನು ಅರಸು ಕುಮಾರರಂತೆ ನೋಡಿಕೊಳ್ಳುತ್ತಾರೆ. ಏನು ಬೇಕೋ ಅದನ್ನು ತಂದು ಕೊಡುತ್ತಾರೆ. ಚಾ ಬೇಕೆಂದರೆ ಚಾ; ಅವಲಕ್ಕಿ ಬೇಕಾದರೆ ಅವಲಕ್ಕಿ; ಬಿಸಿ ನೀರು ಬೇಕೆಂದರೆ ಬಿಸಿ ನೀರು. ಕಾರ್ಯಕ್ರಮ ಮುಗಿಯಿತೋ ಅನಂತರ ನಾವು ಬಿಕನಾಸಿಗಳಿಗಿಂತ ಕಡೆ. ಆ ತಾಳಮದ್ದಲೆ ನಡೆದ ಅನಂತರ ಹೊರಗೆ ಯಾರೂ ಇರಲಿಲ್ಲ. ಅದೂ ಅಲ್ಲಿಯೇ ನಾನು ನಿಂತಿದ್ದೇನೆ ಎಂಬುದನ್ನು ಗುರುತಿಸಲು ಜನರಿಲ್ಲ. ಎಲ್ಲದಕ್ಕೂ ಹೆಚ್ಚಾಗಿ ಜನರಿಗೆ ನನ್ನ ಹಂಗಿರಲಿಲ್ಲ.

* * * * *

ಗರ್ಭಗುಡಿಯ ಬಾಗಿಲು ಹಾಕಿ ಎಲ್ಲರೊಂದಿಗೆ ದೇವಸ್ಥಾನದ ಭಟ್ರು ಕೂಡಾ ಹೋದರು. ಅಕ್ಷರಶಃ ನಾನು ಒಬ್ಬನೇ ಉಳಿದೆ. ಹೇಗೂ ಎಲ್ಲರೂ ಹೋಗಿದ್ದಾರೆ. ಆ ಪರಿಸರದಲ್ಲಿ ನಾನು ಒಬ್ಬನೇ ಉಳಿದಿರುವುದರಿಂದ ನಾನು ಹೆಚ್ಚು ಕಡಿಮೆ ಸ್ವತಂತ್ರನಾಗಿ ಬಿಟ್ಟೆ. ಅದೂ ಬೆಳಗಿನ ಹೊತ್ತು ಊರಿನ ದೇವರ ಸನ್ನಿಧಿಗೆ ಯಾರೂ ಬರುವುದಿಲ್ಲ, ಹತ್ತಿರವೂ ಸುಳಿಯುವುದಿಲ್ಲ. ಹಳ್ಳಿಯ ಊರ ದೇವಳದಲ್ಲಿ ದಿನಕ್ಕೆ ಒಂದು ಸರ್ತಿಯೋ, ಎರಡು ಸರ್ತಿಯೊ ಅರ್ಚಕರು ಬಂದು ದೇವರ ಯೋಗ ಕ್ಷೇಮ ವಿಚಾರಿಸಿದರೆ ಹೆಚ್ಚು. ನನಗೆ ಅದು ಖುಷಿ ಆಯಿತು. ಹೇಗೂ ನನ್ನ ರೂಮಿಗೆ ಹೋದರೂ ನಾನು ಹೀಗೆಯೇ ಇರಬೇಕಾಗುತ್ತದಲ್ಲ. ಎದುರು ಇದ್ದ ಮಾವಿನ ಮರದ ಎಲೆಯಲ್ಲಿ ಹಲ್ಲು ಉಜ್ಜಿದೆ. ಸುತ್ತ ನೋಡಿದೆ. ಯಾರೂ ಇರಲಿಲ್ಲ. ಹೆಸರಿಗೊಂದು ಮೀಯಾಣವಾದರೆ ಸಾಕು ಎಂದು ಕೆರೆಯಲ್ಲಿ ಮುಳುಗಿ ಎದ್ದೆ. ಮಳೆಗಾಲದ ಕೆರೆಯ ನೀರು. ಚಳಿಯಿಂದ ಮೈ ನಡುಗಿತು. ಬೇಗನೇ ಶಾಲು ಹೊದೆದುಕೊಂಡು ಮತ್ತೆ ದೇವಸ್ಥಾನದ ಕಟ್ಟೆಗೆ ಬಂದು ಕಾಲು ನೀಡಿ

ಗೋಡೆಗೆ ಒರಗಿದೆ. ಜೋಲಿ ಹೊಡೆದು ಬೀಳಬಹುದು ಎಂದು ಅಲ್ಲಿಯೇ ಮುರುಟಿದೆ. ಅಷ್ಟೆ ಗೊತ್ತು – ನಿದ್ದೆ ಬಂತು. ಅಮಲಿನ ನಿದ್ದೆಯದು.

ಯಾರೋ ಬಂದು ಕರೆದಂತಾಯಿತು. ಗಡಿಬಿಡಿಯಿಂದ ಎದ್ದೆ. ನೋಡಿದರೆ; ದೇವಸ್ಥಾನದ ಭಟ್ರು. ಅವರೆಂದರು "ಅಲ್ಲ ಮಾರಾಯರೆ, ನೀವು ಹೀಗೆ ಮಾಡುವುದಾ? ನೀವು ಹೇಳಿದ್ದರೆ ನಾನೇ ನಿಮ್ಮನ್ನು ನನ್ನ ಮನೆಗೆ ಕರೆದುಕೊಂಡು ಹೋಗುತ್ತಿದ್ದೆ. ಅಲ್ಲ ನನಗೇನು ಗೊತ್ತು ನೀವು ಇಲ್ಲಿಯೇ ನಿದ್ದೆ ಮಾಡುತ್ತೀರಿ ಅಂತ. ಊಟ ತಿಂಡಿ, ಯಾವುದೂ ಇಲ್ಲದೆ ನೀವು ಈ ಚಳಿಗೆ ಮಲಗಿದ್ದು ಸಾಕಪ್ಪಾ. ಹೊರಗೆ ಹೋಗಿ ಮುಖ ತೊಳೆದುಕೊಂಡು ಬನ್ನಿ; ಬೇಗ ಆ ಸ್ವಾಮಿಯ ಸೇವೆ ಮಾಡಿ ಬರುತ್ತೇನೆ. ದೇವರ ನೈವೇದ್ಯದ ಹಣ್ಣು ಕಾಯಿ ಕೊಡುತ್ತೇನೆ. ಸ್ವೀಕಾರ ಮಾಡಿ. ಸಣ್ಣ ಪ್ರಾಯದವರು. ಅದೂ ರಾತ್ರಿ ತಾಳಮದ್ದಲೆ ಬೇರೆ. ಅದು – ಇದು ಅಂತ ನಿದ್ದೆಗೆಡುತ್ತೀರಿ. ನಿದ್ದೆಗೆಟ್ಟು ಹೊತ್ತು ಹೊತ್ತಿಗೆ ಊಟ ಮಾಡದೆ ನಿಮ್ಮ ಮೈಯ ಎಲುಬು ಕಾಣಿಸುತ್ತದೆ, ಒಣಗಿದ ಹಿಡಿಸೂಡಿ ಕಡ್ಡಿಯಾಗಿದ್ದೀರಿ. ನಾನು ಹೀಗೆ ಹೇಳುತ್ತೇನೆ ಅಂತ ಬೇಸರ ಮಾಡಬೇಡಿ; ನೋಡಿ – ನೀವೆಲ್ಲಾ ನಿದ್ದೆಗೆಡುವವರು ಬೆಳಿಗ್ಗೆ ತಕ್ಷಣ ಬಾದಾಮಿ, ದ್ರಾಕ್ಷಿ ತಿನ್ನಬೇಕು. ಬೀಡಿ ಗೀಡಿ ಇದ್ದರಂತೂ ಗರ್ಮಿ ಜಾಸ್ತಿ.' ಭಟ್ರು ಮಾತಾಡುತ್ತಲೇ ಇದ್ದರು. ನಾನು ಎದ್ದು ಕುಳಿತವನು; ಆಕಳಿಸಿ ಮೈ ಮುರಿದೆ. ಅವರು ಅದು ಇದು ಹೇಳುತ್ತಲೇ ಇದ್ದರು. ಅವರ ಮಾತಿನ ಚಪಲ ನನಗೆ ತಿಳಿಯಿತು. 'ಭಟ್ರೇ ನಾನು ಹೋಗಿ ಮುಖ ತೊಳೆದುಕೊಂಡು ಬರುತ್ತೇನೆ. ನೀವು ಪೂಜೆ ಮಾಡಿಬಿಡಿ.' ಎಂದು ಹೊರಟೆ. ಅವರು ಹೆಗಲಿನ ವಸ್ತ್ರ ತೆಗೆದು ಸೊಂಟಕ್ಕೆ ಸುತ್ತಿಕೊಂಡು ಒಳಗೆ ಹೋದರು. ನನಗೆ ಚಳಿಯ ಬಿಟ್ಟಿರಲಿಲ್ಲ. ಕಾಲು ಚಳಿಗೆ ಹೆಪ್ಪುಗಟ್ಟಿದಂತೆ ಆಗಿತ್ತು. ಮೈ ಬಿಸಿಯಾಗಲೀ ಎಂದು ಒಂದು ಬೀಡಿ ಹಚ್ಚಿ ಅದರ ಹೊಗೆಯನ್ನು ಕುಡಿದು ಮತ್ತೆ ಮುಖ ತೊಳೆದು ಒಳಗೆ ಹೋಗುವಷ್ಟರಲ್ಲಿ ಭಟ್ಟರು ಗರ್ಭಗುಡಿಯಲ್ಲಿ ರುದ್ರನ ಸ್ತೋತ್ರಮಾಡುತ್ತಿದ್ದರು. 'ಓಂ ರುದ್ರಾಯ ನಮಃ' ಎನ್ನುವುದು ಕೇಳಿಸಿತು. ಅವರು ಪೂಜೆ ಮಾಡುತ್ತಿದ್ದುದರಿಂದ ಅವರಿಗೆ ಹೇಳದೆ ಹೊರಡುವುದು ಸರಿಯಲ್ಲವೆಂದು. ದೇವಸ್ಥಾನದ ಅಂಗಣದಲ್ಲಿಯೇ ಕುಳಿತೆ. ಮತ್ತೆ "ಓಯ್ ಬನ್ನಿ ಮಂಗಳಾರತಿ ತೆಗೆದುಕೊಳ್ಳಿ' ಎಂದರು. ನಾನು ಆರತಿಗೆ ಕೈಯಾಡಿಸಿದೆ. ಅನಂತರ ಅವರು ತೀರ್ಥಪ್ರಸಾದ ಕೊಟ್ಟರು. ಅವರು ಕೊಟ್ಟ ತೆಂಗಿನ ಕಾಯಿಯ ಚೂರು, ಬಾಳೆಯ ಹಣ್ಣು ನನಗೆ ಶಕ್ತಿ ತುಂಬಿತು. "ಭಟ್ರೇ ನಾನಿನ್ನು ಹೊರಡುತ್ತೇನೆ. ಎರಡು ಮೂರು ದಿನದಿಂದ ನಿದ್ದೆ ಇರಲಿಲ್ಲ. ಮಲಗಿದವನಿಗೆ ಎಷ್ಟು ಹೊತ್ತಾಯಿತು ಅಂತ ತಿಳಿಯಲಿಲ್ಲ." ಎಂದವನು ಹೊರಡಲು ತಯಾರಾದೆ. ಭಟ್ಟರು, "ನಿಲ್ಲಿ ನಾನು ಬರುತ್ತೇನೆ, ಒಟ್ಟಿಗೆ ಹೋಗುವಾ. ಹಸಿದುಕೊಂಡು ಯಾಕೆ ಅಷ್ಟು ದೂರ

ನಡೆಯಬೇಕು? ನಮ್ಮನೆಗೆ ಬನ್ನಿ, ಸ್ವಲ್ಪ ಊಟಮಾಡಿ ಹೋಗಿ" ಎಂದರು. ನನಗೂ ಅವರ ಮಾತನ್ನು ಅಲ್ಲಗಳೆಯವಷ್ಟು ಶಕ್ತಿಯಿರಲಿಲ್ಲ.

ಅವರ ಜೊತೆಯಲ್ಲಿ ದೇವಸ್ಥಾನದ ಎದುರಿನ ಗದ್ದೆಯ ಹುಣಿಯ ಮೇಲೆ ನಡೆದೆ. ಮಳೆಗಾಲದಲ್ಲಿ ಗದ್ದೆಯ ಹುಣಿಯ ಮೇಲೆ ನಡೆಯುವುದು ಕಷ್ಟ. ಆ ಕಡೆ ಈ ಕಡೆಯವರು ಹುಣಿಯನ್ನು ಕೆತ್ತಿ ಕೆತ್ತಿ ಹುಣಿಯು ಸಪೂರವಾಗುತ್ತ ಬರುತ್ತದೆ. ಹುಣಿ ಮೇಲೆ ಗರಿಕೆಯು ಬೆಳೆದಿರುತ್ತದೆ. ಕಪ್ಪೆಯನ್ನು ಹಿಡಿಯಲು ಕೇರೆ ಹಾವುಗಳು ಓಡಾಡುತ್ತಿರುತ್ತವೆ. ಅಷ್ಟೇ ಅಲ್ಲದೆ ಹುಣಿಯನ್ನು ಏಡಿಗಳು ಕೊರೆಯತ್ತವೆ .ಹುಣಿಯ ಮೇಲೆ ಗರಿಕೆಯು ಹೇರಳವಾಗಿ ಬೆಳೆಯುತ್ತವೆ. ಇದರಿಂದ ಹುಣಿಯ ಮೇಲೆ ನಡೆಯುವುದು ಕಷ್ಟ. ಕಾಲು ಜಾರಿತೋ ಗದ್ದೆಯ ಕೆಸರಿಗೆ ಬೀಳಬೇಕು. ಕಾಲಿಗೆ ಮೆಟ್ಟಿನಜೋಡು ಹಾಕದಿದ್ದ ಭಟ್ಟರು ಸಲೀಸಾಗಿ ನಡೆಯುತ್ತಿದ್ದರು. ನನಗೆ ಅದರ ಮೇಲೆ ನಡೆಯಲು ಕಷ್ಟ ಪಡಬೇಕಾಗಿ ಬಂತು. ನಿಧಾನವಾಗಿ ಕಾಲಿಡುತ್ತಿದ್ದೆ. ಭಟ್ಟರೂ 'ನಿಧಾನವಾಗಿ ಬನ್ನಿ' ಎಂದು ಹೇಳುತ್ತಾ ನಡೆದರು. ಎರಡು ಫರ್ಲಾಂಗು ನಡೆದ ಮೇಲೆ ಅವರ ಮನೆಯು ಸಿಕ್ಕಿತು. ಮನೆಯ ಅಂಗಳವು ಜಾರಬಾರದೆಂದು ತೆಂಗಿನ ಮಡಲು, ಅಡಿಕೆಯ ಸೋಗೆ, ಅಡಿಕೆಯ ಸಿಪ್ಪೆ ಹರಡಿದ್ದರು. ಅಂಗಳದ ಮಧ್ಯೆ ಓಡಾಡಲು ಅಡಿಕೆಯ ದಬ್ಬೆಯನ್ನು ಹಾಕಿ ದಾರಿ ಮಾಡಿದ್ದರು. ಅಡಿಕೆಯ ದಬ್ಬೆಯನ್ನು ಸೀಳಿ ಅದರ ದಬ್ಬೆಯನ್ನು ಅಂಗಳದಲ್ಲಿ ಹಾಕುತ್ತಿದ್ದುದರಿಂದ ಮಳೆಗಾಲದಲ್ಲಿ ಓಡಾಡಲು ಅನುಕೂಲವೇನೋ ಆಗುತ್ತಿತ್ತು. ಅವುಗಳ ಕೆಳಗೆ ಸಣ್ಣ ಸಣ್ಣ ಕಪ್ಪೆಗಳು ಕೂತಿರುತ್ತಿದವು. ಒಮ್ಮೊಮ್ಮೆ ಅವುಗಳ ಮೇಲೆ ನಡೆಯುವಾಗ ಕೆಸರುನೀರು ಹಾರುತ್ತಿತ್ತು. ಆದರೂ ಅದರ ಮೇಲೆ ನಡೆಯಲು ಖುಶಿಯಗುತ್ತಿತ್ತು. ಯಾಕೆಂದರೆ ಮುಂದೆ ಕಾಲಿಟ್ಟಾಗ ಹಿಂದೆ ಒಂದು ಸಣ್ಣನೆಯ ಶಬ್ದವನ್ನು ಅದು ಹೊರಡಿಸುತ್ತಿತ್ತು. ಭಟ್ಟರ ಮನೆಯ ಅಂಗಳಕ್ಕೆ ಕಾಲಿಟ್ಟಾಗ ಹಸಿವಿನಿಂದ ಇದ್ದ ನನಗೆ ಒಗ್ಗರಣೆ ಪರಿಮಳ ಬಂತು. ನನ್ನೆದುರು ಇದ್ದವರು 'ಲಲಿತ, ಓ ಲಲಿತ' ಎಂದು ಕರೆದರು. ಅಡುಗೆಯ ಮನೆಯಿಂದಲೇ, 'ಬಂದೆ ಬಂದೆ' ಎಂದು ಹೇಳುತ್ತಿರುವುದು ಕೇಳಿಸಿತು.

ಭಟ್ಟರು ಮನೆಯೊಳಗೆ ಕಾಲಿಟ್ಟು, ನನ್ನನ್ನು ಕರೆದರು. 'ನೋಡಿ ಈ ಹೆಂಗಸರು ಅಡುಗೆಯ ಮನೆಗೆ ಹೋದರು. ಅಂತಾದ್ರೆ ಜಗತ್ತಿನಲ್ಲಿ ಏನೇ ಆದರೂ ತಲೆ ಕೆಡಿಸಿಕೊಳ್ಳುವುದಿಲ್ಲ' ಎಂದರು. ಅಷ್ಟು ಹೊತ್ತಿಗೆ ಒಳಗಡೆಯಿಂದ ಹೆಂಗಸರೊಬ್ಬರು ಬಂದರು – ಭಟ್ಟರು ಕರೆದ ಲಲಿತ. ನೋಡುವಾಗಲೇ ಗೌರವಿಸಬಹುದಾದ ವ್ಯಕ್ತಿತ್ವ, ಎರಡು ಹುಬ್ಬುಗಳ ನಡುವೆ ಕುಂಕುಮದ ಬೊಟ್ಟು. ಕೈಮಗ್ಗದ ಸೀರೆ. ಹಸಿರು ರವಿಕೆ, ಬಿಳಿಯ ನಗು. 'ಬನ್ನಿ ಬನ್ನಿ' ಎಂದು ಕರೆದರು. ಭಟ್ಟರ ವಯಸ್ಸು

ನಲುವತ್ತೋ ನಲುವತ್ತೆರಡೊ ಇರಬಹುದು. ಮಾಮೂಲಿ ಪುರೋಹಿತರಂತೆ ಇರಲಿಲ್ಲ. ತೆಳ್ಳಗಿದ್ದರು ಬಿಳಿಯಿದ್ದರು. ಅವರ ಹೆಂಡತಿಯೂ ಅಷ್ಟೇ – ವರ್ಷ ಮೂವತ್ತೋ ಮುವತ್ತೆರಡೋ ಇರಬಹುದು. 'ಕುಳಿತುಕೊಳ್ಳಿ' ಎಂದರು. "ಬಾಯಾರಿಕೆ ತರಲಾ?" ಎಂದು ಕೇಳಿದರು. ಮಾತಿನಲ್ಲಿ ನಯವಿತ್ತು. 'ನೀನೊಬ್ಬಳು, ಈ ಮಳೆಗಾಲದಲ್ಲಿ ಯಾರಿಗೆ ಬಾಯಾರಿಕೆ ಆಗುತ್ತದೆ? ಹಂಡೆಯಲ್ಲಿ ಬಿಸಿನೀರಿದ್ದರೆ ನೋಡು – ಇವರು ಹೋಗಿ ಸ್ನಾನ ಮಾಡಿ ಬರಲಿ ಇವರು ಯಾರು ಅಂತ ಗೊತ್ತಾಗಲಿಲ್ವಾ? ನಿನ್ನೆ ಕೊಳತ್ತಾಯರ ತಾಳಮದ್ದಲೆಯಲ್ಲಿ ಅರ್ಥ ಹೇಳಿದವರು. ಬೆಳಗ್ಗಿನಿಂದ ಈ ಹೊತ್ತುವರೆಗೆ ದೇವಸ್ಥಾನದಲ್ಲಿಯೇ ಒರಗಿದ್ದರು. ಜುಲ್ಮೆ ಮಾಡಿ ಕರೆದುಕೊಂಡು ಬಂದೆ. ತುಂಬಾ ಆಯಾಸ ಆಗಿರಬೇಕು. ಸ್ವಲ್ಪ ಬಿಸಿ ನೀರಲ್ಲಿ ಸ್ನಾನ ಮಾಡಿದರೆ, ಆಯಾಸ ಹೇಳದೆ ಕೇಳದೆ ಓಡಿ ಹೋಗುತ್ತದೆ.' ನನ್ನ ಕಡೆ ನೋಡಿ,' ಇವಳು ನನ್ನ ಒಬ್ಬಳೇ ಹೆಂಡತಿ. ಹೆಸರು ಲಲಿತ. ಸ್ವಲ್ಪ ಅಹಂಕಾರ, ಸಿಟ್ಟು, ಗಡಿಬಿಡಿ , ಬಿಟ್ಟರೆ ಮತ್ತೆಲ್ಲಾ ಅಪರಂಜಿ ಚಿನ್ನ. ಅಪರೂಪಕ್ಕೆ ದಿನ ಬಿಟ್ಟು ದಿನ ಸಿಟ್ಟು ಬರುತ್ತದೆ. ಸಿಟ್ಟು ಬಂದರೆ ಗಲಾಟೆ ಮಾಡುವ ಅಭ್ಯಾಸವಿಲ್ಲ, ಬಿಗಿದರೆ ನಾಯಿಗೆ ನಾಕು ಬಿಗಿದಾಳು ಅಷ್ಟೆ – ಅಳುವ ಅಭ್ಯಾಸವಿಲ್ಲ . ಅತ್ತರೆ ಕಣ್ಣಲ್ಲಿ ಮೂಗಲ್ಲಿ ನೀರು ಬರುತ್ತದೆ. ಅಡುಗೆಯೇನೋ ಚೆನ್ನಾಗಿ ಮಾಡುತ್ತಾಳೆ. ಉಪ್ಪು ಕಾರಕ್ಕೆ ನಾವೇ ಬಾಳೆಯಲ್ಲಿ ಬಡಿಸಿದ ಉಪ್ಪಿನಕಾಯಿ ನೆಕ್ಕಬೇಕು ಅಷ್ಟೇ. ಬೇರೆ ತೊಂದರೆಯಿಲ್ಲ. ತಂಬಾ ಆಸೆ – ಗೀಸೆಯಿಲ್ಲ. ವರ್ಷಕೊಮ್ಮೆ ಜವುಳಿ ಅಂಗಡಿಗೆ ಮತ್ತೆ ಚಿನ್ನದ ಕೆಲಸದ ಆಚಾರ್ರ ಹತ್ತಿರ ಹೋಗದೆ ಮನಸ್ಸು ಕೇಳುವುದಿಲ್ಲ. ಆದರೂ ನನ್ನ ಹೆಂಡತಿ ಪಂಚವಟಿಯ ಸೀತೆಯೇ.' ಎಂದರು. ನಾನು ಅವರ ಹೆಂಡತಿಯ ಮುಖ ನೋಡಿ ನಗಾಡಿದೆ. ಅವರ ಮುಖದಲ್ಲಿಯೂ ನಗು. ಅದು ಶುಭ್ರವಾದದ್ದು. ಅದರಲ್ಲಿ ಕಪಟವಿರಲಿಲ್ಲ. ಆತ್ಮೀಯತೆಯಿತ್ತು. "ನೀವೊಮ್ಮೆ ಸುಮ್ಮನಿರುತ್ತೀರಾ? ಬಂದವರ ಎದುರು ನನ್ನನ್ನು ತಮಾಷೆ ಮಾಡುವುದು ಬೇಡ. ಅವರು ಏನು ಅಂತ ತಿಳಿದುಕೊಳ್ಳುತ್ತಾರೆ.' ನನ್ನ ಮುಖ ನೋಡಿ, 'ಇವರ ಮಾತು ಸತ್ಯ' ಅಂತ ನಂಬಬೇಡಿ. "ಇವರು ಸತ್ಯ ಹರಿಶ್ಚಂದ್ರನ ತಮ್ಮ. ಸುಳ್ಳು ಹೇಳಿ ಗೊತ್ತಿಲ್ಲ. ಸತ್ಯ ವರುಷಕ್ಕೊಮ್ಮೆ ಮಾತ್ರ ಹೇಳುತ್ತಾರೆ.' ಎಂದರು ಲಲಿತ. ಭಟ್ರು, "ಹೋಗಲಿ – ಬಿಡು. ಬಿಸಿನೀರಿದ್ದರೆ ಮಿಂದು ಬರಲಿ. ಊಟಕ್ಕೆ ಏನು ಮಾಡಿದ್ದೀಯಾ?" ಎಂದು ಕೇಳಿದರು. ಮತ್ತೆ ನನ್ನ ಹತ್ತಿರ 'ಸುಮ್ಮನೆ ತಮಾಷೆಗೆ ಹೇಳಿದೆ. ಇವಳಿಗೆ ಮೂಗಿಗೆ ಬೆರಳು ಹಾಕಿದರೆ ಕಚ್ಚಿ ಗೊತ್ತಿಲ್ಲ.' ಎನ್ನುತ್ತಾ,' ಅಲ್ಲಾ ಮಾರಾಯತಿ, ಬಿಸಿ ನೀರಿದ್ದರೆ ನೋಡು ಅಂದರೆ ನೀನು ಇಲ್ಲಿ ಹರಟೆ ಹೊಡೆಯತ್ತಾ ನಿಂತರೆ ಅವರ ಕತೆಯೇನಾಗಬೇಕು? 'ಎಂದ ಭಟ್ಟರು 'ಮತ್ತೆ ತಮ್ಮ ಹೆಂಡತಿಯ ಮುಖ ನೋಡಿದರು.' ಲಲಿತೆಯವರು," ಬಿಸಿನೀರು ಕಾಸಿಲ್ಲ.

ಬೇಕಿದ್ದರೆ ಬಿಸಿ ನೀರಿಗೆ ಬೆಂಕಿ ಹಾಕುತ್ತೇನೆ. ಅದು ಎಷ್ಟು ಹೊತ್ತು? ತೆಂಗಿನ ಕರಟ ಹಾಕಿದರೆ ನೀರು ಕಾಯುತ್ತದೆ, ಅದೇನು ಒಂದು ಹಂಡೆ ತುಂಬ ನೀರು ಬೇಕಾ? ನಾಲ್ಕು ಚೆಂಬು ನೀರಿದ್ದರೆ ಸಾಕು" ಎಂದು ಹೇಳುತ್ತಾ 'ಬಾಳೆಕಾಯಿಯ ಪಲ್ಯ, ಹುಣಿಸೆ ಸಾರು ಇದೆ, ಬೇಕಿದ್ದರೆ ನಾಲ್ಕೇ ನಾಲ್ಕು ನಿಮಿಷದಲ್ಲಿ ಉಪ್ಪು ಕಾರ ಹಾಕಿ, ಒಣಗಿಸಿಟ್ಟ ತೊಂಡೆ ಕಾಯಿ ಹುರಿಯುತ್ತೇನೆ. ಆಗದಾ?' ಎನ್ನುತ್ತಾ, ಒಳಗಡೆಗೆ ಹೊರಟರು. 'ಅಯ್ಯಯ್ಯೊ ಬಿಸಿನೀರಿಗೆ ಬೆಂಕಿ ಹಾಕಬೇಡ, ಒಲೆಗೆ ಹಾಕು.' ಎಂದ ಭಟ್ಟರ ಮಾತಿಗೆ,' ಲಲಿತೆಯು,' 'ಇಲ್ಲಿ ನೋಡಿ ನೀವು ನನ್ನ ತಮ್ಮ ಇದ್ದ ಹಾಗೆ. ನೀವೇ ಈಗ ನ್ಯಾಯ ಹೇಳಿ – ಯಾವುದು ಸರಿ – ಯಾವುದು ತಪ್ಪು ಅಂತ. ನನ್ನನ್ನು ನೋಡಿದರೆ ನಾನು ಹಾಗೆ ಅಂತಾ ಕಾಣಿಸುತ್ತೇನಾ? ಮನೆ ಕೆಲಸ ಮಾಡಲು ನಾನು ಬೇಕು; ಹಾಗೆಯೇ ತಮಾಷೆ ಮಾಡಲೂ ನಾನೇ ಬೇಕು,' ಎಂದರಾದರೂ ಅವರ ನಗು ಮುಖದಲ್ಲಿ ಸಿಟ್ಟು ಇರಲಿಲ್ಲ. ಲಲಿತೆ ಒಳಗಡೆ ಹೋದ ಮೇಲೆ ನಾನೆಂದೆ" "ನಿಮ್ಮಿಬ್ಬರದು ಒಳ್ಳೆಯ ಜೋಡಿ" ನಿಮಗೆ ತಕ್ಕ ಹೆಂಡತಿ. ಇಂಥಾ ಹೆಂಡತಿ ಪಡೆಯಲು ನೀವು ಪುಣ್ಯ ಮಾಡಿರಬೇಕು.' ಭಟ್ಟರು 'ಜೊತೆ ಸರಿಯಾಗಿದೆ – ಅದರಲ್ಲಿ ಸಂಶಯವಿಲ್ಲ. ಹೆಣ್ಣು, ಹೊನ್ನು, ಮಣ್ಣು ಇವು ಮೂರನ್ನು ನಾವು ಪಡೆದು ಬಂದಿರಬೇಕು. ಇದೆಲ್ಲಾ ಋಣ ಅಷ್ಟೆ' ಎಂದ ಭಟ್ಟರು ಸ್ವಲ್ಪ ಹೊತ್ತು ಏನೋ ಯೋಚಿಸುತ್ತಿದ್ದರು. ನಾನು ಕೆಲವು ಕ್ಷಣ ಮೌನಿಯಾದೆ. ಅವರಿಬ್ಬರ ಸರಸ ನೋಡಿ ಗಂಡ ಹೆಂಡಿರು ಅಂದರೆ ಹೀಗಿರಬೇಕು ಎಂದು ಭಾವಿಸಿಕೊಂಡೆ. ಒಂದು ವೇಳೆ ಶಾಂಭವಿಯನ್ನು ಮದುವೆಯಾಗಿದ್ದರೆ ಹೀಗೆ ತಮಾಷೆ ಮಾತಾಡುತ್ತಾ ಕೂತಿರುತ್ತಿದ್ದೆ, ಅವರಿಬ್ಬರು ಪರಸ್ಪರ ಮಾಡುತ್ತಿದ್ದ ಕುಶಾಲಿನ ಮಾತುಗಳನ್ನು ಕೇಳಿ ನನಗೆ ಖುಶಿಯಾಯಿತು. ಆದರೆ ಅವರಿಬ್ಬರಲ್ಲಿ ಪ್ರೀತಿಯಿತ್ತು. ಲಲಿತೆ ಮಾತು ಮಾತಿಗೆ ಗಂಡನ ಮುಖ ನೋಡುತ್ತಿದ್ದರು. ಅದರಲ್ಲಿ ಆದರವಿತ್ತು. ಒಂದು ವೇಳೆ ನಾನು ಶರಧಿಯನ್ನು ಮದುವೆಯಾದರೆ ನಾವಿಬ್ಬರು ಹೀಗಿರಬಲ್ಲೆವೇ? ಹಾಗಿದ್ದರೆ ದಾಂಪತ್ಯದ ಒಳಗುಟ್ಟೇನು? ಗಂಡ – ಹೆಂಡತಿಯರಾಗುವುದೆಂದರೆ ಏನದು? ಒಬ್ಬರಿಗೊಬ್ಬರು ಅಂಟಿಕೊಳ್ಳುವುದರ ಹಿಂದೆ ಏನಿದೆ? ಶಾಂಭವಿ ನನಗೆ ಪ್ರೇಮದ ಉದ್ದೀಪನ; ಅವಳು ನನಗೆ ರತಿಯ ಉದ್ದೀಪನ; ಶರಧಿ ನನಗೆ ಯಾವ ರೀತಿಯ ಉದ್ದೀಪನವಾಗಿದ್ದಾಳೆ? ಅವಳ ಒಂದು ಕ್ಷಣದ ಮುಟ್ಟುವಿಕೆ ಕೂಡಾ ನನ್ನನ್ನು ಯಾಕೆ ಇಷ್ಟೊಂದು ವಿವಶನನ್ನಾಗಿ ಮಾಡುತ್ತಿದೆ? "ಏನು ಇಬ್ಬರೂ ಮಾತಾಡದೆ ಕೂತಿದ್ದೀರಿ? ಏನು ಊಟ ಮಾಡುವ ಅಂದಾಜಿನಲ್ಲಿ ಇಲ್ವಾ?' ಎಂದು ಲಲಿತೆ ಕೇಳುವಾಗಲೇ ನನಗೆ ಈ ರೀತಿಯ ಯೋಚನೆಯಿಂದ ಹೊರಬರಲು ಸಾಧ್ಯವಾದುದು. ನಾನು ಭಾವುಕ, ಕನಸುಗಾರ. ಭಟ್ಟರು ಅವರ ಹೆಂಡತಿ

ಲಲಿತೆಯರನ್ನು ನೋಡಿ ನನ್ನಂಥ ಮನುಷ್ಯನೊಂದಿಗೆ ಇರಬಲ್ಲ ಹುಡುಗಿ ಎಲ್ಲಿದ್ದಾಳೋ? ಎಂದುಕೊಂಡೆ. ಮತ್ತೆ ಲಲಿತೆ, "ಹೋಗಿ; ಸ್ನಾನ ಮಾಡಿಕೊಂಡು ಬನ್ನಿ, ಬಿಸಿ ಬಿಸಿ ಅನ್ನವಿದೆ. ಊಟ ಮಾಡಿ. ಈ ಮಳೆಗೆ ತಣಿದ ಅನ್ನ ನಾಲಿಗೆಗೆ ಸೇರುವುದಿಲ್ಲ." ಎಂದ ಲಲಿತೆಗೆ 'ಆಯ್ತು ಆಯ್ತು ಯಜಮಾನ್ತಿಯ ಮಾತು ಮೀರುವ ಹಾಗಿಲ್ಲ. ಏನಿದ್ದರೂ ನಾನು ಹೆಂಡತಿ ಹೇಳಿದ ಹಾಗೆ.' ಎಂದು ಭಟ್ಟರು ಹೇಳಿದರೆ ಲಲಿತೆಯು' ಹೌದು ಹೌದು ನನ್ನ ಮಾತು ಮೀರುವುದಲ್ಲ – ಎಲ್ಲಿ ನನ್ನ ಮಾತು ನಡೆಸಿಕೊಟ್ಟಿದ್ದೀರಿ ಅಂತ ಬೇಕಲ್ಲ?" ಎಂದರು. ಅದೇನೋ ಸರಿಯಕ್ಕ ಎಂದ ನಾನು ಸ್ನಾನಕ್ಕೆ ಹೋದೆ. ಸ್ನಾನ ಮುಗಿಸಿ ಬರುವಷ್ಟರಲ್ಲಿ ಲಲಿತೆ ಊಟಕ್ಕೆ ಬಾಳೆಲೆ ಇಟ್ಟಾಗಿತ್ತು. ಬಿಸಿ ಅನ್ನ; ಸಾರು. ತೊಂಡೆಕಾಯಿಯ ಸಂಡಿಗೆ, ಬಾಳೆಕಾಯಿಯ ಪಲ್ಯ; ಮೊಸರು ನನ್ನ ಹೊಟ್ಟೆಯನ್ನು ಭರ್ತಿ ಮಾಡಿತು.

ಮನೆಯ ಹಿಂದೆ ಇದ್ದ ಬಸಳೆಯ ಚಪ್ಪರದಡಿಯಲ್ಲಿರಿಸಿದ ಬಾಲ್ದಿಯಿಂದ ನೀರು ತೆಗೆದುಕೊಂಡು ಕೈ ತೊಳೆಯುವಷ್ಟರಲ್ಲಿ ಮಳೆ ಹನಿಯ ತೊಡಗಿತು. 'ಓ ಮಳೆಯಾ?" ಎಂದಳು ಲಲಿತೆ. 'ಹುಂ ಇದಕ್ಕೆ ಇನ್ನೇನು ಕೆಲಸ? ನೆನಪಾಗುವಾಗ ಬಂದು ನಾನಿದ್ದೇನೆ ಎಂದು ಹೇಳುತ್ತದೆ. ಅಷ್ಟೇ.' ಎಂದ ಭಟ್ಟರು ಕೈ ಒರಸಲು ಬೈರಾಸು ಕೊಟ್ಟರು. 'ಅಡಿಗೆ ಹೇಗಾಯಿತೊ ಎನೊ? ಅವಸರ ಆಯಿತು; ಬೇರೇ ಏನೂ ಮಾಡಲಾಗಲಿಲ್ಲ.' ಎಂದ ಲಲಿತೆಗೆ, ತುಂಬಾ ಊಟ ಮಾಡಿದೆ'ಯೆಂದು ಚಾವಡಿಗೆ ಬಂದೆ. ಒಳಗಡೆಯಿಂದ 'ಲಲಿತಾ ಬೇಗ ಊಟ ಮಾಡು' ಊಟ ಮಾಡಲು ಒಂದು ಗಂಟೆ ಮಾಡಬೇಡ' ಎಂದು ಭಟ್ಟರು ಹೇಳುವುದು ಕೇಳಿಸಿತು. 'ನಿಮ್ಮ ಅವಸರ ನೀವು ಬಿಡುವುದಿಲ್ಲ.' ಲಲಿತೆಯ ಮಾತು ಬಂತು. ನಾನು ಮಳೆಹನಿಯನ್ನು ನೋಡಿದೆ. ತುಂತುರು ಮಳೆ! – ನೆನಪಿನಂತೆ.

ಮಳೆಯಲ್ಲಿ ಹೊರಡಲು ಉದಾಸೀನವಾಗಿ ಕುಳಿತವನಿಗೆ ಭಟ್ಟರು ಎಲೆಯಡಿಕೆ ತಟ್ಟೆ ತಂದಿಟ್ಟರು. 'ಇಲ್ಲ ಭಟ್ರೆ ನನ್ನದು ಇಬ್ರಾಹಿಂ ಬೀಡಿ ಕಂಪೆನಿ" ಎಂದು ಬೀಡಿ ಹಚ್ಚಿದೆ. ಭಟ್ಟರು ಎಲೆಯಡಿಕೆಯ ತಟ್ಟೆ ಹತ್ತಿರವಿಟ್ಟುಕೊಂಡರು. ಎಲೆಯ ಬೆನ್ನು ಸವರಿದರು.

ಸೋನೆ ಮಳೆ ನಿಲ್ಲಲಿ ಎಂದು ನಾನು ಕಾದು ಕುಳಿತೆ. ಭಟ್ಟರು ಲೋಕಾಭಿರಾಮ ಮಾತಾಡಲು ತೊಡಗಿದರು. ನಮ್ಮಿಬ್ಬರ ಮಾತುಕತೆಗೆ ಬಾಲವಿಲ್ಲ, ತಲೆಯಿಲ್ಲ. ಒಂದು ಸರ್ತಿ ಅವರು ಮತ್ತೊಂದು ಸರ್ತಿ ನಾನು.

"ನೋಡಿ, ಈಗಿನ ಕಾಲದಲ್ಲಿ ಈ ಹವ್ಯಕರಿಗೆ ಅಡಿಕೆ ತೋಟ ಕೈ ಹಿಡಿದ್ದಕ್ಕೆ ಆಯಿತು. ಇಲ್ಲದಿದ್ದರೆ ಈ ಬ್ರಾಹ್ಮಣರೆಲ್ಲಾ ಕೈಯಲ್ಲಿ ಬ್ರಹ್ಮ ಕಪಾಲ ಹಿಡಿದುಕೊಂಡು ಶಿವನಂತೆ ಊರೂರು ಅಲೆದು, ಅಲೆದು ಸಾಕಾಗಿ ಹೋಗುತ್ತಿತ್ತು. ನಮ್ಮ ಹವ್ಯಕರಿಗೆ

ನನಗನಿಸುವ ಮಟ್ಟಿಗೆ ನಿಜವಾದ ನೆಲೆಯಿಲ್ಲ. ಕೆಲವರಿಗೆ ನಾವೆಂದರೆ ಅಷ್ಟಕ್ಕಷ್ಟೆ."

ಅಷ್ಟು ಹೊತ್ತಿಗೆ ಲಲಿತೆ ಬಂದರು. ಊಟಮಾಡಿ ಬಂದವರು ಮಾತುಕತೆಗೆ ಶುರು ಮಾಡಿದರು. ನನ್ನ ಕುಲ ಗೋತ್ರ ವಿಚಾರಿಸಿದರು. ಲಲಿತೆ ಇದ್ದಕ್ಕಿದ್ದಂತೆ ನನ್ನ ಅಪ್ಪನ ಮನೆಯ ಗೋತ್ರ ಭಾರದ್ವಾಜ ಎಂದರು.

ಭಟ್ಟರು, "ನಮ್ಮದು ಕಾಶ್ಯಪ" ಎಂದರು. ಲಲಿತೆಯು, "ನಿಮ್ಮ ಗೋತ್ರ ಯಾರು ಕೇಳಿದರು?" ಎಂದರು.

ಅನಂತರವೇ ಲಲಿತೆಬಾಯಿ ಬಿಟ್ಟದ್ದು. "ನಿಮ್ಮ ಹತ್ತಿರ – ನಿಮಗೆ ಆಕ್ಷೇಪವಿಲ್ಲಾಂದರೆ  ಒಂದು ಮಾತು ಕೇಳಲಾ?"

ನಾನು: "ಕೇಳಿ"

ಭಟ್ಟರು: 'ಪ್ರಸಂಗಕ್ಕಿಂತ ಪೀಠಿಕೆ ಜೋರಾಯಿತಲ್ಲ?'

ಲಲಿತೆ: 'ನೀವು ಮಧ್ಯೆ ಬಾಯಿ ಹಾಕಬೇಡಿ'

ಭಟ್ಟರು: 'ಉದ್ದ ಬಾಯಿ ಹಾಕಬಹುದೋ'?

ಲಲಿತೆ: 'ನಿಮ್ಮದು ಉದ್ದ ಬಾಯಿ ಅಂತ ಗೊತ್ತುಂಟು'

ನಾನು: 'ಹೋಗ್ಲಿ ಬಿಡಿ ಅಕ್ಕ ...................'

ಭಟ್ಟರು: "ನೋಡು – ನೀನು ಎಲ್ಲರಿಗೆ ಅಕ್ಕ ಆಗಿ ಒಳ್ಳೆಯವಳಾಗುತ್ತಿ. ನಾನು ಮಾತ್ರ ಬೆಪ್ಪುತಕ್ಕಡಿ ಬೋಳೇಶಂಕರ  ಆಗುತ್ತೇನೆ."

ಲಲಿತೆ: "ನೀವು ಬೆಪ್ಪುತಕ್ಕಡಿ"

ಭಟ್ಟರು: "ಹಾಗೆ ಬಾ ದಾರಿಗೆ. ನಿನಗೆ ಏನೂ ಇಲ್ಲಾಂತಾದ್ರೂ ಶಂಕರನ ಹೆಸರಂತು ಹೇಳುವ ಹಾಗಿಲ್ಲ. ಇಲ್ಲಾಂದರೆ ನೀನು ಊರು ಇಡುತ್ತಿರಲಿಲ್ಲ."

ಲಲಿತೆ: "ನಿಮ್ಮ ಹೆಸರು ಹೇಳಬಾರದು ಅಂತ ಸುಮ್ಮನಿದ್ದೆನೆಯೇ ಹೊರತು ಮತ್ತೆಂತಕ್ಕೂ ಅಲ್ಲ.'

ಭಟ್ಟರು: "ಹೆಂಗಸರಿಗೆ ಸೋಲದೆ ಇನ್ಯಾರಿಗೆ ಸೋಲಬೇಕು ಹೇಳು?" 'ನೀನೀಗ ಮುಂದುವರಿಸು.'

ಲಲಿತೆ: "ನಮಗೆ ನಾನು ಹೇಳುವ ಮಾತು ಹಿಡಿಸುತ್ತದೊ ಇಲ್ಲವೋ?"
ನಾನು: 'ಹೇಳಿ'

ಲಲಿತೆ: 'ನನಗೊಬ್ಬಳು ತಂಗಿಯಿದ್ದಾಳೆ'

ಭಟ್ಟರು: "ಅದಕ್ಕೇನಾಯಿತು?"

ಲಲಿತೆ: "ಅವಳು ದೊಡ್ಡವಳಾಗಿ ನಾಲ್ಕನೆಯ ವರ್ಷ, (ಭಟ್ಟರನ್ನು ನೋಡಿ) ನೀವೂ ಮಾತಾಡಬಾರದಾ?"

ಭಟ್ಟರು: "ಲಕ್ಷ್ಮಣ ಹಾಕಿದ ಗೆರೆಯನ್ನು ಸೀತೆ ದಾಟಿರಬಹುದು, ನಾನು ಮಾತ್ರ ಹೆಂಡತಿ ಹಾಕಿದ ಗೆರೆ ದಾಟುವವನಲ್ಲ."

ಲಲಿತೆ: 'ಅದೆಲ್ಲಾ ಇರಲಿ'

ಭಟ್ಟರು: 'ಬಂದೆ, ಬಂದೆ, ಸ್ವಲ್ಪ ತಡೆ ಇವಳಿಗೆ ಒಬ್ಬಳು ತಂಗಿಯಿದ್ದಾಳೆ ಭವಾನಿ ಅಂತ ಹೆಸರು. ಒಳ್ಳೆಯ ಹುಡುಗಿ' ಮನೆ ಕೆಲಸವೆಲ್ಲಾ ಚೆನ್ನಾಗಿ ಗೊತ್ತು; ಹಿಂದೆ ಬಂದರೆ ಒದೆಯುವುದಿಲ್ಲ, ಮುಂದೆ ಬಂದರೆ ಹಾಯುವುದಿಲ್ಲ. ಚೆಂದದ ಹುಡುಗಿ. ಸತ್ಯ ಹೇಳಬೇಕಂದ್ರೆ – ಇವಳಿಗೆ ಸ್ವಲ್ಪ ಸಿಟ್ಟು ಕಡಿಮೆ, ಒಂದು ವೇಳೆ ಸಿಟ್ಟು ಬಂದರೂ ಸ್ವಲ್ಪ ಲೋಟ ಎತ್ತಿ ಅತ್ತಿತ್ತ ಇಡುತ್ತಾಳೆ. ನಮ್ಮ ಭವಾನಿ ಮಾತ್ರ ಹಾಗಲ್ಲ; ಸಿಟ್ಟೇ ಇಲ್ಲದ ಪೈಕಿ ಅವಳು. ಬೆಕ್ಕು ಕಾಲಿಟ್ಟರೆ ಕೇಳಬಹುದು, ಆದ್ರೆ ಭವಾನಿ ಕಾಲಿಟ್ಟರೆ ಒಂಚೂರು ಶಬ್ದ ಕೇಳಲಿಕ್ಕಿಲ್ಲ. ನಾನೇ ಜೋರಾಗಿ ಕಣ್ಣು ಅರಳಿಸಿದರೆ ಅತ್ತೇ ಬಿಡುತ್ತಾಳೆ.

ಲಲಿತೆ: 'ಹಾಗೆಂತ ಯಾವಾಗ ನೋಡಿದರೂ ಅವಳು ಅಳುತ್ತಾ ಕೂತಿರುತ್ತಾಳೆ ಅಂತ ಭಾವಿಸಬೇಡಿ'

ಭಟ್ಟರು: "ನೀನು ಹೀಗೆ ಏಕ್ ದಂ ಮಾತಾಡಿದರೆ ಅವರು ಯಾವ ಕಿವಿಯಿಂದ ಕೇಳುವುದು; ಯಾವ ಕಿವಿಯಿಂದ ಬಿಡುವುದು?"

ಲಲಿತೆ: 'ನಾನಿವರಿಗೆ ಯೋಚನೆ ಮಾಡಿ ಅಂತ ಹೇಳಿದ್ದೇ ಹೊರತು.......'

ನಾನು: "ಅದಕ್ಕೇನು?"

ಲಲಿತೆ: "ಆಯಿತಪ್ಪ ಯೋಚನೆ ಮಾಡಿ"

ನನಗೆ ಆ ದಂಪತಿಗಳು ಯೋಚಿಸಲು ಅವಕಾಶ ಕೊಟ್ಟರು ಎಂಬುದಂತೂ ನಿಜ. ಹಾಗೆಂದು ಅವರು ಹೇಳುವ ಭವಾನಿ ಯಾವ ತರಹದ ಹೆಣ್ಣು; ಹೇಗಿರಬಹುದು? ಏನೀ ಕತೆ ಅಂತ ಚಿಂತೆಗೆ ಒಳಗಾದೆ. ಲಲಿತೆಯನ್ನು ನೋಡಿದೆ. – ಲಲಿತೆಯಂತೆ ಆದರೆ ಭವಾನಿಯೂ ತುಂಬಾ ಮೆತ್ತಗಿರಬಹುದು. ಹಾಲು ಬೆಳ್ಳಗಿರಬಹುದು. ಚೆಂದವಿರಬಹುದು. ಲಲಿತೆ ನಾಲ್ಕೈದು ವರ್ಷಗಳ

ಹಿಂದೆ ಹೇಗಿದ್ದಿರಬಹುದು ಊಹಿಸಿ ನಗೆ ಬಂತು. ಮತ್ತೆ ಲಲಿತೆಯನ್ನು ನೋಡಿದೆ. ನನ್ನ ನೋಟದಲ್ಲಿ ಚಿಕಿತ್ಸಕ ನೋಟವಿತ್ತು. ಲಲಿತೆಯು; "ಅದೇನು ಮಾರಾಯ, ಹಾಗೆ ನೋಡುತ್ತೀಯಾ? ನನಗಿಂತ ಚೆನ್ನಾಗಿದ್ದಾಳೆ ಅವಳು. ನನಗಿಂತ ಸ್ವಲ್ಪ ಹೌದೋ ಅಲ್ಲವೋ ಎಂಬಷ್ಟು ಕುಳ್ಳಗಿದ್ದಾಳೆ ಅಷ್ಟೆ. ತೆಳ್ಳಗಿದ್ದಾಳೆ.' ಲಲಿತೆಬಾಯಿ ಮುಚ್ಚಿರಲಿಲ್ಲ; ಭಟ್ಟರು ಬಾಯಿ ಹಾಕಿದರು," ನೋಡು ಲಲಿತ, ಈಗಲೇ ನೀನು ಹೋಗು; ಬಾ; ಅಂತ ಕರೆಯಬಾರದು; ಅದೇನು ಈಗಲೇ ನಿನ್ನ ತಂಗಿಯನ್ನು ಧಾರೆಯೆರೆದು ಕೊಟ್ಟ ಹಾಗೆ ಮಾತಾಡುತ್ತೀಯಲ್ಲಾ' ಲಲಿತೆಯು ತುಟಿ ಕಚ್ಚಿಕೊಂಡಳು.' ನಾನು, "ಇಲ್ಲ ಹಾಗೇನು ಇಲ್ಲ ನೀವು ಎಂದರೆ ತಲೆಗೆ ಮುಂಡಾಸು ಬರುವುದಿಲ್ಲ, ನೀನು ಅಂದರೆ ಹೆಗಲ ವಸ್ತ್ರ ಸೊಂಟಕ್ಕೆ ಬರುವುದೂ ಇಲ್ಲ." ಎಂದೆ.

ಲಲಿತೆ, 'ಯಾಕೋ ಹಾಗೆಬಂತು,'

ಲಲಿತೆಯು ತಪ್ಪಾಯಿತು ಎಂಬಂತೆ ನನ್ನನ್ನು ನೋಡಿದಳು. ನಾನೇ ಹೇಳಿದೆ 'ಅದರಲ್ಲಿ ಏನು? ಸಣ್ಣವರಿಗೆ ಹಾಗೆ ಬಳಸಿದರೆ ತಪ್ಪಿಲ್ಲ'.

ಮತ್ತೆ ನಾನು ಹೊರಡಲು ತಯಾರಾದೆ. ಪುನಃ ಲಲಿತೆ ಹಲಸಿನ ಹಪ್ಪಳ, ಬೆಲ್ಲದ ತುಂಡು; ತೆಂಗಿನ ಕಾಯಿಯ ಚೂರು ತಂದಳು. ಅದನ್ನು ತಿನ್ನುತ್ತಾ ಮತ್ತೆ ಚಾ ಆಯಿತು.

ಲಲಿತೆಯೊಂದಿಗೆ ನನಗೆ ಆತ್ಮೀಯತೆ ಬೆಳೆಯಿತು. ಅದಕ್ಕೆ ಕಾರಣ ನಾನೀಗ ಹೇಳಲಾರೆ. ಅವಳು ನನ್ನೊಂದಿಗೆ ಸಲುಗೆಯಲ್ಲಿ ವರ್ತಿಸಿದ್ದೂ ಒಂದು ನೆವನ ಇದ್ದರೂ ಇರಬಹುದು. ಭಟ್ಟರೂ ಅಷ್ಟೆ – ಸಲುಗೆಯಲ್ಲಿ ಇದ್ದರು. ಅವರಿಗೆ ನಾನು ಜಾತಿಯ ಮಾಣಿ ಎಂದೆನ್ನಿಸಿರಬಹುದು. ಮಳೆಯ ಚಳಿಂಗಿರಿ ನನ್ನನ್ನು ಹೊರಡಂತೆ ಮಾಡಿರುವುದು ನಿಜ. ಮಳೆ ಹನಿ ಜೋರಾಯಿತು. ಲಲಿತೆ ಮತ್ತೆ ನನಗೆ ಯವುದೋ ರೀತಿಯ ವಿಶ್ವಾಸ ಮೂಡಿತು. ಲಲಿತೆಗೆ ಅಣ್ಣ ತಮ್ಮಂದಿರು ಇರಲಿಲ್ಲ. ನನ್ನನ್ನು ಅವಳ ತಮ್ಮನಂತೆ ನೋಡಿ ಉಪಚರಿಸಿದಳು. ಯಾವುದೋ ಕಾಲದಿಂದ ಪರಿಚಯವಾಗಿರುವಂತೆ ನಾನು ಅವಳು ಮಾತಾಡುತ್ತಾ ಕೂತೆವು. ಹೊರಗೆ ಮಳೆ ಬೀಳುತ್ತಿತ್ತು. ಭಟ್ಟರು ಕೂಡಾ ಅದೇ ರೀತಿಯಲ್ಲಿ ನನ್ನನ್ನು ನೋಡಿದರು. ನಾನಂತೂ ಎಲ್ಲವನ್ನು ಕಳೆದುಕೊಂಡವನಾಗಿದ್ದೆ. ನನಗೆ ಯಾರದ್ದಾದರೂ, ಭಾವನಾತ್ಮಕ ಆಸರೆ ಬೇಕಿತ್ತು. ಅದನ್ನು ಲಲಿತೆ ಕೊಟ್ಟಳು ಅಂತ ಈಗ ಅನಿಸುತ್ತದೆ. ಅದಕ್ಕಾಗಿಯೇ ನಾನು ಆ ದಿನ ಅವರ ಮನೆಯಲ್ಲಿ ಉಳಿದುಕೊಂಡೆ, ನನ್ನನ್ನು, 'ಅವಳು' 'ಶಾಂಭವಿ;' 'ಶರಧಿ'ಯರು ದೇಹದೊಳಗೆ

ಸುಡುತ್ತಿದ್ದರು. ಹೊರಗೆ ಮಳೆರಾಯನ ಚಳಿಯ ಬಹುಮಾನ ಬೇರೆ. ಇನ್ನೊಂದೂ ಆಸೆಯಿತ್ತು – ಶರಧಿ, ಮುಂದೆ ನಾನು ನೋಡಲಿರುವ ಭವಾನಿ; ಕೆಲವು ದಿನಗಳ ಹಿಂದೆ ಭೇಟಿಯಾದ: ಯಾವ ಮುನ್ಸೂಚನೆ ಕೊಡದೆ ನನಗೆ ಶರಧಿಯ ದೇಹ, ಇತ್ಯಾದಿಗಳಿಂದ ಕಂಗಾಲಾಗಿದ್ದೆ, ಅದಕ್ಕೆ ನನಗೆ ಲಲಿತೆ ವಾತ್ಸಲ್ಯ ನನಗೆ ಇಷ್ಟವಾಯಿತು. ಅವಳಿಗೆ ನಾನು ರಕ್ತ ಸಂಬಂಧದ ಸೋದರನಿಗಿರಲಿಲ್ಲ. ಆಟದವರನ್ನು ಯಾರೂ ಅಷ್ಟು ಪ್ರೀತಿಯಿಂದ ನೋಡುವುದಿಲ್ಲ. ನನ್ನ ಒಂದು ಹಂಬಲಿಕೆ ಲಲಿತೆಯಿಂದ ಪೂರ್ಣವಾಯಿತು.

ಮುಸ್ಸಂಜೆಯಾಗುತ್ತಿದ್ದಂತೆ ಮತ್ತೆ ದೇವಸ್ಥಾನಕ್ಕೆ ಹೋದರು. ಲಲಿತೆಯು, ನನಗಿಷ್ಟವಾದ ಎಂದು ತಿಳಿದುಕೊಂಡು ರಾತ್ರಿಯ ಅಡುಗೆಗೆಂದು ಅಡುಗೆ ಕಡೆಗೆ ಹೋದಳು. ನಾನು ಸುಮ್ಮನಿರಲಾಗದೆ, ಅವಳೊಂದಿಗೆ ಅಡುಗೆಯ ಮನೆಗೆ ಹೋಗಿ ಕುಳಿತೆ. ಅವಳು ತೆಂಗಿನಕಾಯಿ ತುರಿಯುವಾಗ ತುರಿಯನ್ನು ಬಾಯಿಗೆ ಹಾಕಿಕೊಂಡೆ. ಅವಳು ನಾವು ಹೇಗೆ ವೇಷ ಮಾಡುತ್ತೇವೆ. ನನಗೆ ಯಾವ ವೇಷ ಇಷ್ಟ ಇತ್ಯಾದಿ ಕೇಳುತ್ತಿದ್ದಳು. ನಾನು ವಿವರಿಸುತ್ತಿದ್ದೆ, ಕತ್ತಲಾಗುತ್ತಾ ಬಂದಂತೆ ಅವಳೂ ಲಾಟೀನು ಉರಿಸಿದಳು. ಇಬ್ಬರಿಗೂ ಮಾತಿನ ಭರದಲ್ಲಿ ಸಮಯ ಹೋದುದು ಗೊತ್ತಾಗಲಿಲ್ಲ. ಮಳೆಗಾಲದ ಆ ದಿನ ನನಗೆ ಸಿಕ್ಕ ಅಕ್ಕ ಅವಳು. ನಾನು ಅವಳ ತಮ್ಮ ಎಂಬ ಭಾವ ಮಾತ್ರ ಹಾಗೆಯೇ ಉಳಿಯಿತು. ಅನಾಥ ಪಕ್ಷಿಗೂ ಒಮ್ಮೊಮ್ಮೆ ಗೂಡು ಸಿಕ್ಕುತ್ತದೆ.

* * * * *

ನಾನೀಗ ಎಲ್ಲವನ್ನು ಬರೆಯಲಾರೆ. ಮಾತಿನಲ್ಲಿ ಯಾವುದನ್ನಾದರೂ ಹೇಳಬಹುದು. ಆಮೇಲೆ ನಾನು ಹೇಳಿಯೇ ಇಲ್ಲವೆಂದು ದಕ್ಕಿಸಿಕೊಳ್ಳಬಹುದು. ಬರೆದರೆ ಹಾಗಲ್ಲವೆಂದು ಗೊತ್ತು. ಒಮ್ಮೆ ಬರೆದರೆ ಮತ್ತೆ ಅದನ್ನು ಅಳಿಸಿ ಹಾಕುವುದು ಕಷ್ಟ. ನನ್ನ ಜೀವನದ ತಿರುವಿನಲ್ಲಿ ಅಪಘಾತ ಆಗಿತ್ತು ನಿಜ. ಅದನ್ನು ಹೇಗೆ ಹೇಳಬೇಕೆಂದು ತಿಳಿಯುತ್ತಿಲ್ಲ. ಆ ವಿಷಯವನ್ನು ಬರೆಯುವಾಗಲೇ ಮೈ ಜುಮ್ಮೆನ್ನುತ್ತದೆ. ಚೇತರಿಸಲಾಗದ ನನ್ನ ಪಾಲಿನ ದುರಂತ. ಲಲಿತೆಯು ನನ್ನನ್ನು ಸ್ವಂತ ತಮ್ಮನಂತೆ ನೋಡಿದಳು. ಅಕ್ಕನಿಗಿಂತ ಹೆಚ್ಚಿನ ಪ್ರೀತಿ ನೀಡಿದಳು, ಅದು ನಿಜ. ಲಲಿತೆಗೆ ತಿಳಿಯದ ಗುಟ್ಟು ನನ್ನತ್ರ ಹಾಗೆಯೇ ಉಳಿಯಿತು. ತಿಳಿದಿದ್ದರೆ ನನಗೆ ಸರಿಯಾದ ಮಂಗಳಾರತಿ ಎತ್ತುತ್ತಿದ್ದಳು. ಜೀವನದ ಮುಖವಾಡಗಳೂ ಸಹನೀಯ. ನಮ್ಮನ್ನು ಮರೆ ಮಾಡುವ ಮುಖವಾಡ ನನಗೆ ಆಮೇಲೆ ಪ್ರಿಯವಾಯಿತು. ಅದರಲ್ಲಿ ನನ್ನನ್ನು ಮರೆಮಾಚಿಕೊಳ್ಳುತ್ತಿದ್ದೆ. ನನಗೆ ಹಳವಂಡಗಳೆ ಪ್ರಿಯ. ಆದರೂ ಲಲಿತೆಯು ನನಗೆ ಭಾವನಾತ್ಮಕ ಆಸರೆ ಕೊಟ್ಟಳು. ಎಲ್ಲರಿಗಿಂತ

ಬೇಗ ನನಗೆ ಪ್ರೀತಿ ಕೊಟ್ಟಳು. ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾದರೆ ಸತ್ಯವನ್ನು ಹೇಳಲೇಬೇಕೇ?

ಲಲಿತೆಯ ಮನೆಯಿಂದ ಹೊರಟ ಮೇಲೆ ಶರಧಿಯನ್ನು ಕಾಣಬೇಕು ಅಂತ ಕೊರಳತನಕ ಆಸೆಯಿತ್ತು. ಅವಳ ಮನೆಗೆ ಯಾವ ಕಾರಣ ಹೊತ್ತು ಹೋಗಲಿ ಎಂದು ತಿಳಿಯದೆ ಸುಮ್ಮನಾದೆ. ಅಳುಕಿದೆ. 'ಯಾಕೆ ಬಂದಿರಿ' ಎಂದು ಅವಳ ಅಪ್ಪನೋ ಅಮ್ಮನೋ ಕೇಳಿದರೆ ಏನೂಂತ ಉತ್ತರ ಕೊಡಲಿ? ಹಿಂದಿನ ನನ್ನ ವರ್ತನೆಯ ಬಗ್ಗೆ ಶರಧಿಗೆ ಅಸಹ್ಯವಿರಬಹುದು. ತಲೆಯ ತುಂಬಾ ಹುಳು ಬಿಟ್ಟುಕೊಂಡು ಅವಳ ಮನೆಗೆ ಹೋಗಲು ಹಿಂಜರಿದೆ. ಹಿಂಜರಿಯಬಾರದಿತ್ತು ಅಂತ ಈಗನ್ನಿಸುತ್ತದೆ. ಒಂದು ಮಹಾನ್ ತಪ್ಪು ಆಗದಂತೆ ಎಚ್ಚರ ವಹಿಸಬಹುದಿತ್ತು. ಕ್ಷಣಗಳೆ ನಮ್ಮ ದಿಕ್ಕು ತಪ್ಪಿಸುತ್ತವೆ. ಹಿಂದೆ ಆಗಿ ಹೋದ ಕಾಲವು ಮತ್ತೆ ಬರುವುದಿಲ್ಲ. ಈಗ ಹೇಳಿ ಏನು ಪ್ರಯೋಜನ? ನಾನು ಅವಳ ಮನೆಗೆ ಹೋಗಿಲ್ಲನ್ನುವುದು ನಿಜ. ಒಂದೆರಡು ಸಾರಿ ಅವಳ ಮನೆಯತ್ತ ಹೆಜ್ಜೆ ಹಾಕಿದರೂ ಮತ್ತೆ ಹಿಂಜರಿದು ವಾಪಾಸು ಆದದ್ದೂ ಇದೆ. ಮತ್ತೆ ಕೆಲವು ಸಮಯ ನಂತರ ಸಿಕ್ಕಿದ ಶರಧಿಗೆ ಹೇಳಿದಾಗ ಅವಳು ಜೋರಾಗಿ ಪಕ್ಕೆ ಹಿಡಿದುಕೊಂಡು ನಗಾಡಿದ್ದಳು. ಮತ್ತೆ 'ಅದೇನು ಹೆದರುತ್ತೀರಿ?' ಎಂದು ಹೇಳಿದ್ದಳು. ಪ್ರತಿಯೊಂದಕ್ಕೂ ಕಾರಣವನ್ನು ನಾನೇ ಹುಡುಕಿರುತ್ತೇನೆ. ಶರಧಿಗೂ ಅದನ್ನೇ ಹೇಳಿ ತಪ್ಪಿಸಿಕೊಂಡೆ. ಲಲಿತೆಯ ಮನೆಗೆ ಆಗಾಗ ಹೋಗುತ್ತಿದ್ದೆ. ಲಲಿತೆಗೂ ಅವಳ ತಂಗಿಯನ್ನು ಮದುವೆಯಾಗುವ ಹುಡುಗನೆಂದು ಅನಿಸಿತ್ತೋ, ಅಥವಾ ಅವಳಿಗೆ ನನ್ನಲ್ಲಿ ಬರಿಯ ವಾತ್ಸಲ್ಯ ಮಾತ್ರ ಇತ್ತೋ ಎಂದು ತಿಳಿಯಲು ನನಗೆ ಬಹಳ ವರುಷ ಬೇಕಾಯಿತು. ಹೀಗೆ ಒಂದೆರಡು ತಿಂಗಳು ನಾನು ಲಲಿತೆಯ ಮನೆಗೆ ಹೋಗುತ್ತಿದ್ದೆ. ಒಂದು ದಿನ ನಾನು ಹೋದುದು ರಾತ್ರಿಯ ವೇಳೆಗೆ. ನಾನು ಹೋದಾಗ ಅಲ್ಲಿ ಭಟ್ಟರು ಇರಲಿಲ್ಲ. ಅವರು ಪಂಚಲಿಂಗೇಶ್ವರನ ಪೂಜೆಗೆ ಹೋಗಿದ್ದರು. ಜೆಸಿಂತಾ ಬಾಯಿಯ ಒಂಟಿ ರೂಮಿನಲ್ಲಿ ಕುಳಿತುಕೊಂಡು ಸಾಕಾಗಿ ಹೋಗಿತ್ತು. 'ಏಳು ಕುಂಡೆ ನಡೆ ಕಾಲು' ಎನ್ನುವ ಥರ ಒಂದು ದಿನ ಲಲಿತೆಯ ಮನೆಗೆ ಹೋಗಿದ್ದೆ. ಲಲಿತೆಯು ಚಾವಡಿಯಲ್ಲಿ ಕುಳಿತು, ಯಾರೆ ರಂಗನ ಯಾರೆ ಕೃಷ್ಣನ ಕರೆಯ ಬಂದವರು ಎಂದು ಹೇಳುತ್ತಿದ್ದಳು. ಕೇಳಿಸಿಕೊಂಡ ನಾನು, ತಮಾಷೆಗಾಗಿ – 'ನಾನೇ ಕರೆಯಬಂದವನು' ಎಂದೆ.

"ಬಾರೋ ಮಾರಾಯ ನಿನಗೆ ನೂರು ವರ್ಷ ಆಯಸ್ಸು" ಎಂದಳು.

"ಅಲ್ಲಾ ಮಾರಾಯಿತಿ ನಾನು ನೂರು ವರ್ಷ ಬದುಕಿ ಮಾಡಬೇಕಾದ್ದೇನು?"

'ಮೊದ್ಲು ಕೂತುಕೊ ಮಾರಾಯ, ಕುಡಿಯಲು ನೀರು ಬೇಕಾ?'

"ಅವಳ ಎದುರು ಕುಳಿತುಕೊಂಡು ಈಗ ಹೇಳು ಮಾರಾಯಿತಿ" ಅಂದೆ

"ಅಯ್ಯೋ ಮಾರಾಯ, ಈಗ ಒಂದು ಕತೆಯಾಯಿತಲ್ಲ' – ನೀರು ಬೇಕಾ?" ಅಂತ ಅವಳು ಕೇಳಿದಳು:

"ಏನು ಊಟ ಹಾಕುವುದಿಲ್ಲವಾ?"

ನಿನಗೇ ಬಡಿಸುತ್ತೇನೆ ಆದರೆ ನಾನು ಹೇಳುವುದನ್ನು ಕೇಳಿ ಬೇಜಾರು ಮಾಡಿಕೊಳ್ಳಬಾರದು,

"ಆಯಿತು"

"ನೋಡು ಇದನ್ನು ನಿನಗೆ ಹೇಗೆ ಹೇಳುವುದು ಅಂತ ತಿಳಿಯುವುದಿಲ್ಲ," "ಅಲ್ಲ ಅದಕ್ಕೆ ಯಾಕೇಂತ......."

'ಅದು ನಿನಗೂ ಭವಾನಿಗೂ ಸಂಬಂಧ...........'

ಆಗ ನನಗೆ ತಲೆಬುಡ ಅರ್ಥ ಆಗಲಿಲ್ಲ. ಲಲಿತೆಯು ವಿವರಿಸಿದಳು. "ಭವಾನಿ ಹೇಳಿದಳು ನೋಡು, – ಭವಾನಿಗೆ ನಾನೇನೋ ಮದುವೆ ಮಾಡಿಕೊ ಅಂತ ಹೇಳಿದೆ ಆದರೆ ನಿನ್ನ ಅವಳ ಜಾತಕ ಅಷ್ಟು ಹೊಂದಾಣಿಕೆ ಆಗಲಿಲ್ಲ."

ಲಲಿತೆಯು ಹೇಳುತ್ತಿರುವ ಮಾತು ಕೇಳಿ ನಾನು 'ಹೋಗಲಿ ಬಿಡು ಲಲಿತ' ಎಂದವನು ಸುಮ್ಮನಾದೆ. ನನಗೆಯೇನೂ ಅನಿಸಲಿಲ್ಲ. ಜಾತಕವೆಂಬ ವಿಚಿತ್ರ ವಿದ್ಯೆ ಹೇಗೆ ನಮ್ಮನ್ನು ಸುತ್ತುವರಿಯುತ್ತಿದೆ ಎಂದು ಅನ್ನಿಸಿ ಖೇದವಾಯಿತು. ಮೌನವಾದೆ, ನಾನು ಹಾಗಾದುದನ್ನು ನೋಡಿ ಲಲಿತೆಯೇ 'ಯಾಕೆ ಬೇಜಾರಾಯಿತಾ?' ಎಂದು ಕೇಳಿದಳು. ನಾನು ಏನೂ ಹೇಳಲಿಲ್ಲ. ಲಲಿತೆ ಒಳಗೆ ಹೋದಳು; ಮತ್ತೆ ಬಂದಳು ಹೀಗೆ ಅವಳು ಹೋಗುವುದು ಬರುವುದು ಮಾಡುತ್ತಿರುವಾಗ ನನಗನ್ನಿಸಿ ಹೇಳಿದೆ" ಲಲಿತಾ ಅದನ್ನು ಬಿಟ್ಟು ಹಾಕು" ಮತ್ತೆ ನನ್ನೆದುರು ಕೂತಳು. ನನ್ನೆದುರು ಕೂತವಳು ಮತ್ತೆ ಹೇಳಿದಳು "ನಿಶಿತ ಅದಕ್ಕೆ ಯಾಕೆ ಚಿಂತೆ ಮಾಡುತ್ತೀಯಾ?" ನಾನು 'ಲಲಿತ ನಾನಿದಕ್ಕೆ ಯಾಕೆ ಚಿಂತೆ ಮಾಡಲಿ?' ಲಲಿತೆಯು 'ಭವಾನಿಯಲ್ಲವಾದರೆ ಬೇರೇ ಯಾರಾದರೂ ನಿನಗೆ ಸಿಗುತ್ತಾರೆ' ಎಂದಳು. 'ಸರಿ ಮಾರಾಯಿತಿ' ಆಗಲ್ಲ ಮತ್ತೆ ಕೆಲವು ದಿನಗಳಲ್ಲಿ ನನಗೆ ಗೊತ್ತಾಯಿತು ಭವಾನಿಯು ನನ್ನನ್ನು ನೋಡದೆಯೇ ತಿರಸ್ಕರಿಸಿ ಬಿಟ್ಟಿದ್ದಳು. ವೇಷ ಮಾಡುವವನ ಜೊತೆಗೆ ಸಂಸಾರ ಮಾಡುವುದು ಹೇಗೆ ಎನ್ನುವುದು

ಅವಳ ಪ್ರಶ್ನೆಯಾಗಿತ್ತು. ಆಟದವರು ಎಲ್ಲೆಲ್ಲಿ ಏನೇನು ಮಾಡಿರುತ್ತಾರೋ ಏನು ಕತೆಯೋ ಎಂದವಳಿಗೆ ನಾನು ಸಾಚಾ ಎಂದು ವಿವರಿಸುವುದಾದರೂ ಹೇಗೆ? ಅಷ್ಟಕ್ಕೂ ನಾನು ಭವಾನಿಯನ್ನು ನೋಡಿರುವುದಾದರೂ ಎಲ್ಲಿ? ಒಂದು ದಿವಸ ಲಲಿತೆ ನನಗೆ ಹಳೆಯ ಸಣ್ಣದೊಂದು ಫೋಟೊ ತೋರಿಸಿ ಯಾವುದೋ ಒಂದು ಚಿತ್ರದ ಮೇಲೆ ಬೆರಳಿಟ್ಟು 'ಇವಳು ನಮ್ಮ ಭವಾನಿ' ಎಂದು ಹೇಳಿದ್ಳು. ಅದನ್ನು ನೋಡಿ ಈ ಪಿಣುಕುಟ್ಟಿ ನನಗೆ ತಲೆದಿಂಬಿಗೆ ಸರಿ ಎಂದು ಹೇಳಿದ್ದೆ. ನನಗೆ ಗೊತ್ತಿಲ್ಲದ ಭವಾನಿಯ ಬಗ್ಗೆ ಅನಗತ್ಯ ಕುತೂಹಲವಿದ್ದುದು ನಿಜ. ಮುಂದೆ ನಾನು ಮದುವೆಯಾಗಲಿರುವ ಹುಡುಗಿ. ಪರಿಚಿತೆ. ನನ್ನ ದೇಹ ಅವಳಿಗೆ ಅವಳ ದೇಹ ನನಗೆ ಎಂದು ಒಪ್ಪಿಕೊಂಡು – ಗೊತ್ತಿಲ್ಲದ ದೇಹಗಳ ನಡುವೆ, ಸ್ಪರ್ಶ ಮಾತು ಆಟ. ತಮಾಷೆ, ನಡೆಯುವುದೇ ವಿಚಿತ್ರ. ನಾನು ಭವಾನಿ ಜೀವನದಲ್ಲಿ ಒಟ್ಟಿಗೆ ಹೋಗಲಿರುವೆವು ಎಂದು ಕಲ್ಪಿಸಿ ಏನೋ ಬಾವಿಸಿಕೊಂಡಿದ್ದೆ. ಈಗ ನಾನು ಆಟದವನು ಎಂಬುದೇ ಭವಾನಿಯು ತಿರಸ್ಕರಿಸಲು ಕಾರಣವಾಯಿತು. ನಾನು ಪಡೆಯದ ಸರ್ಕಾರಿ ಹುದ್ದೆಯನ್ನು ಗೊತ್ತಿಲ್ಲದ ಭವಾನಿಗಾಗಿ ಯೋಚಿಸುತ್ತಿರುವುದೇ ಅನಗತ್ಯವೆಂದು ಅನಿಸಿತು.

ನಡುವೆ ಸಿಕ್ಕಿದ್ದ ಶರಧಿಗೆ ಒಂದು ಮಾತು ಹೇಳಿದೆ "ನೋಡು ಶರಧಿ, ಹಿಂದೆ ನಾನು ನಿನ್ನೊಡನೆ ವರ್ತಿಸಿದ್ದನ್ನು ಮರೆತು ಬಿಡು." ನಾವಿಬ್ಬರೂ ಮರೆಯಬೇಕಿತ್ತು. ಮದುವೆ; ಪಾವಿತ್ರ್ಯ; ಗಂಡು ಹೆಣ್ಣಿನ ಸಂಬಂಧ ಇವುಗಳು ಜೀವನದಲ್ಲಿ ವಿಚಿತ್ರವಾದ ತಿರುವು ಕೊಡುತ್ತದೆ. ಇನ್ನು ಮುಂದೆ ನನ್ನ ಹೆಂಡತಿಯಾಗುವ ಭವಾನಿಯೇ ನನಗೆ ಗೊತ್ತಿಲ್ಲದ ಹಾಗೆ ನಿಯಂತ್ರಿಸತೊಡಗಿದ್ದಳು. ಅದು ಅಲ್ಲದೆ ದೇಹವನ್ನು ಭವಾನಿಗಾಗಿ ಮೀಸಲಿಡುವ ಕಲ್ಪನೆಯೇ ನನ್ನಲ್ಲೂ ಪುಳಕ ತಂದಿತ್ತು. ಆಗ ನನ್ನ ಮನಸ್ಸಿನಲ್ಲಿ ಶರಧಿ ಮತ್ತು ಭವಾನಿಯರು ಆಟವಾಡಲು ತೊಡಗಿದ್ದರು. ಲಲಿತೆ ಹೇಳಿದ ಮೇಲೆ ನಾನು ಪಡೆದುಕೊಂಡದ್ದು ಇಷ್ಟೇ ಎಂದು ಅನಿಸತೊಡಗಿತು. ಅದರ ಅನಂತರ ಬಹಳ ಬದಲಾವಣೆಯೂ ಆಯಿತು. ಬಯಕೆಯನ್ನು ಶಕ್ತಿಯಾಗಿ ಪರಿವರ್ತಿಸಲು ತೊಡಗಿದೆ. ಮನುಷ್ಯನ ಆಸೆಗಳನ್ನು ನಿಗ್ರಹಿಸಲೆಂದೇ ನಾನು ಬೇರೆ ಬೇರೆ ಹುಡುಕಾಟದಲ್ಲಿ ಇದ್ದೆ.

ಮೇಳದ ಕ್ಯಾಂಪು ಇರುವಲ್ಲಿ ಹಗಲು ಎಲ್ಲರೂ ಒಂದು ಕಡೆ ನಿದ್ದೆ ಮಾಡಿದರೆ ನಾನು ಯಾವುದೋ ಮರದ ಕೆಳಗೆ ಕ್ವಾರ್ಟರ್ ಇಳಿಸಿ ನಿದ್ದೆ ಮಾಡುತ್ತಿದ್ದೆ. ನಾನು ಯಾರ ತಂಟೆಗೆ ಹೋಗುತ್ತಿರಲಿಲ್ಲ. ಬೇಕೂಂತಲೆ ಯಾರೂ ನನ್ನ ಅಂತರಂಗದ ಗುಹೆಗೆ ಬಾರದ ಹಾಗೆ ಎಚ್ಚರವಹಿಸಿದೆ.

ಭವಾನಿ ನನ್ನನ್ನು ತಿರಸ್ಕರಿದ ಮಾಸವದು. ಪದವಿನ ಶಾಲೆಯಲ್ಲಿ 'ಅತಿಕಾಯ – ಇಂದ್ರಜಿತು – ಮೈರಾವಣ ಕಾಳಗ". ನನ್ನದು ಅತಿಕಾಯ. ನನ್ನ ವೇಷ ಹನ್ನೆರಡು ಗಂಟೆಗೆ ಮುಗಿಯಿತು. ವೇಷ ಬಿಚ್ಚಿ ಚೌಕಿಯಿಂದ ಹೊರಗೆ ಹೋಗಿ ಚಾ ಕುಡಿದು ಬರುತಿದ್ದೆ. ಆಗ ಸಿಕ್ಕಿದಳು ಶರಧಿ. ಅವಳು ಮತ್ತೆ ಬೇರಿಬ್ಬರು ಚಾ ಕುಡಿಯಲು ಹೊರಟಿದ್ದರು ಎಂದು ಕಾಣುತ್ತದೆ. ನನ್ನನ್ನು ನೋಡಿ ಗಕ್ಕನೇ ನಿಂತವಳು ನಗಾಡಿದಳು. 'ಓ ಶರಧಿ ಆಟಕ್ಕೆ ಬಂದೆಯಾ?" ಎಂದವನು" ಚಾ ಕುಡಿಯಲು ಹೋಗುತ್ತಿದ್ದಿಯಾ?' ಎಂದು ಹೇಳಿದೆ. ಶರಧಿ ಉಳಿದವರಿಗೆ, ನನ್ನನ್ನು ತೋರಿಸ್ಸಿ ಇವರೇ ಅತಿಕಾಯ ಮಾಡಿದವರು' ಎಂದು ಪರಿಚಯಿಸಿದ್ದಳು. ಶರಧಿ ಮತ್ತೆ ನನ್ನತ್ರ "ನೀವು ಇಂದ್ರಜಿತು ಮಾಡ ಬೇಕಿತ್ತು." ಎಂದಳು.

ಇಂದ್ರಜಿತು ತುಂಬಾ ಜಲ್ಸಿನ ವೇಷ. ಅದರೆದುರು "ಅತಿಕಾಯ ಸಪ್ಪೆ ವೇಷ." ಅಲ್ಲಾ – ನಾನು ಹೇಳಿದ ಹಾಗೆ, ನನಗೆ ಪಾರ್ಟು ಕೊಡುತ್ತಾರಾ? ಭಾಗವತರು ಯಾವುದನ್ನು ಹೇಳುತ್ತಾರೋ ಅದನ್ನು ನಾವು ಮಾಡತ್ತೇವೆ. ನಾನು ಕೇಳಿದ ಕೂಡಲೆ ನನಗೆ ಬೇಕಾದ್ದು ನಾನು ಮಾಡುತ್ತಿದ್ದರೆ ನಾನು ಹೀಗಿರುತ್ತಿದ್ದೆನಾ" ಧ್ವನಿಪೂರ್ಣವಾಗಿ ಹೇಳಿದೆ.

ಅವಳ ಗೆಳತಿಯರು ನೋಡುತ್ತಲೇ ಹೇಳಿದರು "ಅಯ್ಯೋ ನೀವು ವೇಷ ಹಾಕಿದ್ರೆ ಎಷ್ಟು ದಪ್ಪ ಕಾಣುತ್ತೀರಿ? ಈಗ ನೋಡಿದರೆ ನೀವು............" ಮತ್ತೊಬ್ಬಳು "ಅದೆಲ್ಲಿಂದ ನಿಮಗೆ ಕುಣಿಯಲು ಶಕ್ತಿ ಬರುತ್ತದೆ?" ಎಂದಳು. ಶರಧಿ "ಇವರು ಚಲ್ಪಟ್ ರಾಜ" ಎಂದು ಹೇಳುತ್ತಾ ಕಣ್ಣು ಮಿಟುಕಿಸಿದಳು. 'ನಾನು ತುಂಬಾ ಕ್ಲೀಷೆಯಾದ ಮಾತು ಹೇಳಿದೆ "ರಂಗಸ್ಥಳದ ರಾಜರು ನಾವು. ಹೆಸರು ಕ್ಷೀರ ಸಾಗರ ಭಟ್ಟ; ಹಾಲು ಮಜ್ಜಿಗೆ ತತ್ವಾರ."

ಶರಧಿಯು ಮೆಲ್ಲನೆ ನನ್ನತ್ರ ಬಂದು ಅವಳ ಗೆಳತಿಯರಿಗೆ ಗೊತ್ತಾಗದಂತೆ ಇಲ್ಲಿಯೇ ಇರಿ 'ಈಗ ಬರುತ್ತೇನೆ' ಎಂದಳು. ಅವರೆಲ್ಲಾ ಹೋದರು. ನಾನು ನಿಂತಿದ್ದೆ. ಆಟಕ್ಕೆ ಬರುವ ಹೆಂಗಸರಿಗೆ ಇದೊಂದು ಗೋಳು. ರಾತ್ರಿ ಒಂದಕ್ಕೆ ಹೋಗಬೇಕಾದರೆ ಕತ್ತಲನ್ನು ಹುಡುಕಬೇಕು. ರಂಗಸ್ಥಳಕ್ಕೆ ಇಂದ್ರಜಿತು ಪ್ರವೇಶವಾಗಿರಬೇಕು. ಚೆಂಡೆಯ ಶಬ್ದ ಜೋರಾಗಿ ಕೇಳುತ್ತಿತ್ತು. ಮತ್ತೆ ಶರಧಿ ಹುಡುಗಿಯರ ಜೊತೆಗೆ ಬಂದಳು. ಉಳಿದವರು ಅವಳನ್ನು ಅವಸರಿಸುವುದು ಕಾಣಿಸಿತು. "ನಾನೇ ಹೇಳಿದೆ ಶರಧಿ ಆಟ ನೋಡುವುದಿದ್ದರೆ ಇವರನ್ನು ನೋಡು ಬಿಟ್ಟು ಬರುತ್ತೇನೆ" ಎಂದ ಶರಧಿಯು ಮತ್ತೆ ಅವರನ್ನು ಬಿಟ್ಟು ನನ್ನ ಹತ್ತಿರ ಬಂದು 'ಬನ್ನಿ ಹೋಗೋಣ'ವೆಂದಳು.

'ಎಲ್ಲಿಗೆ' ಎಂದೆ.

"ನನ್ನ ಜೊತೆಗೆ ಬರಲು ಹೆದರಿಕೆಯಾ?" ಎಂದ ಶರಧಿ ನಡೆದಳು. ಅವಳನ್ನು ಹಿಂಬಾಲಿಸಿದೆ. ನಾನೂ ಅವಳು ಶಾಲೆಯ ಕಂಪೌಂಡು ದಾಟಿ ಅರೆ ಬೆಳಕಿನ ಕಡೆಗೆ ಹೋಗಿ ನಿಂತೆವು. "ನೀವು ಕೈ ತಟ್ಟಿ ಭಾಷೆ ಕೊಡುವುದಿದ್ದರೆ ಒಂದು ಮಾತು ಹೇಳುತ್ತೇನೆ" ಎನ್ನುತ್ತಾ ಕೈ ಚಾಚಿದಳು. ಬೆಳಕಿಗೆ ಅಡ್ಡವಾಗಿ ನಿಂತುದರಿಂದ ನನಗೆ ಅವಳ ಮುಖ ಚಹರೆಯು ತಿಳಿಯಲಿಲ್ಲ. "ನೀನು ಏನೂಂತ ಹೇಳದೆ ನಾನು ನಿನಗೆ ಭಾಷೆ ಕೊಡುವುದು ಹೇಗೆ?" ಎಂದು ಕೇಳಿದೆನಾದರೂ ನನ್ನ ಕೈ ಚಾಚಿದೆ.

"ನಿಮ್ಮ ಪ್ರಾಣ ಕೇಳುವುದಿಲ್ಲ; ಹೆದರಬೇಡಿ"

"ಆಯಿತು"

'ಕೈಯ್ಯ ಮೇಲೆ ಕೈಯಿಡಿ'

ನಾನು ಅವಳ ಕೈ ಮೇಲೆ ಕೈಯಿಟ್ಟೆ. ತಟ್ಟನೆ ಬೆಳಕಿಗೆ ಮುಖಮಾಡಿ,' ಇನ್ನು ಕುಡಿಯುವುದಿಲ್ಲವೆಂದು ಹೇಳಿ"

'ನೀನು ಏಕಾಏಕಿ ಹೀಗೆ ಹೇಳಿದರೆ ಹೇಗೆ'

'ಅದೇನು – ದೊಡ್ಡ ಸಂಗತಿಯಾ?'

"ಅಲ್ಲಾ ನಾನು ಕುಡಿಯವುದಕ್ಕು ನಿನಗೂ ಏನು ಸಂಬಂಧ?"

ಶರಧಿ ತಟ್ಟನೆ ಬೆಳಕಿಗೆ ಮುಖಮಾಡಿ, "ನನ್ನ ಕಣ್ಣಿನ ಮೇಲೆ ಕಣ್ಣಿಟ್ಟು ಹೇಳಿ ಈ ಶರಧಿ ನಿಮಗೆ ಏನೂ ಅಲ್ಲವಾ?" ನನ್ನೆದುರು ಒಂದು ನಾಟಕೀಯ ಸನ್ನಿವೇಶವು ಎದುರಾಯಿತು, ನನ್ನ ಸುತ್ತ ಒಂದು ಭಾವನಾತ್ಮಕ ಬಲೆ. ಆ ಸಂದರ್ಭದಲ್ಲಿ ನಾನು ಹೇಳಬೇಕಾದ ಮಾತುಗಳು ಯಾವುದು ಎಂದು ತಿಳಿಯಲಿಲ್ಲ. ಯಾವುದನ್ನು ಹೇಳಿದರೆ ಸರಿಯಾದೀತು ಎಂದು ಗೊತ್ತಾಗಲಿಲ್ಲ. ನಾನೀಗ ಕರಗಬಾರದು. "ನೋಡು ಶರಧಿ; ನಿನಗೆ ನಾನು; ನನಗೆ ನೀನು – ಯಾರೂ ಅಲ್ಲ. ಮುಂದೊಂದು ದಿನ ನೀನು ಮದುವೆಯಾಗುವವಳು. ಆಗ ನೀನು ನಿನ್ನ ಸಕಲವನ್ನು ಮುಂದೆ ನಿನ್ನನ್ನು ಮದುವೆಯಾಗಲಿರುವವನಿಗೆ ಅರ್ಪಿಸಲಿದ್ದಿ. ನಿಮ್ಮ ನಡುವೆ ನನ್ನ ನೆರಳು ಬೀಳಬಾರದು. ಮುಂದೆ ನಿನ್ಗೆ ಹುಟ್ಟಲಿರುವ ಕಂದನ ಮೈಗೆ ಎಣ್ಣೆ ಹಚ್ಚಿ; ಬಚ್ಚಲು ಮನೆಯ ಕಲ್ಲಿನಲ್ಲಿ ಕಾಲು ನೀಡಿಕೊಂಡು ಆ ಮಗುವಿನ ಮೈಗೆ ಬಿಸಿನೀರು ಹಾಕುತ್ತಾ; ನಿನ್ನ ಬಾಯಿಯಿಂದ ಹೊರಡುವ ಹಾಡುಗಳಲ್ಲಿ ನಿಶಿತನೆಂಬ ಅಕ್ಷರ ಬರಬಾರದು. ನನ್ನ ಪಾಡು ನನಗೆ; ನಿನ್ನ ಪಾಡು ನಿನಗೆ ಆಯಿತಾ?"

ಶರಧಿ ಇದಕ್ಕೆ ಸಂಬಂಧ ಪಡದ ವಿಷಯ ಪ್ರಸ್ತಾಪಿಸಿದಳು.

"ನೀವು ನನ್ನ ಮನೆಗೆ ಬರಬಾರದಿತ್ತು"

"ಆದದ್ದು – ಹೋದದ್ದು ನೆನಪಿಸಿಕೊಂಡು ಪ್ರಯೋಜನವೇನಿದೆ?"

'ನಿಮಗೆ ಹೇಳುವುದು ಸುಲಭ ಎಲ್ಲವನ್ನು ತಟ್ಟಿ ಹಾರಿಸಬಹುದು.' ಅವಳ ಮಾತಿನ ಒಳಗುಟ್ಟು ತಿಳಿಯಿತು. ಕತ್ತಲಿನ ಇಕ್ಕಟ್ಟಿನಲ್ಲಿ ಸಿಲುಕಿದೆ. ಇಬ್ಬಂದಿತನ. "ನೀವು ದೊಡ್ಡವರು ಹತ್ತಾರು ಕಡೆ ತಿರುಗಿದವರು. ನಿಮಗೆ ಹೇಳಲು ನಾನು ಯಾರು? ಲಲಿತಕ್ಕನ ತಂಗಿ ಭವಾನಿಯಂತವರೇ ನಿಮಗೆ ಬೇಕು, ನನಗೆ ನಿಮ್ಮ ಹಾಗೆ ಏನೇನೋ ಹೇಳಲು ಬರುವುದಿಲ್ಲ. ನಾನೇನು ನಿಮ್ಮ ಹಾಗೆ ದೊಡ್ಡ ಜಾತಿಯಲ್ಲಿ ಹುಟ್ಟಿದವಳಲ್ಲ. ನಿಮಗೆ ಆ ಭವಾನಿ ಏನೂ ಹೇಳಬಹುದು." ಶರಧಿ ಅಳಲು ತೊಡಗಿದಳು.

ಮಾತಾಡಲು ನನಗೆ ಬಾಯಿ ಬರಲಿಲ್ಲ. ಶರಧಿ ಕಣ್ಣುಜ್ಜಿಕೊಂಡಳು. 'ನಾನು ಅವಳ ತಲೆ ಮುಟ್ಟಿದೆ. ಮತ್ತೆ ಕತ್ತಲೆಗೆ ಮೆಲ್ಲನೆ ಎಳೆದು ಅವಳನ್ನು ತಬ್ಬಿದೆ.' 'ನನಗೆ ನೀವು ಬೇಕು' ಎಂದು ನನ್ನ ಬೆನ್ನು ಸವರಿದಳು. ಅದಕ್ಕಿಂತ ಆಚೆಗೆ ನಾನಾಗಲೀ ಅವಳಾಗಲಿ ಹೋಗಲಿಲ್ಲ.

* * * * *

ಲಲಿತೆ ಹೇಳಿದಳು 'ಶರಧಿ ಸಾಯುವಾಗ ಅವಳಿಗೆ ಎರಡು ತಿಂಗಳು ಆಗಿತ್ತಂತೆ. ಅವಳಾಗಿಯೇ ಸತ್ತಳೋ ಯಾರಾದರು ಕೊಂದು ಕೆರೆಯಲ್ಲಿ ಹಾಕಿದರೋ ತಿಳಿಯದು, ಯಾರು ಅವಳಿಗೆ ಬಸಿರು ಮಾಡಿದ್ದಾನೆಯೋ ಅವನ ಜೊತೆಗೆ ಅವಳು ಓಡಿ ಹೋಗಬಹುದಿತ್ತು. ಇಲ್ಲಾ ಬೇಡದ ಗರ್ಭ ತೆಗೆಯಬಹುದಿತ್ತು. ಅದು ಬಿಟ್ಟು ಸಾಯುವುದಾ? ಯೌವನ ಬಿಸಿ ಇರುವಾಗ ಹುಡುಗರು – ಹುಡುಗಿಯರು ಹಾರಾಡುತ್ತಾರೆ. ಆ ಮೇಲೆ ಗೊತ್ತಾಗುತ್ತದೆ – ಅದರಲ್ಲಿ ಏನೂ ಇಲ್ಲಾಂತ. ನೋಡೋ ಈಗಲಾದರೂ ಕೇಳು – ನಮ್ಮ ಹವ್ಯಕರಲ್ಲಿ ಹುಡುಗಿರಿಗೇನೂ ಕೊರತೆ ಇಲ್ಲ. ಈಗ ನಿನಗೆ ಬಿಸಿ ರಕ್ತ, ಗೊತ್ತಾಗುವುದಿಲ್ಲ. ಮುಂದೆ ಪ್ರಾಯ ಕಳೆದ ಮೇಲೆ ನಿನಗೇ ಗೊತ್ತಾಗುತ್ತದೆ –ಯಾರು ಇಲ್ಲಾಂತ, ಎಲ್ಲರೂ ಮದುವೆಯಾಗುವುದು ಬರೀ ರಾತ್ರಿಗೆಂತ ಭಾವಿಸಿಕೊಳ್ಳಬೇಡ. ಆ ಶರಧಿಗೆ ಯಾಕೆ ಬೇಕಿತ್ತು ಹುಡುಗರ ಸಹವಾಸ? ಹೆಣ ನೋಡಿದವರು ಅವಳ ಹೊಟ್ಟೆ ನೋಡಿಯೇ ಅಂದಾಜು ಮಾಡಿದರು – ಅವಳಿಗೆ ಗರ್ಭ ನಿಂತಿತ್ತು ಅಂತ. ಒಂದು ವೇಳೆ

ಅವಳ ಜಾತಿ ಮರ್ಯಾದೆಗೆ ಹೆದರಿಕೊಂಡರು ಅಂತ ಇಟ್ಟುಕೋ – ಅದರಿಂದ ಅವರಿಗೆ ಆದ ಲಾಭವಾದರೂ ಏನು? ಹೆಣ ಕೆರೆಯಲ್ಲಿ ಸಿಕ್ಕಿದ ಮೇಲೆ ಅವಸರದಲ್ಲಿ ಸುಟ್ಟು ಹಾಕಿದರು. 'ಪೋಲಿಸರು ಬರುವುದಕ್ಕೆ ಮೊದಲೇ ಎಲ್ಲಾ ಮುಚ್ಚಿ ಹಾಕಿದರು ನಿಜ. ನನ್ನ ಕೈ ನಡುಗತೊಡಗಿತು.' ಲಲಿತೆ ಮತ್ತೆ ಬಾಯಿ ಬಿಚ್ಚುವ ತನಕ ಮುಂದುವರಿಸಿದಳು. 'ಒಂದು ಮಾತು ಹೇಳ್ಲಾ ಆ ಗರ್ಭದೊಳಗಿನ ಸಣ್ಣ ಜೀವವೊಂದು ಹೇಳಹೆಸರಿಲ್ಲದೆ ಹೋಯಿತು. ಇದಕ್ಕೆ ಯಾರು ಹೊಣೆ? ಶರಧಿ ಸತ್ತಳು. ಅವಳ ಹೊಟ್ಟೆಯೊಳಗೆ ಕಣ್ಣು, ಕಿವಿ; ಮೂಗು ಮೂಡದ ಶಿಶುವೂ ಹೋಯಿತು. ಅದು ಹೋಗಿರಬಹುದು. ಆದ್ರೆ ಶರಧಿಗೆ ಬಸಿರು ಮಾಡಿದವನನ್ನು........... ಆ ಶರಧಿ ಮತ್ತು ಭ್ರೂಣದ ಹತ್ಯೆ ಬಿಟ್ಟು ಹೋದೀತಾ? ಅವನ ಅನ್ನದ ಅಗುಳಿನಲ್ಲಿ ಆ ಪ್ರಾಣಗಳ ನೆರಳು ಬೀಳದಿದ್ದೀತಾ? ಸತ್ತ ಮೇಲೆ ನರಕ ಇದೆ ಅಂತ ಹೇಳುವುದು ಸುಳ್ಳು. ಈ ಜನ್ಮದಲ್ಲಿಯೇ ಅವನು ತೀರಿಸದೆ ಸಾಯಲಿಕ್ಕಿಲ್ಲ ಅಲ್ವಾ?

ಲಲಿತೆಯ ಕೊನೆಯ ಪ್ರಶ್ನೆ ನನ್ನಲ್ಲಿ ಹಾಗೆಯೇ ಉಳಿದಿದೆ. ಯಾರಿಗೆ ಉತ್ತರಿಸಲಿ ನಾನು?

ಶರಧಿ ಮತ್ತು ಅವಳ ಗರ್ಭದಲ್ಲಿದ್ದ ನನ್ನ ಮಗು ಕೆರೆಯ ನೀರಿನಲ್ಲಿ ಉಸಿರು ಕಳೆದುಕೊಂಡರು. ಶರಧಿಯ ನೆರಳು ನನ್ನ ಬದುಕಿನಲ್ಲಿ.

* * * * *

"ಇಲ್ಲಿ ಬೆಂಗಾಡಲ್ಲಿ ಹಸಿರು ಮರದಡಿಯಲ್ಲಿ ನಾನು
ಜತೆಗೆ ರೊಟ್ಟಿಯ ಗಂಟು ಬಾಟಲಿ ಮದ್ಯ ಕವಿತೆಯ ಕಟ್ಟು
ಬದಿಯಲ್ಲಿ ಹಾಡು ಗುನಗುನಿಸಿರುವ ನೀನು
ಈ ಬೆಂಗಾಡು ಯಾವ ಸ್ವರ್ಗಕ್ಕೆ ತಾನೆ ಕಡಿಮೆ ಹೇಳು"

(ಉಮರ್ ಖಯ್ಯಾಮ್)

1992
ಡಿಸೆಂಬರ್
# 27

ಕೆಲವು ದಿನ ಯಾವುದೋ ಕಛೇರಿಯ ಕೆಲಸದಲ್ಲಿದ್ದೆ. ಇದ್ದಕ್ಕಿದ್ದಂತೆ ನನ್ನನ್ನು ಕೆಲಸದಿಂದ ತೆಗೆಲಾಯಿತು. ಅದಕ್ಕೆ ಯಾವ ಕಾರಣವಿದೆಯೆಂದು ಮೊದಲು ತಿಳಿಯಲಿಲ್ಲ. ನನಗಿದ್ದದ್ದು ಸ್ವಯಂ ಮರುಕವೇ? ಅನುಭವಿಸಿದ ಅವಮಾನವೇ? ಪ್ರೀತಿ ವಂಚಿತನ ಹಪಹಪಿಕೆಯೇ? ಬರಿದಾಗದಿದ್ದ ಲಯವಿಲ್ಲದ – ಲೈಂಗಿಕ ವಾಂಛೆಯೇ?, ಅಪ್ಪನ ಸಾವನ್ನು ಹತ್ತಿರದಿಂದ ಕಂಡವನ ಮುಂದೊಂದಿನ ಬರಬಹುದಾದ ಸಾವಿನ ಕುರಿತಾದ ಅನವಶ್ಯಕ ಭಯವೇ? ಕಲ್ಪಿತ ಸಂಗತಿಗಳ ಕುರಿತಾದ ಆತಂಕಗಳೆ ಯಾವುದು? ಎಂದು ತಿಳಿದಿಲ್ಲ. ಮುಂದೇನಾಗಲಿದೆಯೆಂದು ತಿಳಿಯದೆ ಒಬ್ಬನೇ ಕುಳಿತು ಆಲೋಚಿಸಿದ್ದೇನೆ. ಮಂಜು ಮುಸುಕಿದ ಹಾಲಾಹಲವೊಂದು ಯಾವ ಗಳಿಗೆಯಲ್ಲಾದರೂ ನನ್ನನ್ನು ಬಂದು ಪೀಡಿಸಲಿದೆಯೆಂದು ಅರ್ಥವಾಗುತ್ತಿದೆ. ಜೆಸಿಂತಾಬಾಯಿ ನನಗೆ ಒದಗಿಸಿದ ಈ ಪುಟ್ಟ ಕೊಠಡಿ ನನ್ನ ಆಶ್ರಯ ನಿಲ್ದಾಣ. ಅದನ್ನು ಮರೆಯಲಾರೆ. ಇದು ನನಗೆ ನೆರಳು ಕೊಟ್ಟಿದೆ, ನನ್ನ ಅಂತರಂಗದ ರಹಸ್ಯಗಳನ್ನಿಟ್ಟು ಸಾಕಿದೆ. ನಾನು ಎಲ್ಲರೂ ಹೇಳುವಂತೆ ಅಬ್ನಾರ್ಮಲ್ ಮನುಷ್ಯ. ಒಪ್ಪಿಕೊಳ್ಳುತ್ತೇನೆ. ವಿನಾ ಕಾರಣ ಒಂದು ದಿನ ನನ್ನನ್ನು ಆಫೀಸಿನಿಂದ ತೆಗೆಯಲಾಯಿತು. ಮೆನೇಜಿಂಗ್ ಡೈರೆಕ್ಟರ್ ದೇವಪ್ಪರಿಗೆ ಅವರ ಜಾತಿಯ ಪಂಚಮಿಯನ್ನು ನನ್ನ ಜಾಗಕ್ಕೆ ತರಬೇಕಿತ್ತು. ತಂದರು. ಅದಕ್ಕೆ ಅವರು ಕೊಟ್ಟ ಕಾರಣ ನಾನು ಅವರ ವಿರುದ್ಧ ಪಿತೂರಿ ಮಾಡುತ್ತಿದ್ದೇನೆ ಎಂಬುದೇ ಆಗಿತ್ತು. 'ಅದ್ಯಾವುದನ್ನು ಹೊರಗೆ ಹೇಳಿದರೆ ನೇತ್ರಾವತಿ ಹೊಳೆಯಲ್ಲಿ ನಿನ್ನ ಹೆಣ ತೇಲಿ ಹೋಗುವುದು ಖಂಡಿತಾ' ಎಂದು ದೇವಪ್ಪರ ಕಡೆಯವರು ಬಂದು ನನಗೆ ಬೆದರಿಕೆ ಹಾಕಿದರು. ತಾತ್ಕಾಲಿಕ ಉದ್ಯೋಗಿಯೊಬ್ಬನನ್ನು ಕೆಲಸದಿಂದ ತೆಗೆದು ಹಾಕುವಾಗ ಅದಕ್ಕೆ ಯಾವುದೇ ಕಾರಣ ಬೇಕಿಲ್ಲ ಆದರೆ ಅದೂ ನಡೆದು ಹೋಯಿತು. ಹೇಗೂ ಬದುಕಬಹುದು. ಆಟಗಳು ಸಹಾಯ ಮಾಡಿದವು. ರಂಗಸ್ಥಳ ಕೂಗಿ ಕರೆಯಿತು. ಅದೆಲ್ಲಕ್ಕಿಂತ ನಾನು ಒಬ್ಬನೇ ಬದುಕುವುದಕ್ಕೆ ಇವೆಲ್ಲಾ ಬೇಕೇ ಎಂದು ಅನಿಸಿತು. ಸೀದಾ ಜೆಸಿಂತಾ ಬಾಯಿಯ ಕಂಪೌಂಡಿಗೆ ಬಂದೆ. ಈಗ ಅವು ನನ್ನ ಪಾಲಿನ ಗತ ಕಥನಗಳೂ ಹೌದು. ಒಪ್ಪಿಕೊಳ್ಳುವುದು ಮೇಲು ನಾನು ದುರ್ಬಲ ಮನುಷ್ಯ. ಶಾಂಭವಿ, ಶರಧಿಯರು ನನ್ನ ಬಿಟ್ಟಮೇಲೆ ನನ್ನನ್ನು ನಾನು ಹೊರಗಡೆ ಯಾರಿಗೂ ತೋರಿಸಿ ಕೊಳ್ಳಲಿಲ್ಲ. ಅದರಿಂದ ನನಗೆ ಯಾವ ನಷ್ಟವೂ ಆಗಿಲ್ಲ. ನಾನು, ಈ ಏಕಾಂತ ನನಗೆ ಬೇಕಾಗಿದೆ. ನನ್ನ ಆವಶ್ಯಕತೆಗಳು ಕೂಡಾ

ಅಷ್ಟೆ. ಈ ಜಗತ್ತಿನಿಂದ ಯಾವುದನ್ನೂ ನಿರೀಕ್ಷಿಸಲಾರೆ. ಯಾರಿಂದ ನಾನೀಗ ಯಾವುದನ್ನು ಅಪೇಕ್ಷಿಸಿ ಮಾಡುವುದು ಏನು? ಯಾರಿಂದಲೇನಹುದು? ಮುಂದೊಂದು ದಿನ ತನಗೆ ಈ ಮನುಷ್ಯನಿಂದ ಸಹಾಯವಾಗಬಹುದು ಎಂಬ ಕಾರಣಕ್ಕೆ ಇಟ್ಟುಕೊಳ್ಳುವ ಸಂಬಂಧ ಈ ತನಕ ತನಗೆ ಏನು ಕೊಟ್ಟಿದೆ? ಇಷ್ಟು ದಿನಗಳಿಂದ ಬರೆಯುತ್ತಾ ಬಂದೆ – ನಾನು ನನ್ನ ಕುರಿತು. ಬರೆದುದನ್ನು ಈವತ್ತು ಓದಿ ನನ್ನ ಡೈರಿಯನ್ನು ಚಾಪೆಯ ಮೇಲಿಟ್ಟೆ. ಬರೆದುದು ಎಷ್ಟು ಇದೆಯೋ ಅಷ್ಟೇ ಮುಚಿಟ್ಟದ್ದು ಇದೆಯೆಂಬುದು ಗೊತ್ತು. ಈಗಿದು ಸಂಜೆ. ರೂಮಿನ ಹೊರಗಡೆಗೆ ಹೋಗಲು ಮನಸ್ಸಿಲ್ಲ. ಕರುಳಿನ ಮಾತುಗಳು ಲೇವಡಿ ಮಾಡುತ್ತವೆ. ಸಾಕಪ್ಪಾ ಸಾಕು ಈ ಜೀವನ. ಮೆಲ್ಲನೆ ನಾನು ಮಲಗುವ ಬೆಂಚಿನ ಕೆಳಗಡೆ ಇರಿಸಿಕೊಂಡಿರುವ ರಂನ ಬಾಟಲಿಯೆತ್ತಿಕೊಂಡೆ. ಹಾಗೆ ಕುಡಿದೆ. ನನ್ನ ಕಂಪೇನಿಯನ್ ಬೀಡಿ ಕೈಗೆತ್ತಿಕೊಂಡೆ. ಹೊಗೆ ಬಿಟ್ಟೆ. ಸ್ವಲ್ಪ ಹೊತ್ತಾದ ಮೇಲೆ ನಾನು ಡೈರಿಗೆ ಸ್ವಲ್ಪ ಬೆಂಕಿ ಕೊಡಲು ಹೋದೆ. ಕಾಗದದ ಮೇಲೆ ಬೆಂಕಿಯಿರಿಸಿದಾಗ ಉಂಟಾಗುವ ಮೂರಿ. ಅಷ್ಟು ಹೊತ್ತಿಗೆ ಸರಿಯಾಗಿ ಹೊರಗಡೆಯಿಂದ; 'ನಿಶಿತಣ್ಣ; ನಿಶಿತಣ್ಣ' ಎಂದು ಪುಟ್ಟ ಹುಡುಗಿ ರೋಸಿ ಕರೆದಳು ನನ್ನ. ಉರಿಸಿದ್ದನ್ನು ಆರಿಸಿ ಅರ್ಧಉರಿದ ಡೈರಿಯನ್ನು ಹೆಂಚಿನ ಸಂದಿಯಲ್ಲಿ ಇಟ್ಟು ಬಾಗಿಲು ತೆಗೆದೆ. ರೋಸಿ ಒಳಗಡೆ ಬಂದಳು. "ಏನಿದು ನಿಶಿತಣ್ಣ ಪೇಪರು ಸುಟ್ಟು ಹೋದ ವಾಸನೆ ಬರುತ್ತಿದೆ.' ಎಂದಳು. ಪೆಚ್ಚು ನಗೆಯೊಂದಿಗೆ ಅವಳ ಕೆನ್ನೆ ತಟ್ಟಿ ಕಳಿಸಿದೆ. ಮತ್ತೆ ಏರಿತು ನನ್ನ ಅಮಲಿನ ಲೋಕ. 'ಆಹಾ, ಎಷ್ಟು ಚೆನ್ನಾಗಿದೆಯಿದು! ನಿಜವಾದ ಮಾಯಾಲೋಕ!

— ಅನಂತರ ಅಲ್ಲಲ್ಲಿ ತುಂಬಾ ಚಿತ್ತುಗಳಿವೆ. ಓದಲು ಅಸಾಧ್ಯ.

ಬದುಕನ್ನು ಬಾಳ್ವೆಯಾಗಿಸುವ, ಇರದ ಮೌಲ್ಯಗಳನ್ನು ತನ್ನ ಬಾಳಿನ ಮೂಲಕವೇ ಸೃಷ್ಟಿಸಿಕೊಳ್ಳುವ, ಕ್ರಿಯೆಗೆ, ನಿಶ್ಚಯಕ್ಕೆ ಮೂಲಭೂತವಾದದ್ದು ಮನುಷ್ಯನ ಸ್ವಾತಂತ್ರ್ಯ. ಈ ಸ್ವಾತಂತ್ರ್ಯ ಮನುಷ್ಯನ 'ಅಹಂ'ಗಿಂತ ಆಳದ್ದು. ನಮಗೆ ಮೀರಿದ ಶಕ್ತಿಗಳ ನೆವವೊಡ್ಡಿ ನಮ್ಮ ನಿಜ ಸ್ವಾತಂತ್ರ್ಯವನ್ನು ಬೇಕೆಂದು ಕಳೆದುಕೊಳ್ಳುವವರೇ ಹೇಡಿಗಳು. ಜನ ತಿಳಿದುಕೊಂಡಂತೆ ಹುಟ್ಟುವಾಗಲೇ ಯಾರೂ ಹೇಡಿಗಳಲ್ಲ, ಶೂರರೂ ಅಲ್ಲ. ಒಳ್ಳೆಯವರೂ ಅಲ್ಲ, ಕೆಟ್ಟವರೂ ಅಲ್ಲ. ಅದೆಲ್ಲ ಅವರವರ ನಿಶ್ಚಯ ಹಾಗೂ ಕ್ರಿಯೆಗಳಿಂದ ಸ್ವತಃ ಮಾಡಿಕೊಂಡಿದ್ದು. ಒಬ್ಬ ಅಸ್ತಿತ್ವವಾದಿ ತನ್ನೊಳಗಿನ ಸ್ವಾತಂತ್ರ್ಯವನ್ನು ಜಾಗೃತವಾಗಿಡಲು ಸದಾ ಹೆಣಗುತ್ತಾನೆ. ತನ್ನ ಸ್ವಾತಂತ್ರ್ಯದಷ್ಟೇ ಅವನಿಗೆ ಇನ್ನೊಬ್ಬರ ಸ್ವಾತಂತ್ರ್ಯವೂ ಮುಖ್ಯ.

ಇಂಥ ಒಂದು ನಿಶ್ಚಯದ, ಕ್ರಿಯೆಯ ಸಂಪೂರ್ಣ ಸ್ವತಂತ್ರ ಹೊಣೆಗಾರಿಕೆಯ ಸ್ಥಿತಿಯ ಅರಿವೇ ಅಸ್ತಿತ್ವವಾದದ ತಿರುಳು.

(ಜೀನ್ ಪಾಲ್ ಸಾರ್ತ್ರ್‌ನ ನಾಟಕ 'ಕೀನ್')

* * * * *

## 1992
## ಡಿಸೆಂಬರ್
## 30

ಮಧ್ಯಾಹ್ನದ ತನಕ ಬಾಯಿಂದ ಕುಡಿದ ರಮ್‌ನ ವಾಸನೆ ಇಳಿಯುವುದಿಲ್ಲ. ಹೆಂಗಸರು "ಈಯುಪ್ಪ ಅದೇನು ಬೆಳಿಗ್ಗೆಯೇ ಅದರಲ್ಲಿಯೇ ಮುಖ ತೊಳೆಯುತ್ತಾನೋ-ಏನೋ? ಗಬ್ಬು ವಾಸನೆಯಪ್ಪ. ಈ ರೀತಿ ಸಿಗರೇಟು ಸೇದುವ; ಗುಂಡು ಹಾಕುವ ಗಂಡಸರ ಹತ್ತಿರ ಸುಳಿಯುವುದೇ ಭಾರೀ ತಪ್ಪು" ಎಂದು ಮೂಗು ಮುಚ್ಚಿ ಮಾರು ದೂರ ನಿಲ್ಲುತ್ತಾರೆ. ಆದರೆ ಅದಕ್ಕೆ ಯೋಚಿಸುವುದಿಲ್ಲ. ಅವರವರ ಭಾವದ ಜಗತ್ತು ಅವರವರಿಗೆ. ಪ್ರತಿಯೊಂದು ಮನುಷ್ಯನ ಮನಸ್ಸು, ದೇಹ ಅಖಂಡವಾದ ಜಗತ್ತು. ಅದನ್ನು ಹತೋಟಿಯಲ್ಲಿಡಲು ಈ ಮನುಷ್ಯರು ಯಾರು? ಅವರಿಗೇನು? ಈ ಜಗತ್ತಿನಲ್ಲಿ ಯಾರಿಗೂ ನಾನು ಯಾವ ಹಕ್ಕನ್ನೂ ಕೊಟ್ಟಿಲ್ಲ ಎಂಬಂಥ ಹಟ ಸರ್ಪದ ಹೆಡೆಯಾಡತೊಡಗಿತ್ತು. ಕೆಂಪುಕಣ್ಣು, ಕುಡಿದ ವಾಸನೆಯಿಂದ ಯಾರನ್ನೂ ಬಿಡುತ್ತಿರಲಿಲ್ಲವೆಂಬುದು ನಿಜ. ಆದರೆ ನನಗೆ ಅದು ಅಗತ್ಯವಾಗಿತ್ತು. ನನಗೆ ಮನುಷ್ಯರು ಬೇಕಿರಲಿಲ್ಲ. ಮನುಷ್ಯರ ವಾಸನೆಯೂ ಬೇಸರ ತರಿಸುತ್ತಿತ್ತು. ಅನೇಕ ವರ್ಷಗಳಿಂದ ತೊಳೆಯದ ಬೆಡ್‌ಶೀಟ್. ಅದರ ಜಿಡ್ಡು, ಅದರೊಳಗೆ ಸೇರಿದ ತಿಗಣೆಗಳು ಎಷ್ಟು ಅಸಹನೀಯವಾಗಿದ್ದರೂ ಅದನ್ನು ತೊಳೆಯುವ ಯಾವ ಗೋಜಿಗೂ ಹೋಗುತ್ತಿರಲಿಲ್ಲ. ಯಾವಾಗಲೋ ಒಮ್ಮೆ ಬಿಸಿಲಿಗೆ ಒಣಹಾಕುತ್ತಿದ್ದೆ.

"ಒಂದು ದಿನ ವಿಸ್ಕಿ ಮತ್ತು ರಮ್ ಎರಡನ್ನೂ ಮಿಶ್ರಗೊಳಿಸಿ ಕುಡಿದೆ. ಅದರ ಅಮಲು ಎಷ್ಟು ಏರಿತೆಂದರೆ ಟಾಯ್ಲೆಟ್‌ಗೆ ಹೋಗಿ ವಾಪಾಸು ರೂಮಿಗೆ ಬರುವಾಗ ಬಾಗಿಲನ್ನು ಹಿಡಿದುಕೊಳ್ಳಬೇಕಾಯಿತು. ಅನಂತರ ಬಾಗಿಲಿಗೆ ಒರಗಿ ಜೇಬಿಂದ ಬರ್ಕ್‌ಲೀ ಹಚ್ಚಿದೆ ತಲೆ ಗಿರಗಿರನೆ ತಿರುಗತೊಡಗಿತು. ಸರ್ವವೂ ಆನಂದಮಯ! ರಸಮಯ. ರಸಮಯವಾದ ಈ ಜಗತ್ತಿನಲ್ಲಿ ಆನಂದೋ ಬ್ರಹ್ಮ ಅದಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ." ತುಟಿಯಲ್ಲಿ ಸಣ್ಣನೆಯ ನಗುವು ವ್ಯಂಗ್ಯದಿಂದ ಅರಳಿತು. ಮತ್ತೊಂದು ಕ್ಷಣ. ಇನ್ನೊಂದು ಸ್ವಲ್ಪ ಕುಡಿದರೆ ಹೇಗಿರುತ್ತದೆಯೆಂದು ಅನಿಸಿತು. ಮತ್ತೆ ವಿಸ್ಕಿಯ ಬಾಟಲಲ್ಲಿ ಇದ್ದ ಸ್ವಲ್ಪವನ್ನು ಕುಡಿದೆ. ರಮ್ ನೆಟ್ಟಗೆ ತಲೆಗೇರಿ ಕುಳಿತುಕೊಂಡು ಬಿಡುತ್ತದೆ. ವಿಸ್ಕಿ ನಿಧಾನವಾಗಿ ಹೃದಯಕ್ಕೆ ಆವರಿಸಿಕೊಂಡು, ತಲೆಯನ್ನು ಸವರುತ್ತಿದೆ. ಎರಡೂ ರುಚಿಯೆ.

ಈಗ ಯೋಚನೆ ಬಂತು; ಊಟಕ್ಕೆ ಏನೂ ಮಾಡಿಲ್ಲ. "ಯಾವುದನ್ನೂ ಬೇಯಿಸಿಲ್ಲ. ಹಸಿವೆಯನ್ನು ಗೆದ್ದು ಇಂದ್ರಿಯದ ಸುಖವನ್ನು ಗೆದ್ದು ಪಡೆದುಕೊಂಡಂತಹ ವೀರತ್ವ, ಈ ವೀರತ್ವವನ್ನು ಯಾರೂ ಕಸಿಯಲಾಗುವುದಿಲ್ಲ. ಸುತ್ತಲಿನ ಪರಿಸರದಲ್ಲಿ ಕೋಡಗಗಳು ಕುಣಿಯುತ್ತಿವೆ. ಅಧಿಕಾರಕ್ಕೆ ಜೊಲ್ಲು ಸುರಿಸುವ ನಾಲಿಗೆಗಳಲ್ಲಿ ಹನಿಗಳು ಉದುರುತ್ತಿವೆ. ಕಣ್ಣುಗಳಲ್ಲಿ ರಕ್ತದ ದಾಹ. ಲಂಚದ ದಾಹ. ಕೆಲವರಿಗೆ ಮಾಂಸದ ದಾಹ. ಮತ್ತೆ ಕೆಲವರಿಗೆ ವಿಕಾರವಾದ, ಅಸಹ್ಯ ಹುಟ್ಟಿಸುವ ಸ್ವಪ್ರಶಂಸೆಯ ವಿಕಾರತೆಯ ಹೆಳವತೆ. ಇದರ ಕೆಸರಿಂದ ಅವರಿಗೆ ಮುಕ್ತಿಯಿಲ್ಲ. ನಾನೀಗ ಮುಕ್ತಿ ಕಂಡಿದ್ದೇನೆ. ಯಾರ, ಯಾವ ಹಂಗೂ ಇಲ್ಲ."

ಸಿಗರೇಟು ಮುಗಿಯಿತು ಎಂದು ಅದನ್ನು ಹೊಸಕಿದೆ. ಕಣ್ಣು ಮಂಜಾಯಿತು. ಮತ್ತೆ ಬರ್ಕ್‌ಲೀಗೆ ಕೈಹಚ್ಚಿದೆ. ವಿಷಾದದ ಗೀತವೊಂದು ಮೈಮೇಲೆ ಆವರಿಸಿದಂತಾಯಿತು.

"ಹದಿನೈದು ವರ್ಷಗಳ ಹಿಂದೆ – ಹುಲಿಯ ಮೇಲೆ ಹತ್ತಿದ್ದೆ ಹುಲಿಯಾಗಿದ್ದೆ. ಚಿರತೆಯಾಗಿದ್ದೆ. ಬಣ್ಣಬಣ್ಣಗಳ ಚುಕ್ಕಿಗಳ, ಪಟ್ಟೆಪಟ್ಟೆಯನ್ನು ಹೊದ್ದುಕೊಂಡು ಆವರಿಸಿಕೊಂಡಿದ್ದ ಬಣ್ಣಗಳ ನಡುವೆ ರಕ್ತ ಮತ್ತು ಮಾಂಸಗಳ ರುಚಿ ಕಂಡವನಿಗೆ ಬೇರೆ ರುಚಿ ಬೇಕಿರಲಿಲ್ಲ. ಅದು ಇಷ್ಟವಾಗಿರಲಿಲ್ಲ. ಮನಸ್ಸು ಮತ್ತು ದೇಹವೆಲ್ಲ ತುಂಬಿಕೊಂಡಿರುವ ವ್ಯಗ್ರತೆಯು ಎಷ್ಟೊತ್ತಿಗೆ ಹಸಿದೆದ್ದು ಕುಳಿತುಕೊಳ್ಳುತ್ತದೆ – ಎಷ್ಟು ಹೊತ್ತಿಗೆ ಮಲಗಿಕೊಳ್ಳುತ್ತದೆಯೆಂದು ತಿಳಿಯುತ್ತಿರಲಿಲ್ಲ. ಹುಲಿಗುಂಡಿಯಿಂದ ಹಾರಿದ ಅರ್ಧ ಗಾಯಗೊಂಡ ಹುಲಿಯು ಹಾರಿ ತುಕ್ರನ ಕುಂಡೆಯನ್ನು ಗಾಯಗೊಳಿಸಿದ ಹಾಗೆ; ತಿಮ್ಮಯ್ಯಜ್ಜ ತೋಟದ ಕೋವಿಯನ್ನು ತನ್ನಗಲ್ಲದ ಕೆಳಭಾಗಕ್ಕೆ ಇಟ್ಟುಕೊಂಡು ಕೋವಿಯನ್ನು ಸಿಡಿಸಿಕೊಂಡು ಕೊರಳನ್ನು ಒಡ್ಡಿಕೊಂಡ ಹಾಗೆ. ಶಾಂಭವಿಯಿಂದ ಆದ ಅವಮಾನ ಮತ್ತು ವ್ಯಗ್ರತೆ. ಖಿನ್ನತೆ ಮತ್ತು ಒಂಟಿತನ, ಒಟ್ಟೊಟ್ಟಿಗೆ ಬಂದವೋ ಏನೋ? ಆ ದಿನ ಆಗಿರುವುದು ಕೂಡಾ ಅಷ್ಟೆ: ಕುಡಿದವನೆ ನೆತ್ತಿಗೇರಿಸಿದ ಅಮಲನ್ನು ಸಹಿಸಲು ಅಸಾಧ್ಯವಾದವನಂತೆ ಮೆಲ್ಲನೆ ತೆವಳುತ್ತಾ ಅಂದರೆ ಹುಳದಂತೆ, ನಿಜವಾದ ಅರ್ಥದಲ್ಲಿ ಥೇಟು ಬಸವನ ಹುಳದಂತೆ ತೆವಳುತ್ತಾ ಚಾಪೆಯೇರಿ ಕುಳಿತೆ. ಮಂಜುಗಣ್ಣು. ಮಯಮಯ ಅನಿಸತೊಡಗಿತು. ಪೂರ್ವಜನ್ಮದ ದ್ವೇಷವು ಉರಿಯ ತೊಡಗಿದಂತೆ. ಭಗ್ಗನೆ ಉರಿಯತೊಡಗಿತು. ಮತ್ತೆ ಜೇಬನ್ನು ಪರದಾಡಿದೆ. ಬರ್ಕ್‌ಲೀ ಹಚ್ಚಿಕೊಂಡು ಮಲಗಿಕೊಂಡೇ ಸೇದತೊಡಗಿದೆ. ಎಷ್ಟು ಹೊತ್ತಿಗೆ ನಿದ್ದೆ ಮಾಯಕದಂತೆ ಆವರಿಸಿಕೊಂಡಿತೋ ಆ ದೇವರೇ ಬಲ್ಲ. ಸರಿ ಸುಮಾರು ಅರ್ಧ ಮುಕ್ಕಾಲು ಗಂಟೆಯ ಮೇಲೆ ಮೈಮೇಲೆಲ್ಲಾ ಬಿಸಿಯಾದ ಹಾಗೆ ಎಚ್ಚರವಾಯಿತು. ಎದ್ದು

ನೋಡುತ್ತೇನೆ. ಚಾಪೆ ಅರ್ಧ ಸುಟ್ಟು ಹೋಗಿದೆ. ಅರ್ಧ ಮಂಪರು, ಅರ್ಧ ಎಚ್ಚರದಲ್ಲಿ ಚಾಪೆಗೆ ಒಂದು ಕೊಡ ನೀರು ಸುರಿದೆ. ಹಾಗೆಯೇ ಇದ್ದಕ್ಕಿದ್ದಂತೆಯೇ ಮೈಮೇಲೆಯೇ ನೀರು ಸುರಿದುಕೊಂಡೆ. ಅದಕ್ಕೊಂದು ಸ್ಪಷ್ಟ ಉದ್ದೇಶವಿರಲಿಲ್ಲ. ಎಲ್ಲದಕ್ಕೂ ಸ್ಪಷ್ಟ ಉದ್ದೇಶ ಇರಬೇಕಾಗಿಲ್ಲ. ಈ ಘಳಿಗೆಯಲ್ಲಿ ತನ್ನ ಅಮಲು ಇಳಿಯಬೇಕಾದ್ದು ಮಾತ್ರ ಮುಖ್ಯ! ನೋವು ಸಂಕಟಗಳು ಯಾರ ಸೊತ್ತು? ಅದೇನು ಪಿತ್ರಾರ್ಜಿತವಾದ ಬಳುವಳಿಯೆ?

ನಿಶಿತ ತನ್ನ ಡೈರಿಯಲ್ಲಿ ಕೆಂಪು ಶಾಯಿಯಲ್ಲಿ ಬರೆದಿದ್ದ. ಶಾಂಭವಿಯ ಪ್ರಶ್ನೆಯು ಮಾತ್ರ ಮುಖ್ಯವಾಗಿರಲಿಲ್ಲ. ನಿಶಿತ ಸ್ವಲ್ಪ ಹೊತ್ತು ಯೋಚಿಸಿ ಬರೆದ ಹಾಗೆ ಕಾಣಿಸುತ್ತಿತ್ತು. ಯಾಕೆಂದರೆ ನಾಲ್ಕೈದು ಸಾಲುಗಳನ್ನು ಬರೆದು ಮತ್ತೆ ಅದನ್ನು ಚಿತ್ತು – ಚಿತ್ತು ಮಾಡಿಟ್ಟಿದ್ದ. ಮತ್ತೆ ನೀಲಿ ಶಾಯಿ ಬರೆದುಕೊಂಡಿದ್ದ. ಮತ್ತೆ ಅದನ್ನೂ ಹೊಡೆದು ಮತ್ತೆ ಕೆಳಗಡೆ ಕೆಂಪು ಶಾಯಿಯಲ್ಲಿ ಬರೆದುಕೊಂಡಿದ್ದ:

"ನನ್ನ ಸಮಸ್ಯೆಯಿರುವುದು ಅನವಶ್ಯಕವಾದುದನ್ನು ಮೈಮೇಲೆ ಎಳೆದುಕೊಳ್ಳುವುದರಲ್ಲಿಯೆ? ಅಥವಾ ಆತಂಕಗೊಳ್ಳುವುದರಲ್ಲಿಯೆ? ಅಥವಾ ಇನ್ನಿತರರು ಹಿಂದೆ – ಮುಂದೆ ಆಡುವ ಮಾತುಗಳು ನನ್ನನ್ನು ಮಾನಸಿಕ ಆಘಾತಕ್ಕೆ ಗುರಿ ಮಾಡಿವೆಯೆ? ಇದ್ಯಾವುದೂ ನನಗೆ ತಿಳಿಯುತ್ತಿಲ್ಲ. ಆದರೆ ಮನಸ್ಸು ವೃಥಾ ಹಿಂಸೆಗೆ ಒಳಗಾಗುತ್ತಿದೆ. ಆಕ್ರಮಣ: ಹಿಂಸೆ: ನೋವು: ದುಃಖ: ಖಿನ್ನತೆ: ಹತಾಶೆ – ಈ ಎಲ್ಲಾ ಮಾತುಗಳು ಪರಸ್ಪರ ಸೋದರ ಸಂಬಂಧಿಗಳು. ಇದಕ್ಕೆ ಪ್ರತಿಯಾಗಿ ನಾನು ಮಾಡುತ್ತಿರುವುದೇನು? ಸ್ವಆಘಾತ; ಸ್ವಹಿಂಸೆ;" ನಿಶಿತ ವಿಪರೀತವಾದ ತಲ್ಲಣಕ್ಕೆ ಗುರಿಯಾಗಿರುವುದು ಅವನ ದಿನಚರಿಯಿಂದ ಸ್ಪಷ್ಟವಿತ್ತು. ಇವುಗಳಿಗಾಗಿ ನಿಶಿತ ಕೆಲವು ಪುಟಗಳನ್ನು ಖಾಲಿಬಿಟ್ಟಿದ್ದ. ಅನಂತರ ಮತ್ತೆ ಅವನು ಬರೆದುಕೊಂಡಿದ್ದ:

ಏನೋ ಬರೆಯಲು ಪ್ರಯತ್ನಿಸಿದ್ದಾನೆ ಎಂಬುದು ಸ್ಪಷ್ಟವಾಯಿತು. ಅವನ ಡೈರಿಯ ಕೆಲವು ಭಾಗಗಳು ಸುಟ್ಟು ಹೋಗಿದ್ದವು. ಅವುಗಳನ್ನು ಜೋಡಿಸಲು ಯತ್ನಿಸಿದೆ.

'ನಾನಿವತ್ತು ಏನೂ ಮಾಡಲು ಆಗಲಿಲ್ಲ. ನನಗೆ ಯಾಕೋ ಮಾನಸಿಕ ಹಿಂಸೆಯಾಗುತ್ತಿದೆ. ರೂಮಿನ ಬಾಗಿಲು ಹಾಕಿದವನು ತುಂಬಾ ಹೊತ್ತು ತೆಗೆಯಲಿಲ್ಲ. ಮತ್ತೆ ನನ್ನ ಕನ್ನಡಿಯಲ್ಲಿ ನಾನು ಮುಖ ತೋರಿಸಲು ಆಗದಷ್ಟು ವಿಕಾರವಾಗಿದ್ದೇನೆ ಎಂದು ನನಗೆ ಸ್ವತಃ ಅನಿಸುತ್ತಿದೆ. ದಿಕ್ಕು ತೋಚದ ಹಾಗೆ ಆಗಿಬಿಟ್ಟಿದೆ. ಬರಿದು ಎನ್ನುವುದು. ಮನಸ್ಸಿನ ಖಾಲಿತನವೆನ್ನುವುದು, ನನ್ನ ರೂಮಿನಲ್ಲಿ ತುಂಬಿಕೊಂಡಿದೆ.

ಸಣ್ಣನೆಯ ದೀಪದ ಸಣ್ಣ ಬೆಳಕು – ಏನೋ ಬರೆಯಬೇಕು ಎಂದೆನ್ನಿಸಿಬಿಟ್ಟಿದೆ. ಕೂರಲೂ ಆಗದೆ, ಬರೆಯಲೂ ಆಗದೆ ಸುಟ್ಟ ಬೀಡಿಗಳಿಗೆ ಲೆಕ್ಕವಿಲ್ಲ. ಇನ್ನೇನು ಬರೆಯಬೇಕು ಎಂದು ಪೆನ್ನಿನ ಮುಚ್ಚಳ ತೆಗೆದಾಗ ಬಾಗಿಲನ್ನು ಯಾರೋ ತಟ್ಟಿದಂತಾಯಿತು. ಬಾಗಿಲು ತೆರೆದೆ. ನೋಡಿದರೆ – ಹನ್ನೆರಡು ವರ್ಷದ ಪುಟ್ಟ ರೋಸಿ.

'ಮನಸ್ಸು ಎನ್ನುವುದು ಬೈಹುಲ್ಲಿನ ಕಂತೆಯಲ್ಲ. ಅದು ನನ್ನ ಮನಸ್ಸು, ಅವಳ ಮನಸ್ಸು, ಶಾಂಭವಿಯ ಮನಸ್ಸು ಎಂಬ ಪ್ರತ್ಯೇಕ ಮಾಡುವಂಥದ್ದಲ್ಲ. ನಾವು ಗಂಡು ಹೆಣ್ಣು ಎಂದು ಹೇಳಲು ಬರುತ್ತದೆಯೇ? ನಾನು ಮಾಡಿದ ಅಥವಾ ಮಾಡದಿರುವುದನ್ನು ಹೇಗೆ ಒಪ್ಪಿಕೊಳ್ಳಲಿ? ಶಾಂಭವಿಯು ನನ್ನನ್ನು ತಿರಸ್ಕರಿಸಿದ ಮಾತ್ರಕ್ಕೆ ನಾನು ಬದುಕಲೇ ಬಾರದೆ? ತಲೆಯ ಮೇಲೆ ಇರುವ ಜೇನು ಹುಳವನ್ನು ಹೇಗೆ ತೆಗೆಯಲಿ? ಶರಧಿಯ ಸಾವು: ಭ್ರೂಣ ಕರೆಯುತ್ತಿದೆ.

ಯಾಕೋ ನಡೆಯಲಾಗುತ್ತಿಲ್ಲ. ಎದ್ದು ಕೂತುಕೊಳ್ಳಲು ಕೂಡಾ ಆಗುತ್ತಿಲ್ಲ. ಮೆಲ್ಲನೆ ಕೈ ಚಾಚಿದೆ. ಬೀಡಿಯ ಕಟ್ಟು ಸಿಕ್ಕಿತು. ಉರಿಸಿಕೊಳ್ಳಲು ಪ್ರಯತ್ನಿಸಿದೆ: ಇನ್ನು ಈ ಜೀವನಕ್ಕೆ ಅರ್ಥವಿದೆಯೇ? ಯಾಕೋ ಒದ್ದಾಟ. ನಾನು ಪಾಪದ ಕೂಪದಿಂದ ಏಳಲು ಸಾಧ್ಯವೇ ಆಗಲಿಲ್ಲ. ಹಳವಂಡದಲ್ಲಿ: ಸಿಕ್ಕಿಹಾಕಿಕೊಂಡಿದ್ದೇನೆ. ಶರಧಿ: ಅವಳು: ಶಾಂಭವಿ ಎಲ್ಲರೂ ಸೆಳೆಯುತ್ತಿದ್ದಾರೆ. ಒಂದು ಕೊನೆಯ ನಮಸ್ಕಾರವನ್ನು ಹೇಳಲೇಬೇಕು. ಜೀವನದಲ್ಲಿ ಈ ತನಕ ನಾನು ಎದುರಿಸಿದ್ದು ಪ್ರಶ್ನೆಗಳನ್ನು. ಆದ್ರೆ – ಇದಕ್ಕೆ ಒಂದು ಕೊನೆಯ ವಿರಾಮವಿರಬೇಕು.

* * * * *

ನಿಶಿತನ ಕೆಂಪು ಡೈರಿಯ ಕೊನೆಯ ಪುಟ ಓದಿದಾಗ ನಿಟ್ಟುಸಿರು ಬಂತು. ಕೊನೆಯ ದಿನಗಳಲ್ಲಿ ಅವನು ಖಿನ್ನತೆಗೆ ಒಳಗಾಗಿದ್ದ. ನನಗೆ ನಿಜವಾಗಿಯೂ ನಿಶಿತನ ಡೈರಿಯನ್ನು ಓದಿದ ಮೇಲೆ ಇದರ ಸಮಸ್ಯೆಯು ತಿಳಿಯಲಿಲ್ಲ. 1992ರ ಅವನ ಕೆಂಪು ಡೈರಿಯ ನಡುವೆಯಿದ್ದ ಹಳದಿ ಬಣ್ಣದ ಹಳೆಯ ಕಾಗದದ ಚೀಟಿಯಿತ್ತು. ಅದು ಸರಿಯಾಗಿ ತಿಳಿಯಲಿಲ್ಲ.

* * * * *

1992ರ ಕೆಂಪು ಡೈರಿಯ
ನಡುವೆ
ಒಂದು ಹಳದಿ ಕಾಗದದ ಚೂರು

* * * * *

ಅವರು ಅದನ್ನು ಏಕಾಂತದಲ್ಲಿ ಓದಿದರು.

"ಬೆಳಿಗ್ಗೆ ಏಳುವಾಗಲೇ ವಿಚಿತ್ರವಾದ ಲೋಚನೆಗಳು ಯಾವ ಕೆಲಸವನ್ನು ಮಾಡಲಿಕ್ಕೆ ಮನಸ್ಸಿಲ್ಲ. ಕಳೆದ ಮೂರು ವಾರಗಳಿಂದ ನನಗೆ ಏನಾಗಿದೆಯೋ ನನಗೆ ಗೊತ್ತಿಲ್ಲ. ಬೆಳಿಗ್ಗೆಯಿಂದ ಸಂಜೆಯವರೆಗೆ ನನ್ನ ತಲೆಯಲ್ಲಿ ನನ್ನ ಬಗ್ಗೆಯೇ ಬರಿ ಕೆಟ್ಟ ಯೋಚನೆಗಳೇ ಬರುತ್ತದೆ.

ನಾನು ಏನು ಸಾಧಿಸಿಲ್ಲ, ನಾನು ಜೀವನದಲ್ಲಿ ಮುಂದೆ ಬರಲು ಸಾಧ್ಯವೇ ಇಲ್ಲ.

ನಾನೊಬ್ಬ ಪಾಪಿ ಎಂದು ನಾನೇನೋ ದೊಡ್ಡ ತಪ್ಪು ಮಾಡಿದ್ದೇನೆ ಎಂದು ನನಗೆ ಅನಿಸುತ್ತಿದೆ.

ಹಳೆಯ ದಿನಗಳಲ್ಲಿ ಮಾಡಿದ ಸಾಧನೆಗಳೆಲ್ಲ ಕೇವಲ ನನ್ನ ಅದೃಷ್ಟದ ಫಲವು ಅಪ್ಪ ಅಮ್ಮನ ಪುಣ್ಯದ ಫಲವಿರಬೇಕು.

ಈ ಪಾಪಿ ಎಂದೋ ನರಕಕ್ಕೆ ಹೋಗಬೇಕಿತ್ತು. ಎಂದು ಪದೇ ಪದೇ ಅನ್ನಿಸುತ್ತಾ ಇದೆ.

ನನ್ನಿಂದ ಇನ್ನು ಬದುಕಲು ಸಾಧ್ಯವಿಲ್ಲ, ನಾನು ಸಾಯುವುದು ಒಂದೇ ಮೇಲು.

ನನ್ನ ಸಮಸ್ಯೆಗಳಿಗೆಲ್ಲ ಆತ್ಮಹತ್ಯೆಯೇ ಪರಿಹಾರ ಎಂದು ದೃಢವಾಗಿ ನಂಬಿದ್ದೇನೆ. ಹಿಂದೆ ಮನಸ್ಸಿಗೆ ಖುಷಿಕೊಡುತ್ತಿದ್ದ ಪುಸ್ತಕ, ಸಿನಿಮಾ ಯಾವುದೂ ಕೂಡ ಮನಸ್ಸಿಗೆ ಖುಷಿ ಕೊಡುತ್ತಿಲ್ಲ.ಸಮಯ ಹೋಗುವುದೇ ಗೊತ್ತಾಗುತ್ತಿಲ್ಲ. ಒಂದು ಗಂಟೆ ಒಂದು ದಿನದ ಹಾಗೆ ತೋರುತ್ತಿದೆ. ಕೂತಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದೇನೆ....................

(ನಿಶಿತ ಬರೆದದ್ದು ತುಂಬಾ ಅಸ್ಪಷ್ಟವಾಗಿತ್ತು. ಅದು ಚಿತ್ತು ಚಿತ್ತಾಗಿದ್ದರಿಂದ; ಬಹುಶಃ ಅವನು ಉದ್ವೇಗಕ್ಕೆ ಗುರಿಯಾಗಿ ಬರೆದದ್ದರಿಂದ ಓದಲು ಸಾಧ್ಯವಾಗಲಿಲ್ಲ.)

ನನಗೆ ಏನಾಗಿದೆಯೋ ನನಗೆ ತಿಳಿಯುವುದಿಲ್ಲ.

ನಾನು ಸಾಯುವುದೇ ಮೇಲು ಎಂದು ಅನಿಸುತ್ತದೆ. ಹೌದು ನಿಜ.

ಇದ್ದು ಮಾಡಬೇಕಾಗಿದ್ದು ಏನಿದೆ? ನನ್ನಿಂದ ಯಾರಿಗೆ ಪ್ರಯೋಜನ,?

ನನ್ನ ಕಥೆಯನ್ನು ಕೇಳಿ ನಗುವಂತಾಗುತ್ತದೆ.

ಈಗಾಗಲೇ ಬಹಳಷ್ಟು ಜನ ನನ್ನ ಈ ಸ್ಥಿತಿಯನ್ನು ನೋಡಿ ನಗುತಿರಬೇಕು,

ನನ್ನ ಈ ನಕಾರಾತ್ಮಕ ಆಲೋಚನೆಯಿಂದ ನಾನೇ ರೋಸಿಹೋಗಿದ್ದೇನೆ.

ದಿನ ಇದನ್ನು ಬಿಡಬೇಕೆಂದು ಪ್ರಯತ್ನ ಮಾಡುತ್ತಿದ್ದೇನೆ.

ಇದು ನನ್ನನ್ನು ಬಿಡುತ್ತಿಲ್ಲ.

ಬಹುಶಃ ನಾನು ಹೀಗೆಯೆ ಕೊನೆಯವರೆಗೂ ಇರುತ್ತೇನೋ ಏನೊ! ಆತ್ಮಹತ್ಯೆ ಮಾಡಿಕೊಂಡರೆ ನನ್ನ ಎಲ್ಲ ಸಮಸ್ಯೆಗಳು ಮುಗಿದುಹೋಗುತ್ತವೆ. ಆದರೆ ನನ್ನಿಂದಾಗಿ ಮನೆಯವರಿಗೆಲ್ಲ ಕೆಟ್ಟ ಹೆಸರಲ್ಲವೇ.

ಎನಿ ವೇ ಒಂದು ಪತ್ರವನ್ನು ಬರೆದಿಡುತ್ತೇನೆ.

1992 – ಡಿಸೆಂಬರ್

ಖಿನ್ನತೆಗೆ ಗುರಿಯಾದವನು ಸರಿಯಾಗಿ ಯೋಚಿಸಲಾರ ಎಂದು ಅವರು ಹೇಳಿದ ಮೇಲೆಯೇ ನನಗೆ ನಿಶಿತನ ಸಮಸ್ಯೆ ಏನಾಗಿತ್ತು ಎಂದು ಅರ್ಥವಾದದ್ದು.

ಖಿನ್ನತೆಯೆಂಬ ನೆರಳು ಜೊತೆಗಿದ್ದರೆ ಅದರಿಂದ ಹೊರಬರಬೇಕಾದವನಿಗೆ ವೈದ್ಯರ ಸಲಹೆ; ಚಿಕಿತ್ಸೆ; ಸರೀಕರ ಸಹಾಯ ಬೇಕು.

ನಿಟ್ಟುಸಿರು ಬಿಟ್ಟೆ. ಆದರೆ ಅವನ ಜೊತೆಗೆ ಯಾರೂ ಇರಲಿಲ್ಲ. ಏಕಾಂಗಿಯಾಗಿದ್ದ. ಅವನ ಖಾಸಗಿ ಡೈರಿಯಲ್ಲಿ ತುಂಬಾ ಸಂಗತಿಗಳಿದ್ದವು.

ಆದರೆ ನಾನು ಏನು ಮಾಡಲು ಸಾಧ್ಯವಿತ್ತು? ವಿವರ ತಿಳಿದು ಕೊಂಡ ಮೇಲೆ ನಾನೇ ಆತಂಕಕ್ಕೆ ಗುರಿಯಾದೆ.

* * * * *

*ಮರುದಿನ ಬೆಳಿಗ್ಗೆ ಜೆಸಿಂತಾಬಾಯಿಯ ಕಂಪೌಂಡಿನಲ್ಲಿ ನಿಶಿತನ ಹೆಣ ಕೊಠಡಿಯ ತೊಲೆಯಲ್ಲಿ ನೇತಾಡುತ್ತಿತ್ತು. ಅದಕ್ಕೆ ನಿಜವಾದ ಕಾರಣವಿರಲಿಲ್ಲ. ಕಾರಣ ಹುಡುಕುವುದೂ ಅನಗತ್ಯ. ಕಾರಣವಿಲ್ಲದೆಯೂ ಅನೇಕವು ಜರುಗಬಹುದು.*

ಈ ಕಾದಂಬರಿಯು ನಮ್ಮ ಸಾಂಪ್ರಾದಾಯಿಕವಾದ ಕಾದಂಬರಿಯ ಥರ ಇಲ್ಲ. ಇದು ಸಂಮಿಶ್ರವಾದ ಕಾದಂಬರಿ. ಇದರಲ್ಲಿ ವಿವಿಧ ಛಾಯೆಗಳು ಇವೆ. ಗದ್ಯವಿದೆ. ಪದ್ಯವಿದೆ. ನೈತಿಕ ಕಾನೂನುಗಳು ಇವೆ. ಅಷ್ಟೇ ಅಲ್ಲ ಇದರಲ್ಲಿ ನನ್ನ ಮತ್ತೊಂದು ಕಾದಂಬರಿಯ ಕೆಲವು ಸಾಲುಗಳೂ ಇವೆ. ಈಗ ಇದನ್ನು ನಾನು ನಿಮ್ಮ ಕೈಗೆ ಒಪ್ಪಿಸುತ್ತಿದ್ದೇನೆ.





"ಅದು ಸಾಧ್ಯವೇ ಇಲ್ಲ. ಅವಳು ನನ್ನನ್ನು ಅಪಾರವಾಗಿ ಪ್ರೀತಿಸುತ್ತಾಳೆ. ಅವಳಿಗೆ ನನ್ನನ್ನು ಬಿಟ್ಟು ಬೇರೆ ಯಾವನನ್ನೂ ಊಹಿಸುವುದೂ ಸಾಧ್ಯವೇ ಇಲ್ಲ. ಯಾರಾದರೂ ಅವಳ ಬಗ್ಗೆ ಕನಸು ಕಂಡರೆ ಅದು ಕನಸು ಕಂಡವರ ಹುಚ್ಚೇ ಹೊರತು ಅವಳ ಮನಸ್ಸು ಚಂಚಲಗೊಳ್ಳಲು ಸಾಧ್ಯವೇ ಇಲ್ಲ."– ಟೀ ಕುಡಿಯುತ್ತಾ ತುಂಬಾ ಖಚಿತವಾದ ಧ್ವನಿಯಲ್ಲಿ ಹೇಳಿದೆ. ನನ್ನ ಅನೇಕ ವರ್ಷಗಳ ಸ್ನೇಹಿತ; ನನ್ನ ಕಷ್ಟ–ಸುಖದಲ್ಲಿ ಭಾಗಿಯಾದವನು; ಅದೆಲ್ಲಕ್ಕಿಂತ ಹೆಚ್ಚಾಗಿ ನನ್ನ ಬಗ್ಗೆ ಸರಿಯಾಗಿಯೇ ತಿಳಿದುಕೊಂಡವನು ಈ ಪುರುಷೋತ್ತಮ. ಶಾಂಭವಿಯ ಕುರಿತು ಯಾಕೆ ಹೀಗೆ ಹೇಳುತ್ತಾನೆಂದು ಮೊದಲು ಸರಿಯಾಗಿ ಅರ್ಥವಾಗಲಿಲ್ಲ. 'ಶಾಂಭವಿ ನಿನಗೆ ಕೈ ಕೊಟ್ಟಳು.' ಎಂದ ಕೂಡಲೇ ನನ್ನ ಮನಸ್ಸಿನಲ್ಲಿ ಬಂದದ್ದು ಅವಳ ಸುಂದರ ಚಿತ್ರ. ಅದಕ್ಕೆ ಪುರುಷೋತ್ತಮ ಮಸಿಯ ಗೆರೆಯನ್ನು ಎಳೆಯುತ್ತಾನೆಂದು ಅನಿಸಿ ನಾನು ನನ್ನ ಮಾತುಗಳನ್ನು ಖಚಿತವಾಗಿ ಹೇಳಬೇಕಾಗಿ ಬಂತು. ನಾವು ಊಹಿಸದೆ ಇದ್ದ ಘಟನೆಯು ನಮ್ಮೆದುರು ಮುಖಾ ಮುಖಿಯಾದಾಗ ಆಗುವ ಸಂಗತಿಯೆಂದರೆ ಅದರ ನಿರಾಕರಣೆ. ಅದಕ್ಕೆ ನಾನು ಪುರುಷೋತ್ತಮನ ಹತ್ತಿರ ಖಡಾ ಖಂಡಿತವಾಗಿ ಹೇಳಿದ್ದೆ – ಅವಳು ನನ್ನ ಬಿಟ್ಟು ಬೇರೊಬ್ಬನ ಜೊತೆ ಸಂಸಾರ ಹೂಡುವುದು: ಅವನಿಗಾಗಿ ಮಕ್ಕಳನ್ನು ಹೆತ್ತು ಅವನ ಕೈಗೆ ಕೊಡುವುದು ನನ್ನ ಮಟ್ಟಿಗೆ ಅನೂಹ್ಯವಾದ ಸಂಗತಿಯಾಗಿತ್ತು. ನನ್ನ ಹುಟ್ಟಿಗೆ ಅವಳು ಜೀವಂತ ಶಕ್ತಿಯಾಗಿದ್ದಳು. ನಿಶಿತ ಎಷ್ಟೋ ವರ್ಷಗಳ ಅನಂತರ ಅವಳನ್ನು ನೋಡಿದ. ಈ ಜಗತ್ತಿನಲ್ಲಿ ಎಷ್ಟೊಂದು ಜನರು ಹೀಗೆ ಭಾವಿಸುತ್ತಾರೆ. ಅವರ ನೋವು ಅವರಿಗೆ ಮಾತ್ರವೇ ತಿಳಿಯುತ್ತದೆ.